ಶ್ರೀ ಗುರುಭ್ಯೋ ನಮಃ

# ಶ್ರೀಮದ್ ಬ್ರಹ್ಮಸೂತ್ರಾಣಿ

## ಶ್ರೀ ಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ
## ಬ್ರಹ್ಮಸೂತ್ರಭಾಷ್ಯಂ



ಲೇಖಕರು :

**ಮೈಸೂರು ಶ್ರೀ ವೇದವ್ಯಾಸಾಚಾರ್ಯರು**

ಶ್ರೀ ಗುರುಭ್ಯೋನಮಃ

# ಶ್ರೀಮದ್ ಬ್ರಹ್ಮಸೂತ್ರಾಣಿ

ಶ್ರೀ ಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತ
ಬ್ರಹ್ಮಸೂತ್ರಭಾಷ್ಯಂ

ಶ್ರೀ ಮನ್ಮಧ್ವ ಭಾಷ್ಯಸ್ಯ ಜಗನ್ನಾಥಯತಿಕೃತ ದೀಪಿಕಾನುಸಾರಿಣೀ
ಕನ್ನಡ ಭಾಷಾ ವಿವೃತಿಃ ಸಹಿತಂ

ಲೇಖಕರು

ಮೈಸೂರು ಶ್ರೀ ವೇದವ್ಯಾಸಾಚಾರ್ಯರು

ಶ್ರೀಮದ್ ಬ್ರಹ್ಮಸೂತ್ರಾಣಿ

ಲೇಖಕರು · ಶ್ರೀ ವೇದವ್ಯಾಸಾಚಾರ್ಯರು, ಮೈಸೂರು

ಪುಟಗಳು 646+8

ಬೆಲೆ 100-00

ಪ್ರತಿಗಳು ದೊರೆಯುವ ಸ್ಥಳ :
ಶ್ರೀ ವೇದವ್ಯಾಸಾಚಾರ್ಯರು,
ಚಂಪಕ, ಯಾದವಗಿರಿ,
ಮೈಸೂರು

ಮುದ್ರಕರು .
ಸಂಸ್ಕೃತ ಸಾಹಿತ್ಯ ಸದನ, 1226, 3ನೇ ಮೈನ್
ಕೃಷ್ಣಮೂರ್ತಿಪುರಂ, ಮೈಸೂರು-570004

ಲೇಖಕರು ಹಾಗೂ ಅವರ ಸೌಭಾಗ್ಯವತಿಯವರು



ಮೈಸೂರು ಶ್ರೀ ವೇದವ್ಯಾಸಾಚಾರ್ಯರು



ಸೌ|| ಚಂಪಕಾಬಾಯಿಯವರು

ಶ್ರೀ ಯೋಗಾನರಸಿಂಹ ಪ್ರಸನ್ನ

# ಅರ್ಪಣೆ

ನಾಹಂ ಕರ್ತಾ ಹರಿಃ ಕರ್ತಾ

ಈ ವಾಙ್ಮಯ ಸೇವೆಯನ್ನು
ಶ್ರೀಮದ್ ಹನುಮದ್ಭೀಮ ಮಧ್ವಾಂತರ್ಗತ
ಶ್ರೀವೇದವ್ಯಾಸಾಭಿನ್ನ ಅಸ್ಮಾತ್ ಕುಲದೇವತಾ
ಶ್ರೀ ಯೋಗಾನರಸಿಂಹ ದೇವರಲ್ಲಿ
ಅರ್ಪಿಸಿದ್ದೇನೆ

# ಮುನ್ನುಡಿ

ಭಾರತೀಯ ಸಂಸ್ಕೃತಿಯಲ್ಲಿ ವೇದವು ಅಪೂರ್ವ ಗ[illegible]ಪರ ತತ್ವಗಳ ಜ್ಞಾನಭಂಡಾರ. ಈ ಗ್ರಂಥವು ಯಾವ ಪುರುಷನ[illegible] ವಾದುದಲ್ಲ ಅಪೌರುಷೇಯವೆಂದು ಖ್ಯಾತಿಯನ್ನು [illegible] ಶ್ರೇಷ್ಠ ಜ್ಞಾನಿಗಳಿಂದ ಅವರ ಧ್ಯಾನ ಕಾಲದಲ್ಲಿ ಕಂಡು ಅರ್ಥವ ಕೇಳಿ[illegible] ವಾಕ್ಯಗಳ ಸಂಗ್ರಹ. ಈ ಸಂಗ್ರಹವನ್ನು ಮಾಡಿದವರು ಶ್ರೀ [illegible] ಶ್ರೀ ವೇದವ್ಯಾಸರು. ಈ ವಾಕ್ಯಗಳನ್ನು [illegible] ಸಂಗ್ರಹಿಸಿ ಗ್ರಂಥರೂಪದಲ್ಲಿ ನಾಲ್ಕು ವೇದಗಳಾಗಿ [illegible]ದರು ಅವುಗಳ ನಿಜವಾದ ಅರ್ಥವನ್ನು ತಿಳಿಯಲು ಸಹಾಯವಾಗ[illegible]ಸೂತ್ರ ಎಂಬ ಶಾಸ್ತ್ರಗ್ರಂಥವನ್ನು ರಚಿಸಿದರು

ಈ ಗ್ರಂಥಗಳು ಬಹಳ ಗಹನವಾದ ಅರ್ಥವುಳ್ಳವಾಗ[illegible] ನಾನಾ ಪಂಡಿತರು ವ್ಯಾಖ್ಯಾನ ರೂಪವಾಗಿ ಗ್ರಂಥಗಳನ್ನು ಮಾ[illegible] ಅದರ ನಿಜವಾದ ಅರ್ಥವು ಸಂಶಯವಿಪರ್ಯಯಕ್ಕೆ ಪಾರಿಯಾಗಿ [illegible]ಪರತತ್ವ ವಿಷಯವು ಸಂಧಿಗ್ದವಾಯಿತು ಆ ಶ್ರೀ ಪರಮಾತ್ಮನು ತನ್ನ [illegible] ಶಿಷ್ಯ ರಾದಮುಖ್ಯ ಪ್ರಾಣದೇವರಿಗೆ ಭೂಲೋಕದಲ್ಲಿ ಅವತಾರವ[illegible] ಗ್ರಂಥದ ನಿಜವಾದ ಅರ್ಥವನ್ನು ಪ್ರಕಟಪಡಿಸಿ ಭಾಷ್ಯವನ್ನು ರ[illegible] ಆಜ್ಞೆ ಮಾಡಿದನು. ಈ ಆಜ್ಞೆಯನ್ನು ಶಿರಸಾವಹಿಸಿ ಶ್ರೀ [illegible] ನಿಗಳಾಗಿ ಅವತರಿಸಿ ಬ್ರಹ್ಮಸೂತ್ರ ಭಾಷ್ಯವೆಂಬ ಅಪೂರ್ವಗ್ರಂಥವನ್ನು ರಚಿಸಿ ಶಿಷ್ಯ ಪ್ರಶಿಷ್ಯರಲ್ಲಿ ಉಪದೇಶಿಸಿ ತಿರೋಹಿತವಾದ ಜ್ಞಾನವನ್ನು ಪ್ರಕಾಶಪಡಿಸಿದರು

ಈ ಜ್ಞಾನಿಗಳ ಶ್ರೇಣಿಯಲ್ಲಿ ಬಂದವರು ಶ್ರೀ ಜಗನ್ನಾಥ ಯತಿಗಳು ಶ್ರೀ ವ್ಯಾಸರಾಜ ಮಠಾಧೀಶರಾದ ಶ್ರೀ ಶೇಷ ಚಂದ್ರಿಕಾಚಾರ್ಯರ ಶಿಷ್ಯರು ಅವರ ನಂತರ ಆ ಪೀಠವನ್ನು ಅಲಂಕರಿಸಿದರು. ಶ್ರೀ ಗಾಲವ ಮುನಿಗಳ ಅವತಾರವೆಂದು ಖ್ಯಾತರು. ಚತುಃಶಾಸ್ತ್ರ ಪಂಡಿತರು ಮಹಾಜ್ಞಾನಿಗಳು ತಪಸ್ವಿಗಳೂ ವಾದವಿಶಾರದರು. ಈ ಮಹಾಮಹಿಮರು ಹಿಂದಿನ ಜ್ಞಾನಿಗಳ ಸೂತ್ರಭಾಷ್ಯ ಟೀಕಾಟಿಪ್ಪಣೀಗ್ರಂಥಗಳ ಭಾವವಿಶೇಷಗಳನ್ನು ಸಂಗ್ರಹಿಸಿ ತಮ್ಮದೇ ಆದ ಸುಲಭಶೈಲಿಯಲ್ಲಿ ಸೂತ್ರದೀಪಿಕಾ ಎಂಬ ನಾಮಧೇಯದಿಂದ ಸಂಸ್ಕೃತ ಭಾಷೆಯಲ್ಲಿ ವಿಸ್ತಾರವಾದ ಗ್ರಂಥವನ್ನು ರಚಿಸಿದರು.

ನನ್ನ ಈ ಗ್ರಂಥ ವ್ಯಾಸಂಗಕಾಲದಲ್ಲಿ ನನ್ನ ಮುಂದಿನ ಜ್ಞಾಪಕಕ್ಕಾಗಿ ನನಗೆ ತಿಳಿದುಬಂದಷ್ಟು ವಿಷಯಗಳನ್ನು ಕನ್ನಡ ಭಾಷೆಯಲ್ಲಿ ಬರೆದಿಡಲು ಪ್ರಾರಂಭಿಸಿದೆನು. ಗ್ರಂಥವ್ಯಾಸಂಗವು ಪೂರೈಸಲು ಅದು ಒಂದು ಪುಟ್ಟ ಗ್ರಂಥವಾಗಿ ಪರಿಣಮಿಸಿ ನನಗೆ ಅತ್ಯಾಶ್ಚರ್ಯವಾಯಿತು ಈ ಗ್ರಂಥವನ್ನು ಪರಮಾತ್ಮನಿಗೆ, ಸಮರ್ಪಿಸಿ ನನ್ನ ಸಹಸ್ರ ಚಂದ್ರದರ್ಶನ ಶಾಂತಿಯನ್ನು ಆಚರಿಸಿದೆನು.

ನನ್ನ ಕೆಲವು ಆಪ್ತ ಸ್ನೇಹಿತರು ಈ ಗ್ರಂಥದ ಮುದ್ರಣವನ್ನು ಮಾಡಲು ಪ್ರೇರೇಪಿಸಿದರು. ಸಂಸ್ಕೃತ ಭಾಷೆ ತಿಳಿಯದ ಭಕ್ತರಿಗೆ ಅನುಕೂಲವಾಗುವುದೆಂದು ಬಲವಂತಪಡಿಸಿದರು ನಾನು ಈ ಗ್ರಂಥವನ್ನು ರಚಿಸಿದವನಲ್ಲ. ಭಾಷಾಪಂಡಿತನೂ ಅಲ್ಲ. ಈ ಗ್ರಂಥವನ್ನು ಗ್ರಂಥರೂಪದಲ್ಲಿ ಬರೆದುದಲ್ಲ. ಆಗಲೇ ನನಗೆ 80ವರ್ಷಗಳ ವಯಸ್ಸಾಗಿದ್ದು ದೇಹವು ವ್ಯಾಧಿಗ್ರಸ್ತವಾಗಿ ಶಿಥಿಲವಾಗಿದ್ದುದರಿಂದ ಸಾಧ್ಯವಿಲ್ಲವೆಂದು ಸುಮ್ಮನಾದೆನು.

ಆದರೆ ಮುಂದಿನ ದಿನಗಳಲ್ಲಿ ನನ್ನ ಜೀವಮಾನದ ವಿಶೇಷ ಘಟನೆಗಳಿಂದ ಮುದ್ರಣ ಕಾರ್ಯದಲ್ಲಿ ಪ್ರವರ್ತಿಸಬೇಕಾಗಿ ಬಂತು ಗ್ರಂಥವು ಪೂರ್ಣವಾಗುವುದೆಂದು ಭರವಸೆಯಿರಲಿಲ್ಲ ಆದರೂ ಶ್ರೀ ಗುರುಹಿರಿಯರ ಅನುಗ್ರಹದಿಂದ ನಾನಾ ವಿಘ್ನಗಳನ್ನು ಎದುರಿಸಿಯೂ ಗ್ರಂಥದ ಮುದ್ರಣದ ಸಮಾಪ್ತಿಯನ್ನು ಕಂಡೆನು

ಈ ಗ್ರಂಥದ ಮಾರಾಟದಿಂದ ಬರುವ ಮೊಬಲಗನ್ನು ಒಂದು ನಿಧಿಯನ್ನು ಸ್ಥಾಪಿಸಿ ಅದರಲ್ಲಿ ಬರುವ ವಾರ್ಷಿಕ ಆದಾಯವನ್ನು ಶ್ರೀಮನ್ಮಧ್ವಮತದ ಮುಖ್ಯ ತತ್ತ್ವವಿಶೇಷವನ್ನು ಜನಸಾಮಾನ್ಯರಲ್ಲಿ ಪ್ರಚುರಪಡಿಸುವ ಕಾರ್ಯಗಳಿಗೆ ಉಪಯೋಗಿಸಲು ನನ್ನ ಇಚ್ಛೆಯಿದೆ.

ಸಂಸ್ಕೃತ ಭಾಷಾ ಪರಿಚಯವಿಲ್ಲದ ಭಕ್ತರಿಗೆ ಬ್ರಹ್ಮಸೂತ್ರಭಾಷ್ಯದ ವಿಷಯಗಳ ಸ್ಥೂಲಪರಿಚಯವಾಗಿ ಮುಂದಿನ ಬ್ರಹ್ಮಸೂತ್ರಭಾಷ್ಯಗಳ ವ್ಯಾಸಂಗಕ್ಕೆ ಪ್ರೇರಕವಾದಲ್ಲಿ ನಾನು ಧನ್ಯನೆಂದು ತಿಳಿಯುವೆನು.

“ನಾಹಂ ಕರ್ತಾ ಶ್ರೀ ಹರಿಃ ಕರ್ತಾ” “ಸರ್ವಕರ್ತಾ ನ ಕ್ರಿಯತೆ” ಎಂಬ ವಾಕ್ಯಗಳಿಗೆ ನಿದರ್ಶನ ಈ ಪುಸ್ತಕ.

**ಮೈಸೂರು ಶ್ರೀ ವೇದವ್ಯಾಸಾಚಾರ್ಯರು**

ಶ್ರೀ ಗುರುಭ್ಯೋನಮಃ

# ಶ್ರೀಮದ್ ಬ್ರಹ್ಮಸೂತ್ರಾಣಿ

## ಪರಿವಿಡಿ

ಶ್ರೀ ಗುರುಭ್ಯೋ ನಮಃ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ ।

# ಶ್ರೀಮದ್ಬ್ರಹ್ಮಸೂತ್ರಾಣಿ

## ಶ್ರೀ ಜಗನ್ನಾಥಯತಿ ಕೃತ ದೀಪಿಕಾನುಸಾರಿಣೀ

ಶ್ರೀಮನ್ಮಧ್ವಭಾಷ್ಯಸ್ಯ ಕರ್ನಾಟ ಭಾಷಾ— ವಿವೃತಿಃ

## ಪ್ರಥಮಃ ಸಮನ್ವಯಾಧ್ಯಾಯಃ

ಶ್ರೀ ಗುರುಭ್ಯೋ ನಮಃ

ಶ್ರೀ ಹರಿಃ ಓಂ

# ಶ್ರೀಮದ್ಬ್ರಹ್ಮಸೂತ್ರಭಾಷ್ಯಂ

## ಶ್ರೀ ಮದಾನಂದತೀರ್ಥಭಗವತ್ಪಾದ ವಿರಚಿತಂ

## ದೀಪಿಕಾನುಸಾರಿ ಕರ್ನಾಟಕ ಭಾಷಾಭಾವಾನುವಾದ ಸಹಿತಂ

ಈ ಜೀವ ಜಡಾತ್ಮಕವಾದ ಜಗತ್ತಿನಲ್ಲಿ ಜೀವನನ್ನು ಬಿಟ್ಟರೆ ಏಕ್ಕ ಸರ್ವವೂ ದುಃಖಾನುಭವವಿಲ್ಲದವು. ಜೀವನೇ ದುಃಖ. ಈ ದುಃಖನಿವಾರಣೆ ಸಾಧನೆಗಾಗಿ ವೇದವು ಹೊರಟಿರುವುದು ಮಾತ್ರ. "ಸರ್ವೇವೇದಾ ಯತ್ಪದಮಾಮನಂತಿ" ಎಂಬ ವಾಕ್ಯವು ವೇದಗಳಿಗೆ ಶ್ರೀ ಪರಮಾತ್ಮನ ಸ್ತುತಿಯೇ ಮುಖ್ಯ ವಿಷಯವೆಂದು ತಿಳಿಸು ವುದು. ಸ್ತುತಿ ಎಂದರೆ ಆ ವಸ್ತುವಿನ ನಿಜವಾದ ಮಾಹಾತ್ಮ್ಯ ವರ್ಣನೆ. ಸತ್ಯಂ ಜ್ಞಾನ-ಮನಂತಂ ಬ್ರಹ್ಮ ಎಂಬ ಶೃತಿಯು ಶ್ರೀ ಪರಮಾತ್ಮನ ಅದ್ಭುತ ಮಾಹಾತ್ಮ್ಯ ಶಕ್ತಿಯನ್ನು ಕ್ರೋಢೀಕರಿಸಿ ತಿಳಿಸುವುದು. ಮುಖ್ಯವಾಗಿ ಆತನು ಸರ್ವಶಕ್ತ, ಜ್ಞಾನ ಪೂರ್ಣ, ಸರ್ವವ್ಯಾಪ್ತ, ಸರ್ವಗುಣಪೂರ್ಣ ಮತ್ತು ಆತ್ಮಾ ಶಬ್ದ ಮುಖ್ಯವಾಚ್ಯನಾಗಿ ಸರ್ವಸ್ವಾಮಿ ಎಂಬ ಅಸಾಧಾರಣ ಮಹಿಮೆಗಳನ್ನು ಪ್ರಕಾಶಪಡಿಸುವುದು. ಈ ಜೀವಾತ್ಮರೂ ಕೂಡ ಆ ಮಹಾಪುರುಷನ ಅಲ್ಪಾಂಶ ಮಾತ್ರಗಳಾಗಿ ಸ್ವಲ್ಪ ಸಾದೃಶ್ಯ ಈಶಗುಣಗಳನ್ನು ಸ್ವರೂಪವಾಗಿ ಉಳ್ಳವರು. ಈ ಗುಣಸಾದೃಶ್ಯವು ಸರ್ವಸ್ವಾಮಿ ಯಾದ ಪರಮಾತ್ಮನ ಸ್ವೇಚ್ಛೆಯಿಂದ ಅವನ ಅಧೀನವಾದ ಶ್ರೀತತ್ವಾಭಿ ಮನ್ಯಮಾನ 'ಮಾಯಾ' ಶಕ್ತಿಯಿಂದ ಆವರಿಸಲ್ಪಟ್ಟು ಜೀವರುಗಳಿಂದ ಮರೆಮಾಡಲ್ಪಟ್ಟಿದೆ. ಈ ಸ್ವಭಾವ ಗುಣದ ಪ್ರಕಾಶನವು ಆತನ ಅನುಗ್ರಹ ಮಾತ್ರದಿಂದಲೇ ಸಾಧ್ಯವಾಗಿ ಜೀವನು ನಿತ್ಯಾನಂದವನ್ನು ಅವನ ಯೋಗ್ಯತಾನುಸಾರ ಹೊಂದಲು ಸಾಧ್ಯವು, ಇದೇ ದುಃಖ ನಿವೃತ್ತಿಯು. ನಿತ್ಯನಿರತಿಶಯ ಮೋಕ್ಷ ಸುಖವು.

ಶ್ರೀ ಪರಮಾತ್ಮನ ಅನುಗ್ರಹ ಸಂಪಾದನೆಯು ಆತನ ಅಸಾಧಾರಣ ಕಲ್ಯಾಣ ಗುಣಗಳ ಜ್ಞಾನವಿಜ್ಞಾನಗಳಿಂದ ಮಾತ್ರ ಸಾಧ್ಯವು ಸಮಸ್ತ ವೇದವಾಕ್ಯಗಳ ಪೂರ್ಣ ಮುಖ್ಯಾರ್ಥವು (ಫಲಿತಾಂಶ) ಪರಮಾತ್ಮನ ಮಹಾಮಹಿಮೆ ಪೂರ್ಣಗುಣ ಮಹಾ ಶಕ್ತಿಗಳ ಪರಿಜ್ಞಾನ ದ್ವಾರಾ ಆತನ ಮಾಹಾತ್ಮ್ಯ ಜ್ಞಾನ ಸಂಪಾದನ, ಪರಮಾತ್ಮನಲ್ಲಿ ನಿಜವಾದ ಭಕ್ತಿಯ ಬೆಳವಣಿಗೆ, ವೇದವಾಕ್ಯಗಳ ಪುನಃ ಪುನಃ ಆವರ್ತನ ರೂಪವಾದ ಶ್ರವಣ, ಅವುಗಳ ಫಲಿತಾರ್ಥಮನನವು ನಿಧಿಧ್ಯಾಸನ ಪೂರ್ವಕ ಸದಾಭ್ಯಾಸದಿಂದ ದರ್ಶನ, (ಪರೋಕ್ಷಜ್ಞಾನ) ಪುನಃ ಪುನಃ ಅಭ್ಯಾಸ ದಾರ್ಢ್ಯದಿಂದ ಅಪರೋಕ್ಷ ಜ್ಞಾನ ಮೂಲಕ ನಿತ್ಯನಿರತಿಶಯ ನಿರ್ದುಃಖ ಸುಖಾನಂದಾನುಭವ ಇದೇ ಶ್ರೇಷ್ಠ ಪುರುಷಾರ್ಥ ರೂಪ ಪರಮಾತ್ಮಾನುಗ್ರಹವು.

ಹೀಗೆ ಶ್ರೇಷ್ಠ ಪುರುಷಾರ್ಥವಾದ ಮೋಕ್ಷವು ಆತನ ಜ್ಞಾನ ಸಂಪಾದನ ಮೂಲಕವು ಶ್ರೇಷ್ಠ ಪ್ರಯತ್ನವು ಮುಖ್ಯವಾಗಿ ಅಂಗನ್ಯಾಸಾಧಾರವಾದ ಅಪೌರುಷೇಯ ವೇದವಾಕ್ಯಗಳ ಅರ್ಥವು ಜ್ಞಾನ ಸಂಪಾದನೆಯ ಮುಖ್ಯಾಂಗ ಶ್ರೀಹರಿಯ ಗುಣಗಳನ್ನು ಕ್ರೋಢೀಕರಿಸಿ ಶ್ರೀಮದಾಚಾರ್ಯರು ಸೂತ್ರಭಾಷ್ಯ ಗ್ರಂಥದ ಆದಿಯಲ್ಲಿ ಮಂಗಳರೂಪವಾಗಿ ಶ್ಲೋಕ ರೂಪದಲ್ಲಿ ಉಪದೇಶಿಸಿದ್ದಾರೆ.

**ನಾರಾಯಣಂ ಗುಣೈಸ್ಸರ್ವೈರುದೀರ್ಣಂ ದೋಷವರ್ಜಿತಂ।**
**ಜ್ಞೇಯಂಗಮ್ಯಂಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೆ॥**

ಸರ್ವ ಗುಣಗಳ ಪೂರ್ಣತ್ವದಿಂದ ಉತ್ಕೃಷ್ಟನಾದ, ಸರ್ವ ದೋಷ ಗಳಿಂದಲೂ ದೂರನಾದ, ಜ್ಞಾನದಿಂದಲೇ ತಿಳಿಯಲ್ಪಡುವ ಮೋಕ್ಷಫಲಪ್ರದನೂ ಆಶ್ರಯನಾದ ಕ್ಷೀರಸಮುದ್ರಶಾಯಿ ಶ್ರೀಮನ್ನಾರಾಯಣಾಖ್ಯ ಪರಬ್ರಹ್ಮ ವಸ್ತುವನ್ನು, ನನಗೆ ಸಾಕ್ಷಾದ್ಗುರುವಾದ್ದರಿಂದಲೂ ಕೂಡ ಸಾಷ್ಟಾಂಗ ನಮಸ್ಕಾರ ಮಾಡಿ "ಬ್ರಹ್ಮ ಸೂತ್ರ ಭಾಷ್ಯ"ವೆಂಬ ಶ್ರೇಷ್ಠ ಗ್ರಂಥವನ್ನು ರಚಿಸುತ್ತೇನೆ.

ಈ ನಾರಾಯಣ ಪದವು ಸಂಜ್ಞಾರ್ಥಕವಾದರೂ ಅವಯವಾರ್ಥ ರೂಪ ದಲ್ಲಿಯೂ ಕೂಡ ಈ ಸಮಸ್ತ ಗುಣಗಳನ್ನು ಶ್ರೀ ಪರಮಾತ್ಮನಲ್ಲಿ ಪಂಚಮೂರ್ತಿತ್ವ ದಿಂದ ಸೂಚಿಸುವುದು. 1) ಕ್ಷೀರ ಸಮುದ್ರಶಾಯಿ ಶ್ರೀಮನ್ನಾರಾಯಣ. 2) ಸರ್ವ ವಸ್ತುಗಳಲ್ಲಿ ವಸನ ಮತ್ತು ಕ್ರೀಡಾದಿ ಗುಣಗಳಿಂದ ಶ್ರೇಷ್ಠನಾದ ಶ್ರೀ ವಾಸುದೇವ 3) ದೋಷಗಳನ್ನು ಪೂರ್ಣವಾಗಿ ಬಿಟ್ಟಿರುವುದರಿಂದ ಶ್ರೀ ಸಂಕರ್ಷಣ

4) ಶ್ರೇಷ್ಠ ಜ್ಞಾನದಿಂದ ಮಾತ್ರ ತಿಳಿಯಲ್ಪಡುವುದರಿಂದ ಶ್ರೀ ಪ್ರದ್ಯುಮ್ನ, 5) ಜ್ಞಾನಿಗಳಿಂದ ಹೊಂದಲು ತಡೆಯಿಲ್ಲದ್ದರಿಂದ ಶ್ರೀ ಅನಿರುದ್ಧ ಹೀಗೆ ಆತನ ಪಂಚವ್ಯೂಹ ರೂಪಗಳನ್ನು ಹೇಳಿರುವುದು

ಈ ಮಂಗಳ ಶ್ಲೋಕದಿಂದಲೇ ಶಾಸ್ತ್ರ ವಿಚಾರ, ವಿಷಯ ಪ್ರಯೋಜನ ಸಂಬಂಧಗಳೂ ಕೂಡ ಶಿಷ್ಯರಿಗಾಗಿ ಸೂಚಿಸಲ್ಪಟ್ಟಿವೆ ಪ್ರಥಮವಾಗಿ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯ ಸೂಚಕವಾಗಿ 1) ಆಪ್ತ ಮೂಲತ್ವ 2) ಶ್ರುತಿ ಮೂಲತ್ವ ಮತ್ತು 3) ಯುಕ್ತಿ ಮೂಲತ್ವ ಸ್ವಾಮಿಗಳು ಈ ಸೂತ್ರಗಳು ಬಂದ ಕ್ರಮವಿಶೇಷವನ್ನು ತಿಳಿಸುತ್ತಾರೆ.

**2. ದ್ವಾಪರೇ ಸರ್ವತ್ರ ಜ್ಞಾನ ಆಕುಲೀಭೂತೇ ತನ್ನಿರ್ಣಯಾಯ ಬ್ರಹ್ಮರುದ್ರೇಂದ್ರಾದಿಭಿರರ್ಥಿತೋಭಗವಾನ್ನಾರಾಯಣೋ ವ್ಯಾಸತ್ವೇನಾವತತಾರ.**

ವೈವಸ್ವತ ಮನ್ವಂತರ ಇಪ್ಪತ್ತೆಂಟನೇ ದ್ವಾಪರ ಯುಗದಲ್ಲಿ ನಿಶ್ಚಿತತತ್ತ್ವ ಜ್ಞಾನವು ಕಲುಷಿತವಾಗಿ ಮನುಷ್ಯ ಋಷಿ ದೇವಾದಿಗಳಲ್ಲಿ ಜ್ಞಾನ ವಿಷಯದಲ್ಲಿ ಧೃಢತೆಯಿಲ್ಲದೆ ಸಂಶಯ ವಿಪರ್ಯಯಗಳಿಂದ ಡೋಲಾಯಮಾನವಾಯಿತು ಶ್ರೀ ಪರಮಾತ್ಮನ ಆನಂದಾದಿ ಕಲ್ಯಾಣ ಗುಣಗಳು ತಿರೋಹಿತವಾಗಿ ಎಲ್ಲೆಡೆಯಲ್ಲಿಯೂ ಮಿಥ್ಯಾಜ್ಞಾನವು ತಾಂಡವವಾಡಲಾರಂಭಿಸಿತು ಸಜ್ಜನ ಸಮುದಾಯವು ನಿರಾಶೆಯಿಂದ ಪರಿತಪಿಸುತ್ತಿರಲು ಅವರುಗಳಲ್ಲಿ ಕರುಣೆಯಿಂದ ಬ್ರಹ್ಮರುದ್ರಾದಿ ದೇವತೆಗಳು ಶ್ರೀ ಪರಮಾತ್ಮನಲ್ಲಿ ವಿಜ್ಞಾಪಿಸಲು ಕ್ರೀಡಾದಿ ವಿಶಿಷ್ಟನಾದ ಶ್ರೀ ಮನ್ನಾರಾಯಣನು ಅವರ ಕೋರಿತೆಯನ್ನು ಆದರಿಸಿ ನಿಜವಾದ ತತ್ತ್ವಜ್ಞಾನವನ್ನು ಪ್ರಕಟಪಡಿಸಲು ಶ್ರೀ ವೇದವ್ಯಾಸ ರೂಪದಿಂದ ಆವಿರ್ಭವಿಸಿದನು.

**3. 4. ಅಭೀಷ್ಟಾನಿಷ್ಟ ಪ್ರಾಪ್ತಿ ಪರಿಹಾರೇಚ್ಛೂನಾಂ, ತದ್ಯೋಗಮವಿಜಾನತಾಂ ತಜ್ಜ್ಞಾಪನಾರ್ಥಂ ವೇದಮುತ್ಸನ್ನಂ ವ್ಯಂಜಯಂಶ್ಚತುರ್ಧಾವ್ಯಭಜತ್ ಚತುರ್ವಿಂಶತಿಧೈಕಶತಧಾ ಸಹಸ್ರಧಾ ದ್ವಾದಶಧಾಚ । ತದರ್ಥನಿರ್ಣಯಾಯ ಬ್ರಹ್ಮಸೂತ್ರಾಣಿ ಚಕಾರ**

ಅನಂತರ ಇಷ್ಟ ಪ್ರಾಪ್ತಿ ಅನಿಷ್ಟ ಪರಿಹಾರ ರೂಪ ಸದ್ಗತಿಯಲ್ಲಾಸಕ್ತರಾದ ಸಜ್ಜನರ ಉಪಯೋಗಕ್ಕಾಗಿ ತಿರೋಹಿತವಾಗಿದ್ದ ವೇದಮಾತೆಯನ್ನು ಪ್ರಕಾಶಪಡಿಸಿ

ಅದನ್ನು ನಾಲ್ಕು ಭಾಗಗಳಾಗಿ ಋಕ್, ಯಜುಸ್, ಸಾಮ, ಅಥರ್ವ ವೇದಶಾಖೆ ಗಳಿಂದ ಪ್ರಸಿದ್ಧಪಡಿಸಿದರು ಮತ್ತು ಅಲ್ಪಜ್ಞರ ಪ್ರಯೋಜನಕ್ಕಾಗಿ ಅವುಗಳನ್ನು ಕ್ರಮ ವಾಗಿ 24 ಅಂತರ್ಭಾಗಗಳಾಗಿ ಋಗ್ವೇದವನ್ನೂ, 101 ಅಂತರ್ಭಾಗಗಳಾಗಿ ಯಜುರ್ ವೇದವನ್ನೂ, 1000 ಅಂತರ್ಭಾಗಗಳಾಗಿ ಸಾಮವೇದವನ್ನೂ 12 ಅಂತರ್ಭಾಗ ವಾಗಿ ಅಥರ್ವವೇದವನ್ನೂ ವಿಭಾಗ ಮಾಡಿದರು. ಇವುಗಳ ನಿಶ್ಚಯಾರ್ಥ ವಿವರಣ ರೂಪಾಧ್ಯಯನ ಉಪಯೋಗಕ್ಕಾಗಿ "ಬ್ರಹ್ಮಸೂತ್ರ" ಎಂಬ ಗ್ರಂಥವನ್ನು ರಚಿಸಿ ದರು

**5. ತಚ್ಚೋಕ್ತಂ ಸ್ಕಾಂದೇ**
**ನಾರಾಯಣಾದ್ವಿನಿಷ್ಪನ್ನಂ ಜ್ಞಾನಂಕೃತಯುಗೇ ಸ್ಥಿತಂ ।**
**ಕಿಂಚಿತ್ತದನ್ಯಥಾಜಾತಂ ತ್ರೇತಾಯಾಂ ದ್ವಾಪರೇ ಖಿಲಂ ॥**

ಭಾಷ್ಯಕಾರರು ಈ ವಿಷಯ ವಿವರಣೆಗಳನ್ನು ಸ್ಕಾಂದ ಪುರಾಣ ವಾಕ್ಯದಿಂದ ಸಮರ್ಥನೆ ಮಾಡುವರು ಈ ಪ್ರಪಂಚದ ಆದಿ ಸೃಷ್ಟಿಯಲ್ಲಿ ಶ್ರೀಮನ್ನಾರಾಯಣ ದೇವರಿಂದ ಚತುರ್ಮುಖ ಬ್ರಹ್ಮ ದೇವರಿಗೆ ಉಪದೇಶಿಸಲ್ಪಟ್ಟ ಜ್ಞಾನವು ಕೃತಯುಗದಲ್ಲಿ ಸ್ಥಿರವಾ ಗಿದ್ದು ತ್ರೇತಾಯುಗದಲ್ಲಿ ಸ್ವಲ್ಪ ಮಟ್ಟಿಗೆ ಕಲುಷಿತವಾಗಿ ದ್ವಾಪರ ಯುಗದಲ್ಲಿ ಪೂರ್ಣ ತಿರೋಹಿತವಾಯಿತು.

**6. ಗೌತಮಸ್ಯ ಋಷೇಶ್ಶಾಪಾಜ್ಜ್ಞಾನೇತ್ವ ಜ್ಞಾನತಾಂಗತೇ ।**
**ಸಂಕೀರ್ಣ ಬುದ್ಧಯೋದೇವಾ ಬ್ರಹ್ಮರುದ್ರ ಪುರಸ್ಸರಾಃ ।**
**ಶರಣ್ಯಂ ಶರಣಂ ಜಗ್ಮುಃ ನಾರಾಯಣಮನಾಮಯಂ ॥**

ಗೌತಮ ಋಷಿಗಳ ಶಾಪದಿಂದ ಕೂಡ ಈ ಅಲ್ಪಜ್ಞಾನವೂ ಪೂರ್ಣವಾಗಿ ವ್ಯತ್ಯಸ್ತವಾಗಿ ಅಜ್ಞಾನತ್ವವನ್ನು ಹೊಂದಲು, ಸ್ವತಃ ಅಸ್ಖಲಿತ ಜ್ಞಾನವುಳ್ಳ ದೇವತಾ ವೃಂದವು ಸಜ್ಜನರಲ್ಲಿ ಕನಿಕರ ವೃಷ್ಟಿಯಿಂದ ಶ್ರೇಷ್ಠ ಜ್ಞಾನಿಗಳಾದ ಬ್ರಹ್ಮರುದ್ರಾದಿಗಳ ಮುಂದಾಳುತ್ವದಲ್ಲಿ ಸರ್ವೋತ್ತಮ ಜ್ಞಾನ ಪೂರ್ಣನಾದ ಶ್ರೀಮನ್ನಾರಾಯಣನನ್ನು ಪುನಃ ಜ್ಞಾನ ಪ್ರಕಾಶಕ್ಕಾಗಿ ಶರಣು ಹೊಂದಿದರು.

**7. ತೈರ್ವಿಜ್ಞಾಪಿತ ಕಾರ್ಯಸ್ತು ಭಗವಾನ್ಪುರುಷೋತ್ತಮಃ ।**
**ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್ ॥**

ಉತ್ಸನ್ನಾನ್ನಗವಾನ್ವೇದಾನುಜ್ಜಹಾರ ಹರಿಃಸ್ವಯಂ ।
ಚತುರ್ಧಾ ವ್ಯಭಜತ್ತಾಂಶ್ಚ ಚತುರ್ವಿಂಶತಿಧಾ ಪುನಃ ।
ಶತಧಾ ಚೈಕಧಾ ಚೈವ ತಥೈವಚ ಸಹಸ್ರಧಾ ।
ಕೃಷ್ಣೋದ್ವಾದಶಧಾ ಚೈವ.

ಈ ದೇವಾಸು ವೇವತೆಗಳಿಂದ ಪುನಃ ಜ್ಞಾನ ಪ್ರಸಾರಕ್ಕೆ ವಿಜ್ಞಾಪಿಸಲ್ಪಟ್ಟ ಷಡ್ಗುಣೈಶ್ವರ್ಯ ಸಂಪನ್ನನಾದ ಪರಮ ಪುರುಷನಾದ ಶ್ರೀ ಮನ್ನಾರಾಯಣ ದೇವರು ಪರಾಶರ ಋಷಿಗಳ ಪತ್ನಿ ಶ್ರೀ ಸತ್ಯವತೀ ದೇವಿಯಲ್ಲಿ ವೇದವ್ಯಾಸಾಖ್ಯ ಮಹಾಯೋಗಿ ರೂಪದಿಂದ ಆವಿರ್ಭೂತರಾದರು. ತಿರೋಹಿತವಾದ ಮೂಲವೇದ ರಾಶಿಯನ್ನು ಪ್ರಕಟಿಸಿ ತಾವೇ ಸ್ವತಃ ವಿಭಾಗಗಳನ್ನಾಗಿ ವಿಂಗಡಿಸಿದರು.

8. ಪುನಸ್ತಸ್ಯಾರ್ಥ ವಿತ್ತಯೇ ।
ಚಕಾರ ಬ್ರಹ್ಮ ಸೂತ್ರಾಣಿ ಯೇಷಾಂ ಸೂತ್ರತ್ವ ಮಂಜಸಾ ॥

ಪುನಃ ಅವುಗಳ ಸ್ಪಷ್ಟಾರ್ಥ ತಿಳಿವಳಿಕೆಗಾಗಿ ಶ್ರೇಷ್ಠವಾದ ಬ್ರಹ್ಮಸೂತ್ರವೆಂಬ ಶಾಸ್ತ್ರವನ್ನು ರಚಿಸಿ ಪ್ರಸಿದ್ಧಪಡಿಸಿದರು.

9. ಅಲ್ಪಾಕ್ಷರ ಮಸಂದಿಗ್ಧಂ ಸಾರವದ್ವಿಶ್ವತೋಮುಖಂ ।
ಅಸ್ತೋಭಮನವದ್ಯಂಚ ಸೂತ್ರಂ ಸೂತ್ರವಿದೋವಿದುಃ ॥

ಅಲ್ಪಾಕ್ಷರ ರಚಿತ ನಿರ್ಣಯಕಸಾರಭೂತಾರ್ಥವುಳ್ಳ, ಇಷ್ಟಾರ್ಥ ಮುಖ್ಯ ಪ್ರತಿಪಾದಕ ಅರ್ಥವಿವರಣ ಪೂರ್ತ ಮಾತ್ರಾಕ್ಷರಗಳುಳ್ಳ ಶಬ್ದಾರ್ಥ ದೋಷವಿಲ್ಲದ ಪದ ಸಮೂಹಗಳನ್ನು "ಸೂತ್ರ" ಶಬ್ದಾರ್ಥವೆಂದು ಲಕ್ಷಣವೇತ್ತರು ತಿಳಿಯುವರು.

ನಿರ್ವಿಶೇಷಿತ ಸೂತ್ರತ್ವಂ ಬ್ರಹ್ಮಸೂತ್ರಸ್ಯ ಚಾಪ್ಯತಃ ।
ಯಥಾವ್ಯಾಸತ್ವ ಮೇಕಸ್ಯ ಕೃಷ್ಣಸ್ಯಾನ್ಯೇ ವಿಶೇಷಣಾತ್ ॥

ಯಾವ ವಿಶೇಷಣವಿಲ್ಲದ ಸೂತ್ರಕ್ಕೆ ಮಾತ್ರ ಪರಮ ಬ್ರಹ್ಮಸೂತ್ರವೆಂದು ಪರಿಗಣಿಸುವರು. ವೇದೋದ್ಧರಣ ಕೃತ, ಸೂತ್ರಕೃತ ಪರಬ್ರಹ್ಮಾವತಾರ ಕೃಷ್ಣಶಬ್ದ ವಾಚ್ಯ ವೇದವ್ಯಾಸ ಮುನಿಗಳಿಗೆ ಮಾತ್ರ ವ್ಯಾಸತ್ವವೇ ಹೊರತು ಮಿಕ್ಕ ಋಷಿಗಳಿಗೆ ವ್ಯಾಸಾಚಾರ್ಯರೆಂಬ ನಾಮಧೇಯ ಮಾತ್ರ.

12. ಸವಿಶೇಷಣ ಸೂತ್ರಾಣಿ ಹ್ಯಪರಾಣಿವಿದೋವಿದು ॥

ವಿಶೇಷಣ ಪೂರ್ವಕ ಸೂತ್ರಗಳಿಗೆ ಅಮುಖ್ಯವಸ್ತು ಸೂತ್ರಗಳೆಂದು ಶಿಷ್ಟರ ಮತವು.

12 ಮುಖ್ಯಸ್ಯ ನಿರ್ವಿಶೇಷೇಣ ಶಬ್ದೋನ್ಯೇಷಾಂ ವಿಶೇಷತಃ
ಇತಿವೇದವಿದಃ ಪ್ರಾಹುಃ ಶಬ್ದತತ್ವಾರ್ಥವೇದಿನಃ ।
ಸೂತ್ರೇಷು ಯೇಷು ಸರ್ವೇಽಪಿ ನಿರ್ಣಯಾಸ್ಸಮುದೀರಿತಾಃ ॥
ಶಬ್ದ ಜಾತಸ್ಯ ಸರ್ವಸ್ಯ ಯತ್ಪ್ರಮಾಣಶ್ಚ ನಿರ್ಣಯಃ
ಏವಂ ವಿಧಾನಿ ಸೂತ್ರಾಣಿ ಕೃತ್ವಾ ವ್ಯಾಸೋ ಮಹಾಯಶಾಃ ।
ಬ್ರಹ್ಮರುದ್ರಾದ ದೇವೇಷು ಮನುಷ್ಯ ಪಿತೃಪಕ್ಷಿಷು
ಜ್ಞಾನಂ ಸಂಸ್ಥಾಪ್ಯ ಭಗವಾನ್ ಕ್ರೀಡತೇ ಪುರುಷೋತ್ತಮಃ ॥

ವೇದ ಜ್ಞಾನವುಳ್ಳ ಪಂಡಿತರು ಮುಖ್ಯಾರ್ಥವುಳ್ಳದ್ದನ್ನು ವಿಶೇಷಣವಿಲ್ಲದೆಯೂ ಮಿಕ್ಕ ಅಮುಖ್ಯವಾದವುಗಳನ್ನು ವಿಶೇಷಣಗಳಿಂದಲೂ ಸೂಚಿಸುವರು ಈ ಬ್ರಹ್ಮ ಸೂತ್ರಗಳಲ್ಲಿ ಸರ್ವ ಅರ್ಥನಿರ್ಣಯವೂ ಹೇಳಲ್ಪಟ್ಟಿದೆ ಸರ್ವವೇದ ವಾಕ್ಯಗಳ ಪ್ರಮಾಣ ಪೂರ್ವಕ ಅರ್ಥ ನಿರ್ಣಯಗಳು ಬ್ರಹ್ಮ ಸೂತ್ರಗಳ ಮುಖ್ಯ ಆಶಯವು ಮಹಾ ಯಶಸ್ವಿ ಶ್ರೀವೇದ ವ್ಯಾಸರು ಈ ರೀತಿಯ ಸೂತ್ರಗಳನ್ನು ರಚಿಸಿ ಉಪದೇಶದ್ವಾರಾ ಬ್ರಹ್ಮ ರುದ್ರಾದಿ ದೇವತೆಗಳು ಚಕ್ರವರ್ತಿಗಳು ಮನುಷ್ಯರುಗಳಲ್ಲಿ ಜ್ಞಾನವನ್ನು ವಿವಿಧ ಯೋಗ್ಯತಾನಿಯಮದಿಂದ ಸ್ಥಾಪಿಸಿ ಕ್ರೀಡಿಸುವರು

## ಸೂ : ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ

**ಅಥ**– ಅಧ್ಯಯನ ಶಮದ ಮಾದಿರೂಪ ಅಧಿಕಾರಪ್ರಾಪ್ತ್ಯ ನಂತರದಲ್ಲಿ-**ಅತಃ** ತನ್ನಲ್ಲಿ ಜ್ಞಾನ ಸಂಪಾದನ ಪ್ರಸಾದವಾದ ಪರಮಪುರುಷಾರ್ಥ ರೂಪ. ಮೋಕ್ಷ ಫಲವು ಅಪೇಕ್ಷಿತವಾಗಿ ಓಂ ಗುಣಪರಿಪೂರ್ಣನಾದ ವಿಷ್ಣು ಶಬ್ದವಾಚ್ಯನಾದ ಬ್ರಹ್ಮ ವಸ್ತುವಿನ ಶ್ರವಣಾದಿ ರೂಪ ವಿಚಾರವನ್ನು ಮಾಡತಕ್ಕದ್ದು

ಈ ಪ್ರಪಂಚವು ಜೀವ,ಜಡ, ಪರಮಾತ್ಮರುಗಳನ್ನು ವಸ್ತುವಾಗುಳ್ಳದ್ದು.ಜಡವು ಪ್ರತ್ಯಕ್ಷಸಿದ್ಧವು ಜೀವ ಚೇತನವು ನಾನು ಎಂಬ ಪ್ರತ್ಯಕ್ಷಾನುಭವದಿಂದಲೇ ಸಿದ್ಧವು. ಚೇಷ್ಟಾದಿ ಧರ್ಮದಿಂದ ಜ್ಞಾತನು. ಅಂದ ಮೇಲೆ ಉಳಿದಿರುವ ಪರಮಾತ್ಮ

ವಸ್ತುವು ಜೀವ ಭಿನ್ನನಲ್ಲವಾಗಿ ಜ್ಞಾತನೇ. ಆದ್ದರಿಂದ ಶಾಸ್ತ್ರದಿಂದ ಪ್ರಯೋಜನ ಪಡೆಯಲು ವಿಷಯವಿಲ್ಲವಾಗಿ ಅಧಿಕಾರಿ ಮತ್ತು ಸಂಬಂಧಗಳೂ ಇಲ್ಲದ್ದರಿಂದ ಶಾಸ್ತ್ರ ಭ್ಯಾಸವು ಆರಂಭಣೀಯವಲ್ಲವೆಂಬ ಪೂರ್ವ ಪಕ್ಷಕ್ಕೆ ಉತ್ತರ ರೂಪವಾಗಿ ಈ ಸೂತ್ರವು ಶಾಸ್ತ್ರಕ್ಕೆ ನಾಲ್ಕು ಅನುಬಂಧಗಳನ್ನು ತಿಳಿಸುವುದರಿಂದ ಶಾಸ್ತ್ರಗಳ ಉಪಯುಕ್ತತೆಯನ್ನು ಸ್ಥಾಪಿಸಿ ಶಾಸ್ತ್ರಭ್ಯಾಸಾರಂಭಣೀಯತೆಯನ್ನು ತಿಳಿಸುವುದು

1) ಪರಮ ಚೇತನನಾದ ಶ್ರೀ ಹರಿಯೇ ವಿಷಯನು.

2) ಆತನು ಜೀವ ಚೇತನರಿಗಿಂತ ಭಿನ್ನನು ಬ್ರಹ್ಮ ಶಬ್ದವು ಅವನಲ್ಲಿ ಅಸಾಧಾರಣ ಗುಣಪೂರ್ಣತ್ವವನ್ನು ತಿಳಿಸುವುದು ಇದು ಸಾಧಾರಣ ಜೀವನ ಧರ್ಮವಲ್ಲವಾಗಿ ಬೇರೆ ವಿಷಯವು

3) ಜಿಜ್ಞಾಸೆಯೋ ಈ ವಿಷಯವನ್ನು ದೃಢಪಡಿಸುವ ವಿಧಿ.

4) ಮೋಕ್ಷ ಪ್ರಾಪ್ತಿ ರೂಪ ಸಂಬಂಧವೇ ಉತ್ತಮ ಪ್ರಯೋಜನ. ಆದ್ದರಿಂದ ಈ ಬ್ರಹ್ಮಸೂತ್ರ ಶಾಸ್ತ್ರವು ಆರಂಭಣೀಯವು ಅವಶ್ಯಕವು.

ಈ ಮೊದಲನೇ ಸೂತ್ರಕ್ಕೆ ಜಿಜ್ಞಾಸಾಧಿಕರಣವೆಂಬ ನಾಮಧೇಯವು–ಅಧಿಕರಣವೆಂದರೆ ಪರಮಾತ್ಮನ ಧರ್ಮದ ವಿಷಯವಾಗಿ ಪೂರ್ಣ ವಿಚಾರವು. ಇದರ ಅಂಗವಾಗಿ ವಿಷಯ, ಸಂಶಯ ಪೂರ್ವಪಕ್ಷ (ಸಂಶಯಕ್ಕೆ ಕಾರಣ) ಸಿದ್ಧಾಂತ (ಅಂತ್ಯ ನಿರ್ಧಾರ) ಮತ್ತು ಪ್ರಯೋಜನವೆಂಬುವು ಈ ಪ್ರತಿ ಅಧಿಕರಣಕ್ಕೂ, ಸಂಗತಿ ಪಂಚಕಗಳು. ಶಾಸ್ತ್ರ ಸಂಗತಿ, ಅಧ್ಯಾಯ ಸಂಗತಿ, ಪಾದ ಸಂಗತಿ ಪೂರ್ವ ಸಂಗತಿ, ಮತ್ತು ವಿಷಯ ವಾಕ್ಯ ಸಂಗತಿಗಳು. ಮೊದಲು ಐದು ಅಧಿಕರಣಗಳಿಗೆ ಶಾಸ್ತ್ರ ಸಂಗತಿ ಮಾತ್ರ ವಿಚಾರವು ಮುಂದಿನ ಅಧಿಕರಣಗಳಲ್ಲಿ ಯಥಾವತ್ತಾಗಿ ಸರ್ವಾಂಗ ವಿಚಾರವು ಮಾಡಲ್ಪಡುವುದು.

**ಅಧ್ಯಾಯ ಪಾದ ಸಂಗತಿಗಳು – ವಿಂಗಡಣೆಗಳು :**

**ಅಧ್ಯಾಯ 1 ಸಮನ್ವಯಾಧ್ಯಾಯ**

ಪಾದ 1 ಸರ್ವ ಶಬ್ದಕ್ಕೂ ಪರಮಾತ್ಮನೇ ಮುಖ್ಯಾರ್ಥ.
2a ಬ್ರಹ್ಮನಲ್ಲಿಯೇ ಪ್ರಸಿದ್ಧವಾದ ಶಬ್ದಗಳು
2b ಬ್ರಹ್ಮನಲ್ಲದ ವಸ್ತುವಿನಲ್ಲಿ ಪ್ರಸಿದ್ಧ ಶಬ್ದಗಳು
3 ಉಭಯತ್ರ ಪ್ರಸಿದ್ಧ ಶಬ್ದಗಳು
4 ಅನ್ಯತವೇ ಪ್ರಸಿದ್ಧ ಶಬ್ದಗಳು

**ಅಧ್ಯಾಯ 2 ಅವಿರೋಧಾಧ್ಯಾಯ**

ಪಾದ 1 ಯುಕ್ತಿ ವಿರುದ್ಧ ಶಬ್ದಗಳು.
2 ಸಮಯವಿರುದ್ಧ ಶಬ್ದಗಳು.
3 ಶೃತಿವಿರುದ್ಧ ಶಬ್ದಗಳು
4 ಶೃತಿ ಸಹಿತ ಯುಕ್ತಿ ವಿರುದ್ಧಶಬ್ದಗಳು.

**ಅಧ್ಯಾಯ 3 ಸಾಧನಾಧ್ಯಾಯ**

ಪಾದ 1 ವೈರಾಗ್ಯ ಪಾದ.
2 ಭಕ್ತಿ ಪಾದ.
3 ಉಪಾಸನಾ ಪಾದ.
4 ಜ್ಞಾನ ಪಾದ

**ಅಧ್ಯಾಯ 4 ಫಲಾಧ್ಯಾಯ**

ಪಾದ 1 ಕರ್ಮನಾಶ.
2 ದೇವತಾಲಯ
3 ಬ್ರಹ್ಮಪ್ರಾಪ್ತಿ ಮಾರ್ಗ.
4 ಮುಕ್ತಿ ಭೋಗ.

ಈ ಪ್ರಥಮ ಸೂತ್ರದಲ್ಲಿ ಪ್ರಥಮತಃ ಎರಡು ಸಲ ಓಂಕಾರವು ಘಠಿತವು. ಮೊದಲನೇ ಓಂಕಾರ ಪಠಣವು ಅದೃಷ್ಟಾರ್ಥವನ್ನು ಸೂಚಿಸುತ್ತದೆ. ಎರಡನೆಯ ಓಂಕಾರವು ಸೂತ್ರಾವಯವವಾಗಿ ಸೂತ್ರಾರ್ಥದಲ್ಲಿ ಸೇರುತ್ತದೆ. ಸೂತ್ರದ ಕೊನೆಯಲ್ಲಿ ಪಠಿತ ಓಂಕಾರವು ಅದೃಷ್ಟ ಸೂಚಕವು. ಸೂತ್ರಾವಯವರೂಪ ಓಂಕಾರವು ಶ್ರೀ ಪರಮಾತ್ಮನ ಗುಣಪೂರ್ಣತ್ವವಾಚಕವಾಗಿ ಫಲಿತಾರ್ಥದಲ್ಲಿ ತಾತ್ಪರ್ಯ ವುಳ್ಳದ್ದು.

ಅತಃ ಶಬ್ದಕ್ಕೆ ಶ್ರೀ ವಿಷ್ಣು ಪ್ರಸಾದ ಮಾತ್ರದಿಂದ ಜಿಜ್ಞಾಸಾದಿಕಾರ್ಯ ಸಾಧಕವೆಂದೂ ಮತ್ತೊಂದು ಅರ್ಥವು.

ಶೃತಿಯು **"ಓಮಿತ್ಯೇತದಕ್ಷರ ಮುಪಾಸೀತ ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ"**

ಅಥಶಬ್ದೋ ಮಂಗಲಾರ್ಥೋಽಧಿಕಾರಾನಂತರ್ಯಾರ್ಥಕಶ್ಚ ।
ಅತಶ್ಶಬ್ದೋ ಹೇತ್ವರ್ಥಃ ।

ಅಥ ಶಬ್ದವು ಅಧಿಕಾರಾನಂತರ್ಯಾರ್ಥದಲ್ಲಿಯಲ್ಲದೆ ಮಂಗಳ ಸೂಚಕವಾಗಿಯೂ ಈ ಗ್ರಂಥದ ಆದಿಯಲ್ಲಿ ಪ್ರಯೋಗಿಸಲ್ಪಟ್ಟಿದೆ ಆದ್ದರಿಂದ ಗ್ರಂಥಾರಂಭಣದಲ್ಲಿ ಶಿಷ್ಟಾಚಾರ ಸಂಪ್ರದಾಯ ಮಂಗಳಾಚರಣದಿಂದ ಆರಂಭಣೀಯತ್ವವು ಈ ಗ್ರಂಥಕ್ಕೆ ಲಭಿಸಿ ಅವಶ್ಯ ಅಧ್ಯಯನ ಕಾರಣವನ್ನು ಸೂಚಿಸುತ್ತದೆ

ಅತಃ ಶಬ್ದವು ಹೇತ್ವರ್ಥದಲ್ಲಿ. ಅಧಿಕಾರಿಗಳಿಗೆ ಮುಕ್ತಿಯು ಒಂದೇ ಬ್ರಹ್ಮ ವಿಚಾರಕ್ಕೆ ಪ್ರವೃತ್ತಿ ಮಾತ್ರವಲ್ಲದೆ ಪರಮಾತ್ಮನ ಲೌಕಿಕ ಪ್ರಸಾದಕ್ಕೆ ಪ್ರಾಪ್ತಿರೂಪ ವಾಗಿಯೂ ಹೇಳಿದೆ.

21 ಉಕ್ತಂಚ ಗಾರುಡೇ

ಈ ಅರ್ಥಗಳು ಗರುಡ ಪುರಾಣದಲ್ಲಿಯೂ ಸೂಚಿಸಲ್ಪಟ್ಟು ನಾರದರ ಪ್ರಶ್ನೆಗೆ ಅರ್ಥವಾಗಿ ಚತುರ್ಮುಖ ಬ್ರಹ್ಮದೇವರ ಉಪದೇಶ ರೂಪವು ಕೂಡ ಆಗಿದೆ.

22–38 ಅಥಾತಶ್ಶಬ್ದ ಪೂರ್ವಾಣಿ ಸೂತ್ರಾಣಿ ನಿಖಿಲಾನ್ಯಪಿ ।
ಪ್ರಾರಭಂತೇ ನಿಯತ್ಯೈವ ತತ್ಕಿಮತ್ರನಿಯಾಮಕಂ ॥
ಕಶ್ಚಾರ್ಥಶ್ಚ ತಯೋರ್ವಿದ್ವನ್ ಕಥಮುತ್ತಮತಾತಯೋಃ ।
ಏತದಾಖ್ಯಾಹಿಮೇ ಬ್ರಹ್ಮನ್ ಯಥಾಜ್ಞಾಸ್ಯಾಮಿತತ್ವತಃ ॥
ಏವಮುಕ್ತೋಽನಾರದೇನ ಬ್ರಹ್ಮಾಪ್ರೋವಾಚಸತ್ತಮಃ ।
ಆನಂತರ್ಯೇಽ (ಅ)ಧಿಕಾರಸ್ಯ ಮಂಗಲಾರ್ಥೇಽತಥೈವಚ ॥
ಅಥಶಬ್ದಸ್ತ್ವತಃಶ್ಶಬ್ದೋ ಹೇತ್ವರ್ಥೇ ಸಮುದೀರಿತಃ ।
ಪರಸ್ಯಬ್ರಹ್ಮಣೋ ವಿಷ್ಣೋಃ ಪ್ರಸಾದಾದಿತಿ ವಾ ಭವೇತ್ ॥
ಸ ಹಿ ಸರ್ವ ಮನೋವೃತ್ತಿ ಪ್ರೇರಕಸ್ಸಮುದೀರಿತ ಃ ।
ಸಿಸೃಕ್ಷೋಃ ಪರಮಾದ್ವಿಷ್ಣೋಃ ಪ್ರಥಮಂದ್ವಾವಿನಿಸ್ಸೃತೌ ॥
ಓಂಕಾರಶ್ಚಾಥ ಶಬ್ದಶ್ಚ ತಸ್ಮಾತ್ಪ್ರಾಥಮಿಕೌಕ್ರಮಾತ್ ॥
ತದ್ಧೇತುತ್ವಂವದಂಶ್ಚಾಪಿ ತೃತೀಯೋತ ಉದಾಹೃತಃ ॥
ಅಕಾರಸ್ಸರ್ವವಾಗಾತ್ಮಾ ಪರಬ್ರಹ್ಮಾಭಿಧಾಯಕಃ ।
ತಥೌ ಪ್ರಾಣಾತ್ಮಕೌಪ್ರೋಕ್ತೌ ವ್ಯಾಪ್ತಿಸ್ಥಿತಿ ವಿಧಾಯಕೌ ।



2]

ಅತಶ್ಚ ಪೂರ್ವಮುಚ್ಚಾರ್ಯೌ ಸರ್ವೇ ಏತೇಸತಾಂ ಮತಾ ||
ಅಥಾತಃಶ್ಬ್ದಯೋರೇವಂ ನೀಯೋರ್ಮಾಚ್ಞಾಯತತ್ವತ
ಸೂತ್ರೇಷು ತು ಮಹಾಪ್ರಾಜ್ಞಾಸ್ತ್ವಾವೇನಾದೌಪ್ರಯುಂಜತೆ || ಇತಿ ||

ಶ್ರೀ ನಾರದರ ಪ್ರಶ್ನೆ ಹೇತಾತ ವ್ಯಾಸ ಜೈಮಿನ್ಯಾದಿಕೃತ ಸೂತ್ರಗಳು ನಿಯಮ ವಾಗಿ ಕಲ್ಪಾಂತರದಲ್ಲಿಯೂ ಕೂಡ "ಅಥ","ಅತಃ" ಶಬ್ದಗಳಿಂದ ಪ್ರಾರಂಭಿಸಲ್ಪಡಲು ಏನುಕಾರಣ ಮತ್ತು ಅವುಗಳಿಂದ ತಿಳಿಯಬೇಕಾದ ಅರ್ಥವು ಯಾವುದು ಅವುಗಳಿಗೆ ಉತ್ತಮತೆ ಹೇಗೆ ಈ ವಿಷಯಗಳನ್ನು ವಿಶದವಾಗಿ ನಮ್ಮ ತಿಳುವಳಿಕೆಗೋಸ್ಕರ ಉಪ ದೇಶಿಸಬೇಕೆಂದು ಬೇಡುವೆವು.

ಈ ಪ್ರಶ್ನೆಗಳಿಗೆ ಉತ್ತರ ರೂಪವಾಗಿ ಹೀಗೆ ಹೇಳಲ್ಪಟ್ಟಿತು. ಸೂಕ್ತ ಶಮದ ಮಾದಿ ಅಧಿಕಾರಪ್ರಾಪ್ತ್ಯನಂತರದಲ್ಲಿ ಪೂರ್ಣಫಲಾಕ್ಷೆಯಿಂದ ಗ್ರಂಥಾರಂಭವು ಮಂಗಳ ಪೂರ್ವಕವಾಗಿರಬೇಕೆಂಬುದು ಶ್ರೇಷ್ಠ ನಿಯಮವು ಇದರಂತೆ ಅಥಶಬ್ದವು ಪ್ರಥಮವಾಗಿ ಉಕ್ತವಾಗಬೇಕು ಮತ್ತು ಅನಂತರ ಅತ: ಶಬ್ಧವು ಫಲಪ್ರಾಪ್ತಿರೂಪ ವಾಗಿಯೂ ವಿಧಿಸಲ್ಪಟ್ಟಿದೆ. ಸೃಷ್ಟಿಮಾಡಬೇಕೆಂಬ ಇಚ್ಛೆಯುಳ್ಳ ಶ್ರೀ ಪರಮಾತ್ಮ ನಿಂದ ಪ್ರಪ್ರಥಮವಾಗಿ 'ಓಂ' ಮತ್ತು 'ಅಥ' ಶಬ್ದಗಳು ಹೊರಹೊರಟವು ಮತ್ತು ಮೋಕ್ಷರೂಪ ಫಲ ಹೇತುವನ್ನು ತಿಳಿಸಲು ಕಾರಣವಾದವು 'ಅಥ' ಶಬ್ದವು ನಂತರ ಹೊರಬಂದು ಮೋಕ್ಷ ರೂಪ ಫಲಹೇತುವನ್ನು ಸೂಚಿಸಿತು ಸ್ವರೂಪತ; 'ಅಥ' ಮತ್ತು 'ಅತ.' ಶಬ್ದಗಳು ಶ್ರೀ ಪರಮಾತ್ಮನ ಸರ್ವಗುಣ ರೂಪಮಾಹಾತ್ಮ್ಯ ಜ್ಞಾಪಕಗಳಾಗಿ ಶ್ರೇಷ್ಠ ಮಂಗಳ ವಾಚಕಗಳಾದವು. "ಅ ಇತಿ ಬ್ರಹ್ಮ" ಎಂಬ ಶೃತಿಯು 'ಅ'ಕಾರಕ್ಕೆ ಪರಬ್ರಹ್ಮವಾಚವಾಗಿ ಮತ್ತು 'ತ' 'ಥ' ವರ್ಣಗಳು ಪ್ರಾಣವಾಚಕ ಶಬ್ದಗಳಾಗಿ ಪರಮಾತ್ಮನ ವ್ಯಾಪ್ತಿತ್ವ ಮತ್ತು ಸ್ಥಿರತ್ವಗಳನ್ನು ಜ್ಞಾಪಿ ಸುತ್ತವೆ ಮತ್ತು 'ಅ'ಕಾರವು ಪರಮಾತ್ಮನ ಗುಣವ್ಯಾಪ್ತಿಯನ್ನು 'ತ'ಕಾರವು ಆತನ ದೇಶಕಾಲ ವ್ಯಾಪ್ತಿಯನ್ನು 'ಥ'ಕಾರವು ಆತನ ಸದಾ ವಿಕಾರರಾಹಿತ್ಯವನ್ನು ಸೂಚಿಸು ವುದು. ಈ ಸ್ವರೂಪಾಧಿಕ್ಯವನ್ನು ತಿಳಿದು ಜ್ಞಾನಿಗಳು ಈ ಪದಗಳನ್ನು ಪ್ರಥಮತಃ ಕ್ರಮವಾಗಿ ಪ್ರಯೋಗಿಸಲು ಅನುಸರಿಸಿ ಸೂತ್ರಗಳನ್ನು ರಚಿಸುವರು

## 39. ಅಧಿಕಾರಶ್ಲೋಕೋಕ್ತೋ ಭಾಗವತತಂತ್ರೇ

ಈ ಬ್ರಹ್ಮ ಜಿಜ್ಞಾಸಾಕ್ಕೆ ಅಧಿಕಾರವು ಯಾವುದು ಎಂಬ ಪ್ರಶ್ನೆಗೆ ಭಾಗವತ ತಂತ್ರೋಕ್ತ ವಿಷಯವನ್ನು ಉದಾಹರಿಸುವರು.

40-48 ಮಂದಮಧ್ಯೋತ್ತಮತ್ವೇನ ತ್ರಿವಿಧಾಹ್ಯಧಿಕಾರಿಣಃ
ತತ್ರಮಂದಾಮನುಷ್ಯೇಷು ಯ ಉತ್ತಮಗಣಾ ಮತಾಃ।
ಮಧ್ಯಮಾ ಋಷಿಗಂಧರ್ವಾ ದೇವಾಸ್ತತ್ರೋತ್ರ ಮಾಮತಾಃ
ಇತಿಜಾತಿಕೃತೋ ಭೇದ ಸ್ತಥಾನ್ಯೋ ಗುಣಪೂರ್ವಕಃ
ಭಕ್ತಿಮಾನ್ಸರ್ವೇವಿಷ್ಣೌ ಯಸ್ತ್ವಧ್ಯಯನ ವಾನ್ನರಃ।
ಅಥಮಃ ಶಮಾದಿ ಸಂಯುಕ್ತೋ ಮಧ್ಯಮಸ್ಸಮುದಾಹೃತಃ।
ಆ ಬ್ರಹ್ಮ ಸ್ತಂಬಪರ್ಯಂತಮಸಾರಂ ಚಾಪ್ಯನಿತ್ಯಕಂ ।
ವಿಜ್ಞಾಯ ಜಾತವೈರಾಗ್ಯೋ ವಿಷ್ಣುಪಾದೈಕ ಸಂಶ್ರಯಃ ।
ಸ ಉತ್ತಮೋಧಿಕಾರೀ ಸ್ಯಾತ್ಸನ್ಯಸ್ತಾಖಿಲ ಕರ್ಮವಾನ್ ॥ ಇತಿ

ಅಧಿಕಾರಿಗಳು ಮೂರು ವಿಧ 1) ಮನುಷ್ಯರಲ್ಲಿ ಉತ್ತಮಗಣಗಳು, ಅಧಮಾಧಿಕಾರಿಗಳು 2) ಋಷಿ ಗಂಧರ್ವರುಗಳು ಮಧ್ವಮಾಧಿಕಾರಿಗಳು 3) ದೇವತೆಗಳು ಉತ್ತಮಾಧಿಕಾರಿಗಳು. ಈ ವಿಭಾಗವು ಸಾಮಾನ್ಯತ ಗುಣಕೃತ ಮತ್ತು ಜಾತಿಕೃತ ವಿಭಾಗಗಳು ಮತ್ತೊಂದು ವಿಭಾಗವು ಗುಣಪೂರ್ವಕವಾದುದು ಮಾತ್ರ. 1) ಶ್ರೀ ವಿಷ್ಣುವೇ ಸರ್ವಸ್ವಾಮಿಯೆಂಬ ಸಾಧಾರಣ ಜ್ಞಾನ ಸಂಪತ್ತಿನಿಂದ ಭಕ್ತಿಪೂರ್ವಕವಾಗಿ ವೇದಾಧ್ಯಯನ ಮಾಡಿಕೊಂಡಿರುವಾತನು ಮಂದಾಧಿಕಾರಿಯು 3) ಮೇಲಿನ ವೇದಾಧ್ಯಯನ ಮತ್ತು ಕ್ರಮಾನುಷ್ಠಾನದಿಂದ ಅಭಿವೃದ್ಧಿಹೊಂದಿದ ಜ್ಞಾನಪೂರ್ವಕ ಶಮದಮಾದಿ ಗುಣಸಂಪನ್ನತ್ವವನ್ನು ಹೊಂದಿರುವವನು, ಮಧ್ಯಮಾಧಿಕಾರಿಯು ) ಹಿಂದೆ ಹೇಳಿದ ಅಧ್ಯಯನ ಅನುಷ್ಠಾನಾದಿಗಳಿಂದ ವಿಶೇಷ ಜ್ಞಾನಾರ್ಜನೆಯನ್ನು ಹೊಂದಿ ಯಾವ ಅಧಿಕಾರಿಯು ಈ ಸರ್ವಪ್ರಪಂಚವೂ ಶ್ರೀ ಪರಮಾತ್ಮನಿಂದ ಪ್ರವೃತ್ತಿಯುಳ್ಳದ್ದೆಂದೂ,ಅಸಾರವೂ ಅನಿತ್ಯವೆಂದೂ ತಿಳಿದು ದೃಢಸಂಕಲ್ಪದಿಂದ ವೈರಾಗ್ಯ ಭಾಗ್ಯವನ್ನು ಹೊಂದಿ ಶ್ರೀ ವಿಷ್ಣುವೇ ಸರ್ವಶ್ರೇಷ್ಠಾಶ್ರಯನೆಂದು ತಿಳಿದು ತಾನು ಮಾಡುವ ಸರ್ವಕಾರ್ಯಗಳಲ್ಲಿಯೂ ತನ್ನ ಅಸ್ವಾತಂತ್ರ್ಯವನ್ನು ಶ್ರೀ ಪರಮಾತ್ಮನ ಸರ್ವಸ್ವಾತಂತ್ರ್ಯವನ್ನು ವಿವೇಚಿಸಿ ಸರ್ವಕಾರ್ಯಗಳಿಗೂ ಶ್ರೀಪರಮಾತ್ಮನೇ ಸ್ವತಂತ್ರ ಕರ್ತೃವೆಂಬ ತಿಳುವಳಿಕೆಯಿಂದ ಅವನಲ್ಲಿ ಸರ್ವಕರ್ಮಗಳನ್ನು ಸಮರ್ಪಿಸುವುದು ಉತ್ತಮಾಧಿಕಾರಿತ್ವವು

ಈ ಮೇಲೆ ಸೂಚಿಸಿರುವ ಮೂರು ರಾಶಿಗುಣಗಳೂ ಹಂತ ಹಂತವಾಗಿ ಕ್ರಮಕ್ರಮವಾಗಿ ಅನುಷ್ಠಾನ ಬಲದಿಂದ ಊರ್ಜಿತಹೊಂದಿ ಸಾಧಕನ ಸ್ವರೂಪ ಸಿದ್ಧ

ಮಟ್ಟಕ್ಕೆ ಅಭಿವೃದ್ಧಿಯು ಅಪೇಕ್ಷಿತವಾದುದರಿಂದ ಈ ವಿಭಾಗಗಳು ಪ್ರಚುರ ಪ್ರಚುರತರ, ಪ್ರಚುರತಮ ವಿಭಾಗಗಳಿಂದ ಮುಕ್ತಿಪ್ರಾಪ್ತಿಗೆ ಸೋಪಾನಗಳಂತಿರುವುವು. ಸ್ವಯೋಗ್ಯತಾಸಿದ್ಧಿ ಮಾತ್ರವೇ ಸಾಧ್ಯವು ಶ್ರೀ ವಿಷ್ಣು ಭಕ್ತಿ ಧಾರ್ಡ್ಯ ಮತ್ತು ಅಧ್ಯಯನವು ಅತ್ಯವಶ್ಯಕವು ಹೀಗೆ

## 49. "ಅಧ್ಯಯನಮಾತ್ರವತಃ" "ನಾವಿಶೇಷಾತ್" ಇತಿಚೋಪರಿ ।

ಯಥಾಶಕ್ತಿ ಸರ್ವವೇದಾಧ್ಯಯನಪರನಾದವನಿಗೆ ಮಾತ್ರ ಬ್ರಹ್ಮವಿದ್ಯಾಧಿಕಾರವು. ಇದು ಕಷ್ಟದಿಂದ ಮಾತ್ರ ಸಾಧ್ಯವು. ದೇವಾತಾದಿಗಳಿಗೆ ವಿಶೇಷ ಪ್ರವೃತ್ತಿಯಿಲ್ಲವಾದ್ದರಿಂದ ಸಾಮಾನ್ಯವಾಗಿ ಮಾತ್ರ ವೇದಾಧ್ಯಯನ ವಿಧಿಯಿಲ್ಲ ಆದರೆ ವಿದ್ಯಾಧಿಕಾರ ಮಾತ್ರ ತಾರಕಮ್ಯಾನುಸಾರವಾಗಿ ಸಾಧ್ಯ

## 50. ಶಾಂತೋದಾಂತ ಉಪರತಸ್ತಿತಿಕ್ಷುಃ ಸಮಾಹಿತೋಭೂತ್ವಾ ಆತ್ಮನ್ಯೇವಾತ್ಮಾನಂಪಶ್ಯೇತ್ (ಬೃ-ಉ-೬-4-23)

ಶಮದಮಾದಿ ಗುಣಗಳು ಅತ್ಯವಶ್ಯಕವಾಗಿ ಬ್ರಹ್ಮವಿದ್ಯಾಧಿಕಾರಕ್ಕಾಗಿ ಸಂಪಾದಿಸಲ್ಪಡಬೇಕು.

ಶಾಂತಃ ಭಗವನ್ನಿಷ್ಟ ಬುದ್ಧಿವೈಷ್ಣವ ಸಿದ್ಧಾಂತದಲ್ಲಿ ಅಚಲವಾದ ಬುದ್ಧಿಉಳ್ಳವ
ದಾಂತಃ ಅಹಂಕಾರವರ್ಜಿತತ್ವ ಇಂದ್ರಿಯಗಳ ನಿಗ್ರಹಉಳ್ಳವ
ಉಪರತಃ ವಿಷಯಗಳಲ್ಲಿ ಸಾಕೆಂಬ ಬುದ್ಧಿ ವಿಷ್ಣುವಿನಲ್ಲಿಯೇ ತೃಪ್ತ ಮನಸ್ಸುಉಳ್ಳವ
ತಿತಿಕ್ಷುಃ ಶೀತೋಷ್ಣ ನಿಮಿತ್ತಕ ಸುಖದುಃಖ ರಹಿತನು
ಸಮಾಹಿತಃ ಶ್ರೀ ಹರಿಯಲ್ಲಿಯೇ ಚಿತ್ತ ಧಾರ್ಡ್ಯವುಳ್ಳವನು ಮತ್ತು ನಿಜವಾದ ಪರಮಾತ್ಮ ಜ್ಞಾನವುಳ್ಳವನು

ಈ ರೀತಿಯಾಗಿ ಶುದ್ಧಾಂತಃಕರಣವುಳ್ಳ ಜ್ಞಾನಿಯು ನಿಶ್ಚಲ ಚಿತ್ತವೃತ್ತಿಯಿಂದ ತನ್ನ ಹೃದಯಾವಕಾಶದಲ್ಲಿ ಸದಾಕಾಲದಲ್ಲಿಯೂ ಪ್ರತಿಷ್ಠಿತನಾಗಿರುವ ಶ್ರೀ ಪರಮಾತ್ಮನನ್ನು ತಿಳಿಯಬೇಕು ಬ್ರಾಹ್ಮಣನಿಗೆ ಹೇಗೆ ಉಪನಯನ ವಿಧಿಯು ವೇದವಿದ್ಯಾ ಸಂಪಾದನೆಗೆ ಅಧಿಕಾರ ಸಂಪತ್ತಿಯೋ ಹಾಗೆಯೇ ಶಮದಮಾದಿಗಳೂ ಬ್ರಹ್ಮ ವಿದ್ಯಾಧಿಕಾರಕ್ಕೆ ಅತ್ಯಾವಶ್ಯಕವು.

## 51-52. ಪರೀಕ್ಷ್ಯ ಲೋಕಾನ್ಕರ್ಮ ಚಿತಾನ್ಬ್ರಾಹ್ಮಣೋ ।
## ನಿರ್ವೇದ ಮಾಯಾನ್ನಾಸ್ತ್ಯಕೃತ ಕೃತೇನ

ಸಾರಾಸಾರ ನಿತ್ಯಾನಿತ್ಯ ವಿವೇಕಜನ್ಯ ವೈರಾಗ್ಯದಿಂದ ಇತರ ಸರ್ವಲೋಕಗಳ ಪ್ರಾಪ್ತಿಯನ್ನು ಮತ್ತು ಸುಖಾನುಭವಗಳನ್ನು ನಿತ್ಯವಲ್ಲದ್ದು ಮತ್ತು ಸಾರವಿಲ್ಲದ್ದನ್ನಾಗಿ ನಿಶ್ಚಯಿಸಿ ಅವುಗಳ ಪ್ರಾಪ್ತಿಗಾಗಿಯೇ ಕಾಮ್ಯ ಕರ್ಮಗಳನ್ನು ಮಾಡದೆ ಶ್ರೀ ಪರಮಾತ್ಮನ ಪ್ರೀತಿಗಾಗಿಯೇ ಕರ್ಮಗಳನ್ನು ಮಾಡಿ ಫಲಗಳನ್ನು ಇಚ್ಛಿಸದೆ ಅವನಲ್ಲಿಯೇ ಸಮರ್ಪಿಸಿ ಜ್ಞಾನಾರ್ಜನೆಯಿಂದಲೆ ಲಭ್ಯವಾದ ಪರಮಪುರುಷಾರ್ಥ ರೂಪ ಮೋಕ್ಷವನ್ನು ಹೊಂದಲು ಸರ್ವಪ್ರಯತ್ನವನ್ನು ಮಾಡಬೇಕು ಕಾಮ್ಯಕರ್ಮಗಳು ಸರ್ವಥಾ ಮೋಕ್ಷ ಫಲವನ್ನು ಸಾಧಿಸಲಾರವು

## 53-54. ತದ್ವಿಜ್ಞಾನಾರ್ಥಂಸ ಗುರುಮೇವಾಭಿಗಚ್ಛೇತ್ ।
## ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ॥ (ಮು-ಉ-1-2-12)

ಹೀಗೆ ತಿಳಿದು ಮುಮುಕ್ಷು ಭಕ್ತನು ವಿಶೇಷ ಜ್ಞಾನಾರ್ಜನೆಗಾಗಿ ಸದಾಚಾರ ಸಂಪನ್ನ ಬ್ರಹ್ಮನಿಷ್ಠನಾದ ಗುರುವನ್ನು ಹೊಂದಿ ನಮ್ರತೆಯಿಂದ ದೀನನಾಗಿ ಕೈಗಳನ್ನು ಜೋಡಿಸಿಕೊಂಡು ಸರ್ವವಿಧದಲ್ಲಿಯೂ ಆಶ್ರಯಿಸಬೇಕು.

## 55-56. ಯಮೇವೈಷವೃಣುತೆ ತೇನ ಲಭ್ಯಃ ।
## ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ॥ ಕಠೋಪ-2-23

ಸ್ವೇಚ್ಛಾ ಪ್ರವೃತ್ತಿಯುಳ್ಳ ಶ್ರೀ ಪರಮಾತ್ಮನು ಯಾವ ಅಧಿಕಾರಿಯನ್ನು ತನ್ನ ಪ್ರಸಾದಾರ್ಹನೆಂದು ಪರಿಗಣಿಸುವನೋ ಅಂಥಹ ಭಾಗ್ಯಶಾಲಿ ಪುರುಷನಿಗೆ ತನ್ನಲ್ಲಿ ನಿಶ್ಚಲವಾದ ಭಕ್ತಿಯನ್ನು ಕರುಣಿಸಿ ತನ್ನ ಸ್ವರೂಪವನ್ನು ಪ್ರಕಾಶಪಡಿಸುವನು.

## 57-58 ಯಸ್ಯದೇವೇಪರಾಭಕ್ತಿಃಯಥಾದೇವೇತಥಾ ಗುರೌ॥
## ತಸ್ಯೈತೇ ಕಥಿತಾಹ್ಯರ್ಥಾಃ ಪ್ರಕಾಶಂತೇಮಹಾತ್ಮನಃ ॥

ಶ್ರೀ ವಿಷ್ಣುವಿನಲ್ಲಿ ಅನನ್ಯ ಭಕ್ತಿ ಹಾಗೂ ಇತರ ದೇವತೆಗಳು ಮತ್ತು ಗುರುಗಳಲ್ಲಿ ಅವರವರ ತಾರತಮ್ಯಾನುಗುಣವಾಗಿ ಭಕ್ತಿ ಮಾಡುವ ಪುರುಷನಿಗೆ ಗುರುವು

ಉಪದೇಶ ಮಾಡಿದ ಪರತತ್ವ ವಿಷಯವೂ ಹಾಗೆಯೇ ಮಾಡದೇ ಇರುವ ವಿಷಯಗಳೂ ನಹ ಗೋಚರವಾಗುತ್ತದೆ ಹೀಗೆ ಶೃತಿಗಳು ಹೇಳುತ್ತವೆ

59. ಇತ್ಯಾದಿ ಶ್ರುತಿಭ್ಯಶ್ಚ । ವ್ಯೋಮಸಂಹಿತಾಯಾಂಚ

ಈ ಶ್ರುತಿಗಳಲ್ಲಿ ಹೇಳಿದ ವಿಷಯವನ್ನು ವ್ಯೋಮಸಂಹಿತೆಯಲ್ಲಿಯೂ ಹೀಗೆ ಹೇಳಿದೆ.

60–65. ಅಂತ್ಯಜಾ ಅಪಿ ಯೇ ಭಕ್ತಾ ನಾಮಜ್ಞಾನಾಧಿಕಾರಿಣಃ :
ಸ್ತ್ರೀಶೂದ್ರ ಬ್ರಹ್ಮ ಬಂಧೂನಾಂ ತಂತ್ರಜ್ಞಾನೇಧಿಕಾರಿತಾ ।
ಏಕದೇಶೇ ಪರೋಕ್ತೇತು ನತುಗ್ರಂಥಪುರಸ್ಸರೇ
ತ್ರೈವರ್ಣಿಕಾನಾಂ ವೇದೋಕ್ತೇ ಸಮ್ಯಗ್ಭಕ್ತಿ ಮತಾಂ ಹರೌ।
ಆಹುರಪ್ಯುತ್ತಮಸ್ತ್ರೀಣಾಂ ಮಧಿಕಾರಂತು ವೈದಿಕೇ
ಯಥೋರ್ವಶೀಯಮೀಚೈವ ಶಚ್ಯಾದ್ಯಾಶ್ಚ ತಥಾಪರಾಃ ॥ ಇತಿ

ಮುಕ್ತಿಗೆ ಅಧಿಕಾರಿಗಳು ತ್ರೈವರ್ಣಿಕರುಗಳು ಮಾತ್ರವೇ ಅಲ್ಲ ಶೂದ್ರಾದ್ಯಂತ್ಯ ಜಾತಿಪುರುಷರು ವೈದಿಕ ಬ್ರಹ್ಮಜ್ಞಾನಬಾಹಿರರಾದರೂ ಅವರು ಶ್ರೀ ಪರಮಾತ್ಮನಲ್ಲಿ ಭಕ್ತರಾಗಿದ್ದರೆ ಅವರಿಗೆ ಶ್ರೀ ವಿಷ್ಣುನಾಮ ಪರನಾದಿಜನ್ಯಜ್ಞಾನಕ್ಕೆ ಅಧಿಕಾರ ಉಂಟು ಸ್ತ್ರೀಯರಿಗೂ ಶೂದ್ರಾದಿ ಜಾತಿಯವರುಗಳಿಗೂ ಬ್ರಹ್ಮಬಂಧುಗಳಿಗೂ ಪಂಚರಾತ್ರಾದಿಜನ್ಯ ಬ್ರಹ್ಮಜ್ಞಾನಕ್ಕೆ ಅಧಿಕಾರವುಂಟು ಆದರೆ ಗ್ರಂಥಾರಂಭ ಪೂರ್ವಕವಾಗಿಯಾಗಲಿ, ಪ್ರಧಾನಾಧಿಕಾರಿಯಾಗಲೀ ಅವರಿಗೆ ಭೋಧಿಸಕೂಡದು. ಬ್ರಹ್ಮನಿಷ್ಠ ಪುರುಷನಿಂದ ಯೋಗ್ಯ ಭಗವದ್ಭಕ್ತರಿಗೋಸ್ಕರ ಹೇಳಲ್ಪಟ್ಟ ಜ್ಞಾನವಿಷಯಕ್ಕೆ ಮಾತ್ರ ಅವರು ಅಧಿಕಾರಿಗಳು ಆದ್ದರಿಂದ ಪುರಾಣಾದಿ ಸದ್ವಿಷಯಗಳು ಸ್ತ್ರೀಶೂದ್ರ ಬಂಧುಗಳಿಗಾಗಿಯೇ ಮಾತ್ರ ಹೇಳಲ್ಪಡಬಾರದು. ಇತರ ಯೋಗ್ಯ ಶ್ರೋತೃಗಳಿಂದಲೂ ಕೂಡಿದ್ದರೆಯೋಗ್ಯವು. ಬ್ರಹ್ಮವಿದ್ಯೆಗೆ ಮುಖ್ಯವಾಗಿ ತ್ರೈವರ್ಣಿಕರಿಗೆ ಶ್ರೀ ಹರಿಭಕ್ತಿ ಸಂಪನ್ನರಿಗೆ ಮಾತ್ರ ಮತ್ತು ದೇವತಾಸ್ತ್ರೀಯರಿಗೆ ಮನುಷ್ಯಾವತಾರ ಕಾಲಗಳಲ್ಲಿಯೂ ಋಷಿಸ್ತ್ರೀಯರಿಗೂ ಅಧಿಕಾರವುಂಟು.

**66-67. ಯತೋನಾರಾಯಣಪ್ರಸಾದಮೃತೇ ನ ಮೋಕ್ಷಃ ನಚ ಜ್ಞಾನಂ ವಿನಾತ್ಯರ್ಥಪ್ರಸಾದಃ । ಅತೋಬ್ರಹ್ಮ ಜಿಜ್ಞಾಸಾ ಕರ್ತವ್ಯಾ॥**

ಸರ್ವಮುಮುಕ್ಷುಗಳಿಗೂ ದುಃಖಲೇಶವಿಲ್ಲದ ನಿತ್ಯಸುಖ ರೂಪವಾದ ಮೋಕ್ಷ ಪದವಿಯಲ್ಲಿಯೇ ಮಮತೆ. ಅದು ಶ್ರೀ ಮನ್ನಾರಾಯಣನ ಪ್ರಸಾದ ಸಂಪಾದನೆ ಯಿಂದ ಮಾತ್ರವೇ ಸಾಧ್ಯ ಶ್ರೀ ಪರಮಾತ್ಮನ ಈ ಅತಿಮಾತ್ರ ಪ್ರಸಾದವು ಅಪ ರೋಕ್ಷಜ್ಞಾನದಿಂದಲೇ ಲಭ್ಯ ಈ ಅಪರೋಕ್ಷ ಜ್ಞಾನವು ಜಿಜ್ಞಾಸೆಯಿಂದಲೇ ಹೊಂದಲ್ಪಡಬೇಕು ಆದ್ದರಿಂದ ಶ್ರೀ ಮನ್ನಾರಾಯಣ ಪದವಾಚ್ಯ ಶ್ರೀ ವಿಷ್ಣುವೇ ಜಿಜ್ಞಾಸ್ಯವಸ್ತುವೆಂದೂ ಅವನೇ ಬ್ರಹ್ಮಶಬ್ದ ಮುಖ್ಯವಾಚ್ಯನೆಂದೂ 'ಅತ' ಶಬ್ದ ದಿಂದ ಸೂಚಿಸಲ್ಪಟ್ಟಿದೆ.

**68-69. ಯತ್ರಾನವಸರೋನ್ಯತ್ರ ಪದಂತತ್ರ ಪ್ರತಿಷ್ಠಿತಂ । ವಾಕ್ಯಂವೇತಿ ಸತಾಂ ನೀತಿಃ ಸಾವಕಾಶೇ ನ ತದ್ಭವೇತ್ । ಇತಿ ಬೃಹತ್ಸಂಹಿತಾಯಾಂ ।**

ಈ ಮೊದಲನೇ ಸೂತ್ರದಲ್ಲಿ ಕ್ರಿಯಾಪದವಿರುವುದಿಲ್ಲ. ಮಹಾವಾಕ್ಯಗಳಲ್ಲಿ ಯಾವ ಪದದ ಅಧ್ಯಾಹಾರವಿಲ್ಲದೆ ಅರ್ಥಪೂರ್ಣವಾಗುವುದಿಲ್ಲವೋ ಅಂತಹ ಪದವನ್ನು ಅಧ್ಯಾಹಾರ ಮಾಡಬೇಕೆಂಬ ನಿಯಮವನ್ನು ಬೃಹತ್ಸಂಹಿತಾ ಗ್ರಂಥದಲ್ಲಿ ಹೇಳಿದೆ ಅದ ರಂತೆ ಇಲ್ಲಿ ಅರ್ಥಪೂರ್ಣತೆಗಾಗಿ "ಕರ್ತವ್ಯಾ" ಪದವನ್ನು ಅಧ್ಯಾಹಾರ ಮಾಡಿ ವಾಕ್ಯ ವನ್ನು ಪೂರ್ಣಮಾಡಬೇಕು "ನಕರ್ತವ್ಯಾ" ಎಂದು ಅಧ್ಯಾಹಾರ ಮಾಡಿದರೆ ಅಥ ಮತ್ತು ಅತ ಶಬ್ದಗಳ ಪ್ರಯೋಗಕ್ಕೆ ಪ್ರಯೋಜನವಿಲ್ಲದಂತಾಗುವುದರಿಂದ ಸೂಕ್ತವಲ್ಲ

**70 ತಮೇವಂ ವಿದ್ವಾನಮೃತ ಇಹಭವತಿ, ನಾನ್ಯಃ ಪಂಥಾ ಅಯನಾಯವಿದ್ಯತೆ ತೈ-ಆ-3-12**

ಇಹ ಅಧಿಕಾರಿ ವರ್ಗರಲ್ಲಿ ತಂ ಪರಮಾತ್ಮನನ್ನು ಏವಂ-ಸಹಸ್ರ ಶೀರ್ಷಾದ್ಯುಕ್ತಿ ಪ್ರಕಾರ ಇಹ-ಈ ಲೋಕದಲ್ಲಿ ವಿದ್ವಾನ್-ಪರೋಕ್ಷ ಜ್ಞಾನದಿಂದ ಅಪರೋಕ್ಷವಾಗಿ ತಿಳಿದೇ ಅಂತ್ಯದಲ್ಲಿ ಅಮೃತೋ-ಮುಕ್ತನು ಭವತಿ ಆಗುತ್ತಾನೆ. ಅನ್ಯ, ಪರಪುರುಷ ಜ್ಞಾನದಿಂದ ಬೇರೆ ಪಂಥ-ಉಪಾಯವು ನವಿದ್ಯತೆ ಇರುವುದಿಲ್ಲ. ಇಲ್ಲಿ ವಿದ್ವತ್ಪದವು ಪರಮಾತ್ಮನ ಪ್ರಸಾದ ಜನ್ಯ ಮೋಕ್ಷಫಲ ಸೂಚಕವು

71. ಪ್ರಿಯೋಹಿ ಜ್ಞಾನಿನೋಽತ್ಯರ್ಥಮಹಂ ಸಚ ಚಮಮಪ್ರಿಯಃ
ಗೀತಾ 7-17

ನಾನು ಜ್ಞಾನಿಗಳಿಗೆ ಅತ್ಯಂತ ಪ್ರಿಯನು ಅಪರೋಕ್ಷ ಜ್ಞಾನಿಯು ನನಗೆ ಇಷ್ಟ.

**72-73. ಯಮೇವೈಷವೃಣುತೇ ತೇನ ಲಭ್ಯಃ। ಕಠ-2-23**
**ಆತ್ಮಾವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ ಮಂತವ್ಯಃ ನಿದಿಧ್ಯಾಸಿತವ್ಯಃ**
**ಇತ್ಯಾದಿ ಸ್ಮೃತಿ ಶ್ರುತಿಭ್ಯಃ। (ಬೃ ಉ. 6-5-6)**

ಏಷಃ ಪರಮಾತ್ಮನು ಇಚ್ಛಾರೂಪನಾಗಿ (ಪ್ರಸನ್ನನಾಗಿ) ಯಂ-ಯಾವ ಅಧಿಕಾರಿಯನ್ನು ವೃಣುತೇ ಅನುಗ್ರಹಿಸುತ್ತಾನೆಯೋ ತೇನಏವ ಅವನಿಂದಲೇ ಲಭ್ಯಃ ಹೊಂದಲ್ಪಡುವವನು. ಅಂಥ ಪುಣ್ಯ ಪುರುಷನಿಗೆ ಸ್ವಾಂ ತನುಂ ತನ್ನ ರೂಪವನ್ನು ಪ್ರಕಾಶಪಡಿಸುವವನು ಮತ್ತು ಅವನ ವಿಶೇಷ ಸ್ವರೂಪವನ್ನು ಪ್ರಕಾಶಪಡಿಸುವನು

ಅರೆ ಎಲೈ ಮೈತ್ರೇಯಿ ಮುಕ್ತಿಫಲವನ್ನಿಚ್ಛಿಸಿದ್ದೇ ಆದರೆ ಆತ್ಮಾ ಪರಮಾತ್ಮನು ನಿನ್ನಿಂದ ದ್ರಷ್ಟವ್ಯಃ ನೋಡಲ್ಪಡಬೇಕು. ಅದು ಹೇಗೆಂದರೆ ಶ್ರೋತವ್ಯ ಗುರೂಪದೇಶದಿಂದ ಉಪನಿಷದ್ವಾಕ್ಯಗಳ ಸಮಂಜಸ ಅರ್ಥಗಳನ್ನು ಕೇಳಿ ಮಂತವ್ಯಃ ಯುಕ್ತ್ಯನುಸಂಧಾನರೂಪ ಮನನದಿಂದ ನಿಧಿಧ್ಯಾಸನಾತ್ಮಕ ಜಿಜ್ಞಾಸಾರೂಪ ಅಂಗಾಂಗಿತ್ವ ಜ್ಞಾನ ಸಾಧನೆಯನ್ನು ಹೊಂದಬೇಕು (ಶ್ರುತಿ ಸ್ಮೃತಿಗಳಲ್ಲಿ ಏಕವಾಕ್ಯತೆಯಿಂದ ಅರ್ಥ ತಿಳಿಯುವ ರೀತಿಯಲ್ಲಿ)

74-77. **ಕರ್ಮಣಾತ್ವಧಮಃ ಪ್ರೋಕ್ತಃ ಪ್ರಸಾದಶ್ರವಣಾದಿಭಿಃ ।**
**ಮಧ್ಯಮೋ ಜ್ಞಾನಸಂಪತ್ಯಾ ಪ್ರಸಾದಸ್ತೂತ್ತಮೋಮತಃ।**
**ಪ್ರಸಾದಾತ್ತ್ವಧಮಾದ್ವಿಷ್ಣೋಃ ಸ್ವರ್ಗಲೋಕಃ ಪ್ರಕೀರ್ತಿತಃ ।**
**ಮಧ್ಯಮಾಜ್ಜನ ಲೋಕಾದಿ ರುತ್ತಮಸ್ತ್ವೇವ ಮುಕ್ತಿದಃ**

ಕರ್ಮದಿಂದ ಲಭ್ಯವಾಗುವ ಪರಮಾತ್ಮನ ಪ್ರಸಾದದಿಂದ ಅಧಮಫಲ ರೂಪ ಅನಿತ್ಯಸ್ವರ್ಗಾದಿ ಲೋಕಗಳ ಪ್ರಾಪ್ತಿಯು ಶ್ರವಣಮನನಾದಿಗಳಿಂದ ಮಧ್ಯಮ ಜನ ಲೋಕಾದಿಗಳ ಪ್ರಾಪ್ತಿಯು. ಜ್ಞಾನಸಂಪತ್ತಿನಿಂದಲೇ ಉತ್ತಮ ಪುರುಷಾರ್ಥ ರೂಪ ಮೋಕ್ಷಫಲ ಪ್ರಾಪ್ತಿಯು.

**78-80 ಶ್ರವಣಂ ಮನನಂ ಚೈವ ಧ್ಯಾನಂ ಭಕ್ತಿಸ್ತಥೈವ ಚ ।**
**ಸಾಧನಂ ಜ್ಞಾನಸಂಪತ್ತೌ ಪ್ರಧಾನಂ ನಾನ್ಯದಿಷ್ಯತೇ ।**
**ನ ಚೈತಾನಿ ವಿನಾ ಕಶ್ಚಿಜ್ಜ್ಞಾನಮಾಪ ಕುತಶ್ಚನೇತಿ ನಾರದೀಯೇ ।**

ಶ್ರವಣ, ಮನನ ಧ್ಯಾನ ಮತ್ತು ಭಕ್ತಿಗಳ ಅಭಿವೃದ್ಧಿಕ್ರಮಪೂರ್ವಕ ಜ್ಞಾನ ಸಂಪತ್ತಿಯು ಮುಖ್ಯ ಸಾಧನವು ಮಿಕ್ಕ ಯಾವ ಉಪಾಯಗಳಿಂದಲೂ ಯಾರೂ ಜ್ಞಾನಸಂಪಾದನೆಯನ್ನು ಸಾಧಿಸಲು ಸಾಧ್ಯವಾಗಿಲ್ಲ "ನಾರದೀಯ"

81 ಬ್ರಹ್ಮಶಬ್ದಶ್ಚ ವಿಷ್ಣಾವೇವ

ಬ್ರಹ್ಮ ಶಬ್ದಕ್ಕೆ ಅನೇಕಾರ್ಥಗಳಿದ್ದಾಗ್ಯೂ ಶ್ರೀ ವಿಷ್ಣುವೇ ಮುಖ್ಯಾರ್ಥನು ದೇಶತಃ ಕಾಲತಃ ಗುಣತಃ ಪೂರ್ಣವಾಚಕ ಶಬ್ದವು (ಬ್ರಹ್ಮವು) ಶ್ರೀ ವಿಷ್ಣುವೇ ಪೂರ್ವಮೀಮಾಂಸಾ ಶಾಸ್ತ್ರದ ಕೊನೆಯ ಎರಡು ಸೂತ್ರಗಳು ಶ್ರೀ ವೇದವ್ಯಾಸ ದೇವರಿಂದಲೇ ರಚಿತವಾಗಿ "ಸ ವಿಷ್ಣುರಾಹ ಹಿ" "ತಂ ಬ್ರಹ್ಮೇತ್ಯಾಚಕ್ಷತೆ" ಎಂಬ ಸ್ಪಷ್ಟ ವಿಷ್ಣುಪದವನ್ನು ಹೇಳಿ ಆತನೇ ಬ್ರಹ್ಮ ಶಬ್ದಕ್ಕೆ ಮುಖ್ಯಾರ್ಥವೆಂದು ಸೂಚಿತ ವಾಗಿದೆ

82-86 **ಯಮಂತಃ ಸಮುದ್ರೇ ಕವಯೋ ವಯಂತಿಯದಕ್ಷರೇ ಪರಮೇ ಪ್ರಜಾಃ ।**
**ಯತ, ಪ್ರಸೂತಾ ಜಗತಃ ಪ್ರಸೂತೀತೋಯೇನ ಜೀವಾನ್ವ್ಯಸಸರ್ಜ ಭೂಮ್ಯಾಮಿತ್ಯಕ್ತ್ವಾ ಪದೇವತ್ರಂ ತದ ಸತ್ಯಮಾಹಃ ತದೇವ ಬ್ರಹ್ಮ ಪರಮಂ ಕವೀನಾಮಿತಿ ಹಿಶ್ರುತಿಃ । ತನ್ನೋ ವಿಷ್ಣುರಿತಿ ವಚನಾದ್ವಿಷ್ಣುರೇವಹಿ ತತ್ರೋಚ್ಯತೇ ।**

ಜ್ಞಾನಿಗಳು ಸಮುದ್ರದ ಒಳಗೆ ಇರುವ ಯಾವ ಪುರುಷನನ್ನು ಸ್ವಲ್ಪಮಾತ್ರ ತಿಳಿದು ಪೂರ್ಣವಾಗಿ ತಿಳಿಯಲಾರರೋ ಅಂತಹ ನಾಶವಿಲ್ಲದ ಪರಮಪುರುಷನಲ್ಲಿ ಈ ಸರ್ವಪ್ರಪಂಚವೂ ಅಧೀನವಾಗಿರುವುದು ಜಗತ್ತಿಗೆ ಮೂಲ ಕಾರಣವಾದ ಮೂಲ ಪ್ರಕೃತಿ ಶ್ರೀ ಮಹಾಲಕ್ಷ್ಮಿಯು ಈ ಮಹಾಪುರುಷನಿಂದ ಸೃಷ್ಟಿಯಲ್ಲಿ ಪ್ರೇರೇಪಿಸಲ್ಪಡು ವಳು ಮತ್ತು ಈ ಪುರುಷನೇ ದೇವರುಗಳನ್ನು ಅವರವರ ಪ್ರಾರಬ್ಧ ಕರ್ಮಾನುಸಾರ ವಾಗಿ ತನ್ನ ವೀರ್ಯದಿಂದ 'ಅಂಬು' ಶಬ್ದದಿಂದ ಸೂಚಿತವಾದ ಪಂಚಭೂತಗಳಿಂದ ಕೂಡಿ ಭೂಮಿಯಲ್ಲಿ ಹುಟ್ಟುವಂತೆ ಮಾಡುವನು. ಈತನೇ ಔಷಧಿಗಳಿಂದ ಸಹಿತ ವಾಗಿ (ರಸ) ಪುರುಷ, ಪಶು, ಭೂತ ವಾಚ್ಯ ಚರಾಚರ ಪ್ರಪಂಚವನ್ನು ಪ್ರವೇಶಿಸಿ

ಪ್ರವರ್ತನೆಗೆ ಕಾರಣನು. ಯಾವ ಪುರುಷನಿಗಿಂತ ಅಲ್ಪವಸ್ತುವಿಲ್ಲವೋ ಉತ್ಕೃಷ್ಟ ವಸ್ತುವಿಗಿಂತ ಉತ್ತಮನೋ ಮಹತ್ಪರಿಣಾಮ ವಸ್ತುವಿಗಿಂತ ಮಹತ್ವಪೂರ್ಣವನೋ ಮತ್ತು ತನ್ನ ಪ್ರಸಾದವಿಲ್ಲದೆ ಯಾರಿಗೂ ಕಾಣದ ಅತೀಂದ್ರಿಯ ವಸ್ತುವೋ ಅಂತಹ ಈ ಮಹಾಮಹಿಮನು ಸರ್ವವಸ್ತುಗಳನ್ನೊಳಗೊಂಡ ಈ ಬ್ರಹ್ಮಾಂಡವನ್ನು ಅಜ್ಞಾನ ವೆಂಬ ಕತ್ತಲೆಯಿಂದ ಆವರಿಸಿರುವನು. ಅಂತಹ ಯಥಾರ್ಥ ಜ್ಞಾನಸ್ವರೂಪನಾದ ಸತ್ಪದವಾಚ್ಯನಾದ ಅಬಾದಿತ ರೂಪ ಪರಮ ಪುರುಷನಿಗೇ ಮುಖ್ಯತ ಬ್ರಹ್ಮಶಬ್ದ ವಾಚ್ಯತ್ವವು ಹೀಗೆ ಶೃತಿಯು "ತನ್ನೋವಿಷ್ಣು" ಎಂಬ ವಚನದಿಂದ ಶ್ರೀ ವಿಷ್ಣುವೇ ಮುಖ್ಯ ಬ್ರಹ್ಮಶಬ್ದ ವಾಚ್ಯನೆಂದು ತಿಳಿಸುವುದು.

**ನ ಚೇತರಶಬ್ದಾತ್ತತ್ಪ್ರಾಪ್ತಿಃ । ನಾಮಾನಿ ವಿಶ್ವಾಭಿ ನ ಸಂತಿ ಲೋಕೇ ಯದಾವಿರಾಸೀದನೃತಸ್ಯ ಸರ್ವಮ್**

ಎಂಬ ಶ್ರುತಿಯು ನಾರಾಯಣ ಶಬ್ದ ವಾಚ್ಯನಾದ ಬ್ರಹ್ಮನನ್ನು ತಿಳಿದು ವಾಸು ದೇವಾಖ್ಯ ಬ್ರಹ್ಮನನ್ನು ಧ್ಯಾನಿಸಿ ವಿಷ್ಣು ಪದವಾಚ್ಯ ಬ್ರಹ್ಮನು ಶುಭ ಫಲದಲ್ಲಿ ಪ್ರೇರಿಸಲಿ ಎಂಬುದಾಗಿರುವುದರಿಂದ ನಾರಾಯಣ, ವಾಸುದೇವ, ವಿಷ್ಣು, ಬ್ರಹ್ಮಾ ಆತ್ಮಾ ಎಲ್ಲವು ಏಕಾರ್ಥದಲ್ಲಿ ಒಂದೇ ವಸ್ತುವಾಚ್ಯವೆಂದು ಸೂಚಿಸುತ್ತದೆ

**ನಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತೀತಿ**

ಶ್ರೀ ವಿಷ್ಣು ಶಬ್ದದಿಂದ ಮಾತ್ರ ಬ್ರಹ್ಮಶಬ್ದದ ಮುಖ್ಯಾರ್ಥವು ಲಭ್ಯವೇ, ವಿನಹ ಮಿಕ್ಕ "ತನ್ನೋರುದ್ರ" ಇತ್ಯಾದ್ಯನ್ಯತರ ಶಬ್ದಗಳಿಂದ ಮುಖ್ಯಾರ್ಥವು ಲಭ್ಯವಲ್ಲ ಶ್ರೀ ಲೋಕ ರೂಢಿಯಲ್ಲಿ ಪ್ರವೃತ್ತಿಯುಳ್ಳ ಎಲ್ಲಾ ಇತರ ಶಬ್ದಗಳೂ ಪರಮಪುರುಷ ವಿಷ್ಣುವಿನಲ್ಲಿಯೇ ಮುಖ್ಯ ವಾಚಕಗಳಾಗಿ ಲೋಕ ವ್ಯವಹಾರದಲ್ಲಿ ಉಪಯೋಗಕ್ಕೆ ಮಾತ್ರ ಇತರ ವಸ್ತುಗಳ ಸೂಚಕಗಳೇ ಹೊರತು ಮುಖ್ಯ ವೃತ್ತಿಯಿಂದಲ್ಲ

**90. ಭಾಲ್ಲವೇಯಶ್ರುತಿಃ । ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾಯಂತ್ಯನ್ಯೇ (ಋ. ಸಂ. 10-82-3)**

ಹೀಗೆ ಭಾಲ್ಲವೇಯ ಶ್ರುತಿಯು ಯಾವ ಶ್ರೀ ಪರಮಾತ್ಮನು ಒಬ್ಬನೇ ಬ್ರಹ್ಮಾದಿ

ದೇವತೆಗಳ "ವಿಶ್ವನಾ" ಮೊದಲಾದ ಶಬ್ದಗಳ ಉತ್ಪಾದಕನಾಗಿ ಮುಖ್ಯ ನಾಮ ಧಾರಕನಾಗಿರುವುದರಿಂದಲೇ ಮಿಕ್ಕ ಎಲ್ಲಾ ಲೋಕಗಳು ಪ್ರಲಯದಲ್ಲಿಯೂ ಮೋಕ್ಷ ದಲ್ಲಿಯೂ ಆತನಲ್ಲಿಯೇ ಚನ್ನಾಗಿ ಲಯವನ್ನು ಹೊಂದುವುವು

91 ಅಜಸ್ಯ ನಾಭಾವಧ್ಯೇಕಮರ್ಪಿ ತಂ ಯಸ್ಮಿನ್ವಿಶ್ವಾನಿ ಭುವನಾನಿ ತಸ್ಥುಃ "(ಋ ಸಂ 10-82-6) ಇತಿ ಹಿ ವಿಷ್ಣೋರ್ಲಿಂಗಂ ॥

ಅಂತಹ ಧರ್ಮವುಳ್ಳ ಜನನ ಮರಣರಹಿತ ಪುರುಷೋತ್ತಮನು ವಿಷ್ಣುವೆ ಅವನ ನಾಭಿಕಮಲವನ್ನಾಶ್ರಯಿಸಿ ಈ 14 ಲೋಕಗಳು ಇರುವವು ಅದರ ಅಧಿದೇವತೆಯಾದ ಶ್ರೀಯೇ ನನ್ನನ್ನು ಆಶ್ರಯವಾಗಿ ವುಳ್ಳವಳು ಇದು ಪ್ರಸಿದ್ಧಾರ್ಥವು. ಅನ್ಯತರಹದ ಅರ್ಥವು ಸ್ವೀಕಾರಾರ್ಹವಾಗಲಾರದು

92-94 ನ ಚ ಪ್ರಸಿದ್ಧಾರ್ಥಂ ವಿನಾನ್ಯೋಽರ್ಥೋಽಯುಜ್ಯತೆ ।
ಅಜಸ್ಯ ನಾಭಾವಿತಿ ಯಸ್ಯ ನಾಬೇರ ಭೂಚ್ಛೃತೇಃ ಪುಷ್ಕರಂ ಲೋಕಸಾರಂ
ತಸ್ಮೈಸರ್ವೋ ವ್ಯಸ್ತಸಮಸ್ತವಿಶ್ವವಿಭೂತಯೇ ವಿಷ್ಣವೇ ಲೋಕಕರ್ತ್ರೇ
ಇತಿ ಸ್ಕಾಂದೇ

ಯಾವ ಆದಿಪುರುಷನನಾಭಿಪ್ರದೇಶದಿಂದ ಈ ಸರ್ವಪ್ರಪಂಚಕ್ಕೂ ಆಧಾರ ವಾದ ಶ್ರೇಷ್ಠ ಕಮಲವು ಅಭಿವ್ಯಕ್ತವಾಯಿತೋ, ಯಾವ ಶ್ರೇಷ್ಠ ಪುರುಷನು ಲೋಕಕ್ಕೆ ಸರ್ವಾಧಾರನಾಗಿ ಸರ್ವೈಶ್ವರ್ಯದಿಂದ ವಿಸ್ತಾರಗೊಳಿಸಿದನೋ ಆ ಶ್ರೀ ಮಹಾ ವಿಷ್ಣುವಿಗೆ ನಮಸ್ಕಾರವು.

95 ಪರೋ ದಿವಾ ಪರ ಏನಾ ಪೃಥಿವ್ಯೇತಿ (ಋ ಸಂ 10-82-5)
ಇತಿ ಸಮಾಖ್ಯಾಶ್ರುತೌ ।

ಹೀಗೆಯೇ ಸಮಾಖ್ಯಶ್ರುತಿಯಲ್ಲಿಯೂ ಹೇಳಿದೆ ಈಗ ಸರ್ವಪ್ರಪಂಚದ ದೇವ ಅಸುರ ಮನುಷ್ಯ ಪ್ರಾಣಾದಿ ಜೀವ ಸಮುದಾಯಗಳನ್ನು ಮೀರಿ ಉತ್ಕೃಷ್ಟನಾಗಿರು ವವನು ಶ್ರೀ ವಿಷ್ಣುವೇ.

**96-98 ಯಂ ಕಾಮಯೇ ತಂ ತಮುಗ್ರಂ ಕೃಣೋಮೀತ್ಯುಕ್ತ್ವಾನುಮ ಯೋನಿರಪ್ಸ್ವಂಗ ತಃ ಸಮುದ್ರ ಇತ್ಯಾಹ ಉಗ್ರೋರುದ್ರ ಸಮುದ್ರೋಂತ ರ್ನಾರಾಯಣಃ । ಪ್ರಸಿದ್ಧತ್ವಾತ್ತೂಚಿತತ್ವಾಚ್ಚಾಸ್ಯಾರ್ಥಸ್ಯ । ನಚಾವಿರೋಧೇ ಪ್ರಸಿದ್ಧಃಪರಿತ್ಯಜ್ಯತೇ। ಉಕ್ತನ್ಯಾಯೇನ ಚ ಶ್ರುತಿಯ ಏತಮೇವ ವದಂತಿ ।**

ಶ್ರೀ ದೇವಿಯು "ನಮಾಭಿಧಾ" ನಮ ಶಬ್ದದಿಂದ ಉಕ್ತಳು ಬಹ್ವಾದಿದೇವತೆ ಗಳಿಂದ ಉತ್ತರಳು ಮತ್ತು ಅವರುಗಳನ್ನು ಅಧಿಕಾರದಲ್ಲಿಟ್ಟು ಕೊಂಡಿರುವವಳು ಅಂಥದೇವಿಯು ಅಂಭ್ರಣೀಸೂಕ್ತದಲ್ಲಿ ಈ ವಚನವನ್ನು ಹೇಳಿಕೊಂಡಿರುವಳು ಉಗ್ರ ಶಬ್ದವು ರುದ್ರನಲ್ಲಿವಾಚಕವು. ಶ್ರೀ ನಾರಾಯಣನು ಸಮುದ್ರಾಂತಸ್ಥಿತನು ಈ ಶೃತಿಗಳ ಪ್ರಸಿದ್ಧಾರ್ಥಗಳನ್ನು ವಿರೋಧಾರ್ಥವಿಲ್ಲದಲ್ಲಿ ಬಿಡಕೂಡದು ಈ ಮೇಲಿನ ನ್ಯಾಯದಿಂದ ಈ ಶೃತಿಗಳು ಶ್ರೀವಿಷ್ಣುವನ್ನೇ ಹೇಳುತ್ತವೆ

**100-102 ವೇದೇರಾಮಾಯಣೇ ಚೈವ ಪುರಾಣೇ ಭಾರತೇಕಥಾ ಅದಾವಂತೇ ಚ ಮಧ್ಯೇ ಚ ವಿಷ್ಣುಸ್ಸರ್ವತ್ರ ಗೀಯತೇ, ಇತಿ ಹರಿವಂಶೇಷು । ನ ಚೇತರಗ್ರಂಥ ವಿರೋಧಃ ।**

ವೇದ ರಾಮಾಯಣ, ಮಹಾಭಾರತಾಧಿ ಪುರಾಣ ಗ್ರಂಥಗಳಲ್ಲ ಮೊದಲಿನಿಂದ ಕೊನೆಯುವರೆವಿಗೂ ಸರ್ವ ಕಡೆಗಳಲ್ಲಿಯೂ ಸರ್ವಶಬ್ದಗಳಿಂದಲೂ ಶ್ರೀ ವಿಷ್ಣುವೇ ಹೇಳಲ್ಪಡುತ್ತಾನೆ. ಇತರ ಗ್ರಂಥಗಳಲ್ಲಿ ಅನ್ಯಥಾ ಹೇಳಲ್ಪಟ್ಟ ವಿರೋಧ ಸೂಚಕ ವಿಷಯಗಳು ಮೋಹಜನನಕ್ಕಾಗಿಯೇ ಹೇಳಿರುವುದರಿಂದ ಆ ವಾಕ್ಯಗಳ ವಿರೋಧವೆಣಿಸಬೇಕಾಗಿಲ್ಲ. ಹೀಗೆ ಹರಿವಂಶವಾಕ್ಯ

**103-103-ಏಷ ಮೋಹಂ ಸೃಜಾಮ್ಯಾಶು ಯೋ ಜನಾನ್ಮೋಹ ಯಿಷ್ಯತಿ ತ್ವಂಚ ರುದ್ರ ಮಹಾಬಾಹೋಮೋಹಶಾಸ್ತ್ರಾಣಿ ಕಾರಯ । ಅತಥ್ಯಾನಿ ವಿತಥ್ಯಾನಿ ದರ್ಶಯಸ್ವಮಹಾಭುಜ । ಪ್ರಕಾಶಂ ಕುರು ಚಾತ್ಮಾನಮಪ್ರಕಾಶಂ ಚ ಮಾಂ ಕುರ್ವಿತಿ ವಾರಾಹವಚನಾತ್ ॥ ಶೈವೇ ಚ ಸ್ಕಾಂದೇ**

ವರಾಹಪುರಾಣದ ವಾಕ್ಯವು ಹೀಗೆ-ಎಲೈರುದ್ರನೇ ನಾನಾ ಜನಗಳನ್ನು ಮೋಸಗೊಳಿಸುವ "ಮೋಹ" (ತಪ್ಪು ತಿಳುವಳಿಕೆಗೆ ಪ್ರಾಧ್ಯಾನ್ಯವುಳ್ಳ) ಶಕ್ತಿಯನ್ನು

ಸೃಷ್ಟಿಮಾಡುವೆನು ಶೂರನಾದ ನೀನು ಮೋಹಶಾಸ್ತ್ರಗಳನ್ನು ಮಾಡಿ ಅಥವಾ ಮಾಡಿಸಿ ಈ ಲೋಕದಲ್ಲಿ ಸುಳ್ಳು ಮತ್ತು ವ್ಯತ್ಯಸ್ತ ವಿಷಯಗಳನ್ನು ಪ್ರಸಿದ್ಧಪಡಿಸು ನಿನ್ನಲ್ಲಿ ನನ್ನ ಸರ್ವೋತ್ತಮತ್ವಾದಿಗುಣಗಳನ್ನು ಆರೋಪಿಸಿಕೊಂಡು ಉಪದೇಶಿಸು. ನನ್ನ ಶ್ರೇಷ್ಠಗುಣಗಳನ್ನು ಮರೆಮಾಡು ಮತ್ತು ಈ ಪ್ರಚಾರದಿಂದ ಜನ ಸಾಮಾನ್ಯವು ನಂಬುವಂತೆ ಪ್ರಕಟಿಸು. ಈ ಕಾರ್ಯವು ನನ್ನ ದೂಷಣ ಪ್ರಯುಕ್ತ ಪಾಪವಾದರೂ ನನ್ನ ಆಜ್ಞಾಧಾರಕನಾಗಿ ನನ್ನಪೂಜಾರೂಪವಾಗಿ ನನ್ನಲ್ಲಿ ಅರ್ಪಿಸು ಅದು ನಿನಗೆ ಪುಣ್ಯದಾಯಕವೆ ಸ್ಕಾಂದಪುರಾಣದಲ್ಲಿ ಈ ವಾಕ್ಯವು-

**ಶ್ವಪಚಾದಪಿ ಕಷ್ಟತ್ವಂ ಬ್ರಹ್ಮೇಶಾನಾದಯಃ ಸುರಾಃ ।**
**ತದೈವಾಚ್ಯುತಯಾಂತ್ಯೇವ ಯದೈವ ತ್ವಂ ಪರಾಙ್ಮುಖಃ । ಇತಿ.**

ಎಲೈ ವಿಷ್ಣುವೇ ನಿನ್ನ ಅನುಗ್ರಹವಿಲ್ಲದಿದ್ದಲ್ಲಿ ಬಹ್ಮಾದಿದೇವತೆಗಳೂ ನೀಚ ಶಕ್ತಿಯಿಂದ ಬಾಧಿಸಲ್ಪಡುವರು

**111-113. ಬ್ರಾಹ್ಮೇ ಚ ಬಹ್ಮವೈವರ್ತೇ**
**ನಾಹಂ ನ ಚ ಶಿವೋನ್ಯೇಚ ತಚ್ಛಕ್ತ್ಯೇಕಾಂಶಭಾಗಿನಃ ।**
**ಬಾಲಃ ಕ್ರೀಡನಕೈರ್ಯದ್ವತ್ಕ್ರೀಡತೇಽಸ್ಮಾಭಿರಚ್ಯುತ ಇತಿ ।**
**ನ ಚ ವೈಷ್ಣವೇಷು ತಥಾ ತಚ್ಛ್ರೈಷ ಮೋಹಮಿತ್ಯುಕ್ತಂ ॥**

ಯಾರಿಂದಲೂ ತ್ಯಜಿಸಲು ಅಸಾಧ್ಯವಸ್ತುವಾದ ಈ ಅಚ್ಯುತನು ನಮ್ಮನ್ನೂ ಆಟದ ವಸ್ತುಗಳಾಗಿ ಉಪಯೋಗಿಸಿಕೊಂಡು ಕ್ರೀಡಾಲೋಲನಾಗಿರುವನು. ಆತನ ಶಕ್ತಿಯಲ್ಲಿ ಅತ್ಯಲ್ಪ ಅಂಶವೂ ಕೂಡ ನನ್ನ ಮತ್ತು ರುದ್ರಾದಿದೇವತೆಗಳ ಶಕ್ತಿಗಿಂತ ಶ್ರೇಷ್ಠವು ಹೀಗೆ ಶೈವಪುರಾಣಗಳಲ್ಲಿ ಹೇಳಿರುವ ವಾಕ್ಯಗಳಲ್ಲಿ ಇತರ ವಸ್ತುಗಳ ಸರ್ವೋತ್ತಮತ್ವವು ಮೋಹ ಮಾತ್ರವು ಸರ್ವ ಸಾತ್ವಿಕ ಪುರಾಣ ಮತ್ತು ಇತಿಹಾಸಗಳಲ್ಲಿ ಈ ರೀತಿಯ ವ್ಯತ್ಯಾಸವನ್ನು ಹೇಳಿಲ್ಲ ಆದ್ದರಿಂದ ಶ್ರೀ ವಿಷ್ಣುವೇ ಸರ್ವೋತ್ತಮ ವಸ್ತು ಹೌದು ಆಗತ್ಯವಾಗಿ ಜಿಜ್ಞಾಸ್ಯನೇ, ಮತ್ಯಾವುದೂ ಅಲ್ಲ.

**ಇತಿ ಜಿಜ್ಞಾಸಾಧಿಕರಣಂ !**

## ಜನ್ಮಾದ್ಯಧಿಕರಣಂ ॥ ೩ ॥

(1 ಬ್ರಹ್ಮಣೋಲಕ್ಷಣಮಾಹ

### ಸೂ. ಓಂ ಜನ್ಮಾದ್ಯಸ್ಯ ಯತಃ ಓಂ ॥ 2 ॥

**ಸೃಷ್ಟಿಸ್ಥಿತಿಸಂಹಾರ ನಿಯಮಸಜ್ಞಾನಾಜ್ಞಾನ ಬಂಧಮೋಕ್ಷಾಯತಃ ॥**

ಈ ಸೂತ್ರವು ಬಹ್ಮಶಬ್ದವಾಚ್ಯನಾದ ಶ್ರೀಪರಮಾತ್ಮನ ಲಕ್ಷಣಗಳನ್ನು ತಿಳಿಸುವುದು

"ಈ ಪ್ರಮಿತಜೀವಜಡಾತ್ಮಕ ಪ್ರಪಂಚಕ್ಕೆ ಯಾರು ಜನ್ಮಾದ್ಯಷ್ಟಕರ್ತೃತ್ವವನ್ನು ಉಂಟುಮಾಡುವವರೆಂದು ಶೃತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿರುವುದೋ ಅಂಥಹ ವಸ್ತುವೇ ಮುಖ್ಯವಾಗಿ ಬಹ್ಮಶಬ್ದವಾಚ್ಯವು ಅನ್ಯರು ಬ್ರಹ್ಮಶಬ್ದವಾಚ್ಯರು ಅಲ್ಲ"

ಭಾಷ್ಯಕಾರರೇ ಬ್ರಹ್ಮಶಬ್ದವು ಶ್ರೀ ವಿಷ್ಣುವಿಗೆ ಮುಖ್ಯವಾಚ್ಯವೆಂದು ಹೇಳಿದ್ದರೂ ಅದನ್ನು ಸೂತ್ರಕಾರರ ವಚನದಿಂದ ಸಮರ್ಥಿಸುವರು. ಜೀವವು ಅಮುಖ್ಯವಾಗಿ ಸೂತ್ರವಾಚ್ಯನು ಈ ವಿಷಯದಲ್ಲಿ ಶೃತಿಸ್ಮೃತಿಗಳನ್ನು ಉದಾಹರಿಸಿರುವರು.

**(2) ಉತ್ಪತ್ತಿಸ್ಥಿತಿಸಂಹಾರಾ ನಿಯತಿ ರ್ಜ್ಞಾನಮಾವೃತಿಃ**
**ಬಂಧಮೋಕ್ಷ ಚ ಪುರುಷಾದ್ಯಸ್ಮಾತ್ಸಹರಿರೇಕರಾಟ್ ॥ ಇತಿಸ್ಕಾಂದೆ ॥**

ಈ ಜಗತ್ತಿನಲ್ಲಿ ಉತ್ಪತ್ತಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ ಬಂಧ, ಮೋಕ್ಷಗಳು ಯಾವ ಮಹಾಪುರುಷನಿಂದ ಭೂತಸಮುದಾಯಕ್ಕೆ ಆಗುವುವೋ, ಆತನೇ ಸರ್ವಸ್ವಾಮಿಯಾದ ಶ್ರೀ ಹರಿಯು.

**(3) ಯತೋವಾ ಇಮಾನಿ ಭೂತಾನಿಜಾಯಂತೆ ಯೇನಜಾತಾನಿ ಜೀವಂತಿ**
**ಯತ್ಪ್ರಯಂತ್ಯಭಿಸಂವಿಶಂತಿ ॥ ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ ॥**
**(ತೈ ಉ-3-1)**

ಯಾವ ಮಹಾ ಪುರುಷನು ಪ್ರಪಂಚದ ವಸ್ತು ಸಮುದಾಯಗಳನ್ನು ಉತ್ಪನ್ನ ಮಾಡಿ ಜೀವಧಾರಣೆ ಮತ್ತು ಪೋಷಣೆಗಳನ್ನು ಮಾಡುತ್ತಾ ಪ್ರಲಯವನ್ನೂ ಹೊಂದಿಸಿ ಸಕಾಲಗಳಲ್ಲಿ ಮೋಕ್ಷವನ್ನು ಹೊಂದಿಸಿಕೊಡುವನೋ ಆತನೇ ಬ್ರಹ್ಮಶಬ್ದ ಮುಖ್ಯ ವಾಚ್ಯ ಜಿಜ್ಞಾಸ್ಯ ಬ್ರಹ್ಮನು

**(4) ಯ ಉ ತ್ರಿಧಾ ತು ಪೃಥಿವೀಮುತದ್ಯಾಮೇಕೋದಾಧಾರ ಭುವನಾನಿ ವಿಶ್ವಾ ।**

**ಚತುರ್ಭಿಸ್ಸಾಕಂ ನವತಿಂ ಚ ನಾಮಭಿಶ್ಚಕ್ರಂ ನ ವೃತ್ತಂ ವ್ಯತೀಂರವೀವಿವತ್ ॥** (ಋ. ಸಂ. 1-154-4)

ಸೃಷ್ಟಿಕರ್ತೃತ್ವವಿಷಯದಲ್ಲಿ ಶ್ರೀ ವಿಷ್ಣುವೇ ಕಾರಣವೆಂದು ಸಂಹಿತೆಯಲ್ಲಿ ಹೇಳಿದೆ. ಎಲೈ ವಿಷ್ಣುವೇ ನೀನೊಬ್ಬನೇ ಪ್ರಕೃತಿ ಪುರುಷಕಾಲಗಳಿಗೆ ಧಾರಕನಾಗಿ ದೊಡ್ಡದೇಹ ದಿಂದ ವಿಷ್ಣುನಾಮದಿಂದಲೂ ವಾಸುದೇವ ಸಂಕರ್ಷಣ ಅನಿರುದ್ಧ ಪ್ರದ್ಯುಮ್ನ ನಾಮ ಮಾತ್ರ ಭೇದಗಳಿಂದಲೂ ಸ್ಥಾನಾಧಿಕಾರಿಗಳಾದ ಬಹ್ಮ ರುದ್ರಾದಿ 94 ದೇವತೆಗಳನ್ನು ನಿನ್ನ ಅನುವರ್ತಿಗಳನ್ನಾಗಿ ಹೊಂದಿರುವೆ [ಪ್ರಸಿದ್ಧ ಇತರ ಅಸಂಖ್ಯಾತ ದೇವತೆ ಗಳನ್ನೂ]

**(5) ಪರೋ ಮಾತ್ರಯಾ ತನ್ವಾವೃಧಾನ ನ ತೇ ಮಹಿತ್ವ ಮನ್ವಶ್ನುವಂತಿ ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವಮಹಿಮ್ನಃ ಪರಮಂತಮಾಪ ॥** (ಋ ಸ-7-99-1)

ನಿನ್ನ ಸ್ವಮೂರ್ತಿಯಿಂದಲೇ (ಕೀರ್ತಿಮಾತ್ರದಿಂದಲೂ ಕೂಡ) ಅನಂತಪರಿ ಮಾಣವಿಶೇಷದಿಂದ ಅಂಗಾಂಗಗಳ ಪರಿಮಿತಿಯಿಲ್ಲದವನಾಗಿರುವೆ. ಇಂಥ ನಿನ್ನ ಶ್ರೇಷ್ಠತ್ವವನ್ನು ಯಾವ ಕಾಲದಲ್ಲಿಯೂ ಮುಕ್ತ ಅಮುಕ್ತ ಪ್ರಪಂಚದಲ್ಲಿ ಕೂಡ ಬೇರೆ ಯಾರೂ ಮೀರಲಾರರು.

**(6) ಯೋ ನಃ ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವೇತ್ಯಾದಿ ಚ. ॥** (ಋ. ಸಂ. 10-82-3)

ಜಗತ್ಕಾರಣತ್ವವು ಪರಮಾತ್ಮನಿಗೆ ವಿಕಾರಿತ್ವದಿಂದ ಅಲ್ಲ ಪಿತೃ ಕರ್ತೃತ್ವದಂತೆ ನಿಮಿತ್ತ ಕಾರಣನೆಂದು ಶೃತಿಯು ಹೇಳಿದೆ - ನಮ್ಮೆಲ್ಲಾ ಜೀವರನ್ನು ಯಾವ ಪುರುಷನು ಹುಟ್ಟಿಸುವನೋ (ದತ್ತು ಪುತ್ರನಂತೆ ಪಾಲಕ ಪಿತೃತ್ವವು) ಅದು ಮಾತ್ರ ವಲ್ಲದೆ ಧಾರಣೆ ಪೋಷಣೆಗೆ ಕರ್ತನೋ ಸರ್ವಭೂತ ಪ್ರಪಂಚವನ್ನು ತದ್ಗತಗೃಹ ನಾಯ ಕನೂ ಜೀವರ ಸ್ವರೂಪಗಳನ್ನು ತಿಳಿದಿರುವವನೂ ಆಗಿರುವನೋ ಅವನೇ........ ಇತ್ಯಾದಿ

**ಇತಿ ಜನ್ಮಾಧಿಕರಣಂ ॥ ೨ ॥**

## ॥ 3 ॥ ಶಾಸ್ತ್ರಯೋನಿತ್ವಾಧಿಕರಣಂ ॥

**1. ಅನುಮಾನತೋಽನ್ಯೋ ನ ಕಲ್ಪನೀಯಃ ।**

**ಸೂ, ಓಂ ॥ ಶಾಸ್ತ್ರಯೋನಿತ್ವಾತ್ ॥ ಓಂ ॥ 3 ॥**

ಅನುಮಾನಮಾತ್ರದಿಂದಲೇ ಇತರರನ್ನು ಜಗತ್ಕಾರಣರನ್ನಾಗಿ ಕಲ್ಪನೆ ಮಾಡಬಾರದು ಏಕೆ ?

ಅನುಮಾನಮಾತ್ರದಿಂದಲೇ ರುದ್ರಾದಿದೇವತೆಗಳಿಗೆ ಜಗತ್ಕಾರಣತ್ವವನ್ನು ಕಲ್ಪಿಸಬಾರದು. ಈ ಜಗತ್ಕಾರಣತ್ವವು ಋಗಾದಿರೂಪಶಾಸ್ತ್ರಗಳಿಂದಲೇ ಅನ್ಯ ಪ್ರಾಮಾಣ್ಯವನ್ನು ಅಪೇಕ್ಷಿಸದೆಯೇ ಜ್ಞಾಪಕವಾಗಬೇಕೆಂಬುದು ನಿಯಮವು.

**2. "ನಾವೇದವಿನ್ಮನುತೇ ಬೃಹಂತಂ ಸರ್ವಾನುಭೂಮಾತ್ಮಾನಂ ಸಾಂಪರಾಯೇ " (ತ್ತೈ ಬ್ರಾ–3–12–9)" ಔಪನಿಷದಃ ಪುರುಷಃ ಇತ್ಯಾದಿ ಶ್ರುತಿಭ್ಯಶ್ಚ**

ಹಿಂದೆ ಪ್ರಸ್ತಾಪಿತ ವಸ್ತುವು ಪೂರ್ಣನೂ, ಸರ್ವಾನುಭವನೂ ಸರ್ವಜ್ಞನೂ ಆತ್ಮಶಬ್ದವಾಚ್ಯ ಜಗತ್ಕಾರಣತ್ವ ಸ್ವಾಮಿತ್ವ ಮತ್ತು ಸ್ವತಂತ್ರತ್ವ ಲಕ್ಷಣಗಳುಳ್ಳವನೂ ಆದ ಶ್ರೀವಿಷ್ಣುವೇ ಚೆನ್ನಾಗಿ ಹೊಂದಲ್ಪಡುವ ಮುಕ್ತಿ ಪದಕ್ಕೆ ಆಧಾರನು. ಸದಾಗಮಗಳ ಜ್ಞಾನವಿಲ್ಲದೆ ವೇದವಿರುದ್ಧ ಜ್ಞಾನಿಗೆ ಈ ವಿಷಯವು ತಿಳಿಯುವುದಿಲ್ಲ ಅನ್ಯಶ್ರುತಿಗಳು (1) ಔಪನಿಷದ ಪುರುಷ (2) ಸರ್ವೇವೇದಾ ಯತ್ಪದಂ (3) ವೇದಾಃಶ್ಯೇವೈನಂ (4) ತಂತ್ವೌಪನಿಷದಂಪುರುಷ ಪ್ರಚ್ಛಾಮಿ,

**3 ನ ಚಾನುಮಾನಸ್ಯ ನಿಯತಪ್ರಾಮಾಣ್ಯಂ ॥**
**ಶ್ರುತಿಸಾಹಾಯ್ಯರಹಿತಮನುಮಾನಂ ನ ಕುತ್ರಚಿತ್**
**ನಿಶ್ಚಯಾತ್ಸಾಧಯೇದರ್ಥಂ ಪ್ರಮಾಣಾಂತರಮೇವ ವಾ॥**

ಸದಾಗಮಗಳ ಸಹಾಯವಿಲ್ಲದ ಆ ಸ್ವತಂತ್ರಗಳಾದ ಅನುಮಾನಗಳು ಮಾತ್ರ ಇಂದ್ರಿಯ ಗೋಚರವಲ್ಲದ ವಿಷಯಗಳಲ್ಲಿ ಸ್ವತಃ ಪ್ರಮಾಣವಾಗಲಾರವು.

**4. ಶ್ರುತಿ ಸ್ಮೃತಿಸಹಾಯಂ ಯತ್ಪ್ರಮಾಣಾಂತರಮುತ್ತಮಂ ।**
**ಪ್ರಮಾಣಪದವೀಂ ಗಚ್ಛೇನ್ನಾತ್ರಕಾರ್ಯಾ ವಿಚಾರಣಾ ॥**

ಶ್ರುತಿಸ್ಮೃತಿ ಸಹಾಯದಿಂದ ಕೂಡಿದ ಇತರೆ ಪ್ರಮಾಣವಾಚಕ ಪದಗಳು ಉತ್ತಮ ಪ್ರಮಾಣವನ್ನು ಸೂಚಿಸುತ್ತವೆ. ಬೇರೆ ವಿಚಾರವಿಲ್ಲ

**ಪೂರ್ವೋತ್ತರಾವಿರೋಧೇನ ಕೋಽತ್ರಾರ್ಥೋಽಭಿಮತೋಭವೇತ್ ॥**
**ಇತ್ಯಾದ್ಯಮೂಹನಂ ತರ್ಕಃ ಶುಷ್ಕತರ್ಕಂ ತು ವರ್ಜಯೇದಿತ್ಯಾದಿ**
**ಕೌರ್ಮೇ**

ಪೂರ್ವಾಪರ ವಿಷಯಗಳಿಗೆ ವಿರೋಧವಿಲ್ಲದ ರೀತಿಯಲ್ಲಿ ಪರ್ಯಾಲೋಚಿತ ಪ್ರಕೃತಾರ್ಥವು ಯಾವುದು ಲಭ್ಯವೋ ಅದನ್ನು ಊಹಿಸುವುದು ತರ್ಕವು ಅನು ಮಾನ ವಿಷಯದಲ್ಲಿ ಕ್ಷುಲ್ಲಕ ಪ್ರಯೋಗವನ್ನು ಕೈಬಿಡಬೇಕು

6 ..7. **ಶಕ್ಯತ್ವಾಚ್ಚಾನುಮಾನಾನಾಂ ಸರ್ವತ್ರ ।**
**ಸರ್ವತ್ರ ಶಕ್ಯತೇ ಕರ್ತುಮಾಗಮಂ ಹಿ ವಿನಾನುಮಾ ।**
**ತಸ್ಮಾನ್ನ ಸಾ ಶಕ್ತಿಮತೀ ವಿನಾಽಗಮಮುದೀಕ್ಷಿತುಮಿತಿ ವಾರಾಹೇ ॥**

ಎಲ್ಲ ವಿಷಯದಲ್ಲಿಯೂ ಆಗಮಸಿದ್ಧವಲ್ಲದ ತರ್ಕವನ್ನು ಮಾಡಲು ಸಾಧ್ಯ ಯುಕ್ತಾ ಯುಕ್ತ ರೀತಿಯ ಪರಿಷ್ಕಾರದಿಂದ ಮಾತ್ರ ಸರಿಯಾದ ಅರ್ಥವು ಆಗಮ ಸಾಮರ್ಥ್ಯದಿಂದಲೇ ಸಾಧ್ಯವು

8 **ರೇತೋ ಧಾತುರ್ವಟಕಣಿಕಾಘೃತದೂಮಾಧಿವಾಸನಂ ॥**
**ಜಾತಿಸ್ಮೃತಿರಯಸ್ಕಾಂತಃ ಸೂರ್ಯಕಾಂತೋಽಂಬುಭಕ್ಷಣಂ**
**ಪ್ರೇತ್ಯ ಭೂತಾಪ್ಯಯಶ್ಚೈವ ದೇವತಾಭ್ಯುಪಯಾಚನಂ ॥**
**ಮೃತೇ ಕರ್ಮನಿವೃತ್ತಿಶ್ಚ ಪ್ರಮಾಣಮಿತಿ ನಿಶ್ಚಯಃ ॥ ಇತಿ**
**ಮೋಕ್ಷಧರ್ಮವಚನಾನ್ನ ನಾಸ್ತಿಕ್ಯವಾದೋ ಯುಜ್ಯತೇ**

(1) ರೇತಸ್ಸಿನಿಂದ ಚರಮಧಾತು ಮತ್ತು ಶರೀರೋತ್ಪತ್ತಿಯು. ಕಾರ್ಯಕಾರಣ ಗಳಾದರೂ ಪ್ರತ್ಯಕ್ಷಸಿದ್ಧವಲ್ಲವಾದರೂ ಸಾಧು ಅನುಮಾನಸಿದ್ಧವಾದವು. ಮೃತ ಶರೀರದಲ್ಲಿ ಯಾವ ಪರಿಣಾಮವೂ ಇಲ್ಲ. ಆದರೆ ಜೀವಂತ ಶರೀರದಲ್ಲಿ ಮಾತ್ರ ಅನ್ಯಜೀವ ಶರೀರಕ್ಕೆ ಕಾರಣವು. ಇದು ಜೀವದ ಇರುವಿಕೆಗೆ ಪ್ರಮಾಣವು. ಜೀವವಿದ್ದರೂ ಬಂಜೆ ಶರೀರದಲ್ಲಿ ಪರಿಣಾಮವಾಗುವುದಿಲ್ಲ. ಇದರಿಂದ ದೇವತಾನುಗ್ರಹ

ಸಿದ್ಧಿಯು. ಜೀವಶರೀರದಲ್ಲಿಯೂ ಎಲ್ಲಕಾಲದಲ್ಲಿಯೂ ಪರಿಣಾಮಕಾರಿಯಲ್ಲ. ಆದ್ದರಿಂದ ಆಗಮ ಸಿದ್ಧಿ ಮತ್ತು ಅದೃಷ್ಟ ಸಿದ್ಧಿಯು

2. ವಾತಪಿತ್ತಾದಿಧಾತುಗಳು ಅಪಥ್ಯದಿಂದ ಜೀವಶರೀರದಲ್ಲಿ ಉಂಟು ಮಾಡುವ ವ್ಯತ್ಯಾಸವು. ಕೆಲವು ಜೀವ ಶರೀರದಲ್ಲಿ ವ್ಯತ್ಯಸ್ತವಿಲ್ಲ. ಮೃತಶರೀರದಲ್ಲಿ ಪರಿಣಾಮ ವೇನೂ ಇಲ್ಲ ಆದ್ದರಿಂದ ಜೀವ,ಅನುಗ್ರಾಹಕತ್ವ, ಪರಮಾತ್ಮ ಮತ್ತು ಆಗಮ ಸಿದ್ಧಿಯು

3. ವೃಕ್ಷಗಳಿಗೆ ಧೂಮಸ್ಪರ್ಶದಿಂದ ಹೂಗಳ ಉತ್ಪತ್ತಿಯು ಕಂಡಿದೆ ಸಜೀವ ವೃಕ್ಷಗಳಲ್ಲಿ ಮಾತ್ರ ಒಣಗಿದ್ದ ವೃಕ್ಷದಲ್ಲಿ ವೈಫಲ್ಯವು ಎಲ್ಲ ಸಜೀವ ವೃಕ್ಷಗಳಲ್ಲಿಯೂ ಈ ಫಲ ಉಂಟಾಗುವುದಿಲ್ಲ

4. ಕೆಲವು ಪುರುಷರಿಗೆ ಸಾಧನ ವಿಶೇಷದಿಂದ ಪೂರ್ವಜನ್ಮ ಸ್ಮೃತಿ, ಪುಣ್ಯ ಪಾಪಾನುಭವಗಳು ನರಕಸ್ವರ್ಗಪ್ರಾಪ್ತಿ ಇವುಗಳು ಜೀವ ದೇವ, ಅನುಭವ ಅದೃಷ್ಟ ಮತ್ತು ಆಗಮಗಳಿಗೆ ಪ್ರಮಾಣಗಳು.

5. ಸೂಜಿಕಲ್ಲಿನಲ್ಲಿ ಮಾತ್ರ ಆಕರ್ಷಣಶಕ್ತಿಯು ಇದು ಎಲ್ಲವಸ್ತುಗಳನ್ನು ಆಕರ್ಷಣ ಮಾಡದು ಮತ್ತು ಎಲ್ಲ ಕಲ್ಲಿನಲ್ಲಿಯೂ ಇರುವುದಿಲ್ಲ.

6. ಸೂರ್ಯಕಾಂತಶಿಲೆಯಲ್ಲಿ ಅಗ್ನಿಹೊರಹೊಮ್ಮುವ ಶಕ್ತಿಯು ಇದೆ. ಆದರೆ ಎಲ್ಲಾ ಅಚೇತನಗಳಲ್ಲಿ ಈ ಶಕ್ತಿಯು ಇಲ್ಲ.

7. ಸಜೀವ ಶರೀರದಲ್ಲಿ ಮಾತ್ರ ನೀರಿನಿಂದ ದಾಹ ಶಾಂತಿಯು ಮೃತಶರೀರದಲ್ಲಿ ಅಲ್ಲ. ಪಾತ್ರಾಂತರದಲ್ಲಿ ಇಟ್ಟದ್ದು ಪಚನಹೊಂದುವುದಿಲ್ಲ. ಸರ್ವ ಶರೀರದಲ್ಲಿಯೂ ಈ ಅನುಭವವಿಲ್ಲ.

8. ಜೀವರಹಿತ ಶರೀರವು ಪಂಚಭೂತಗಳಲ್ಲಿ ಲಯ ಹೊಂದುವುದು. ಜೀವ ವಿರುವ ಶರೀರಕ್ಕೆ ಈ ಅನುಭವವಿಲ್ಲ ಮತ್ತು ಮರಣವು ಜೀವನ ಇಚ್ಛೆಯುಳ್ಳ.

9. ದೇವತೆಗಳಲ್ಲಿ ಪ್ರಾರ್ಥನಾದಿ ಪೂಜೆಯಿಂದ ಕೆಲವರಿಗೆ ಮಾತ್ರ ಫಲಸಿದ್ಧ ಮೃತಶರೀರದಲ್ಲಿ ಯಾವ ಚೇಷ್ಟೆಯೂ ಇಲ್ಲ ಮತ್ತು ಮರಣವು ಆಕಸ್ಮಿಕವು. ಸ್ವೇಚ್ಛೆಯಿಂದಲ್ಲ.

10 ತುಪ್ಪವು ಜೀವಉಳ್ಳ ಶರೀರದಲ್ಲಿ ಮಾತ್ರ ಉಪಯೋಗಿಯು. ಅದೂ ಕೆಲವು ಶರೀರಗಳಲ್ಲಿ ಮಾತ್ರ ಮತ್ತು ಮೃತ ಶರೀರದಲ್ಲಿ ಯಾವ ಪರಿಣಾಮವು ಇಲ್ಲ.

ಆದ್ದರಿಂದ ಜೀವ ಪರಮಾತ್ಮ ಅದೃಷ್ಟ ಇವುಗಳು ಪ್ರತ್ಯಕ್ಷಸಿದ್ಧವಲ್ಲದಿದ್ದರೂ ಆಗಮಸಿದ್ದ ಸದನುಮಾನಗಳಿಂದ ಸಿದ್ಧವೇ.

9. ದರ್ಶನಾಚ್ಚ ತಪ ಆದಿಫಲಸ್ಯ

ತಪಸ್ಸು, ಪೂಜೆ ಇವುಗಳ ಫಲವನ್ನು ಅಧಿಕಾರಿ ಜನರು ಹೊಂದಿದ ನಿದರ್ಶನ ಗಳಿವೆ,

**11-11. ಋಗ್ಯಜಸ್ಸಾಮಾಥರ್ವಾಶ್ಚ ಭಾರತಂ ಪಂಚರಾತ್ರಕಂ ।**
**ಮೂಲ ರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೆ ।**
**ಯಚ್ಚಾನುಕೂಲಮೇತಸ್ಯ ತಚ್ಚ ಶಾಸ್ತ್ರಂಪ್ರಕೀರ್ತಿತಂ ।**
**ಅತೋಽನ್ಯೋಗ್ರಂಥವಿಸ್ತಾರೋ ನೈವ ಶಾಸ್ತ್ರಂ ಕುವರ್ತ್ಮ**
**ತದಿತಿ ಸ್ಕಾಂದೆ ॥**

ನಾಲ್ಕು ವೇದಗಳು ಪಂಚರಾತ್ರಾಗಮವು,ಮೂಲ ರಾಮಾಯಣವು ಇವುಗಳು ಶಾಸ್ತ್ರಗಳು. ಶಾಸ್ತ್ರವೆಂದರೆ ಅತೀಂದ್ರಿಯ ವಸ್ತು ಮತ್ತು ಪರದೇವತೆಯ ವಿಷಯದಲ್ಲಿ ಪ್ರಬಲಪ್ರಮಾಣಗಳಿಂದ ಸ್ಥಾಪಿತವಾದ ವಿಚಾರಗಳ ಫಲಿತಾರ್ಥ. ಈ ಗ್ರಂಥಗಳಿಗ ಅನುಸಾರವಾದ ಗ್ರಂಥಗಳೂ ಶಾಸ್ತ್ರಗಳೇ ಇವುಗಳಿಗೆ ವ್ಯತ್ಯಸ್ತವಾಗಿ ಸೂಚಿಸುವ ಗ್ರಂಥಗಳೆಲ್ಲವೂ "ಕುಶಾಸ್ತ್ರಗಳು" ಗ್ರಂಥವಿಸ್ತಾರ ಮಾತ್ರಕ್ಕೆ ಪ್ರಯೋಜನಗಳು. ನಿಶ್ಚಯಾರ್ಥಕ್ಕೆ ಉಪಯೋಗವಿಲ್ಲದವು

**12–ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚೇತ್ಯಾರಭ್ಯ**
**ವೇದಪಂಚರಾತ್ರಯೋರೈಕ್ಯಾಭಿಪ್ರಾಯೇಣ ಪಂಚರಾತ್ರಸ್ಯೈವ**
**ಪ್ರಾಮಾಣ್ಯಮುಕ್ತ್ವಾ ಇತರೇಷಾಂ ಭಿನ್ನಮತತ್ವಂ ಪ್ರದರ್ಶ್ಯ**
**ಮೋಕ್ಷಧರ್ಮೇಷ್ವಪಿ ।**

ಮೋಕ್ಷಧರ್ಮದಲ್ಲಿಯೂ ಕೂಡ ಸಾಂಖ್ಯ ಯೋಗ ಪಾಶುಪತವೇದಾರಣ್ಯಕ ವೆಂಬ ಮತಗಳ ಜ್ಞಾಪಕದಿಂದ ಪ್ರಾರಂಭಿಸಿ ವೇದಪಾಂಚರಾತ್ರಗಳಲ್ಲಿ ಏಕಭಾವದಿಂದ ಪಂಚರಾತ್ರಕ್ಕೆ ಪ್ರಾಮಾಣ್ಯವನ್ನು ಹೇಳಿ ಮಿಕ್ಕ ಗ್ರಂಥ ವಿಷಯಗಳಲ್ಲಿ ವಿರೋಧವನ್ನೂ ಸೂಚಿಸಿರುವರು

13–ಶಾಸ್ತ್ರಂ ಯೋನಿಃ ಪ್ರಮಾಣಮಸ್ಯೇತಿ ಶಾಸ್ತ್ರಯೋನಿ ।

ಶಾಸ್ತ್ರವೇ ಪ್ರಮಾಣವೆಂದು ಆಶ್ರಯಿಸಲು ಯೋಗ್ಯ ವಸ್ತುವು ಮುಖ್ಯ ಬ್ರಹ್ಮ ಶ್ರೀ ವಿಷ್ಣುವೇ.

ಇತಿ ಶಾಸ್ತ್ರಯೋನಿತ್ವಾಧಿಕರಣವು.

1. ಅಜ್ಞಾನಾಂ ಪ್ರತೀಯ ಮಾನಮಪಿ ನೇತರೇಷಾಂ ಶಾಸ್ತ್ರಯೋನಿತ್ವಂ
|| ಕುತಃ ||

## ಸೂ. ಓಂ || ತತ್ತು ಸಮನ್ವಯಾತ್ || ಓಂ || 4 ||

ಶ್ರೀ ವಿಷ್ಣುವಿನಿಂದ ಇತರ ದೇವತೆಗಳ ಪರ ಜಗತ್ಕಾರಣತ್ವ ವಚನಗಳು ಶ್ರುತಿ ತಾತ್ಪರ್ಯಗಳ ಅರ್ಥಗಳ ಅಜ್ಞಾನದಿಂದ ಮಾತ್ರ. ಸಮ್ಯಕ್‌ಪ್ರಮಾಣಗಳಲ್ಲ

ಸರ್ವ ಶಾಸ್ತ್ರಗಳ ಮುಖ್ಯ ಫಲಿತಾರ್ಥವಾದ ಶ್ರೀ ವಿಷ್ಣುವೇ ಮುಖ್ಯವಾಗಿ ಬ್ರಹ್ಮ ಶಬ್ದವಾಚ್ಯನು. ರುದ್ರಾದಿ ಅನ್ಯ ದೇವತೆಗಳಲ್ಲ ಇದು ಉಪಕ್ರಮಾದಿತಾತ್ಪರ್ಯ ಲಿಂಗಗಳಿಂದ ಸೂಕ್ತವಾಗಿ ನಿರ್ಧರಿತವಾಗುವ ಅಂಶವು.

2. ಅನ್ವಯ ಉಪಪತ್ತ್ಯಾದಿಲಿಂಗಂ ।

ಅನ್ವಯವೆಂದರೆ ಉಪಪತ್ತ್ಯಾಧಿ ಧರ್ಮಗಳ ಯುಕ್ತ ಪರಿಜ್ಞಾನವು.

3. ಉಕ್ತಂ ಚ ಬೃಹತ್ಸಂಹಿತಾಯಾಂ ।
ಉಪಕ್ರಮೋಪಸಂಹಾರಾವಭ್ಯಾಸೋಽಪೂರ್ವತಾ ಫಲಂ ।
ಅರ್ಥವಾದೋಪಪತ್ತೀ ಚ ಲಿಂಗಂ ತಾತ್ಪರ್ಯನಿರ್ಣಯೇ ಇತಿ ।

ಶ್ರುತಿಗಳ ತಾತ್ಪರ್ಯ ನಿರ್ಣಯಗಳ ಕ್ರಮವು ಈ ರೀತಿಯದು. ಉಪಕ್ರಮ. ಪ್ರಕರಣ ವಿಷಯ ಸೂಚನೆ (2) ಉಪಸಂಹಾರ. ಫಲಿತಾರ್ಥಪಠನವು ಏಕಾರ್ಥವು (3) ಅಭ್ಯಾಸ. ಒಂದೇ ಪಾರದ ಅನೇಕ ಬಾರಿ ಉಚ್ಚಾರಣವು (4) ಅಪೂರ್ವತಾ

ಪ್ರಚಲಿತ ಇತರ ಪ್ರಮಾಣಾರ್ಥ ದೂಷಣವು (5) ಫಲಂ ಸಿದ್ಧಫಲಾರ್ಥಬೋಧಕ ಸ್ತುತಿಯೂ ಪರಕೃತಿಯೂ ಒಬ್ಬ ಪುರುಷನ ಹೇಳಿಕೆಯಂತೆಯೋ ಅನೇಕ ಪುರುಷರ ವಾಕ್ಯವು ಪುರಾಕಲ್ಪ ಅರ್ಥವಾದಗಳು ಮತ್ತು ಉಪಪತ್ತಿ ಉಕ್ತಿಗಳು ಈ ಉಪಾಯ ಗಳಿಂದ ಸರಿಯಾದ ರೀತಿಯಲ್ಲಿ ಯೋಚಿಸಿ ಸಿದ್ಧವಾದ ತಾತ್ಪರ್ಯಾರ್ಥವು.

**4 ಉಪಕ್ರಮಾದಿತಾತ್ಪರ್ಯಲಿಂಗೈಃ ಸಮ್ಯಕ್‌ನಿರೂಪ್ಯಮಾಣೇ**
**ತದೇವ ಶಾಸ್ತ್ರಗಮ್ಯಂ ।**

ಉಪಕ್ರಮಾದಿತಾತ್ಪರ್ಯಧರ್ಮಗಳಿಂದ ಬಲಾಬಲವಿಮರ್ಶಾಪೂರ್ವಕ ಸಮಗ್ರ ಶಾಸ್ತ್ರಗಳ ವಿಚಾರದ ಏಕಾರ್ಥವು ಯಾವುದೋ ಅದೇ ಶಾಸ್ತ್ರಗಮ್ಯವು ಶ್ರೀ ವಿಷ್ಣುವೆಂಬ ದೇವತೆಯು.

**5 ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಪೋಹ್ಯ ಇತ್ಯಹಂ ।**
**ಇತ್ಯಸ್ಯಾ ಹೃದಯಂ ಸಾಕ್ಷಾನ್ನಾನ್ಯೋ ಮದ್ವೇದ ಕಶ್ಚನೇತಿ**
**ಭಾಗವತೇ ।**

ವೇದದಲ್ಲಿ ಕರ್ಮ ಬೋಧಕವಿಧಿವಾಕ್ಯಗಳು 1) ಈ ಕರ್ಮಗಳು ನನ್ನ ಪ್ರೀತಿ ಗೋಸ್ಕರವೆಂದು ನನ್ನ ಸ್ತುತಿ ಮಾತ್ರವು 2) ಇಂದ್ರಾದಿದೇವತೆಗಳ ಶಕ್ತಿಯು ನನ್ನ ಶಕ್ತಿಯ ಅಂಶಗಳೆಂದು ನನ್ನ ಸ್ತುತಿಯೇ 3) ಕರ್ಮನಿಷೇಧವಾಕ್ಯಗಳು ಆಕರ್ಮ ಗಳು ನನ್ನ ಪ್ರೀತಿಗಾಗಲ್ಲವಾದ್ದರಿಂದ ನಿಷೇಧವಾಕ್ಯವು ನನ್ನ ಸ್ತುತಿಯೇ 4) ವಾಕ್ಯ ಶಬ್ದ ಹರಿವಾಚಕ ಮತ್ತು ಕೃತ್ಯವು 5) ಆತನ ವಿಶೇಷ ಸನ್ನಿಧಾನವುಳ್ಳ ಹೃಯಾ ಕಾಶದಲ್ಲಿ ವಾಸುದೇವಾದಿ ರೂಪಗಳು ಜ್ಞಾನಿಗಳಿಗೆ ಗೋಚರವು.

**ಇತಿ ಸಮನ್ವಯಾಧಿಕರಣಂ**

ಈಕ್ಷತ್ಯಧಿಕರಣವು

**1. ನನು ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।**
(ತೈ ಉ 2-4-1)

ಪೂರ್ವಶ್ರುತಿಯಲ್ಲಿ ಹೇಳಲ್ಪಟ್ಟಿರುವ ವಸ್ತುವು ವೇದದಲ್ಲಿ ಪೂರ್ಣ ಅನ್ವಯ ವುಳ್ಳದ್ದೆಂದು ಹೇಳಿದೆ. ಆದರೆ ಈ ಮೇಲಿನ ಶೃತಿಯು ಈ ಬ್ರಹ್ಮವು ಶಬ್ದದಿಂದ

ತಿಳಿಯಲ್ಪಡುವುದಿಲ್ಲ. ಆದ್ದರಿಂದ ಶಾಸ್ತ್ರ ವಿಷಯವೇ ಅಲ್ಲವಾಗಿ ಜ್ಞಾನವಿಷಯವೂ ಅಲ್ಲ ಎನ್ನಬಹುದು,

2. **ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾ ರಸಂನಿತ್ಯಮಗಂ-ಧವಚ್ಚಯತ್ I** (ಕಠ 3-15)

ಮತ್ತು ಈ ಬ್ರಹ್ಮವಸ್ತುವು ಶಬ್ದ ಪ್ರಮಾಣವುಳ್ಳದ್ದಲ್ಲ ಹಾಗೆಯೇ ಸ್ಪರ್ಶ, ರೂಪ, ರಸ, ಗಂಧ ಇವುಗಳಿಂದಲೂ ತಿಳಿಯಲು ಸಾಧ್ಯವಿಲ್ಲ ಅಂದರೆ ಪಂಚಮಾತ್ರಾಗಳಿಂದಲೂ ವಿಲಕ್ಷಣ ಮತ್ತು ನಿತ್ಯವು.

3. **ಅವಚನೇನೈವ ಪ್ರೋವಾಚ I (ಬಾಷ್ಕಲ ಶ್ರುತಿಃ)**

ಈ ಬಹ್ಮವು ವಚನ ವೃತ್ತಿಯೇ ಇಲ್ಲದೆ ಲಕ್ಷಣಮಾತ್ರದಿಂದಲೇ ಉಪದೇಶ್ಯವು

4. **ಯದ್ವಾಚಾನಭ್ಯುದಿತಂ ಯೇನವಾಗಾಭ್ಯುದ್ಯತೇ ಯಚ್ಛ್ರೋತ್ರೇಣ ನ ಶೃಣೋತಿ ಯೇನ ಶ್ರೋತ್ರಮಿದಂ ಶ್ರುತತೇನ ।**
**ಮಿತ್ಯಾದಿ ಭಿರ್ನತಚ್ಛಬ್ದ ಗೋಚರಂ ।**

ಈ ಬ್ರಹ್ಮವು ಶಬ್ದದ ಉಚ್ಚಾರದಿಂದ ಹೇಳಲ್ಪಡುವುದಿಲ್ಲ ಆದರೆ ವಾಕ್ ಶಕ್ತಿಗೆ ನಿಯಾಮಕವಾದ ಪ್ರೇರಕವು.ಕೇಳಲ್ಪಡುವುದಿಲ್ಲ ಆದರೆ ಕೇಳುವ ಶಕ್ತಿಗೆ ಪ್ರೇರಕವು ಮುಂತಾದ ಶೃತಿವಾಕ್ಯಗಳಿಂದ ಶಬ್ದಗೋಚರವಲ್ಲ ಎಂಬ ಪ್ರಶ್ನೆಗೆ

5. **ನೇತ್ಯಾಹ ॥** (ಸಿದ್ಧಾಂತ ಸೂತ್ರಂ)

ಅಭಿಪ್ರಾಯ ಹಾಗಲ್ಲ ಮುಂದಿನ ಸೂತ್ರವು ಈ ಆಕ್ಷೇಪಣೆಗಳಿಗೆ ಉತ್ತರವು.

## ಸೂ. ಓಂ ॥ ಈಕ್ಷತೇರ್ನಾಶಬ್ದಮ್ ॥ ಓಂ ॥ 5 ॥

ಬ್ರಹ್ಮವು ಅವಾಚ್ಯವಲ್ಲ ವಚನ ಪ್ರಮಾಣವುಳ್ಳದ್ದೇ ಜ್ಞಾನವಿಷಯತ್ವ ಅದಕ್ಕಿರುವುದರಿಂದಲೇ.

**1–5 ಸ ಏತಸ್ಮಾಜ್ಜೀವಘನಾತ್ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ (ಪ್ರ-5-5)**

**ಆತ್ಮನ್ಯೇವಾತ್ಮಾನಂ ಪಶ್ಯೇತ್ (ಬೃ-6-4-23) ವಿಜ್ಞಾಯ ಪ್ರಜ್ಞಾಂ ಕುರ್ವೀತೇತ್ಯಾದಿವಚನೇ ರೀಕಣೀಯತ್ವಾದ್ವಾಚ್ಯಮೇವ । (ಬೃ6-4-21)**

1 ಇದು ಷಟ್ಪ್ರಶ್ನವಾಕ್ಯವು ಯಾರು ಓಂ ಎಂಬ ತ್ರಿಮಾತ್ರಾಕ್ಷರದಿಂದ ನಾಶರಹಿತ ಶ್ರೇಷ್ಠ ಪುರುಷನನ್ನು ಧ್ಯಾನಮಾಡುವರೋ ಅವರು ಸರ್ವಾಂತರ್ಯಾಮಿ ಪರಮಾತ್ಮನನ್ನು ಅಪರೋಕ್ಷೀಕರಿಸಿಕೊಂಡು ಪಾದ, ಉದರ, ಚರ್ಮವಾಚ್ಯ ಈ ಪ್ರಕೃತಿ ಶರೀರವನ್ನು ಬಿಟ್ಟು ಪಾಪರಹಿತರಾಗಿ ಸಾಮವಾಕ್ಯಗಳಿಂದ ಬ್ರಹ್ಮಲೋಕವನ್ನು ಹೊಂದಿ ಆತನ ಉಪದೇಶದಿಂದ ದೇಹಾಂತರ್ಗತ ವಾಸುದೇವನನ್ನು ಹೊಂದುತ್ತಾರೆ

2. ತನ್ನಲ್ಲಿ ಅಂತರ್ಯಾಮಿ ಶ್ರೀ ಪರಮಾತ್ಮನನ್ನು ಹೊಂದಬೇಕು.

3 ಅಂತರ್ಯಾಮಿ ಶ್ರೀ ಪರಮಪುರುಷನನ್ನು ಪರೋಕ್ಷವಾಗಿ ತಿಳಿದು ಅಪರೋಕ್ಷ ವಿಷಯವನ್ನಾಗಿ ಹೊಂದಲು ಅಪೇಕ್ಷಿಸಬೇಕು.

**6 ಔಪನಿಷದತ್ವಾನ್ನಾವಚನೇನೇಕ್ಷಣಂ ।**

ಬ್ರಹ್ಮನ ಈ ಈಕ್ಷಣತ್ವಧರ್ಮವು ಚಕ್ಷುರಾದಿ ಪ್ರಾಕೃತ ಇಂದ್ರಿಯ ಗೋಚರ ಅಲ್ಲ. ವಚನ ಮಾತ್ರದಿಂದಲೇ ತಿಳಿಯಲ್ಪಡಬೇಕು ಬ್ರಹ್ಮವಿಷಯದಲ್ಲಿ ವಚನವೇ ಜ್ಞಾನ ವಿಷಯವು ಬ್ರಹ್ಮವು ಅತೀಂದ್ರಿಯ ವಸ್ತುವಾದ್ದರಿಂದ.

**7. ಸರ್ವೇವೇದಾ ಯತ್ಪದಮಾಮನಂತಿ ತಪಾಂಸಿ ಸರ್ವಾಣಿ ಚ ಯದ್ವದಂತಿ । (ಕಠ 2-15)**

ಸರ್ವವೇದವೂ ಯಾವ ಬ್ರಹ್ಮನ ಅಪ್ರಾಕೃತ ಸ್ವರೂಪವನ್ನು ಮುಖ್ಯವಾಗಿ ಹೇಳಲು ಹೊರಟಿರುವುದೋ ಮತ್ತು ವೇದೋಕ್ತವಾದ ಸರ್ವತಪಸ್ಸು ಆತನ ಉದ್ದೇಶ್ಯವಾಗಿ ಮಾಡಲ್ಪಡುವುದೋ, ಅಂದರೆ ಆತನ ಆಲೋಚನಾ ರೂಪ ಕರ್ತವ್ಯವೆಂದು ಹೇಳುವುದೊ ಅದೇ ಮುಖ್ಯ ಬ್ರಹ್ಮವಾಚ್ಯ ವಸ್ತುವು.

**ವೇದೈಶ್ಚ ಸರ್ವೈರಹಮೇವ ವೇದ್ಯೋ ವೇದಾಂತಕೃದ್ವೇದವಿದೇವ ಚಾಹಮಿತ್ಯಾದಿ ಶ್ರುತಿಸ್ಮೃತಿಭ್ಯಶ್ಚ ।** (ಗೀತಾ-15-15)

ಸರ್ವವೇದವಾಕ್ಯಗಳಿಂದಲೂ ನಾನೇ ತಿಳಿಯಲ್ಪಡುವವನು. ವೇದಾಂತಶಾಸ್ತ್ರವನ್ನು ಉಪದೇಶ ಮಾಡಿದವನೂ ನಾನೇ ವೇದಾಂತ ಶಾಸ್ತ್ರವನ್ನು ಸರಿಯಾಗಿ ತಿಳಿದವನೂ ನಾನೇ ಹೀಗೆ ಶ್ರುತಿ ಸ್ಮೃತಿವಾಕ್ಯಗಳು

8. ಅವಾಚ್ಯತ್ವಾದಿಕಂ ತ್ವಪ್ರಸಿದ್ಧತ್ವಾತ್ ।

ಈ ಮೇಲಿನ ಹೇಳಿಕೆಯಿಂದ ಬ್ರಹ್ಮವಸ್ತುವಿಗೆ ವಾಚ್ಯತ್ವವು ಸಿದ್ಧವಾದರೆ ಅವಾಚ್ಯತ್ವಾದಿವಾಕ್ಯಗಳು ಸುಳ್ಳಾಗುವುವಲ್ಲವೆ? ಎಂದರೆ ಆ ವಾಕ್ಯಗಳ ಪರಿಶೋಧನೆಯಿಂದ ಬ್ರಹ್ಮವು ವಾಕ್ಯಮಾತ್ರದಿಂದ ಪೂರ್ಣ ತಿಳಿಯಲ್ಪಡುವುದಿಲ್ಲವಾದ ಕಾರಣ. ಅಪರಿಮಿತ ಮಾಹಾತ್ಮ್ಯದಿಂದ ಎಂಬ ಅರ್ಥದಿಂದ ಸಾಧುವಾಗಿ ಆ ಶಂಕಾ ಪರಿಹಾರ ಮಾಡಿಕೊಳ್ಳಬೇಕು

9. ನ ತದೀದೃಗಿತಿಜ್ಞೇಯಂ ನ ವಾಚ್ಯಂ ನ ಚ ತರ್ಕ್ಯತೇ ।
ಪಶ್ಯಂತೋಽಪಿ ನ ಪಶ್ಯಂತಿ ಮೇರೋಃ ರೂಪಂ ವಿಪಶ್ಚಿತ ಇತಿವತ್ ।

ಆ ಬ್ರಹ್ಮವಸ್ತುವು ಈ ರೀತಿಯದೇ ಎಂದು ಖಚಿತವಾಗಿ ತಿಳಿಯಲು ಸಾಧ್ಯವಿಲ್ಲ. ಹೇಳಲು ಸಾಧ್ಯವಿಲ್ಲ. ಅನುಮಾನಿಸಲು ಕೂಡ ಅಸಾಧ್ಯವು ನನ್ನನ್ನು ತಿಳಿದಿರುವ ಜ್ಞಾನಿಗಳೂ ಸಹ ನನ್ನ ಅಸಾಧ್ಯವಾದ ಮಹಿಮೆಯನ್ನು ಪೂರ್ಣವಾಗಿ ತಿಳಿಯಲಾರರು ಸ್ವಲ್ಪ ಮಾತ್ರ ಅದೂ ತಮ್ಮ ಯೋಗ್ಯತೆಗ ತಕ್ಕಂತೆ ಮಾತ್ರ ನಾನು ಅವರ ಜ್ಞಾನ ವಿಷಯನಾಗುತ್ತೇನೆ. ಯಾರೂ ನನ್ನನ್ನು ಪೂರ್ಣವಾಗಿ ತಿಳಿಯಲಾರರು

10 ಅಪ್ರಸಿದ್ಧೇರವಾಚ್ಯಂ ತದ್ವಾಚ್ಯಂ ಸರ್ವಾಗಮೋಕ್ತಿತಃ ।
ಅತರ್ಕ್ಯಂ ತರ್ಕ್ಯಮಜ್ಞೇಯಂ ಜ್ಞೇಯಮೇವಂ ಪರಂ ಸ್ಮೃತಿಮಿತಿ ಗಾರುಡೇ ।

ಆ ಬ್ರಹ್ಮವು ಪೂರ್ಣವಾದ್ದರಿಂದ ಅದರ ಸ್ವರೂಪವನ್ನು ಎಲ್ಲಾ ವೇದಾಗಮಗಳು ಹೇಳುತ್ತಿದ್ದರೂ ಪೂರ್ಣವಾಗಿ ಹೇಳಲು ಸಾಧ್ಯವಿಲ್ಲ. ಆದರೆ ವಾಕ್ಯಗಳಿಂದಲೇ ಸಾಧ್ಯವಾದಷ್ಟು ಜ್ಞಾನ ಸಂಪಾದಿಸಲು ಸಾಧ್ಯ ಯಾವ ತರ್ಕ ಉಪಾಯದಿಂದಲೂ ಪೂರ್ಣವಾಗಿ ತಿಳಿಯಲ್ಪಡುವುದಿಲ್ಲ. ಆದರೂ ತರ್ಕ ಆಗಮಾದಿಗಳಿಂದಲೇ ಸಾಧ್ಯವಾದಷ್ಟು ಮಾತ್ರ ತಿಳಿಯಬೇಕು. ಅಂದರೆ ಸರ್ವವಾಕ್ಯಜಾಲಗಳೂ ಅವನ ಅಸಾಧ್ಯ ಮಾಹಾತ್ಮ್ಯವನ್ನು ಮೀರಲು ಸಾಧ್ಯವಿಲ್ಲ.

**11 ನ ಚಾ ಶಬ್ದತ್ವನಿಿತರಸಿದ್ಧಂ ।**

ಈ ಬ್ರಹ್ಮವು ಸರ್ವಜಗದ್ವಸ್ತುಗಳಿಗೆ ಕಾರಣವಾದ ಪ್ರಧಾನವನ್ನು ಕಾರಣವಾಗಿ ವುಳ್ಳದ್ದಲ್ಲ ಸರ್ವತಂತ್ರಸ್ವತಂತ್ರವಾಗಿ ಈ ಪ್ರಧಾನಕ್ಕೂ ಮುಖ್ಯ ನಿಯಾಮಕ ಪ್ರೇರಕವು ಮತ್ತು ವೇದ ವೇದಾಂತ ವಾಕ್ಯಗಳಲ್ಲದ ಇತರ ಯಾವ ವಾಕ್ಯ ಗಳಿಂದಲೂ ಅಂದರೆ ವೇದ ಬಾಹಿರ ಸಿದ್ಧಾಂತಗಳಿಂದ ತಿಳಿಯಲು ಅಸಾಧ್ಯವು

## ಸೂ॥ ಓಂ ಗೌಣಶ್ಚೇನ್ನಾತ್ಮಶಬ್ದಾತ್ ಓಂ ॥ 6 ॥

ಸತ್ತ್ವಾದಿಗುಣಬದ್ಧ ಜೀವನೇ (ಗೌಣ) ಸ ಏವ ತಸ್ಮಾತ್ ಎಂದು ಶೃತಿಯಲ್ಲಿ ಉಕ್ತ ವಾಗಿರಲು ಸಾಧ್ಯವಲ್ಲವೇ ? ಅಂದರೆ ಅವನು ಬ್ರಹ್ಮನಲ್ಲ ಏಕೆಂದರೆ ಈಕ್ಷಣೀಯ ವಸ್ತುವಿನಲ್ಲಿ ಆತ್ಮಶಬ್ದ ಪ್ರಯೋಗದಿಂದಲೂ ಈಕ್ಷಣೀಯುವಸ್ತುವಿನಲ್ಲಿ " ಆತ್ಮಾನಂ ಪಶ್ಯೇತ್ " ಎಂಬ ಪ್ರಯೋಗವಿರುವುದರಿಂದಲೂ ಈ ಆತ್ಮಶಬ್ದವಾಚ್ಯನು ಮುಖ್ಯ ಬ್ರಹ್ಮವಾಚ್ಯನೇ ಗೌಣಜೀವನಾಗಲಾರನು

**13 ನ ಚ ಗೌಣ ಆತ್ಮಾದ್ಯಶ್ಯೋ ವಾಚ್ಯಶ್ಚ ಸ ನಿರ್ಗುಣ ಇತಿ ಯುಕ್ತಂ ।**
**ಆತ್ಮಶಬ್ದಾತ್ ।**

ಆದಕಾರಣ ಸರ್ವಜೀವಾಂತರ್ಯಾಮಿ ಶ್ರೀ ವಿಷ್ಣುವನ್ನೇ ಹೇಳುವ ಆತ್ಮಶಬ್ದವು ಮುಖ್ಯವಾಚ್ಯವು ನಿರ್ಗುಣಶಬ್ದವಾಚ್ಯತ್ವದಿಂದ ಪ್ರಾಕೃತ ಗುಣರಹಿತನೆಂದು ತಿಳಿ. ಪ್ರಾಕೃತ ಗುಣಬದ್ಧ ಜೀವನು ನಿರ್ಗುಣನಲ್ಲವಷ್ಟೆ.

**14 ಯೋ ಗುಣೈಃ ಸರ್ವತೋ ಹೀನೋ ಯಶ್ಚ ದೋಷವಿವರ್ಜಿತಃ ।**
**ಹೇಯೋಪಾದೇಯ ರಹಿತಃ ಸ ಆತ್ಮೇತ್ಯಭಿಧೀಯತೇ ।**
**ಏತದನ್ಯಸ್ವಭಾವೋ ಯಃ ಸೋಽನಾತ್ಮೇತಿ ಸತಾಂ ಮತಂ ॥**
**ಅನಾತ್ಮನ್ಯಾತ್ಮಶಬ್ದಸ್ತು ಸೋಪಚಾರಃ ಪ್ರಯುಜ್ಯತೇ ಇತಿ ವಾಮನೇ ।**

ಯಾವ ವಸ್ತುವು ಸತ್ತ್ವಾದಿ ಗುಣರಹಿತವೋ ಸ್ವಾಭಾವಿಕವಾಗಿ ದೋಷ ರಹಿತವೋ ಮತ್ತು ಗುಣಪೂರ್ಣವಾಗಿ ಸರ್ವವಸ್ತುವನ್ನೂ ಹೊಂದಿ ಯಾವುದನ್ನೂ



5]

ಹೊಸದಾಗಿ ಹೊಂದಬೇಕಾಗಿಲ್ಲವೊ ಅಂಥಃ ವಸ್ತುವು ಮುಖ್ಯವಾಗಿ " ಆತ್ಮಾ " ಸ್ವಾಮಿ ಈ ಗುಣಗಳಿಗೆ ಬೇರೆ ಸ್ವಭಾವವುಳ್ಳ ಅಸ್ವತಂತ್ರ ವಸ್ತುವು, ಜೀವರು ಆತ್ಮಾ ಶಬ್ದ ಮುಖ್ಯವಾಚ್ಯರಲ್ಲ ಅವರು "ಅನಾತ್ಮಾ" ವಾಚ್ಯರು ಅನಾತ್ಮರಲ್ಲಿ ಆತ್ಮಶಬ್ದವು ಉಪಚಾರಕ್ಕೇ ಹೊರತು ಮುಖ್ಯವಲ್ಲ ನಿರ್ಗುಣತ್ವ ನಿಷ್ಠತ್ವದಿಂದ ಈ ವಾಕ್ಯದಲ್ಲಿ ಹೇಳಲ್ಪಟ್ಟ ಆತ್ಮವಸ್ತುವು ದೃಶ್ಯನಲ್ಲ ವಾಚ್ಯನಲ್ಲ ಗೌಣನಲ್ಲ. ನಿರ್ಗುಣನೇ,

**15 ದ್ವೇವಾವ ಬ್ರಹ್ಮಣೋ ರೂಪೇ ಆತ್ಮಾ ಚೈವಾನಾತ್ಮಾ ಚ ।**
**ತತ್ರ ಯಃ ಸ ಆತ್ಮಾಸ ನಿತ್ಯಃ ಶುದ್ಧಃ ಕೇವಲೋ ನಿರ್ಗುಣಶ್ಚ ।**
**ಅಥ ಹ ಯೋಽನೀದೃಶಃ ಸೋ ನಾತ್ಮೇತಿ ತಲವಕಾರಬ್ರಾಹ್ಮಣಂ ।**

ಪರಬ್ರಹ್ಮನಿಗೆ ಎರಡು ರೂಪಗಳು ಸ್ವರೂಪರೂಪ, ಪ್ರತಿಮಾರೂಪ, ಯಾವುದು ಸ್ವರೂಪವೊ ಅದು ಮುಖ್ಯ ಆತ್ಮ, ವಿಷ್ಣು ನಿತ್ಯ (ದೇಹಹಾನ್ಯಾದಿರಹಿತ) ಶುದ್ಧ ಕರ್ಮಲೇಪವಿಲ್ಲದ ಕೇವಲ (ಪಂಚಭೂತಾತ್ಮದೇಹರಹಿತ) ಮತ್ತು ನಿರ್ಗುಣ. (ಸತ್ವಾದಿಪ್ರಾಕೃತ ಗುಣರಹಿತ) ಈ ಶ್ರೇಷ್ಠ ಗುಣಗಳಿಲ್ಲದವನು ಅನಾತ್ಮ, ಜೀವ ಸಮುದಾಯವು.

**16 ನ ಚ ಮುಖ್ಯೇ ಸತ್ಯಮುಖ್ಯಂ ಯುಜ್ಯತೇ ।**

ಮುಖ್ಯಾರ್ಥವು ಸಿದ್ಧವಾದೆಡೆ ಅಮುಖ್ಯಾರ್ಥವು ಸಾಧುವಲ್ಲ ॥

## ॥ ಓಂ ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ಓಂ ॥ 7 ॥

ಪರಮಾತ್ಮಜ್ಞಾನಿಗೆ ಯಸ್ಯಾನುವಿತ್ತ ಮೊದಲಾದ ಶೃತಿಗಳಲ್ಲಿ ಮೋಕ್ಷವು ಹೇಳಲ್ಪಡುವುದರಿಂದ ಆತ್ಮಶಬ್ದ ಮುಖ್ಯ ವಾಚ್ಯನು ಜೀವನಲ್ಲ ಶ್ರೀ ವಿಷ್ಣುವೇ

ಅನ್ಯರು ಆತ್ಮಾ ಮತ್ತು ಅನಾತ್ಮಾ ಶಬ್ದಗಳನ್ನು ಚೇತನ, ಅಚೇತನ ಜೀವರುಗಳಲ್ಲಿ ಹೇಳಿ ಜೀವರು ಸ್ವಾಭಾವಿಕ ನಿರ್ಗುಣರು ದೋಷರಹಿತರು ಮತ್ತು ಉಪಾಧಿ ನಿಮಿತ್ತ ಗುಣದೋಷಗಳು ಎಂದು ಅರ್ಥವನ್ನು ಕಲ್ಪಿಸಿ ಜೀವನಲ್ಲಿಯೇ ಮುಖ್ಯ ಆತ್ಮ ಶಬ್ದವು ಎಂದು ಸಂಶಯವನ್ನು ಮಾಡುವರು. ಈ ಸಂಶಯ ನಿವಾರಣವು ಈ ಸೂತ್ರ

ದಿಂದಲಭ್ಯವು. ಮೋಕ್ಷದಾತೃತ್ವವು ಜೀವನಗುಣವಲ್ಲವಾದ್ದರಿಂದ ಶ್ರೀ ವಿಷ್ಣುವೇ ಮೋಕ್ಷದಾತೃವು ಹಾಗೂ ಆತ್ಮಶಬ್ದ ಮುಖ್ಯವಾಚ್ಯನು

**18 ನ ಹಿ ಗೌಣಾತ್ಮನಿಷ್ಠಸ್ಯ ಮೋಕ್ಷಃ ।**

ಗೌಣಾತ್ಮನಲ್ಲಿ ನಿಷ್ಠೆಯಿಂದ ಜೀವನಿಗೆ ಮೋಕ್ಷಫಲವು ಸಾಧ್ಯವಲ್ಲ ಗುಣ ನಿವೃತ್ತಿರೂಪವೇ ಮೋಕ್ಷವು

**19 ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾಸ್ಮಿನ್ಸಂದೋಘೇ ಗಹನೇ ಪ್ರವಿಷ್ಟಃ**
**ಸ ವಿಶ್ವಕೃತ್ಸಹಿ ಸರ್ವಸ್ಯ ಕರ್ತಾ ತಸ್ಯ ಲೋಕಃ ಸ ಉ ಲೋಕ**
**ಏವೇತ್ಯಾತ್ಮನಿಷ್ಠಸ್ಯ ಮೋಕ್ಷ ಉಪದಿಶ್ಯತೇ ।** (ಬೃ ಉ. 6-4-13)

ಆತ್ಮನಿಷ್ಠನಿಗೆ ಮೋಕ್ಷಸಿದ್ಧಿಯು ಯಾವ ಪ್ರಮಾಣದಿಂದಲೆಂದರೆ ಯಾವ ಶ್ರೀ ವಿಷ್ಣುವು ಸರ್ವಕರ್ತೃವಾದ್ದರಿಂದ ಶ್ರೀ ವಾಯುಜೀವರಿಗೂ ಕರ್ತನೋ ಸ್ವಯಂ ಸರ್ವಜ್ಞನೋ ಸಂದೇಹನಾಮಕ ಮಧ್ಯ ಶರೀರಸ್ಥ ಹೃದಯಗೃಹಪ್ರವಿಷ್ಟನೋ ಆತನು ತನ್ನ ಉಪಾಸಕರಿಂದ ಸರಿಯಾಗಿ ತಿಳಿಯಲ್ಪಟ್ಟುತನ್ನ ಲೋಕದ ಪ್ರಾಪ್ತಿಯನ್ನುಂಟು ಮಾಡುವನು. ಶ್ರೀ ವಿಷ್ಣು ಜ್ಞಾನಿಯೋ ಕೃತಕೃತ್ಯನು ಸರ್ವಶಕ್ತ ಪರಮಾತ್ಮನು ಆ ಜ್ಞಾನಿಯು ಸರ್ವಕಾರ್ಯಗಳನ್ನು ಮಾಡಿಸುತ್ತಾ ತನ್ನ ಲೋಕವನ್ನು ಹೊಂದಿಸಿ ಕೊಡುವನು.

**20 ಅಯಮಾತ್ಮಾ ಬ್ರಹ್ಮ** (ಮಾ.ಉ. 1-2, ಬೃ.ಉ 4-5-19)

ಈ ಶ್ರುತಿಯು ರಮಾ ಬಹ್ಮಾದಿದೇವತೆಗಳ ಅಂತರ್ಯಾಮಿಯಾಗಿ ಅವರ ಸ್ಥಿತಿ ಗತಿಗೆ ಕಾರಣದ ಶ್ರೀ ವಿಷ್ಣುವು ಮುಖ್ಯ ಆತ್ಮಶಬ್ದವಾಚ್ಯನು ಎಂದು ಹೇಳುತ್ತದೆ

ಸ್ಮೃತಿ ವಚನವೂ ಇದನ್ನೇ ದೃಢೀಕರಿಸುತ್ತದೆ

**21 ಬ್ರಹ್ಮೇತಿ ಪರಮಾತ್ಮೇತಿ ಭಗವಾನಿತಿ ಶಬ್ದ್ಯತೇ ।**
**ದತ್ತಂ ದುರ್ವಾಸಸಂ ಸೋಮಮಾತ್ರೇಶಬ್ರಹ್ಮಸಂಭವಾನ್ ।**
**ಚೇತನಸ್ತು ದ್ವಿಧಾ ಪ್ರೋಕ್ತೋ ಜೀವ ಆತ್ಮೇತಿ ಚ ಪ್ರಭೋ ।**
**ಜೀವಾ ಬ್ರಹ್ಮಾದಯಃ ಪ್ರೋಕ್ತಾ ಆತ್ಮೈಕಸ್ತು ಜನಾರ್ದನಃ ।**

ಇತರೇಷ್ವಾತ್ಮಶಬ್ದಸ್ತು ಸೋಪಚಾರಃ ಪ್ರಯುಜ್ಯತೇ ।
ತಸ್ಯಾತ್ಮನೋ ನಿರ್ಗುಣಸ್ಯ ಜ್ಞಾನಾನ್ಮೋಕ್ಷ ಉದಾಹೃತಃ ॥
ಸಗುಣಾಸ್ತ್ವಪರೇ ಪ್ರೋಕ್ತಾಸ್ತಜ್ಞಾನಾನ್ನೈವ ಮುಚ್ಯತೇ ।
ಪರೋ ಹಿ ಪುರುಷೋ ವಿಷ್ಣುಸ್ತಸ್ಮಾನ್ಮೋಕ್ಷಸ್ತತಃ ಸ್ಮೃತ । ಇತಿ ಪಾದ್ಮೇ।

ಅತ್ರಿಋಷಿಗಳ ಭಾರ್ಯಾ ಅನಸೂಯಾದೇವಿಯು ಆತ್ಮಾ-ಶ್ರೀವಿಷ್ಣುವು ಈಶ ಶಿವರುದ್ರನು, ಬ್ರಹ್ಮಾ-ಚತುರ್ಮುಖಬ್ರಹ್ಮನು, ಈ ದೇವತೆಗಳ ಅವತಾರಗಳಾದ ದತ್ತ, ದೂರ್ವಾಸ, ಸೋಮನಾಮಕ ಪುತ್ರರುಗಳನ್ನು ಪಡೆದಳು ಚೇತನಗಳು ಎರಡು ವಿಧ, ಜೀವ, ಆತ್ಮಾ ಎಂದು ಬ್ರಹ್ಮಾದಿಚೇತನರು–ಜೀವಸಮುದಾಯಗಳು " ಆತ್ಮಾ " ವಾಚ್ಯನು ಜನಾರ್ದನನೊಬ್ಬನೇ. ಇತರ ಜೀವಸಮುದಾಯಗಳಲ್ಲಿ ಆತ ಶಬ್ದವು ಉಪಚಾರಕ್ಕಾಗಿಯೇ.ಈ ನಿರ್ಗುಣನಾದ ವಿಷ್ಣ್ವಾಖ್ಯ ಆತ್ಮನ ಜ್ಞಾನದಿಂದಲೇ ಮೋಕ್ಷವು. ಮಿಕ್ಕ ಜೀವಸಮುದಾಯವು ಸಗುಣವು. ಅವರ ಜ್ಞಾನದಿಂದ ಮೋಕ್ಷವಾಗ ಲಾರದು. ಶ್ರೇಷ್ಠ ಪುರುಷನಾದ ಶ್ರೀ ವಿಷ್ಣುವಿನ ಜ್ಞಾನಲಭ್ಯ ಪ್ರಸಾದದಿಂದಲೇ ಮೋಕ್ಷವು ಪಾದ್ಮಪುರಾಣ

ವದಂತಿಯತ್ತತ್ತ್ವವಿದಃ ತತ್ವಂಯಜ್ಜ್ಞಾನಮದ್ವಯಂ । ಭಾಗವತ ವಾಕ್ಯವು

ಸಮಾಧಿಕ ರಹಿತ ಪೂರ್ಣ ಜ್ಞಾನ ಸ್ವರೂಪವಾದ ಯಾವ ವಸ್ತುವನ್ನು ಜ್ಞಾನಿಗಳು ತತ್ತ್ವವೆಂದು ಹೇಳುವರೋ ಅದು ದೇಶಕಾಲದಿಂದ ಶ್ರೇಷ್ಠವು ಸರ್ವಾಂತರ್ಯಾಮಿಯು ಐಶ್ವರ್ಯಾದಿಸರ್ವ ಗುಣಪೂರ್ಣವು ಆದ್ದರಿಂದಲೇ ಬ್ರಹ್ಮ ಪರಮಾತ್ಮ, ಭಗವಾನ್ ಎಂಬ ಶಬ್ದಗಳಿಂದ ಮುಖ್ಯವಾಗಿ ಕರೆಯಲ್ಪಡುವುದು.

## 22. ಸೂ॥ ಓಂ ॥ ಹೇಯತ್ವಾವಚನಾಚ್ಚ ॥ ಓಂ ॥ 8 ॥

ಮೋಕ್ಷಾರ್ಥ ಫಲಕ್ಕಾಗಿ ಎಲ್ಲಿಯು ಬ್ರಹ್ಮನ ಜ್ಞಾನವನ್ನು ಅಜ್ಞಾನ ಸ್ವರೂಪವಾಗಿ ದೂಷಣವಾಗಿ ಹೇಳಿಲ್ಲದ್ದರಿಂದಲೂ, ಮೋಕ್ಷವು ಪ್ರಧಾನವಾಗಿ ಬ್ರಹ್ಮಜ್ಞಾನದಿಂದಲೇ ಸಾಧ್ಯವೆಂಬ ವಾಕ್ಯದಿಂದಲೂ ಆತ್ಮ ಶಬ್ದವಾಚ್ಯನು ಶ್ರೀವಿಷ್ಣುವೆ. ಗೌಣಾತ್ಮ ಜೀವನಲ್ಲ.

**ತಮೇವೈಕಂ ಜಾನಥ ಆತ್ಮಾನಮನ್ಯಾವಾಚೋ ವಿಮುಂಚಥ ।**
**ಅಮೃತಸ್ಯೈಷಸೇತು (ಮು ಉ. 2-2-5) ಇತ್ಯನ್ಯೇಷಾಂ ಹೇಯತ್ವ**
**ವಚನಾದಸ್ಯಾಹೇಯತ್ವ ವಚನಾನ್ನಗೌಣ ಆತ್ಮಾ ।**

ಶ್ರೀ ವಿಷ್ಣುವನ್ನೇ ಪ್ರಧಾನವಾಗಿ ತಿಳಿಯಿರಿ ಇತರ ಜೀವಸಮುದಾಯಗಳನ್ನು ಪ್ರಾಧಾನ್ಯವೆಂದು ತಿಳಿಯಬೇಡಿರಿ ಶ್ರೀವಿಷ್ಣುವೇ ಮುಕ್ತ ವರ್ಗಕ್ಕೆ ಆಶ್ರಯನು ಎಂಬ ಶ್ರುತಿಯಿಂದಲೂ ಗುಣಶಬ್ದವಾಚ್ಯ-ಆತ್ಮನಲ್ಲ ಅನಾತ್ಮನೇ. ವಿಷ್ಣುವೇ ಆತ್ಮನು

## 23. ಸೂ॥ ಓಂ ॥ ಸ್ವಾಪ್ಯಯಾತ್ ॥ ಓಂ ॥ ೯ ॥

ತನಗೆ ತನ್ನಲ್ಲಿಯೇ ಲಯವನ್ನು ಹೇಳಿರುವುದರಿಂದ "ಆತ್ಮಾನಂ ವಿಲಾಪಯತಿ" ಎಂಬ ಶೃತಿಯಲ್ಲಿ ಹೇಳಲ್ಪಟ್ಟ ಆತ್ಮಾ ಗೌಣನಲ್ಲ ನಿರ್ಗುಣನೇ.

**ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣ ಮುದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ (ಬೃ ಉ. 7-1-1) ಪೂರ್ಣಮೇವಾವಶಿಷ್ಯತೇ ॥**

ಮೂಲ ರೂಪವು ಸರ್ವದಾ ಪೂರ್ಣವೇ ಅವತಾರರೂಪಗಳೂ ಪೂರ್ಣಗಳೇ ಪೂರ್ಣ ಮೂಲ ರೂಪದಿಂದ ಪೂರ್ಣ ಅವತಾರ ರೂಪವು ಹೊರ ಹೊರಡುತ್ತದೆ (ಒಂದೇ ರೂಪವು ಬಹು ಸಂಖ್ಯಾತಗಳಾಗುತ್ತವೆ. ವಿಶೇಷ ಶಕ್ತಿಯಿಂದ) ಪ್ರಲಯ ಕಾಲದಲ್ಲಿ ಆ ಪೂರ್ಣರೂಪವು ಪೂರ್ಣ ಅವತಾರ ರೂಪಗಳನ್ನು ಸ್ವೀಕರಿಸಿ ಪೂರ್ಣ ಮೂಲ ರೂಪವು ಒಂದೇ ಆಗುವುದು

**ಸ ಆತ್ಮನಾ ಆತ್ಮಾನಮುದ್ಧೃತ್ಯಾತ್ಮನ್ಯೇವ ವಿಲಾಪಯತ್ಯಥಾತ್ಮೈವ ಭವತಿ ।**
**ಸ ದೇವೋ ಬಹುಧಾ ಭೂತ್ವಾ ನಿರ್ಗುಣಃ ಪುರುಷೋತ್ತಮಃ ।**
**ಏಕೀಭೂಯ ಪುನಃ ಶೇತೇ ನಿರ್ದೋಷೋ ಹರಿರಾದಿಕೃದ್ ಇತಿ ॥**

ಆದಿಪುರುಷನಾದ ಶ್ರೀ ಹರಿಯು ನಾನಾ ಸಂಖ್ಯಾತನಾಗಿ ಪರಿಣಮಿಸಿ ಪುನಃ ಒಬ್ಬನೇ ಪ್ರಳಯದಲ್ಲಿರುವನು ಅವನೇ ನಿರ್ಗುಣನು-ಪುರುಷೋತ್ತಮನು-ನಿರ್ದೋಷನು ಮತ್ತು ಆದಾನಾದಿಕರ್ತನು.

24 ಸ್ವಸ್ಯೈವ ಸ್ವಸ್ಮಿನ್ನಪ್ಯಯವಚನಾತ್ ।
ನ ಹಿ ಗೌಣಾತ್ಮನಿ ನಿರ್ದೋಷಸ್ಯ ಲಯಃ ।

ಕೇವಲವಾಗಿ ವಿಷ್ಣ್ವಾಖ್ಯ ಬ್ರಹ್ಮನು ಜ್ಞಾನವಿಷಯನಾದ್ದರಿಂದ ಶಬ್ದ ಗೋಚರನೆಂದಲ್ಲ ಶ್ರುತಿಯ ಅರ್ಥದಿಂದಲೂ ಕೂಡ ದೃಢವಾಗುವುದು ಈ ಶ್ರುತಿಯುಕ್ತ ಬ್ರಹ್ಮನು ನಿರ್ಗುಣನೇ ಪೂರ್ಣನು ಮತ್ತು ತನ್ನಲ್ಲಿಯೇ ಲಯ ಹೊಂದುವವನು ಗೌಣ ಬ್ರಹ್ಮನು ಅಪೂರ್ಣನು ಗುಣಸ್ಪರ್ಶಉಳ್ಳವನಾದ್ದರಿಂದ ತನ್ನಲ್ಲಿ ಲಯವಿಲ್ಲದವನು. ಈತನು ತನ್ನಲ್ಲಿಯೇ ತಾನು ಲಯವುಳ್ಳವನೆಂದರೆ ಆಗ ಪ್ರಲಯದಲ್ಲಿ ಇಬ್ಬರು ಬ್ರಹ್ಮರಿರುವದು ಅಸಾಧ್ಯವು ಶ್ರುತಿಯು **ಇದಂವಾ ಅಗ್ರೇ ನೈವಕಿಂಚನಾಸೀತ್** ಒಬ್ಬನೇ ಬ್ರಹ್ಮನು ಲಯದಲ್ಲಿ ಇರುವನೆಂದು ಹೇಳಿದೆ. ಗುಣಬದ್ಧ ಜೀವನು ನಿರ್ಗುಣ ಪರದೇವತೆಯಲ್ಲಿ ಲಯ ಹೊಂದಲು ಸಾಧ್ಯವಿಲ್ಲ. ಯೋಗ್ಯತೆ ಇಲ್ಲವಾದ್ದರಿಂದ ತನ್ನಲ್ಲಿ ತಾನೆ ಲಯ ಹೊಂದುವವನು ನಿರ್ಗುಣ ಪರದೇವತೆಯೇ ಹೊರತು ಸಗುಣ ಜೀವರಾಶಿಗಳಲ್ಲ.

25 ನ ಚ ಕಾಸುಚಿಚ್ಛಾಖಾಸ್ವನ್ಯಥೋಚ್ಯತೇ ।

ಈ ಮೇಲಿನ ನಿಯಮಕ್ಕೆ ವ್ಯತ್ಯಸ್ತವಾಗಿ ಯಾವ ಶಾಖಾ ವಚನವೂ ಇಲ್ಲ

## ಸೂ. ಓಂ ॥ ಗತಿಸಾಮಾನ್ಯಾತ್ ಓಂ ॥ 10 ॥

ನಾನಾ ಶಾಖಾಜನ್ಯ ಜ್ಞಾನವು ಏಕ ರೂಪವೇ ಆದ್ದರಿಂದ ಶ್ರೀ ವಿಷ್ಣುವಿನಿಂದ ಬೇರೇ ಯಾರೂ ಶಾಖಾಂತರಗಳಲ್ಲಿಯೂ ಮುಖ್ಯವೃತ್ತಿಯಿಂದ ಬ್ರಹ್ಮನೆಂದು ಹೇಳಲ್ಪಡುವುದಿಲ್ಲ.

**ಸರ್ವೇ ವೇದಾ ಯುಕ್ತಯಃ ಸಂಪ್ರಮಾಣಾ ಬ್ರಾಹ್ಮಂ ಜ್ಞಾನಂ**
**ಪರಮಂ ತ್ವೇಕಮೇವ ।**

**ಪ್ರಕಾಶಯಂತೇ ನ ವಿರೋಧಃ ಕ್ವಚಿದೆತಶ್ಚಿದೇಷು ಸರ್ವೇಷು**
**ತಥೇತಿಹಾಸ ಇತಿ ಪೈಂಗಿಶ್ರುತೇರ್ಗತೇಜ್ಞಾನಸ್ಯ ಸಾಮ್ಯನೇವ ।**

ಎಲ್ಲಾ ವೇದಗಳೂ ಸತ್ಪ್ರಮಾಣಗಳೂ ಇತಿಹಾಸಗಳೂ ಕೂಡ ಬ್ರಹ್ಮನ ವಿಷಯ ದಲ್ಲಿ ಮುಖ್ಯವಾಗಿ ಒಂದೇ ವಿಧವಾಗಿ (ಪಾರಮಾರ್ಥಿಕ ವಿಷಯ) ಶ್ರೇಷ್ಠವಾದ ಜ್ಞಾನ ವನ್ನು ಉಂಟುಮಾಡುತ್ತವೆ. ಅಂದರೆ ಒಂದು ಕಡೆ ಬ್ರಹ್ಮನಿಗೆ ಜ್ಞಾನಾನಂದಾದಿ ಗುಣ ಗಳನ್ನು ಹೇಳಿ ಬೇರೆ ಕಡೆ ಅದಕ್ಕೆ ವ್ಯತ್ಯಸ್ತವಾಗಿ ಅಜ್ಞಾನಾದಿ ರೂಪವನ್ನು ಹೇಳು ವುದಿಲ್ಲ ಎಲ್ಲಾ ಕಡೆಗೆ ಏಕವಾಕ್ಯವೇ,

## 26 ಸೂ. ಓಂ ॥ ಶ್ರುತತ್ವಾಚ್ಚ ॥ ಓಂ ॥ 11 ॥

ಏಕೋದೇವ ಇತ್ಯಾದಿ ಶ್ರುತಿಯು ಇರುವುದರಿಂದ ಬ್ರಹ್ಮನು ಶಬ್ದಾವಾಚ್ಯನಲ್ಲ. ವಾಚ್ಯನೇ ಈ ಶೃತಿಯು ಬ್ರಹ್ಮನಿಗೆ ಸಾಕ್ಷಾತ್ತಾಗಿ ಜ್ಞಾನವಿಷಯತ್ವವನ್ನು ಪ್ರತಿ ಪಾದಿಸುವುದು

**ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವ**
**ಭೂತಾಂತರಾತ್ಮಾ ।**
**ಕರ್ಮಾಧ್ಯಕ್ಷಃಸರ್ವಭೂತಾಧಿವಾಸಃ ಸಾಕ್ಷೀಚೇತಾಕೇವಲೋ**
**ನಿರ್ಗುಣಶ್ಚೇತಿ ।**
**ನ ಹ್ಯಶಬ್ದಃ ಶೂಯತೇ । ನ ಚಾಪ್ರಸಿದ್ಧಂ ಕಲ್ಪ್ಯಂ ।**
**ಸರ್ವಶಬ್ದಾವಾಚ್ಯಸ್ಯ ಲಕ್ಷಣಾಯುಕ್ತೇಃ ।**

ಏಕ — ಪ್ರಧಾನನು ತನ್ನಲ್ಲಿ ಸ್ವರೂಪ ಭೇಧವಿಲ್ಲದವನು ದೇವ:–ಪ್ರಕಾಶ ಪುರುಷನು ಸರ್ವಭೂತೇಷು ಗೂಢ-ಸರ್ವ ಜೀವ, ಜಡ ಪ್ರದಾರ್ಥಗಳಲ್ಲಿ ಗುಪ್ತ ರೀತಿಯಿಂದ ಇರುವವನು (ಅದೃಶ್ಯನು) ಸರ್ವವ್ಯಾಪೀ-ದೇಶಕಾಲ ಗುಣಗಳಿಂದ ವ್ಯಾಪ್ತನು ಸರ್ವಭೂತಾಂತರಾತ್ಮಾ-ಸರ್ವಪ್ರಾಣಿಗಳಲ್ಲಿ ಒಳಗೆ ಇದ್ದು ನಿಯಮಿಸುತ್ತಾ ಕಾಪಾಡುವವನು (ಆದಾನಾದಿಕರ್ತಾ) ಕರ್ಮಾಧ್ಯಕ್ಷ –ಸರ್ವಕರ್ಮಗಳಿಗೂ ಅಧಿಪತಿ ಕರ್ಮಗಳ ಮೇಲೆ ಸರ್ವದಾ ದೃಷ್ಟಿಯುಳ್ಳವನು ಸರ್ವಭೂತಾಧಿವಾಸೀ ಸರ್ವ ಪ್ರಾಣಿ ಗಳಿಗೂ ಆಶ್ರಯನು ಸಾಕ್ಷೀ–ಸರ್ವವನ್ನು ಅಂದರೆ ಜೀವ ಚೈತನ್ಯವನ್ನು ನೋಡುವವನು

ಚೇತಾ -ಜ್ಞಾನರೂಪನು, ಕೇವಲ- ಜಡವಸ್ತುಮಿಶ್ರವಲ್ಲದವಸ್ತು, ಸಮಾಧಿಕವಿಲ್ಲದ ವಸ್ತು, ನಿರ್ಗುಣ.-ಸತ್ವಾದಿ ಪ್ರಕೃತಿ ಗುಣಶೂನ್ಯನು.

ಅವಾಚ್ಯಪದಾರ್ಥವು ಯಾವ ಶ್ರುತಿ, ಸ್ಮೃತಿ ಇತಿಹಾಸಾದಿ ಪದಗಳಿಂದಲೂ ಹೇಳಲ್ಪಡುವುದಿಲ್ಲ, ಅವಾಚ್ಯ ವಿಷಯದಲ್ಲಿ ಬ್ರಹ್ಮನಿಗೆ ಲಕ್ಷ್ಯತ್ವವು ಕಲ್ಪನಮಾತ್ರ. ಸರ್ವಶಬ್ದಗಳಿಂದ ಅವಾಚ್ಯ ವಸ್ತುವಿಗೆ ಯಾವ ಲಕ್ಷಣವೂ ಕೂಡುವದಿಲ್ಲ

॥ ಇತಿ ಈಕ್ಷತ್ಯಧಿಕರಣವು ॥

— ಆನಂದ ಮಯಾಧಿಕರಣವು —

ಈ ಹಿಂದಿನ ಐದು ಅಧಿಕರಣಗಳು ಬ್ರಹ್ಮಸ್ವರೂಪವನ್ನು ಸಾಮಾನ್ಯವಾಗಿ ಉಪನ್ಯಾಸಮಾಡಿ ಮುಂದಿನ ಗ್ರಂಥದಿಂದ ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ಜ್ಞಾಪಕಗಳಾದ ಸರ್ವಶಾಸ್ತ್ರ ವಚನಗಳನ್ನು ಶ್ರೀ ಹರಿಯ ಪರವಾಗಿ ಸಮನ್ವಯಿಸಿ ತೋರಿಸಲು ಮುಂದಿನ ಗ್ರಂಥವು ಹೊರಟಿರುತ್ತದೆ ಈ ಮೇಲಿನ ಪಂಚ ಅಧಿಕರಣಗಳೂ ಅಧ್ಯಾಯಾಂತರ್ಯ ಭಾವವನ್ನು ಹೊಂದುವುದಿಲ್ಲ. ಅಧ್ಯಾಯ ಪಾದ ೀರ ಮಾತ್ರ

**1 ತನೋವ ಸಮನ್ವಯಂ ಪ್ರಕಟಯತ್ಯಾನಂದಮಯೋಭ್ಯಾಸಾದಿ ತ್ಯಾದಿನಾ ಸಮಸ್ತೇನಾಧ್ಯಾಯೇನ ।**

ಈ ಮುಂದಿನ ಒಂದನೇ ಅಧ್ಯಾಯದ ಆನಂದಮಯೋ ಭ್ಯಾಸಾತ್ ಎಂಬ ಸೂತ್ರಾರಂಭದಿಂದ ಪೂರ್ತಿ ಅಧ್ಯಾಯವು ಸಮಸ್ತ ಶಾಸ್ತ್ರ ವಚನಗಳನ್ನು ಹರಿಯಲ್ಲಿ ಸಮನ್ವಯ (ಪ್ರಾಯಶಃ) ಮಾಡುವುದು.

**2 ಪ್ರಾಯೋಽನ್ಯತ್ರ ಪ್ರಸಿದ್ಧಾನಾಂ ಶಬ್ದಾನಾಂ ಪರಮಾತ್ಮನಿ ಸಮನ್ವಯಃ ಪ್ರದೃಶ್ಯತೇಽಸ್ಮಿನ್ಪಾದೇ । ನಾನ್ಯಥಾ ತದದೃಷ್ಟೇಃ ।**

ಈ ಮುಂದಿನ ಒಂದನೇ ಅಧ್ಯಾಯದ ಪ್ರಥಮ ಪಾದದಲ್ಲಿ ಪ್ರಾಯಿಕವಾಗಿ ಶ್ರೀ ವಿಷ್ಣುವಿನಿಂದ ಬೇರೆ ವಸ್ತುವಿನಲ್ಲಿಯೇ ಶ್ರುತಿ, ಲೋಕದೃಷ್ಟಿ ಮತ್ತು ತೋರಿಕೆಗಳಿಂದ ರೂಢಿಯಲ್ಲಿರುವ ನಾಮಾತ್ಮಕ ಶಬ್ದಗಳನ್ನು ಶ್ರೀ ವಿಷ್ಣುವಿನಲ್ಲಿಯೇ

ಅಭಿಪ್ರಾಯವುಳ್ಳವುಗಳಾಗಿ ತೋರಿಸಲ್ಪಡುವುದು ಮಾಯಿಶಾಸ್ತ್ರದಲ್ಲಿ ಹೇಳಲ್ಪಟ್ಟ ವಿಷಯ ವಿಶೇಷಗಳು ಸರಿಹೊಂದುವುದಿಲ್ಲವು.

**3 ಬ್ರಹ್ಮ ಜಿಜ್ಞಾಸಾ ಕರ್ತವ್ಯೇತ್ಯುಕ್ತಂ । ತಚ್ಚ ಬ್ರಹ್ಮ ಪುಚ್ಛಂ ಪ್ರತಿಷ್ಠೇತ್ಯಾ (ತೈ 2-2-5) ನಂದಮಯಾವಯವರೂಪಂ ಪ್ರತೀಯತೇ । ನಹಿ ಅವಯವಿನಂವಿನಾಽವಯವಮಾತ್ರಸ್ಯಜ್ಞೇಯ ತೇತ್ಯತ ಆಹ ॥**

ಜಿಜ್ಞಾಸ್ಯನೆಂದು ಹೇಳಲ್ಪಡುವ ಬ್ರಹ್ಮವು ಆನಂದಮಯನೆಂದು ಕರೆಯಲ್ಪಡುವ ವಸ್ತುವಿನ ಅವಯವವಾದ ಪುಚ್ಛಕ್ಕೆ ಹೇಳಿರುವುದರಿಂದ ಅವಯವಯನ್ನು ಬಿಟ್ಟು ಅವಯವಕ್ಕೆ ಹೇಳಲ್ಪಟ್ಟದೆ ಆದ್ದರಿಂದ ಶ್ರೀ ವಿಷ್ಣುವು ಅಲ್ಲವೆಂದರೆ ಆನಂದಮಯ ನಿಗೆ ವಿಷ್ಣುತ್ವವು ಸಮರ್ಥಿಸಲ್ಪಡುತ್ತದೆ. ಚೇತನನಾದ ಅವಯವ ಇಲ್ಲದೆ ಅವನ ಅವಯವ ಮಾತ್ರ ಜ್ಞೇಯವಲ್ಲವಷ್ಟೆ ಈ ಶ್ರುತಿಯ ಪೂರ್ಣವಾರವು ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾತ್। ಅನ್ಯೋಽಂತರ ಆತ್ಮಾನಂದಮಯ. । ತೇನೈಷಪೂರ್ಣ: । ಸವಾಯೇಷ ಪುರುಷ ವಿಧಏವ । ತಸ್ಯಪುರುಷವಿಧತಾಂ । ಅನ್ವಯಂ ಪುರುಷವಿಧ. । ತಸ್ಯಪ್ರಿಯಮೇವ ಶಿರ । ಮೋದೋದಕ್ಷಿಣ: ಪಕ್ಷ: । ಪ್ರಮೋದ ಉತ್ತರ ಪಕ್ಷ! । ಅನಂದ ಆತ್ಮಾ । ಬ್ರಹ್ಮಪುಚ್ಛಂಪ್ರತಿಷ್ಠಾ ॥ ಹೀಗೆ ಸಮಗ್ರ ಶ್ರುತಿಯು ಅರ್ಥವು ತಸ್ಮಾತ್–ಆತ್ಮ ಪದದಿಂದ ಹೇಳಲ್ಪಟ್ಟ ಏತಸ್ಮಾತ್-ಜೀವಾಂತರ್ಯಾಮಿ ವಿಜ್ಞಾನ ಪೂರ್ಣ ವಿಷ್ಣುವಿನಿಂದ ಬೇರೆಯಲ್ಲದಿದ್ದರೂ ಅನ್ಯನೆಂದು ಹೇಳುವ ಆನಂದಮಯ ಶಬ್ದವಾಚ್ಯ ಆತ್ಮಾ ನಾರಾಯಣನು ಅಂತರ ವಿಜ್ಞಾನಮಯನ ಅಂತರ್ಯಾಮಿ ತೇನ ಆ ಆನಂದಮಯನಿಂದ ಏಷ ವಿಜ್ಞಾನಮಯ ವಾಸುದೇವನು. ಪೂರ್ಣನು ವೈ–ಪ್ರಸಿದ್ಧವು ಸ ಏಷ-ಈ ಆನಂದಮಯನು ಪುರುಷವಿಧಏವ-ಪುರುಷಾಕಾರನು, ತಸ್ಯ ಆನಂದಮಯನ ಪುರುಷಾಕಾರನನ್ನು ಅನುಸರಿಸಿ ಅಯಂ ಈ ವಿಜ್ಞಾನಮಯನು ಪುರುಷವಿಧ : ಅವನಿಂದ ಪ್ರಾದುರ್ಭೂತ ಪುರುಷಾಕಾರನು. ತೈತ್ತಿರೀಯ ಶ್ರುತಿಯಲ್ಲಿ ಜಿಜ್ಞಾಸ್ಯ ವಸ್ತುವಾದ ಬ್ರಹ್ಮವು ಆನಂದಮಯನೆಂಬ ಒಬ್ಬ ಪುರುಷನ ಅವಯವವಾಗಿ ಹೇಳಲಾಗಿದೆ ಹಾಗೆಯೇ ವಿಜ್ಞಾನಮಯನು. ಅನ್ಯೋಽಆತ್ಮಾ ಆನಂದಮಯ: ಎಂಬ ವಾಕ್ಯದಿಂದ ಸ್ತುತಿಸಿ ಆತನ ಅವಯವಗಳು, ಶಿರಸ್ಸು, ಪ್ರಿಯ. ಬಲಪಕ್ಷ-ಮೋದ, ಎಡಪಕ್ಷ-ಪ್ರಮೋದ, ಆನಂದ ಆತ್ಮಾ-ಸಂದೋಹ ಬ್ರಹ್ಮಪುಚ್ಛಂ ಪ್ರತಿಷ್ಠಾ-ಆನಂದಮ ಯಾಖ್ಯ ಶ್ರೀ ವಿಷ್ಣುವಿನ ಪ್ರತಿಷ್ಠಿತ ಅವಯವ-ಪುಚ್ಛ ಪರಬ್ರಹ್ಮನೇ ಎಂದು ಹೇಳಿದೆ.




ಸಂದೋಹ (ವಾಸುದೇವ) ಆನಂದ ಆತ್ಮಸ್ವರೂಪ

ಪುಚ್ಛ ಸಂಕರ್ಷಣ ಆನಂದಮಯ.
ವಿಷ್ವಾಖ್ಯಪಾದಾಖ್ಯ ಅವಯವ

ಶ್ರೀಮನ್ನಾರಾಯಣನು ಸ್ವರೂಪದಿಂದಲೇ (ಬ್ರಹ್ಮ) ತಾನು ವಾಸುದೇವಾದಿರೂಪ ಗಳಿಂದ ಆನಂದಮಯ ಶಬ್ದವಾಚ್ಯ ಶ್ರೀವಿಷ್ಣುವಿನ ಅವಯವಗಳಲ್ಲಿ ಪುರುಷಾಕಾರ ದಲ್ಲಿಯೇ ಯಾವ ವ್ಯತ್ಯಾಸವೂ ಇಲ್ಲದೆ ಪ್ರತಿಷ್ಠಿತನಾಗಿರುವನು

ಈ ಪುರುಷಾಕಾರ ವಿಷ್ಣುವಿನ ಪಾದಾಖ್ಯ ಪುಚ್ಛದಲ್ಲಿ ಪ್ರತಿಷ್ಠಿತವಾದದ್ದು ಬ್ರಹ್ಮ ವಸ್ತುವು. ಅದೇ ಆನಂದಮಯ ಜೀವ ಶರೀರದ ಪಾದಾವಯವದಲ್ಲಿ ಪ್ರತಿಷ್ಠಿತವಾಯು ವಿನಲ್ಲಿರುವನು. ಇದರಿಂದ ಕೋಶಾವಯವಕ್ಕೆ ಬ್ರಹ್ಮಶಬ್ದವು ಅಲ್ಲಿ ಅಧಿಷ್ಠಾನ ಹೊಂದಿರುವ ಮುಖ್ಯವಾಯುವಿನ ಅಧಿಷ್ಠಾನದಿಂದ ಮಾತ್ರ ಆದ್ದರಿಂದ ಆನಂದಮಯ ವಿಷ್ಣುವಿನ ಅವಯವಗಳಾದ ಪ್ರಿಯಾದಿಗಳು ಶ್ರೀ ವಿಷ್ಣುವಿನಿಂದ ಭಿನ್ನರಲ್ಲ ಹೀಗೆ ಜೀವರ ಸ್ವರೂಪ ಆನಂದವು. ಹೃದಯಮಧ್ಯಸ್ಥಿತವಾದ್ದರಿಂದ ಕೋಶ ಮಧ್ಯ ದೇಹವು ಸ್ವರೂಪದೇಹದ ಜಡ ಅವಯವ ಮಾತ್ರ. ಇಂದ್ರಿಯಗಳಿಂದ ಗೋಚರಿಸುವ ಅನ್ನ ಮಯ ಶರೀರ ಅದರ ಒಳಗೆ ಪ್ರಾಣಮಯದೇಹ ಅದರೊಳಗೆ ವಿಜ್ಞಾನಮಯ ದೇಹ ಅದರೊಳಗೆ ಆನಂದಮಯ ದೇಹ ಈ ಐದು ದೇಹಕೋಶಗಳಲ್ಲಿ ಆಯಾ ಶಬ್ದವಾಚ್ಯ ಪುರುಷಾಕಾರಗಳು ಅನಿರುದ್ಧ ಪ್ರದ್ಯುಮ್ನ ಸಂಕರ್ಷಣ, ವಾಸುದೇವ, ನಾರಾಯಣ ರೂಪಗಳು ದೇಹ ದೇಹೀ ಭಾವಗಳಿಂದ ಇರುತ್ತವೆ.

## ಸೂ॥ ಓಂ ॥ ಆನಂದಮಯೋಽಭ್ಯಾಸಾತ್ ॥ ಓಂ ॥ 12 ॥

ಆನಂದಮಯಾದಿ ಶಬ್ದದಿಂದ ಹೇಳಲ್ಪಡುವ ವಸ್ತುವು ಶ್ರೀ ವಿಷ್ಣುವೇ. ಇದು ಪ್ರಕೃತ್ಯಾದಿ ಅನ್ಯದೇವತೆಗಳಲ್ಲಿ ಏಕೆಂದರೆ ಪ್ರತಿಪ್ರಕರಣದಲ್ಲಿಯೂ ಆನಂದಮಯಾದಿ ಗಳಲ್ಲಿ ಬ್ರಹ್ಮಶಬ್ದಶ್ರವಣವು ಅಭ್ಯಾಸದಿಂದ ಇದೆ ಅದೇ ಬ್ರಹ್ಮ ಶಬ್ದವಾಚ್ಯವು.

4 ಆನಂದಮಯೋ ಬ್ರಹ್ಮಾದಿಃ ಪ್ರಕೃತಿರ್ವಿಷ್ಣುರ್ವಾ ।

ಈ ಆನಂದಮಯಶಬ್ಧವಾಚ್ಯ ವಸ್ತುವು ಬ್ರಹ್ಮನೇ ಆದಿಯಾಗಿ ಜೀವವೂ ದೇವತೆಗಳೂ ಪ್ರಕೃತಿಯೂ ಮತ್ತು ವಿಷ್ಣುವೂ ಆಗಬಹುದಲ್ಲವೇ ಎಂಬ ಸಂಶಯವು.

5 ಬ್ರಹ್ಮಶಬ್ದಾದ್ಧಿರಣ್ಯಗರ್ಭಸ್ಯ ಪ್ರಾಪ್ತಿಃ ಶತಾನಂದನಾಮ್ನಾಚ ।

ಆನಂದಮಯ ಸಮಾನಾರ್ಥವುಳ್ಳ ಹಿರಣ್ಯಗರ್ಭನಾಮಕನು ಚತುರ್ಮುಖ ಬ್ರಹ್ಮನು ಶತಾನಂದ ಎಂಬ ನಾಮ ಪ್ರಸಿದ್ಧಿಯಿಂದ ಚತುರ್ಮುಖ ಬ್ರಹ್ಮನೇ ಆನಂದಮಯ ಶಬ್ದವಾಚ್ಯನು.

6 ಅಷ್ಟಮೂರ್ತಿತ್ವಾತ್ಸೂರ್ಯೇ ಪ್ರೋಕ್ತತ್ವಾಚ್ಚ ರುದ್ರಸ್ಯ ।

' ಯಶ್ಚಾಸಾವಾದಿತ್ಯೇ " ಈ ಶ್ರುತಿಯಲ್ಲಿ ಆನಂದಮಯನಿಗೆ ಸೂರ್ಯಾಂತಸ್ಥತ್ವವು ಹೇಳಿದೆಯಾಗಿ ರುದ್ರನಿಗೆ ಸೂರ್ಯಾದ್ಯಷ್ಟ ಶರೀರತ್ವವು ಹೇಳಿದೆಯಾಗಿ ಈ ಆನಂದಮಯನು ರುದ್ರನು.

7. ಏವಮನ್ಯೇಷಾಮಪಿ ।

ಅನ್ಯದೇವತೆಗಳಾದ ಇಂದ್ರ ಬೃಹಸ್ಪತ್ಯಾದಿ ದೇವತೆಗಳು ಸೂರ್ಯನಿಗಿಂತ ಉತ್ಕೃಷ್ಟ ಸ್ವರೂಪದಿಂದ ಸೂರ್ಯನಲ್ಲಿದ್ದ ಅವರೂ ಆನಂದಮಯರೇ

8 ಮಮ ಯೋನಿರ್ಮಹದ್ಬ್ರಹ್ಮೇತಿಬ್ರಹ್ಮಶಬ್ದಾದ್ಬಹುಭಾವಾಚ್ಚ ಪ್ರಕೃತೇಃ ।

ಆನಂದಮಯ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮಶಬ್ದವು ಗೀತಾವಾಕ್ಯದಿಂದಲೂ ಚಿತ್ಪ್ರಕೃತಿಯ ವಾಚ್ಯವು ಆನಂದಮಯನು ಆ ಬ್ರಹ್ಮ ಭಾವವನ್ನು ಪೋಷಿಸಿ ತದಭಿಮಾನಿ ಚಿತ್ಪ್ರಕೃತಿಗೆ ತನ್ನ ಅಭಿಮನ್ಯಮಾನವಾದ ಜಡಪ್ರಕೃತಿಯ ವಾಚ್ಯವು ಬ್ರಹ್ಮಶಬ್ದ ಆನಂದಮಯವು

**9. ಬೃಹಜಾತಿಜೀವಕನುಲಾಸನೆ ಶಬ್ದರಾಶಿಷ್ಟಿತಿ ಬ್ರಹ್ಮಶಬ್ದಾದೇವ**
**ಸರ್ವಜೀವಾನಾಂ ಅನ್ನಮಯತ್ವಾದೇಷ್ಟ I**

ಬೃಹ್ ಧಾತುವು ಜಾತ್ಯಾದಿಗಳನ್ನು ಹೇಳುವುದರಿಂದ ಬ್ರಹ್ಮಶಬ್ದದಿಂದ ಸಾಧಾರಣ ಜೀವರಿಗೂ ಜಡಶರೀರಕ್ಕೆ ಜೀವನ ಅಭಿಮಾನಿತ್ವದಿಂದಲೂ ಬ್ರಹ್ಮ ಶಬ್ದ ವಾಚ್ಯತ್ವವು ಆನಂದಮಯ ವಾಚ್ಯತ್ವವು

**10 ತಥಾಪಿ ನ ತ ಆನಂದಮಯ ಶಬ್ದೇನೋಚ್ಯಂತೇ I**
**ಕಿಂತು ವಿಷ್ಣುರೇವ I ತದೇವ ಬ್ರಹ್ಮ ಪರಮಂ ಕವೀನಾಂ II**
(ಮಹಾನಾ-1-6)

**ಏತಮೇವ ಬ್ರಹ್ಮೇತ್ಯಾಚಕ್ಷತೇ I** (ಐ.ಅ-3-2-3-12)

ಹೀಗೆ ಸಂಶಯಕೋಟಿಗಳುತ್ಪನ್ನವಾದರೂ ಅವರುಗಳು ಯಾರೂ ಬ್ರಹ್ಮಶಬ್ದ ಮುಖ್ಯವಾಚ್ಯರಲ್ಲ ಶ್ರೀವಿಷ್ಣುವೇ ಮುಖ್ಯವಾಚ್ಯನು ಪ್ರಕೃತ ಈ ಮೇಲಿನ ಎರಡು ವಾಕ್ಯಗಳು ಶ್ರೀ ವಿಷ್ಣುವೇ ಬ್ರಹ್ಮನೆಂದು ಹೇಳುವವು ಆನಂದಮಯನ ವಿಷಯದಲ್ಲಿ ಉದಾಹೃತವಾದ "ಅನನ್ಯೇವ" ಎಂಬ ಶ್ರುತಿಯಲ್ಲಿ" ಅಭ್ಯಾಸಾತ್ ಅನೇಕ ಸಲ ಬ್ರಹ್ಮ ಶಬ್ದವನ್ನು ಹೇಳಿರುವುದರಿಂದ ವಿಷ್ಣುವಿನಲ್ಲಿಯೇ ಬ್ರಹ್ಮಶಬ್ದದ ಪರ್ಯವಸಾನವು, ಮುಖ್ಯವಾಚ್ಯತ್ವವು.

**11. ಬ್ರಹ್ಮಶಬ್ದಃ ಪರೇವಿಷ್ಣೌ ನಾನ್ಯತ್ರಕ್ವಚಿದಿಷ್ಯತೇ I**
**ಅಸಂಪೂರ್ಣಾಃ ಪರೇಯಸ್ಮಾದುಪಚಾರೇಣ ವಾ ಭವೇತ್ I**
**ಬ್ರಹ್ಮೇತಿ ಪರಮಾತ್ಮೇತಿ ಭಗನಾನಿತಿ ಶಬ್ದ್ಯತೇ I**
**ವಾಸುದೇವಾತ್ಮಕಂ ಬ್ರಹ್ಮ ಮೂಲ ಮಂತ್ರೇಣ ವಾಯತಿಃ I**
**ಇತ್ಯಾದಿಷು ತಸ್ಮಿನ್ನೇವ ಪ್ರಸಿದ್ಧಬ್ರಹ್ಮಶಬ್ದಾಭ್ಯಾಸಾತ್ II**

ಪೂರ್ಣನಾದ್ದರಿಂದ ಶ್ರೀ ವಿಷ್ಣುವಿನಲ್ಲಿಯೇ ಬ್ರಹ್ಮಶಬ್ದವು ಮುಖ್ಯವು. ಇತರ ದೇವತೆಗಳು ಪೂರ್ಣರಲ್ಲ. ಅವರಲ್ಲಿ ಉಪಚಾರಕ್ಕಾಗಿ ಬ್ರಹ್ಮಶಬ್ದ ಪ್ರಯೋಗವು. ಬ್ರಹ್ಮಶಬ್ದವು ಮುಖ್ಯವಾಗಿ ಪರಮಾತ್ಮ ಶ್ರೇಷ್ಠ, ಆತ್ಮಾ ಸ್ವಾಮಿ ಮತ್ತು ಭಗವಾನ್ ಷಡ್ಗುಣೈಶ್ವರ್ಯ ಸಂಪನ್ನ ವಸ್ತು ಎಂದು ವೇದಗಳಲ್ಲಿ ಹೇಳಿದೆ.

ವ್ಯಾಸ ಸ್ಮೃತಿನಾಕ್ಯ – ಯತಿಯಾದವನು – ವಾಸುದೇವಾಖ್ಯ ಬ್ರಹ್ಮವನ್ನು ಅಂದರೆ ಶ್ರೀ ಕೃಷ್ಣಾಖ್ಯ ಓಂ ಶಬ್ದವಾಚ್ಯ ಬ್ರಹ್ಮವನ್ನು ಮನಸ್ಸಿನಿಂದಲೂ ಪುಷ್ಪವೊದಲಾದ ಪೂಜಾವಸ್ತುಗಳಿಂದಲೂ ಪೂಜಿಸಬೇಕು ಎಂಬಲ್ಲಿಯೂ ಬ್ರಹ್ಮ ಶಬ್ದವು ಇದೆ

ಹೀಗೆ ಶ್ರೀ ವಿಷ್ಣುವೇ ಬ್ರಹ್ಮಶಬ್ದ ಮುಖ್ಯವಾಚ್ಯನು. ಆನಂದಮಯನೂ ಕೂಡ

## ॥ ಓಂ ॥ ವಿಕಾರಶಬ್ದಾನ್ನೇತಿಚೇನ್ನ ಪ್ರಾಚುರ್ಯಾತ್॥ ಓಂ ॥

ಮಯಟ್ ಶಬ್ದಕ್ಕೆ ವಿಕಾರಾರ್ಥವಿರುವುದರಿಂದ ಆನಂದಮಯನು ನಿರ್ವಿಕಾರವಾದ ಶ್ರೀ ವಿಷ್ಣುವಾಗಲಾರನು ಎಂದರೆ, ಹಾಗಲ್ಲ. ಶ್ರೀ ವಿಷ್ಣುವೇ ಆನಂದಮಯನು ಮಯಟ್ ಶಬ್ದಕ್ಕೆ ಪ್ರಾಚುರ್ಯಾರ್ಥದ ಪೂರ್ಣತ್ವವನ್ನೂ ಹೇಳಿರುವುದರಿಂದ, ಸಂದೇಹವಿಲ್ಲ

**12 ವಿಕಾರಾತ್ಮಕತ್ವಾತ್ತದಭಿಮಾನಿತ್ವಾಚ್ಚ ಯುಜ್ಯತೇ**
**ಪ್ರಕೃತ್ಯಾದೀನಾಂ ಮಯಟ್ ಶಬ್ದಃ । ನ ತು ಪರಮಾತ್ಮನ ಇತಿ**
**ಮಾಭೂತ್ । ಪ್ರಚುರಾನಂದತ್ವಾದ್ಧ್ಯಾನಂದಮಯಃ ।**
**ನ ತು ತದ್ವಿಕಾರತ್ವಾತ್ ।**

ವಿಕಾರತ್ವ ಗುಣದಿಂದ ಹೇಳಲ್ಪಟ್ಟಿರುವ ಮಯಟ್‌ಶಬ್ದವು ಜಡಪ್ರಕೃತಿ ಮತ್ತು ತದಭಿಮಾನಿ ಶ್ರೀ ತತ್ವವನ್ನು ಹೇಳವು ಸಾಧ್ಯವು ಆವರೆ ಶ್ರೀ ಪರಮಾತ್ಮನು ವಿಕಾರವಿಲ್ಲದವಸ್ತುವಾದ್ದರಿಂದ ಆನಂದಮಯನು ಶ್ರೀ ವಿಷ್ಣುವಾಗಲಾರನು ಎಂದರೆ ಅದು ಸರಿಯಲ್ಲ ಮಯಟ್‌ಶಬ್ದವು ಆನಂದ ಪ್ರ ಚುರತ್ವ, ಆನಂದಗುಣಕ್ಕೆ ಆಶ್ರಯತ್ವ ಮತ್ತು ಪೂರ್ಣಾನಂದವೆಂಬ ಅರ್ಥದಲ್ಲಿಯೂ ಉಪಯೋಗದಲ್ಲಿದೆ. ಆನಂದಃ ಪ್ರಚುರಃ ಯಸ್ಮಿನ್ ಎಂದು ವಿಗ್ರಹ. ಬ್ರಾಹ್ಮಣ ಪ್ರಚುರ ಗ್ರಾಮ ಎಂದರೆ ಬ್ರಾಹ್ಮಣರೇ ಮುಖ್ಯವಾಗಿ ಉಳ್ಳಗ್ರಾಮವು ಅಲ್ಪ ಅಬ್ರಾಹ್ಮಣರ ಇರುವಿಕೆ ತೋರಿಬಂದರೂ ಪ್ರಕಾಶ ಪ್ರಚುರೋರವಿಃ ಎಂಬ ವಾಕ್ಯದಲ್ಲಿ ಸ್ವಲ್ಪ ಕತ್ತಲೆಗೂ ಅವಕಾಶವಿಲ್ಲದ್ದೆಂದು ತಿಳಿಯುವಂತೆ ಹಾಗೆಯೇ ಸ್ವಲ್ಪ ಆನಂದವನಲ್ಲ ಊಹಿಸಲಸಾಧ್ಯವಾದ ಪೂರ್ಣಾನಂದವು ಇಲ್ಲಿ ತಿಳಿಯಬೇಕು.

## 13. ಅನ್ನಾದೀನಾಂಚ ಪ್ರಾಚುರ್ಯೇನೋವ । ಅದ್ಯತೇಽತ್ತಿ (ತ್ತೈ-2-2) ಚೇತಿವ್ಯಾಖ್ಯಾನಾತ್ತತ್ಪ್ರಾಚುರ್ಯಂ ಚ ಯುಜ್ಯತೇ ।

ಆನಂದಮುಖ್ಯತ್ವವು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನ ಮಯ ಆನಂದಮಯವೆಂದು ಹೇಳಿದ ಈ ಪಂಚಕೋಶದಲ್ಲಿಯೂ ಪ್ರಚುರವೇ ಮಯಟಶಬ್ದಾರ್ಥವು ಅನ್ನಪ್ರಾಚುರ್ಯವು ಅದ್ಯತೆ ಉಪಜೀವ್ಯತೆ ಭೂತಾನ್ಯತ್ತಿ ಎಂಬ ಶ್ರುತ್ಯರ್ಥದಿಂದ ಭೂತಗಣಗಳಿಗೆ ಜೀವನಾಧಾರ ಮತ್ತು ಅಂತ್ಯದಲ್ಲಿ ಅವುಗಳ ಸಂಹಾರ ರೂಪ ಅತ್ತೃತ್ತ್ವವು ಹೇಳಲ್ಪಡುತ್ತದೆ ಇದರಂತೆಯೇ ಪ್ರಾಣ, ಮನೋ ವಿಜ್ಞಾನಗಳ ಅನುಸಂಧಾನವು ಯುಕ್ತವಾಗಿ ಆನಂದಮಯ ಶಬ್ದಕ್ಕೆ ಆನಂದ ಪ್ರಚುರತ್ವವೆ ಮುಖ್ಯಾರ್ಥವಾಗಿ ಶ್ರೀ ವಿಷ್ಣುವಿಗೆ ಹೇಳಲ್ಪಡುತ್ತಪ

## 14 ಉಪಜೀವ್ಯತ್ವಮೇವಾದ್ಯತ್ವಂ । ಸ ವಾ ಏಷ (ತ್ತೈ-2-2) ಇತ್ಯನ್ಯಪ್ರಾರಂಭಾತ್ ।

ಈ ಶ್ರುತಿಯಲ್ಲಿ ಆಕಾಶಾದಿ ಭೂತಸೃಷ್ಟಿಯನ್ನು ಪರಮಾತ್ಮನಿಂದಲೇ ಎಂದು ಹೇಳಿ ಅನಂತರ ಸ –ಆ ಪುರುಷನ ಅನ್ನಕಾರ್ಯವಾದ ಅನ್ನಮಯಾದಿ ಪಂಚರೂಪ ದರ್ಶನ ಕ್ಕೋಸ್ಕರ ಮುಂದಿನ ವಾಕ್ಯವನ್ನು ಹೇಳಿದೆ ಯಾವ ಪತ್ಯಾದಿ ಲಕ್ಷಣಯುಕ್ತ “ಆತ್ಮ” ವಾಚ್ಯಪರಮಾತ್ಮನಿಂದ ಆಕಾಶಾದಿ ಪಂಚಭೂತಗಳು ಹುಟ್ಟಿದವ್ರೋ ಆಪುರುಷನೇ ಜೀವ ಶರೀರದಲ್ಲಿ ಅಂತರ್ಯಾಮಿಯಾಗಿದ್ದು ಪೂರ್ಣಷಡ್ಗುಣ ಭಗವಾನ್ ಶಬ್ದವಾಚ್ಯನಾದ ಪುರುಷನಾಗಿದ್ದಾನೆ ಅನ್ನರಸಮಯಃ ಪೂರ್ಣ ಉತ್ತಮ ಅನ್ನ ಶರೀರದ ಸಾರ ಭೂತನು ಶ್ರೀ ವಿಷ್ಣುವು

## 15. ಯೋಽನ್ನಂ ಬ್ರಹ್ಮೋಪಾಸತ (ತೈ-2-2) ಇತ್ಯಾದಿ ಬ್ರಹ್ಮಶಬ್ದಾ ದ್ಬಹುರೂಪತ್ವಾಚ್ಚ ನ ವಿಕಾರಿತ್ವಮವಿರೋಧಶ್ಚ ।

ಪಂಚರೂಪಗಳಿಗೂ ಪ್ರಚುರತ್ವ ಯೋಜನೆಯಿಂದ ಒಂದೇ ವಸ್ತುವು ಹೇಳಲ್ಪ ಡಲು “ಏಕಮೇವ” ಎಂಬ ಶ್ರುತಿಯ ಏಕತ್ವಕ್ಕೆ ವಿರೋಧವಿಲ್ಲ ಮತ್ತು ಯೇಪ್ರಾಣಂ, ಬ್ರಹ್ಮೋಪಾಸತೇ, “ಆನಂದಂ ಬ್ರಹ್ಮಣೋವಿದ್ವಾನ್” ವಿಜ್ಞಾನಂ ಬ್ರಹ್ಮಚೇದ್ವೇದ ಅಸ್ತಿಬ್ರಹ್ಮೇತಿ ಚೇದ್ವೇದ ಪ್ರಕರಣಗಳಿಂದ ಅನ್ನಮಯಾದಿಪದಗಳ ಅರ್ಥವಾಗಿ ಬ್ರಹ್ಮ ಶಬ್ದವು ಉದಾಹೃತವಾಗಿರುವುದರಿಂದ ಬ್ರಹ್ಮನಿಗೆ ಬಹುರೂಪವನ್ನು ಹೇಳಿರು

ವುದರಿಂದಲೂ ಯಾವ ಸಂಶಯಕ್ಕೂ ಆಸ್ಪದವಿಲ್ಲ. ಈ ಐದೂ ಪರಮಾತ್ಮ ಪಂಚ ರೂಪಗಳೇ

16 ನ ಚ ಪೃಥಕ್ಕಲ್ಪನಾ ಯುಕ್ತಾ । ಸ್ವರೂಪೇ ಚ ಯುಜ್ಯತೇ
ಪ್ರಚುರಪ್ರಕಾಶೋ ರವಿರಿತಿವತ್ ॥

ಮಾಯಾವಾದಿಗಳು, ಅನ್ನಪ್ರಾಣ, ಮನ, ವಿಜ್ಞಾನ ಸಂಬಂಧವಾಕ್ಯಗಳಿಂದ ಮಯಟ ಶಬ್ದಕ್ಕೆ ಕೋಶಪರವೆಂದು ಹೇಳಿ ಆನಂದಮಯನು ಮಾತ್ರ ಬ್ರಹ್ಮಪರನೆಂದು ಹೇಳುವರು ಈವಾಕ್ಯವನ್ನು ಸೂತ್ರಕಾರರು ಪೂರ್ವಪಕ್ಷವಾಗಿ ಪರಿಗಣಿಸಿ ದೂಷಿಸಿರು ವರು ಆದ್ದರಿಂದ ಭಾಷ್ಯಾಕಾರರು ಎಲ್ಲೆಡೆಗಳಲ್ಲಿಯೂ ಬ್ರಹ್ಮವು ವಿಷ್ಣುಪರವೆಂದೂ ಆನಂದಸ್ವರೂಪವಾದರೂ ವಿಶೇಷ ಪ್ರಕಾಶನಿಮಿತ್ತದಿಂದ ಶ್ರೀಹರಿಯಲ್ಲಿಯುಕ್ತವೆಂದೂ ಹೇಳಿದ್ದಾರೆ. ಸೂರ್ಯನಲ್ಲಿರುವ ಪ್ರಕಾಶವು ಆತನ ಸ್ವರೂಪವೆಂಬ ಮೇಲೆ ಅತಿಶಯ ಪ್ರಕಾಶವುಳ್ಳ ಪರಮಾತ್ಮನಲ್ಲಿ ಸ್ವರೂಪ ಪ್ರಕಾಶತ್ವವು ಯುಕ್ತವೇ

## ಸೂ॥ ಓಂ ॥ ತದ್ಧೇತುವ್ಯಪದೇಶಾಚ್ಚ ॥ ಓಂ ॥ 14 ॥

ಆನಂದಮಯನಿಗೆ "ಕೋಹ್ಯೇವಾನ್ಯಾತ್" ಎಂಬ ಶ್ರುತಿಯಲ್ಲಿ ಲೋಕ ಚೇಷ್ಟ ಕತ್ವವನ್ನು ಹೇಳಿರುವ ಕಾರಣದಿಂದ ಆನಂದಮಯನು ಶ್ರೀ ವಿಷ್ಣುವೇ.

17. ಕೋಹ್ಯೇವಾನ್ಯಾತ್ಕಃಪ್ರಾಣ್ಯಾದ್ಯದೇಷ ಆಕಾಶ ಆನಂದೋ
ನ ಸ್ಯಾದಿತಿ ॥ (ತೈ.2–7)

ಈ ಆಕಾಶ ಶಬ್ದವಾಚ್ಯ (ಎಲ್ಲೆಡೆಯಲ್ಲಿಯು ಪ್ರಕಾಶವುಳ್ಳವನಾದ್ದರಿಂದ) ಶ್ರೀ ವಿಷ್ಣುವು ಪೂರ್ಣಾನಂದನಲ್ಲದಿದ್ದರೆ ಅವನು ಹೇಗೆ ಸರ್ವಪ್ರಪಂಚವನ್ನೂ ಪ್ರವರ್ತಿಸಲು ಸಾಧ್ಯವಾಗುವುದು ಅವನು ಪೂರ್ಣಾನಂದನಾದ್ದರಿಂದಲೇ ಸರ್ವ ಚೇಷ್ಟಕತ್ವವು ಅವನಿಂದ ಮಾತ್ರ ಸಾಧ್ಯವಾಗುತ್ತದೆ ಇತರರು ಯಾರೂ (ಅಪೂರ್ಣ ರಾದ್ದರಿಂದ) ಇದನ್ನು ಸಾಧಿಸಲಾರರು. (ಲೌಕಿಕ ವೈದಿಕ ಪ್ರವೃತ್ತಿಗಳೆಲ್ಲವನ್ನೂ ಸಾಧಿಸಲು ಸಮರ್ಥನು ಶ್ರೀ ವಿಷ್ಣುವೇ)

## ಸೂ ॥ ಓಂ ॥ ಮಾಂತ್ರವರ್ಣಿಕಮೇವ ಚ ಗೀಯತೇ ॥ ಓಂ ॥

"ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬ ಮಂತ್ರವರ್ಣದಲ್ಲಿ ಬ್ರಹ್ಮಶಬ್ದವನ್ನು ಆನಂದ ಮಯಾದಿ ಶಬ್ದದಿಂದ ಹೇಳಿದೆ ಆದ್ದರಿಂದ ಆನಂದಮಯನು ಬ್ರಹ್ಮಶಬ್ದ ಮುಖ್ಯವಾಚ್ಯನು ಐದು ರೂಪಗಳಾದ ಅನ್ನಮಯಾದಿಗಳೆಲ್ಲವೂ ಬ್ರಹ್ಮಶಬ್ದ ವಾಚ್ಯವು ಅನ್ಯರಲ್ಲ

**18. ಬ್ರಹ್ಮವಿದಾಪ್ನೋತಿ ಪರಮಿತಿ ಸೂಚಯಿತ್ವಾ ಸತ್ಯಂ ಜ್ಞಾನ ಮನಂತಂ ಬ್ರಹ್ಮೇತಿ ಮಂತ್ರವರ್ಣೋಪಲಕ್ಷಿತಂ ಪರಮೇವ ಬ್ರಹ್ಮ ಶಬ್ದಾನುಸಂಧಾನಾದ್ಗೀಯತೇ ।**

ಪರಬ್ರಹ್ಮನನ್ನು ಹೊಂದಲಿಚ್ಛಿಸುವವನು (ಮೋಕ್ಷೇಚ್ಛುವು) ಪರಬ್ರಹ್ಮನನ್ನು ತಿಳಿಯಬೇಕು ಎಂಬುದು ಈ ಶ್ರುತಿಯ ಫಲಿತಾರ್ಥವು ಆ ಬ್ರಹ್ಮವು ಯಾವುದೆಂಬ ಪ್ರಶ್ನೆಗೆ "ಸತ್ಯಂ" ಇತ್ಯಾದಿ ವಾಕ್ಯ ಪ್ರವೃತ್ತಿಯು ಸತ್ಯಂ–ಜಗತ್ತಿನ ಸಡವಳಿಕೆ, ಜೀವನ ಮತ್ತು ನಾಶವನ್ನು ಹೊಂದಿಸುವ ವಸ್ತುವು ಅನ್ನಮಯ, ಪ್ರಾಣಮಯಾದಿ ಶಬ್ದಗಳಿಂದ ಹೇಳಲ್ಪಡುವುದು ಸಕಲಪದಾರ್ಥಗಳ ಸಾಮಾನ್ಯ ಮತ್ತು ವಿಶೇಷ ಜ್ಞಾನಗಳನ್ನು ಮನೋಮಯ ವಿಜ್ಞಾನಮಯಗಳು ಸೂಚಿಸುವುವು "ಅನಂತ" ಶಬ್ದದಿಂದ ದೇಶತಃ ಕಾಲತ: ಮತ್ತು ವಸ್ತುತ: ಮಿಕ್ಕು ಉಳಿಯುವವನು ಪರಮಾತ್ಮ. ಪೂರ್ಣನಾದ್ದರಿಂದ ಆನಂದಮಯ ವಾಚ್ಯನು ಹೀಗೆ ಈ ಐದು ರೂಪಗಳಿಗೂ ಏಕಾರ್ಥತೆಯು ಇರುವುದು ದೇಶಾನಂತ್ಯನೆಂದರೆ–ಪರಿಮಾಣಾತೀತನೆಂದೂ, ಕಾಲಾನಂತ್ಯವೆಂದರೆ. ಕಾಲಕ್ಕೂ ಮೀರಿದವನೆಂದೂ ಅತ್ಯಧಿಕ ಶಕ್ತಿ ವುಳ್ಳವನೆಂದೂ ವಸ್ತ್ವನಂತವೆಂದರೆ ಸಂಖ್ಯಾಪರಿ ಮಿತಿಯಿಲ್ಲದನೆಂದು ತಿಳಿಯುವುದು

**19. ನಚಾವಯವತ್ವವಿರೋಧಃ । ಸ ಶಿರಃ ಸ ದಕ್ಷಿಣಃ ಪಕ್ಷಃ ಸಉತ್ತರಃ ಪಕ್ಷಃ ಸ ಆತ್ಮಾ ಸಪುಚ್ಛಮಿತಿ ತಸ್ಯೈವಾವಯವತ್ವೋಕ್ತೇ ಶ್ಚತುರ್ವೇದಶಿಖಾಯಾಂ ।**

ಚತುರ್ವೇದ ಶಿಖೆಯಲ್ಲಿ ಹೇಳಿರುವ ವಾಕ್ಯದಿಂದ ಅವಯವತ್ವ ನಿರ್ದೇಶವು ವಿರೋಧವಲ್ಲ ಸಶಿರ ... . ...... ಇತ್ಯಾದಿ ಸಾಕ್ಷಾತ್ತಾಗಿ ಅವಯವಗಳಿಂದ ಅಂತರ್ಯಾಮಿರೂಪಗಳನ್ನು ಹೇಳಿರುವುದರಿಂದ (ಅವಯವತ್ವ ಅವಯವಿತ್ವಭಾವ) ಅವಯವಿ ಅವಯವಗಳಿಗೆ ಏಕತ್ವ ಹೇಳಿಕೆಯು ವಿರೋಧವಲ್ಲ.

ಸ್ಮೃತಿಯಿಂದಲೂ ಅವಯವಿ ಅವಯವಗಳ ಏಕತ್ವ ಸಮರ್ಥನೆಯು.

20. **ಶಿರೋನಾರಾಯಣಃ ಪಕ್ಷೋ ದಕ್ಷಿಣಃ ಸವ್ಯ ಏವಚ ।**
**ಪ್ರದ್ಯುಮ್ನಶ್ಚಾನಿರುದ್ಧಶ್ಚ ಸಂದೋಹೋ ವಾಸುದೇವಕಃ ।**
**ನಾರಾಯಣೋಥಸಂದೋಹೋ ವಾಸುದೇವಃ ಶಿರೋಪಿವಾ ।**
**ಪುಚ್ಛಂ ಸಂಕರ್ಷಣಃ ಪ್ರೋಕ್ತಃ ಏಕ ಏವ ತು ಪಂಚಧಾ ।**
**ಅಂಗಾಂಗಿತ್ವೇನ ಭಗವಾನ್ ಕ್ರೀಡತೇ ಪುರುಷೋತ್ತಮಃ ।**

ತಲೆಯಲ್ಲಿ ಶ್ರೀಮನ್ನಾರಾಯಣನು ಎಡಬಲಪಕ್ಷಗಳಲ್ಲಿ ಪ್ರದ್ಯುಮ್ನಾನಿರುದ್ಧರು ಮಧ್ಯದೇಹದಲ್ಲಿ ಶ್ರೀ ವಾಸುದೇವ. ಅಥವಾ ವಾಸುದೇವನು ತಲೆ ಮತ್ತು ನಾರಾಯಣನು ಮಧ್ಯದೇಹಸ್ಥನು ಪಾದಾಖ್ಯಪುಚ್ಛವು ಸಂಕರ್ಷಣನು ಹೀಗೆ ಪುರುಷೋತ್ತಮನಾದ ಭಗವಾನ್ ಶಬ್ದವಾಚ್ಯವಾದ ಪರಬ್ರಹ್ಮನು ಈ ಐದು ರೂಪ ಗಳಿಂದ ಅಂಗಾಂಗಿತ್ವ ಭಾವದಿಂದ ಕ್ರೀಡಿಸುವನು. ಈತನು ಈಶ್ವರನಾದ ಪ್ರಯುಕ್ತ ಲೋಕ ವಿಲಕ್ಷಣವಾದ ದೇಶ, ಕಾಲ, ಗುಣ, ವಸ್ತುಪರಿಮಿತಿಯಿಲ್ಲ ಸರ್ವಶಕ್ತನಾದ ಈ ಪರಮೇಶ್ವರನಲ್ಲಿ ಅಂಗ, ಅಂಗಿತ್ವ ಭಾವಭೇಧವು ವಿಶೇಷ ಶಕ್ತಿಯಿಂದ ಬಾಧಕವಿಲ್ಲದೆ ಏಕತ್ವವು ಸಾಧ್ಯವು

20 **ಐಶ್ವರ್ಯಾನ್ನವಿರೋಧಶ್ಚ ಚಿಂತ್ಯಸ್ತಸ್ಮಿನ್ ಜನಾರ್ದನೇ ।**
**ಅತರ್ಕ್ಯೇಹಿಕುತಸ್ತರ್ಕಸ್ತ್ವಪ್ರಮೇಯೋ ಕುತಃ ಪ್ರಮೇತಿ ಬೃಹತ್ಸಂ ಹಿತಾಯಾಂ ।**

ಏಕ ಪುರುಷನಿಗೆ ಈ ಅವಯವಿ ಅವಯವತ್ವವನ್ನು ಹೇಳುವುದು ವಿರೋಧ ವಾದರೂ ಈ ಜನಾರ್ದನನಿಗೆ ವಿಶೇಷ ಶಕ್ತಿಯಿಂದ ಈ ಏಕತ್ವವು ಸಾಧುವೇ ತರ್ಕಕ್ಕೆ ಬದ್ಧನಲ್ಲ ಅವನ ವಿಷಯದಲ್ಲಿ ತರ್ಕವು ಬೆಲೆ ಹೊಂದದು ಮತ್ತು ಪ್ರಮಾದವಿಲ್ಲದವನಲ್ಲಿ ಪ್ರಮಾದವನ್ನು ಹೇಗೆ ತಾನೆ ಮಾಡಲು ಸಾಧ್ಯ ? ಆತನ ವಿಶೇಷ ವಿಲಕ್ಷಣ ಶಕ್ತಿ ಯಿಂದಲೆ ಅಸಂಭವವೂ ಸಾಧ್ಯವು.

21. **ರಸಶಬ್ದೇನ ವಿಶೇಷಣಾತ್ತತ್ತತ್ಸಾರ ಭೂತಂ ಚಿನ್ಮಾತ್ರ ಮೇವೋಚ್ಯತೇ ।**
**ಇದಮಿತಿ ಚ ದೃಶ್ಯಮಾನಸನ್ನಿಹಿತತ್ವಾತ್ ।**

"ಸವಾ" ಎಂಬ ವಾಕ್ಯವು ಪರಮಾತ್ಮನ ವಿಷಯಕವೇ ದೇಹವಿಷಯಕವಲ್ಲ ಏಕೆಂದರೆ ಪುರುಷ ಸಾರಭೂತ ಚಿನ್ಮಾತ್ರ ಬ್ರಹ್ಮವೇ ಅನ್ನದೇಹಗಳನ್ನು ಬಿಟ್ಟು ಇಲ್ಲಿ "ಸ" ಎಂಬ ಪದದ ಅರ್ಥವು ರಸಶಬ್ದವು ಅನ್ನರಸಮಯಶಬ್ದ ವಿಶೇಷಣದಿಂದ ಸಾರಾನ್ನಮಯತ್ವರೂಪ,ಜಡಾಮಿಶ್ರ,ಜ್ಞಾನವಿಲಕ್ಷಣ, ಚಿನ್ಮಾತ್ರಬ್ರಹ್ಮವು ಸೂಚಕವು ಅನ್ನಮಯ ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯವೇಗಳನ್ನುಶುಧ್ಯಂತಾಂ ಎಂಬ ವಾಕ್ಯವು ಶುದ್ಧಿಯನ್ನು ಹೇಳುವುದು ತತ್ತತ್ಕೋಶ ಪರವು "ತತತ್ಸಾರಭೂತಂ" ಎಂದು ಹೇಳುವ ಸಾರಭೂತ ಬ್ರಹ್ಮ ಚೈತನ್ಯವೇ ವಸ್ತುವು ಎದುರಿಗೆ ಪ್ರತ್ಯಕ್ಷವಾಗಿ ಕಾಣುವುದರಿಂದ "ಇದಂ ದೃಶ್ಯಮಾನಂ" ಎಂಬ ಪ್ರಯೋಗವು ಈ ರೂಪಗಳು ಅಪರೋಕ್ಷ ಜ್ಞಾನಾನಂತರ ದೃಶ್ಯವಾಗಿ ಪರೋಕ್ಷವಾಗಿ ಪರದೆಯಲ್ಲಿಯಂತೆ (ಅಸ್ಪಷ್ಟ ದೃಶ್ಯತ್ವವನ್ನು ಆ ಆ ಕೋಶಗಳ ಅಂತರ್ಯಾಮಿ ಬ್ರಹ್ಮವಸ್ತುವನ್ನು ನಿರ್ದೇಶಿಸುತ್ತವೆ

22. ಅನನ್ಯೋಽಪ್ಯನ್ಯಶಬ್ದೇನ ತಥೈಕೋ ಬಹುರೂಪವಾನ್ ।
ಪ್ರೋಚ್ಯತೇ ಭಗವಾನ್ವಿಷ್ಣುರೈಶ್ವರ್ಯಾತ್ಪುರುಷೋತ್ತಮ
ಇತಿಬ್ರಹ್ಮಾಂಡೇ ॥

ಬ್ರಹ್ಮಾಂಡಪುರಾಣವಾಕ್ಯವು ಶ್ರೀ ಪರಮಾತ್ಮನು ಸ್ವರೂಪತಃ ಏಕವಸ್ತುವಾದರೂ ಅಚಿಂತ್ಯಾದ್ಭುತ ಶಕ್ತಿಯಿಂದ ಬ್ರಹ್ಮರೂಪನಾಗಿ ಕಾಣಲ್ಪಟ್ಟು ಹಾಗೆ ಹೇಳಲ್ಪಡುವನು. ಆದರೆ ಅವನ ಸ್ವರೂಪ ರೂಪಗಳಲ್ಲಿ ಯಾವ ಭೇದವೂ ಇರುವುದಿಲ್ಲ.

23 ನಚೋಕ್ತಸ್ಪ್ರಾಪ್ತ್ಯಾವಿರಿಂಚಾದಿರುಚ್ಯತೇ ॥

ಬ್ರಹ್ಮಶಬ್ದಕ್ಕೆ ಸಾಧಾರಣಾರ್ಥವಾದ, ಶತಾನಂದ, ಅಷ್ಟಮೂರ್ತಿತ್ವ, ಬ್ರಹ್ಮಭಾವಾದಿ ರೂಪಪ್ರಾಪಕತ್ವ ಮತ್ತು ಅನ್ನಮಯಾದಿ ಶಬ್ದಗಳಿಂದ ವಿರಿಂಚಾದಿ ದೇವತೆಗಳೇ ಅರ್ಥವು. ಶ್ರೀವಿಷ್ಣುವಲ್ಲವೆಂದರೆ ಮುಂದಿನ ಸೂತ್ರವು.

## ಸೂ॥ ಓಂ ॥ ನೇತರೋಽನುಪಪತ್ತೇಃ ॥ ಓಂ ॥ 16 ॥

**ನಹ್ಯನ್ಯಜ್ಞಾನಾನ್ಮೋಕ್ಷ ಉಪಪದ್ಯತೇ । ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯವಿದ್ಯತೇ (ತೈ. ಆ. 3-12-7)**
**ಇತಿಹ್ಯುಕ್ತಂ ।**

ಚತುರ್ಮುಖಾದಿಗಳು ಇಲ್ಲಿ ಆಗಲಾರರು ಏಕೆಂದರೆ ಬ್ರಹ್ಮವಿದಾಪ್ನೋತಿ ಪರಂ ಎಂಬ (ತೈ ಉ 2-1-1) ಶ್ರುತಿಯು " ಶ್ರೇಷ್ಠ ಜ್ಞಾನವು ಮೋಕ್ಷ ಜನಕವೆಂದು ಹೇಳುತ್ತದೆ ಚತುರ್ಮುಖಾದಿಗಳಿಗೆ ಈ ಶಕ್ತಿಯು ಇರುವುದಿಲ್ಲ ಶ್ರೀ ವಿಷ್ಣುವಿಗೆ ಬ್ರಹ್ಮಜ್ಞಾನ ಜನಕತ್ವವು ಹೇಳಲ್ಪಡುವುದರಿಂದ ಶ್ರೀ ವಿಷ್ಣುವೇ ಬ್ರಹ್ಮಶಬ್ದ ವಾಚ್ಯನು ಮೇಲಿನ (ತೈ. ಆ 3-12-7) ಶ್ರುತಿಯಲ್ಲಿ ಶ್ರೀ ವಿಷ್ಣುವಿನ ಜ್ಞಾನದ ಹೊರ್ತು ಮತ್ಯಾವುದಕ್ಕೂ ಮೋಕ್ಷಫಲ ದಾತೃತ್ವವಿಲ್ಲವೆಂದು ಸ್ಪಷ್ಟವಾಗಿಹೇಳಿದೆ.

## ಸೂ॥ ಓಂ ॥ ಭೇದವ್ಯಪದೇಶಾಚ್ಚ ॥ ಓಂ ॥ 17 ॥

**24. ತೇ ಯೇ ಶತಂ ಪ್ರಜಾಪತೇರಾನಂದಾಃ (ತೈ-2-8) ಅದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ । ಅಥಸೋ. ಭಯಂಗತೋ ಭವತಿ । (ತೈ 2-7) ಸಯಶ್ಚಾಯಂ ಪುರುಷ (ತೈ. 2-8) ಇತ್ಯಾದಿ ಭೇದವ್ಯಪದೇಶಾತ್**

ಚತುರ್ಮುಖಾದಿ ದೇವತೆಗಳಿಂದ ಶ್ರೀ ಆನಂದಮಯನಿಗೆ ಭೇದಕ ಧರ್ಮವನ್ನು ಹೇಳಿರುವುದರಿಂದ ಅವರುಗಳು ಆನಂದಮಯರಲ್ಲ ಶ್ರೀ ವಿಷ್ಣುವೇ ಆನಂದ ಮಯನು

ಚತುರ್ಮುಖನಿಗೆ ರುದ್ರದೇವರಿಗಿಂತ ನೂರುಪಟ್ಟು ಆನಂದಾಧಿಕ್ಯವನ್ನು ಹೇಳಿ ಪೂರ್ಣಾನಂದಮಯನಿಗೆ 'ಯತೋವಾಚೋ' ಎಂಬ ಶ್ರುತಿಯಂತ ಅಪರಿಮಿತ ಆನಂದ ವನ್ನು ಹೇಳುತ್ತದೆಯಾಗಿ ಬ್ರಹ್ಮ, ರುದ್ರಾದಿ ದೇವತೆಗಳೆಲ್ಲರೂ ಆನಂದಮಯರಲ್ಲ ಅದೃಶ್ಯೇಅನಾತ್ಮ್ಯೇ" ಎಂಬ ವಾಕ್ಯದಲ್ಲಿ ಸ್ವಾತಂತ್ರ್ಯಾದಿ ಶ್ರೇಷ್ಠ ಧರ್ಮಗಳನ್ನು ಹೇಳಿದ್ದ ರಿಂದ ಪ್ರಕೃತಿಶಬ್ದ ವಾಚ್ಯ ಪ್ರಕೃತ್ಯಾಂಗಗಳು ಅಲ್ಲ ಮತ್ತು ಸರ್ವ ಜೀವ ಶ್ರೇಷ್ಠ ಅಂತ ರ್ಯಾಮಿತ್ವವನ್ನು ಹೇಳಿರುವುದರಿಂದ ಇತರಜೀವರುಗಳೂ ಅಲ್ಲ ಈಧರ್ಮಗಳುಳ್ಳ ಸರ್ವ ಸ್ವತಂತ್ರ ಸ್ವಾಮಿ ಶ್ರೀ ವಿಷ್ಣುವೇ ಆನಂದಮಯನು. ಅದೃಶ್ಯೇ-ಪೂರ್ಣತಿಳಿಯಲ್ಪಡದ ಅನಾತ್ಮ್ಯೇ-ಜೀವಗುಣಗಳಿಂದ ಬಿಡಲ್ಪಟ್ಟ [ಅನ್ಯಸ್ವಾಮಿಯಿಲ್ಲದೆ ತಾನೆ ಸರ್ವ ಜೀವ ಸಮುದಾಯಕ್ಕೂ ಸ್ವಾಮಿಯಾದ] ಪೂರ್ಣವಾಗಿ ನಿರ್ವಚನ ಮಾಡಲು ಅಸಾಧ್ಯವಾದ ಅನ್ಯಾಶ್ರಯನಲ್ಲದ ಆನಂದಮಯ ವಾಚ್ಯನಾದ ಶ್ರೀ ವಿಷ್ಣುವಿನಲ್ಲಿ ಯಾವ

ಅಧಿಕಾರಿಯು ನಿರ್ಭಯನಾಗಿ ಧ್ಯಾನ ರೂಪ ಪ್ರತಿಷ್ಠತೆಯನ್ನು ಹೊಂದುವನೋ ಅವನು ಶ್ರೀ ಪರಮಾತ್ಮನನ್ನು ಹೊಂದುವನು. ಯಾವ ಶ್ರೇಷ್ಠ ಪುರುಷನು ಆದಿತ್ಯಾದಿ ಜೀವರುಗಳ ಹೃದಯದಲ್ಲಿ ಪ್ರತಿಷ್ಠಿತನೋ ಆತನೇ ಆನಂದಮಯವಾಚ್ಯ ಶ್ರೀ ವಿಷ್ಣುವು ಅನ್ಯರಲ್ಲ

**25 ನ ಚ ತತ್ವಮಸಿ (ಪ್ರ 6-8) "ಅಹಂ ಬ್ರಹ್ಮಾಸ್ಮಿ" (ಬೃ 3-4-10) ಇತ್ಯಾದಿ ಶ್ರುತಿವಿರೋಧಃ । ನಾಮಾನಿ ಸರ್ವಾಣಿ ಯಮಾವಿಶಂತೀತಿ ತತ್ತಚ್ಛಬ್ದವಾಚ್ಯತ್ವೋಕ್ತೇಃ ।**

'ತತ್ವಮಸಿ, 'ಅಹಂ ಬ್ರಹ್ಮಾಸ್ಮಿ' ಈ ಬಗೆಯ ಶ್ರುತಿಗಳಿಂದ ವಿರೋಧವನ್ನು ಎಣಿಸಬಾರದು ಏಕೆಂದರೆ ಭಾಲ್ಲವೇಯ ಶ್ರುತಿಯು ಪರಮಾತ್ಮನಿಗೆ ಸರ್ವಶಬ್ದಗಳ ವಾಚ್ಯತ್ವವನ್ನು ಹೇಳುವುದರಿಂದ ಅವನ ಸ್ವಾತಂತ್ರ್ಯಕ್ಕೆ ವಿರೋಧವಿಲ್ಲ

ತತತ್ವಾತ್-ತತ್-ಸರ್ವವ್ಯಾಪಕ ವಸ್ತುವಾದ್ದರಿಂದ "ತತ್" ಶಬ್ದ ವಾಚ್ಯನು ಶ್ರೀ ಪರಮಾತ್ಮ

ತ್ವಂ-ಜೀವಾಂತರ್ಯಾಮಿಯಾಗಿ ಅಭಿಮುಖವಾಗಿರುವುದರಿಂದ ತ್ವಂಶಬ್ದವಾಚ್ಯ

ಅಹಂ ದೋಷದೂರನು ಮತ್ತು ಹಂ ನಾಮಕ ಜೀವನಿಂದ ಭಿನ್ನನು ಎಂದು

ಅಸ್ಮಿ-ಮಿತತ್ವ ಧರ್ಮಕಜೀವಿಗಿಂತ ಬೇರೆ ಪೂರ್ಣಧರ್ಮವುಳ್ಳವನಾದ್ದರಿಂದ

ವಾಚ್ಯನು ಯಃ-ಜ್ಞಾನರೂಪನಾದ್ದರಿಂದ ಸರ್ವನಿಯಾಮಕನಾದ್ದರಿಂದಲೂ

ಸಃ-ಸಾರತ್ವಉಳ್ಳವನಾದ್ದರಿಂದಲೂ ಚಲನತ್ವದಿಂದಲೂ ವಾಚ್ಯ

ಅಸೌ-ಅಲ್ಲಿ ಇಲ್ಲಿ ಎಲ್ಲೆದೆಯಲ್ಲಿಯೂ ಪರೋಕ್ಷವಾಗಿ ಇರುವಿಕೆಯಿಂದ

ಅಸ್ ವಾಚ್ಯ ಅಸೌ-ಪ್ರಾಣದೇವರಲ್ಲಿದ್ದು ಪೂರ್ಣಷಡ್ಗುಣನು.

ಹೀಗೆ ಸರ್ವಶಬ್ದವಾಚ್ಯತ್ವವು ಶ್ರೀ ವಿಷ್ಣುವಿನಲ್ಲಿಯೇ ಮುಖ್ಯವು.

**26. ಇದಂ ಹಿ ವಿಶ್ವಂ ಭಗವಾನಿವೇತರೋ ಯತೋ ಜಗತ್ಸ್ಥಾನ ನಿರೋದ ಸಂಭವಃ । ಅಸರ್ವ ಸರ್ವ ಇತ್ಯಪಿ ।** (ತುರಶ್ರುತಿ)

ಐಕ್ಯಶ್ರುತಿಗಳಿಗೆ ಐಕ್ಯಪರ ಅರ್ಥವೂ ಕೂಡ ಭೇದಶ್ರುತಿವಿರೋಧವಲ್ಲ.

ಸರ್ವೈಕ್ಯ ಶ್ರುತಿಯು ಭಗವಂತನ ಸರ್ವಸ್ವಾಮಿತ್ವ ನಿಮಿತ್ತವಾಗಿ ಹೇಳಲು ಬರುವುದು ಭಾಗವತರಲ್ಲಿ ಉಕ್ತಿಯು-ಭಗವಂತನು ಪ್ರಪಂಚದಿಂದ ಅನ್ಯನಾದರೂ ಅನ್ಯನಲ್ಲವೆಂದು ಹೇಳುತ್ತದೆ. ಏಕೆಂದರೆ ಜಗತ್ತಿನ ಸೃಷ್ಟಿಸ್ಥಿತಿನಾಶಗಳಿಗೆ ಕಾರಣವಾಗಿ ಜಗತ್ತು ಪರಮಾತ್ಮನೆಂದೇ ಹೇಳಲ್ಪಡುವುದು ಹಾಗೆಯೇ ಪರಮಾತ್ಮನು ಪ್ರಪಂಚ ದಿಂದ ಭಿನ್ನನಾದರೂ ಸರ್ವವಸ್ತುಗಳ ಸ್ವಾಮಿತ್ವಕಾರಣದಿಂದ ಸರ್ವವೂ ಅವನೇ ಎಂದು ಅಭೇದದಿಂದ ವೇದಗಳಲ್ಲಿ ಹೇಳಲ್ಪಡುತ್ತದೆ (ತುರ ಶ್ರುತಿ)

**27. ವಿದ್ಯಾತ್ಮನಿ ಭಿದಾ ಬೋಧಃ ।**
**ಭೇದದೃಷ್ಟ್ಯಾಭಿಮಾನೇನ ನಿಃಸಂಗೇನಾಪಿ ಕರ್ಮಣಾ ।**

ಶ್ರೀ ಕೃಷ್ಣನು ಉದ್ಧವನ ಪ್ರಶ್ನೆಗೆ ಉತ್ತರವಾಗಿ ಇದನ್ನು ಹೇಳಿದನು

ಶ್ರೀ ಪರಮಾತ್ಮನಲ್ಲಿ ಜೀವದಿಂದ ಭೇದಜ್ಞಾನವೂ ಜೀವನಲ್ಲಿ ಪರಮಾತ್ಮನಿಂದ ಭೇದಜ್ಞಾನವೂ 'ವಿದ್ಯಾ' ಶಬ್ದದಿಂದ ಹೇಳಲ್ಪಡುವುದು ಈ ಭೇದಜ್ಞಾನವು ಪುರುಷಾರ್ಥಕ್ಕೆ ಕಾರಣವು. ವಿದ್ಯಾಶಬ್ದಕ್ಕೆ ಅರ್ಥವು ಭಾಗವತ 3ನೇ ಸ್ಕಂದದ ವಾಕ್ಯದಲ್ಲಿದೆ

ಆದ್ಯಃ ಸ್ಥಿರ ಚರಾಣಾಂ ಯೋ ವೇದಗರ್ಭಃ ಸಹರ್ಷಿಭಿಃ ।
ಯೋಗೇಶ್ವರೈಃ ಕುಮಾರಾದ್ಯೈಃ ಸಿದ್ಧೈರ್ಯೋಗಪ್ರವರ್ತಕೈಃ ॥
ಕರ್ತೃತ್ವಾತ್ಸಗುಣಂ ಬ್ರಹ್ಮಪುರುಷಂ ಪುರುಷರ್ಷಭಂ ।
ಸ ಸಂಗತ್ಯ ಪುನಃ ಕಾಲೇ ಕಾಲೇನೇಶ್ವರ ಮೂರ್ತಿನಾ ॥
ಜಾತೇ ಗುಣವ್ಯತಿಕರೇ ಯಥಾಪೂರ್ವಂ ಪ್ರಜಾಯತೆ ॥

ಸ್ಥಾವರ ಜಂಗಮ ಪುರುಷರಿಗೆ ಆದಿಪುರುಷ ಶ್ರೀ ಚತುರ್ಮುಖ ಬ್ರಹ್ಮನು ಮನುಷ್ಯೋತ್ತಮರಿಂದ ಹಿಡಿದು ಗರುಡ ಶೇಷ ದೇವತೆಗಳಿಂದಲೂ ಜ್ಞಾನಯೋಗ ಸಿದ್ಧರಾದ ಸನತ್ಕುಮಾರಾದಿಗಳಿಂದಲೂ ಕೂಡಿ ಜೀವೇಶ್ವರ ಭೇದ ಜ್ಞಾನದಿಂದ ಪರಮಾತ್ಮನಲ್ಲಿ ಬಹುಮಾನಪೂರ್ವಕ ನಿಷ್ಕಾಮ ಸತ್ಕರ್ಮಗಳಿಂದ ಮುಕ್ತಿ ಫಲವನ್ನು ಹೊಂದಿ ಪ್ರಳಯ ಕಾಲದಲ್ಲಿ ಶ್ರೀ ಪರಮಾತ್ಮನನ್ನು ಪ್ರವೇಶಿಸಿ ಲೀನರಾಗಿ ಪುನ, ಸೃಷ್ಟಿ ಕಾಲದಲ್ಲಿ ಜ್ಞಾನಾತ್ಮ ಶ್ರೀವಿಷ್ಣುರೂಪದಿಂದ ಗುಣವೈಷಮ್ಯ ಹೊಂದಲು ಹಿಂದಿ ನಂತೆಯೇ ಗುಣತಾರತಮ್ಯ ಪೂರ್ವಕ ಪರಸ್ಪರ ಭೇದದಿಂದಲೆ ಆತನ ರೂಪದಿಂದ ಹೊರ ಬಂದು ಮುಕ್ತಾವಸ್ಥೆಯಲ್ಲಿ ತಮ್ಮ ತಮ್ಮ ಅಧಿಕಾರಸ್ಥಾನದಲ್ಲಿಯೇ ಯೋಗ್ಯತೆಗೆ ತಕ್ಕಂತೆ

ಶ್ರೇಷ್ಠ ಆನಂದವನ್ನು ಮಾತ್ರ ಅನುಭವಿಸುತ್ತಿರುವರು ಯಾವಾಗಲೂ ಇವರುಗಳಿಗೆ ಸಂಸಾರ ಬಾಧೆಯಿಲ್ಲ

28 ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ ।
(ಮು 3-1-2)

ಜುಷ್ಟಂ ಸರ್ವಸೇವ್ಯ–ಈಶಂ–ಸ್ವತಂತ್ರ ಆದ್ದರಿಂದಲೆ ಜಡ ಜೀವ ಪ್ರಪಂಚದಿಂದ ಭಿನ್ನ ಶ್ರೀವಿಷ್ಣುವನ್ನು (ತವೇತ್ ಸತ್ಯಂ) ಸರ್ವಶಕ್ತಿ ಸರ್ವಸ್ವತಂತ್ರ ಸರ್ವಸ್ವಾಮಿ ಈ ಪ್ರಕಾರಗಳಿಂದ ಪರಮಾತ್ಮನನ್ನು ಜೀವನು ಯಾವಾಗ ತಿಳಿಯುತ್ತಾನೆಯೋ ಆಗ ಜೀವನು ಎಲ್ಲ ದು ಖಗಳಿಂದ ದೂರನಾಗಿ ಆನಂದದಲ್ಲಿ ಇರುವನು ಅಂತಹ ಜೀವನು ದುರ್ಲಭನೇ

29 ಅಸರ್ವಃ ಸರ್ವ ಇವಾತ್ಮೈವಸನ್ನನಾತ್ಮೇವ ಪ್ರತ್ಯಙ್ಙರಾಜ'ನೈಕ ಈಯತೇ ಬಹುಧೇಯತೇ ಸಪುರುಷಃ ಸಈಶ್ವರಃ ಸ ಬ್ರಹ್ಮಾ ।

ಶ್ರೀ ವಿಷ್ಣುವು ಜೀವಸ್ವರೂಪಗಳಿಂದ ಅನ್ಯನಾದರೂ ಸರ್ವಾಂತರ್ಯಾಮಿ ಯಾದ್ದರಿಂದ ಸರ್ವಾತ್ಮಕನೆಂದು ಕರೆಯಲ್ಪಡುವನು. ತಾನು ಅಂತರ್ಯಾಮಿ ಯಾಗಿದ್ದಾಗ್ಯೂ ರಾಮಕೃಷ್ಣಾದ್ಯವತಾರಗಳಲ್ಲಿ ಅಂತರ್ಯಾಮಿಯಲ್ಲದಂತೆ ಬೇರೆ ಯಾಗಿಯೇ ಹೇಳಲ್ಪಡುವನು ಈ ಭೇದಭಾವವು ಅಜ್ಞಾನದಮೂಲಕವಾಗಿದೆ ಪರಮಾತ್ಮನು ದೇಹಾಂತರ್ಯಾಮಿಯಾಗಿದ್ದರೂ ಸಹ ಬಹಿರ್ ಮಾತ್ರ ವೃತ್ತಿಯುಳ್ಳವ ನೆಂದ ತಿಳಿಯುವುದು ಭ್ರಾಂತಿ ಕಲ್ಪಿತವು "ಏಕಮೇವ" ಎಂಬ ಶ್ರುತಿಯ ವಿರೋಧವಿಲ್ಲ ಒಬ್ಬನಿಗೆ ಬಹು ರೂಪತ್ವದಿಂದ ಸರ್ವಧರ್ಮೋಪಪತ್ತಿಯು ಯುಕ್ತವೇ

ಅಂತರ್ಯಾಮಿತ್ವದಿಂದಲೂ ಸರ್ವಾತ್ಮಕತ್ವದಿಂದಲೂ ಹೇಳಲ್ಪಡುವ ವಸ್ತುವು ಹೇಗೆ ಸರ್ವಜ್ಞನಾಗಲು ಸಾಧ್ಯವು ಎಂಬ ಶಂಕೆಗೆ ಉತ್ತರವು ಇದು ಅವನು ಸಂಪೂರ್ಣ ಷಡ್ಗುಣ ಪೂರ್ಣನಾದ್ದರಿಂದ ಮತ್ತು ಸರ್ವದೇಹಾಖ್ಯಪುರಗಳಲ್ಲಿ ನಿಯಾಮಕನಾಗಿ ವಾಸ ಮಾಡುವುದರಿಂದ ಪುರುಷ ಶಬ್ದವಾಚ್ಯನು. "ಪುರುಷಏವೇದಂ ಸರ್ವಂ" ಮತ್ತು "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿಗಳ ಜ್ಞಾಪಕದಿಂದ ಸರ್ವತ್ರ ಪೂರ್ಣ ತ್ವವೇ ಬ್ರಹ್ಮಶಬ್ದವಾಚ್ಯತ್ವ ಅವನು ಸರ್ವತ್ರ ಈಶ್ವರನು. ಆದ್ದರಿಂದ ಸರ್ವವಿಕಲ್ಪ ಗಳೂ ಆತನಲ್ಲಿ ಯುಕ್ತವೆಂದು ತಿಳಿಯುವುದು.

30 ಸರ್ವಾಂತರ್ಯಾಮಿಕೋವಿಷ್ಣುಃ ಸರ್ವನಾಮ್ನಾಭಿಧೀಯತೇ ।
ಏಷೋಽಹಂ ತ್ವಮಸೌ ಚೇತಿ ಸತುಸರ್ವಸ್ವರೂಪತಃ ।
ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ವಹೇತ್ಯಾದೇಶ್ಚ ॥

ಸ್ಮೃತಿವಾಕ್ಯವು–ಶ್ರೀವಿಷ್ಣುಃ ಸರ್ವವಸ್ತುಗಳಲ್ಲಿ ಅಂತರ್ಯಾಮಿಯಾಗಿ ಸರ್ವ ವಸ್ತುಗಳಲ್ಲಿ ನಿಯಾಮಕನಾಗಿರುವುದರಿಂದ "ಏಷ ಆತ್ಮಾಹೋವಾಚ" "ಸೋಽಹಮಸ್ಮಿ" 'ತತ್ವಮಸಿ' 'ಯೋಽಸೌ ಅಸೌ ಪುರುಷಃ" ಇತ್ಯಾದಿ ಋುಕ್ಕುಗಳಿಂದ ಆ ವಾಕ್ಯಗಳಲ್ಲಿರುವ ಸರ್ವವಾಚಕ ಸರ್ವನಾಮಸಂಜ್ಞಕ ಶಬ್ದಗಳಿಂದ "ಸರ್ವಂ" ಎಂದು ಕರೆಯಲ್ಪಡುವನು. ಸರ್ವಸ್ವರೂಪತ್ವದಿಂದಲ್ಲ.

ಜನಮೇಜಯರಾಯನ ಪ್ರಶ್ನೆ. ಈ ಲೋಕದಲ್ಲಿ ಬಹು ಪುರುಷರುಗಳಿರುವುದರಿಂದ ಐಕ್ಯವಾಕ್ಯಗಳು ಶ್ರೇಷ್ಠವಸ್ತು ಪರವಾದರೂ ಎಲ್ಲಾ ಪುರುಷರೂ ಸವ ರೇ ಅಥವಾ ಒಬ್ಬನೇ ಶೇಷ್ಠನೋ ಒಬ್ಬನೇ ಶ್ರೇಷ್ಠನಾದರೆ ಅವನು ಯಾರು ? ಹೇಗೆ ಶ್ರೇಷ್ಠತ್ವವು? ವೈಶಂಪಾಯನನ ಉತ್ತರವು–ಈ ಲೋಕದಲ್ಲಿ ಪುರುಷರದು ಬಹು ಸಂಖ್ಯೆಯೇ ಬಹುಸಂಖ್ಯೆಯಲ್ಲಿ ಸರ್ವರೂ ಶ್ರೇಷ್ಠರಿಲ್ಲ ಒಬ್ಬನೇ ಶ್ರೇಷ್ಠವಸ್ತು. ಇದು ಐಕ್ಯವಾಕ್ಯಗಳಿಗೆ ಸರಿಹೊಂದುವುದಿಲ್ಲವೆಂದರೆ ಈ ಬಹು ಸಂಖ್ಯಾತ ಪುರುಷರ ಮಧ್ಯದಲ್ಲಿ ಯಾವ ಪರಮಪುರುಷನು ಈ ಲೋಕಗಳಿಗೆಲ್ಲಾ ಕಾರಣಕರ್ತನೋ, ಸರ್ವಸ್ವಾಮಿಯೋ ಸರ್ವ ಸ್ವತಂತ್ರ ಸರ್ವಜ್ಞನೆಂದು ಶ್ರುತಿವಾಕ್ಯಗಳು ಹೇಳುವವೋ ಆ ವಸ್ತುವೆ ಪುರುಷಶ್ರೇಷ್ಠನು ಮಿಕ್ಕ ಪುರುಷರು ಅವನ ಅಧೀನರು ಮಾತ್ರ. ಸ್ವತಂತ್ರರಲ್ಲ

31 ಉಕ್ತಾ ಚ ಪ್ರಾಪ್ತಿಃ ಬ್ರಹ್ಮೈವಸನ್ (ಬೃ ೬–4) ಇತ್ಯಪಿ ।
ಜೀವಏವ ಬ್ರಹ್ಮಶಬ್ದಃ । ಉಪಪದ್ಯತೇ ಚ ವಿರೋಧೇ ॥

"ಬ್ರಹ್ಮೈವ ಸ ಸ ಬ್ರಹ್ಮಾಪ್ಯೇತಿ" ಎಂಬ ಶ್ರುತಿಯು ಆ ಾತಃ ಭೇದಶ್ರುತಿಗೆ ವಿರೋಧವು ಆದರೆ ಇಲ್ಲಿನ ಮೊದಲನೇ ಬ್ರಹ್ಮಶಬ್ದವು ಜೀವಪರವು ಪರಬ್ರಹ್ಮ ಪರವಲ್ಲ ಮುಕ್ತ ಜೀವನು ಬ್ರಹ್ಮಭಾವವನ್ನು ಬಿಡದೆ ಪ್ರಲಯಕಾಲದಲ್ಲಿ ಪರಬ್ರಹ್ಮನನ್ನು ಪ್ರವೇಶಿಸಿ ಪುನಃ ಸೃಷ್ಟಿಕಾಲದಲ್ಲಿ ಜೀವಭಾವದಿಂದಲೇ ಹೊರಬರುವನೆಂಬ ಅರ್ಥದಿಂದ ಭೇಧಶ್ರುತಿಗೆ ವಿರೋಧವಿಲ್ಲ ದಾರ್ಢ್ಯವೇ, ಬ್ರಹ್ಮಶಬ್ದವು ಪರಬ್ರಹ್ಮನಲ್ಲಿ ಮುಖ್ಯವಾದರೂ ಪ್ರಮಾಣಾಂತರ ಪೂರ್ವೋತ್ತರ ವಾಕ್ಯಗಳಿಂದ ವಿರೋಧಭಾವ ಬಂದರೆ ಜೀವರನ್ನು ಹೇಳುವುದು ಎಂದು ತಿಳಿಯಬೇಕು.

32. ಪ್ರಮಾದಾತ್ಮಕತ್ವಾದ್ಬಂಧಸ್ಯ । ವಿಮುಕ್ತತ್ವಂ ಚ ಯುಜ್ಯತೇ ।

"ವಿಮುಕ್ತಶ್ಚವಿಮುಚ್ಯತಿ" ಎಂಬಲ್ಲಿ ಬಂಧವು ಕರ್ತೃತ್ವಭೋಕ್ತೃತ್ವಾಭಿಮಾನ ಮೂಲಕ ಜೀವಗತ ಸಂಸಾರವು ಅಜ್ಞಾನ ಮೂಲಕವು. ಈ ಮಿಥ್ಯಾಜ್ಞಾನವು ಅಸ್ವಾಭಾವಿಕವಾದ್ದರಿಂದಲೇ ಜೀವರಿಗೆ ಅಜ್ಞಾನ ನಿವೃತ್ತಿಯಿಂದ ವಿಮುಕ್ತತ್ವವು ಮೋಕ್ಷವು ಸಾಧ್ಯವು.

33. ಮುಕ್ತಿರ್ಹಿತ್ವಾನ್ಯಥಾರೂಪಂ ಸ್ವರೂಪೇಣ ವ್ಯವಸ್ಥಿತಿರಿತಿ ಹಿ ಭಾಗವತೇ ॥

ಮುಕ್ತಿಯು ಅಸ್ವಾಭಾವಿಕತ್ವವನ್ನು ಬಿಟ್ಟು ಸ್ವರೂಪದಿಂದ ಇರುವಿಕೆಯು ಎಂದು ಭಾಗವತ ವಚನವು.

34. ನಚ ತತ್ತದನುಮಾನವಿರೋಧಃ ।

ಭೇದೋಕ್ತಿಗಳಿಗೆ ಶ್ರುತಿ ವಿರೋಧ ಮಾತ್ರವೇ ಇಲ್ಲವೆಂದಲ್ಲ ಅದ್ವೈತಕಲ್ಪಿತ ಅನುಮಾನವೂ ವಿರೋಧವಾಗುವುದಿಲ್ಲ. ಏಕೆಂದರೆ ಅವು ಸದನುಮಾನಗಳಲ್ಲ ಶುಷ್ಕಾನುಮಾನಗಳು ಮಾತ್ರವೇ

**ಸೂ॥ ಓಂ ॥ ಕಾಮಾಚ್ಚನಾನುಮಾನಾಪೇಕ್ಷಾ ॥ ಓಂ 18 ॥**

35. ಯಥಾಕಾಮಂ ಹ್ಯನುಮಾತುಂ ಶಕ್ಯತೇ। ಅತೋ ನ ತತ್ತ್ವೇ ಪೃಥಗನುಮಾನಮಪೇಕ್ಷ್ಯತೇ ॥

ಅದ್ವೈತ ಶ್ರುತಿಗೆ ಅನುಕೂಲಾನುಮಾನಗಳು ಶುದ್ಧವಲ್ಲ ಅನುಮಾನ ಪ್ರವೃತ್ತಿಯು ಕೇವಲ ಪುರುಷೇಚ್ಛಾನುಸಾರವಾದ್ದರಿಂದ ಶುಷ್ಕಾನುಮಾನ ಪ್ರಯೋಗವು ಸಾಧುವಲ್ಲ.

36. ಉಕ್ತಂ ಚ ಸ್ಕಾಂದೇ ।
ಯಥಾ ಕಾಮಾನುಮಾ ಯಸ್ಮಾತ್ತಸ್ಮಾತ್ಸಾನಪಗಾಶ್ರುತೇಃ ।
ಪೂರ್ವಾಪರಾವಿರೋಧಾಯ ಚೇಷ್ಯತೇ ನಾನ್ಯಥಾ ಕ್ವಚಿತ್ ।

ಪುರುಷರಿಂದ ಸ್ವೇಚ್ಛಾನುಸಾರ ಅನುಮಾನ ಪ್ರಯೋಗಗಳು ಸಾಧ್ಯವಾದ್ದರಿಂದ ಶ್ರುತಿಗಳಲ್ಲಿನ ವಿರೋಧಕ್ಕೆ ಪರಿಹಾರವನ್ನು ಹೊಂದಲು ಮಾತ್ರ ಉಪಯುಕ್ತವೇ ಹೊರತು ಸ್ವತಃ ಪ್ರತ್ಯೇಕ ಪ್ರಮಾಣವಾಗಲಾರದು. ನ್ಯಾಂದವಾಕ್ಯವು.

37. ನೈಷಾ ತರ್ಕೇಣ ಮತಿರಾಪನೇಯೇತಿ ಚ (ಕ. 2–9)

ಪರಬ್ರಹ್ಮ ವಿಷಯವಾಗಿ ಸಾಧ್ಯಾಸಾಧ್ಯ ವಿವಕ್ಷೆಯನ್ನು ಶುಷ್ಕತರ್ಕದಿಂದ ಸಾಧಿಸ ಲಾಗದು ಭಗವದ್ಭಕ್ತರಾದ ಗುರುಗಳಿಂದ ಉಪದೇಶಿಸಲ್ಪಟ್ಟ ತತ್ವವು ಸಮ್ಯಕ್ ಜ್ಞಾನ ಸಂಪಾದನೆಗೆ ಉಪಯುಕ್ತವು.

## ಸೂ || ಓಂ ||| ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ || ಓಂ || 19

**ಅಸ್ಯ ಜೀವಸ್ಯ । ಯುಕ್ತಿಸಮುಚ್ಚಯೇ ಚ ಶಬ್ದಃ ।**
**ಸೋಽಶ್ನುತೇ ಸರ್ವಾನ್ಕಾಮಾನ್ಸಹಬ್ರಹ್ಮಣಾ ವಿಪಶ್ಚಿತಾ । (ತೈ-2-1)**
**ಅನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ । (ತೈ-2-7)**
**ಏತಮಾನಂದಮಯಮಾತ್ಮಾನಮುಪಸಂಕ್ರಾಮತೀ (ತೈ-2-8) ತ್ಯಾದಿ ।**

ಈ ಆನಂದಮಯ ಪ್ರಕರಣದಲ್ಲಿ ಶ್ರುತಿಯು ಜೀವನಿಗೆ ಮೋಕ್ಷದಲ್ಲಿ ಆನಂದ ಮಯನಿಂದ ಸಂಬಂಧವನ್ನು ಹೇಳುತ್ತದೆ. ಆದ್ದರಿಂದಲೂ ಆನಂದಮಯನು. ಬ್ರಹ್ಮ ಶಬ್ದವಾಚ್ಯ ವಿಷ್ಣುವೆ ಜೀವಾದಿಗಳಲ್ಲ.

ಮೋಕ್ಷದಲ್ಲಿ ಜೀವನಿಗೆ ಆನಂದಮಯನಿಂದ ಸಂಬಂಧ ಮಾತ್ರವೇ ಹೇಳಿದೆ ಐಕ್ಯವನ್ನಲ್ಲ. ಆನಂದಮಯಾದಿ ಶಬ್ದಗಳು ಕೋಶಪರಗಳಲ್ಲ. ಬ್ರಹ್ಮಜ್ಞಾನಿಯು ಚತುರ್ಮುಖನಿಂದ ಕೂಡಿ ಸರ್ವಜ್ಞನಾದ ಪರಮಾತ್ಮನನ್ನು ಹೊಂದಿ ಸ್ವಯೋಗ್ಯ ಸುಖಗಳನ್ನು ಮುಕ್ತಿಯಲ್ಲಿ ಹೊಂದುತ್ತಾನೆ. ಆವನ ಸ್ವರೂಪವನ್ನೇ ಹೊಂದುವುದಿಲ್ಲ.

–ಇತಿ ಆನಂದಮಯಾಧಿಕರಣವು-

# ಅಂತಸ್ಥತ್ವಾಧಿಕರಣವು

1 ಅದೃಶ್ಯೇನಾತ್ಮ್ಯೆ ಇತ್ಯುಕ್ತಂ । ತಚ್ಚಾದೃಶ್ಯತ್ವಂ ಅಂತಃಪ್ರವಿಷ್ಟಂ
ಕರ್ತಾರಮೇತಮಂತಶ್ಚಂದ್ರಮಸಿ ಮನಸಾಚರಂತಂ ।
ಸಹೈವ ಸಂತಂ ನವಿಜಾನಂತಿ ದೇವಾಃ (ತೈ ಆ ಥ3-11)
ಇತ್ಯಂತಸ್ಥಸ್ಯ ಕಸ್ಯಚಿದುಚ್ಯತೇ । ಸಚೇಂದ್ರೋ ರಾಜಾ(ತೈ.ಆ 3.11-6)
ಸಪ್ತಯುಂಜಂತೀ ತ್ಯಾದಿಭಿರನ್ಯಃ ಪ್ರತೀಯತೇ । (ತೈ ಆ 3-11-8)
ತಸ್ಮಾತ್ಸಏವಾನಂದಮಯ ಇತಿ ನ ಮಂತವ್ಯಂ ॥

ಪೂರ್ವ ಅಧಿಕರಣದಲ್ಲಿ ಆನಂದಮಯ ಧರ್ಮವನ್ನು "ಅದೃಶ್ಯೇನಾತ್ಮ್ಯೇ" ಎಂದು ಹೇಳಿದೆ. ಅದೃಶ್ಯತ್ವವು ಹೃದಯ ಗುಹಾಂತರದಲ್ಲಿ ಪ್ರತಿಷ್ಠಿತವಾದ ಜಗತ್ಕರ್ತೃವಾದ ವಸ್ತು ಚಂದ್ರನಬಳಿಗೆ ಸ್ವೇಚ್ಛೆಯಿಂದ ಚಲಿಸುವುದು ಮತ್ತು ತತ್ವಾಭಿಮಾನಿ ದೇವತೆಗಳ ಜತೆಯಲ್ಲಿಯೇ ದೇಹಗಳಲ್ಲಿದ್ದರೂ ಅವರುಗಳೂ ಪೂರ್ಣವಾಗಿ ತಿಳಿಯಲ್ಪಡದ ವಸ್ತು ಎಂದು ಹೇಳಿದೆ ಆದ್ದರಿಂದ ಈ ವಸ್ತುವು ಶ್ರೀ ವಿಷ್ಣುವಿನಿಂದ ಅನ್ಯನೆಂಬ ಸಂಶಯವು ಉಂಟಾಗುತ್ತದೆ ಆದರೆ ಸಪ್ತಯುಂಜತಿ ಸಪ್ತವಿಷಯ ಇಂದ್ರಿಯಗಳನ್ನು ಯೋಜಿಸುವವನು ಎಂಬುದರಿಂದ ವಿಷ್ಣುವೆಂದೇ ಹೊರತು ಬೇರೆಯೆಂದಲ್ಲ ಸಪ್ತಚ್ಛಂದೋಭಿಮಾನಿ ದೇವತೆಗಳನ್ನು ಸಂಯೋಜಿಸುವ ಸಪ್ತಸ್ಕಂದ ಎಂಬ ವೇದಾಭಿಮಾನಿ ದೇವತೆ ಸೂರ್ಯನು ಅಲ್ಲ. ಸಿದ್ಧಾಂತ ರೀತಿಅರ್ಥವು- ಸಪ್ತ ಇಂದ್ರಿಯಗಳಲ್ಲಿರುವ ಅಭಿಮಾನಿ ದೇವತೆಗಳಲ್ಲಿ "ಅಧ್ಯಾತ್ಮ" ಅಂತರ್ಯಾಮಿಯಾಗಿ ಇಂದ್ರಿಯ ಸಂಬಂಧಗಳನ್ನು ಜೀವರುಗಳಿಗೆ ಹೊಂದಿಸಿ ಕೊಡುವವನು ಎಂದು ಸಪ್ತಚ್ಛಂದೋಭಿಮಾನಿ ದೇವತೆಗಳನ್ನು "ಸಪ್ತಚ್ಛಂದ"ವೆಂಬ ವೇದಾಭಿಮಾನಿ ದೇವತೆಯ ಸಂಬಂಧ ಸೂರ್ಯರಥದಲ್ಲಿ ಸೂರ್ಯನ ಅಂತಸ್ಥನು ಎಂದು ಅರ್ಥ ಸೂರ್ಯರಥವು—ನಾಲ್ಕು ಮಾಸಾಖ್ಯ ಮೂರು ನಾಭಿಗಳುಳ್ಳ ಸುಧೃಢ ಏಕಚಕ್ರ. ಛಂದೋಭಿಮಾನಿ ಏಳು ಕುದುರೆಗಳನ್ನುಳ್ಳ "ಸಪ್ತಛಂದ" ನಾಮಕ ಏಕ ಕುದುರೆಯ ಸಂಬಂಧದಿಂದ ಮೇರುಮಾನಸೋತ್ತರ ಮಧ್ಯಗತ ಆಕಾಶ ಗಮನವುಳ್ಳ ರಥವು. ಈ ಚಕ್ರದಲ್ಲಿ ಸಮಸ್ತ ಲೋಕಗಳು ಆಶ್ರಯ ಪಡೆದು ಅಂತಃಕರಣ ಚತುಷ್ಟಯ ವಿಷಯಗಳ ಹೋಮ ಸಂಬಂಧವಾದ ವೇದ ವಾಕ್ಯಗಳ ಸಾರವಾದ "ಇಂದ್ರ" "ಅಗ್ನಿ" "ಶ್ರೀ" ದೇವತೆಗಳಿಗೆ ಸ್ವಾಮಿಯಾದ ವಾಯುನಾಮಕ ಮುಖ್ಯಾರ್ಥ ಪ್ರಾಣಶಬ್ದವಾಚ್ಯ ಪುಣ್ಯಜ್ಯೋತಿ ಸರ್ವಜ್ಞ ವಸ್ತುವನ್ನು ಬ್ರಹ್ಮದೇವರು ತಪಸ್ಸಿನಿಂದ ಹೊಂದಿದರು. ಅಂದರೆ ಚತುರ್ಮುಖ ಬ್ರಹ್ಮನಿಗೆ ವಂದ್ಯನಾನಾದವನು ಶ್ರೀ ವಿಷ್ಣುವೆಂದೇ ಹೇಳಿದೆ.

**ಸೂ ॥ ಓಂ ॥ ಅಂತಸ್ತದ್ಧರ್ಮೋಪದೇಶಾತ್ ॥ ಓಂ ॥ 20**

**2 ಅಂತಃಶ್ರೂಯಮಾಣೋ ವಿಷ್ಣುರೇವ । ಅಂತಃಸಮುದ್ರೇ ಮನಸಾಚರಂತಂ ಬ್ರಹ್ಮಾನ್ವವಿಂದದ್ದಶಹೋತಾರಮರ್ಣೇ ।**
(ತೈ ಆ -3-11-1)

**ಸಮುದ್ರೇಂತಃ ಕವಯೋವಿಚಕ್ಷತೇ । ಮರೀಚೀನಾಂ ಪದಮಿಚ್ಛಂತಿ ವೇಧಸಃ । (ತೈ. ಆ 3-11-11) ಯಸ್ಯಾಂಡಕೋಶಂ ಶುಷ್ಮಮಾಹು (ತೈ ಆ. 3-11-4) ಇತ್ಯಾದಿ ತದ್ಧರ್ಮೋಪದೇಶಾತ್ । ಸ ಹಿ ಕ್ಷೀರಸಮುದ್ರಶಾಯೀ ।**

ಈ ಗುಹಾಂತರದಲ್ಲಿರುವಂತೆ ಹೇಳಲ್ಪಟ್ಟ ವಸ್ತುವು ವಿಷ್ಣುವೇ ಇಂದ್ರಾದಿ ದೇವತೆಗಳಲ್ಲ ಆ ವಿಷ್ಣುವಿನ ಸ್ಪಷ್ಟ ಧರ್ಮಗಳಾದ 1) ಕ್ಷೀರ ಸಮುದ್ರ ಮಧ್ಯಸ್ಥತ್ವ 2) ಪ್ರಲಯೋದಧಿಸ್ಥಿತತ್ವ 3) ಬ್ರಹ್ಮಾಜ್ಞೇಯತ್ವ 4) ಬ್ರಹ್ಮತಪೋಲಭ್ಯತ್ವ 5) ಬ್ರಹ್ಮಾಂಡವೀರ್ಯತ್ವ ಶ್ರುತಿಗಳಲ್ಲಿ ಅಂತಃಸ್ಥಿತಿಗಳಲ್ಲಿ ಹೇಳಿರುದುವುದರಿಂದ ಶ್ರೀ ವಿಷ್ಣುವೇ ಅಂತ ಸ್ಥಿತನು ಅನ್ಯದೇವತೆಗಳಲ್ಲ.

ಚತುರ್ಮುಖ ಬ್ರಹ್ಮನು ಪ್ರಲಯಾಬ್ಧಿ ಕ್ಷೀರಾಬ್ಧಿ ಜಲಾಬ್ಧಿ ಮಧ್ಯದಲ್ಲಿ ಸ್ವೇಚ್ಛೆಯಿಂದ ಸಂಚಾರಮಾಡುವವನೂ ಜ್ಞಾನ ಕರ್ಮಾಖ್ಯ ದಶೇಂದ್ರಿಯಗಳಲ್ಲಿ ಆಯಾ ವಿಷಯ ಸಂಬಂದಗಳನ್ನು ಸ್ಥಾಪಿಸಿ ಜೀವರಿಗೆ ಸಂಬಂಧ ಉಂಟಾಗುವಂತೆ ಮಾಡುವವನೂ ಜೀವರುಗಳ ಆಶ್ರಯನಾದ ಶ್ರೀ ವಿಷ್ಣುವನ್ನು ಆತನ ಜ್ಞಾನಕ್ಕಾಗಿ ಆಶ್ರಯಿಸುವನು. ಬ್ರಹ್ಮಾಂಡಾಖ್ಯ ಕೋಶವು ಶ್ರೀ ವಿಷ್ಣುವಿನ ವೀರ್ಯವನ್ನು ಉಪಾದಾನ ಕಾರಣವಾಗಿ ಉಳ್ಳದ್ದು ಈ ವಿಶೇಷ ಧರ್ಮಗಳಿಂದ ಕ್ಷೀರ ಸಮುದ್ರಶಾಯೀ ಎಂದು ಶ್ರೀ ವಿಷ್ಣುವೇ ಹೇಳಲ್ಪಡುವನು

**3. ತಸ್ಯ ಚ ವೀರ್ಯಮಂಡಕೋಶಃ ।**
**ಸೋಭಿಧ್ಯಾಯ ಶರೀರಾತ್ಸ್ವಾತ್ಸಿಸೃಕ್ಷುರ್ವಿವಿಧಾಃ ಪ್ರಜಾಃ ।**
**ಅಪ ಏವ ಸಸರ್ಜಾದೌ ತಾಸುವೀರ್ಯಮವಾಸೃಜತ್ ॥**
**ತದಂಡಮಭವದ್ಧೈಮಂಸಹಸ್ರಾಂಶುಸಮಪ್ರಭಂ ।**
**ಯಸ್ಮಿನ್ನಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ ।**

**ಆಪೋ ನಾರಾ ಇತಿಪ್ರೋಕ್ತಾ ಆಪೋ ವೈ ನರಸೂನವಃ ।**
**ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃಸ್ಮೃತಃ**
**ಇತಿ ವ್ಯಾಸಸ್ಮೃತೇಃ ॥**

ಶ್ರೀ ವಿಷ್ಣುವಿನ ವೀರ್ಯವೇ ಅಂಡಕೋಶವು (ಬ್ರಹ್ಮಾಂಡಾಖ್ಯಸ್ಥಾನ) ಈ ವಿಷ್ಣುವೇ ತನ್ನ ಶರೀರದಿಂದ ನಾನಾವಿಧ ಪ್ರಜೆಗಳನ್ನು ಸೃಷ್ಟಿಸಲು ಯೋಚಿಸಿ ಅಂಡ ಸೃಷ್ಟಿಗಿಂತ ಮೊದಲೇ ಆವರಕನಾಗಿ "ಅಪ " ಪ್ರಲಯಾಬ್ಧಿ ಜಲವನ್ನು ಸೃಷ್ಟಿಮಾಡಿದನು ಆ ಪ್ರಲಯೋದಕದಲ್ಲಿ ತನ್ನ ಹೇಮಾತ್ಮಕವಾದ ಸೂರ್ಯಸಮ ಪ್ರಭಾವವುಳ್ಳ, ತನ್ನ ವೀರ್ಯವನ್ನು ಮಾಯಾದ್ವಾರಾ ಅಂಡದಲ್ಲಿಟ್ಟು ಚತುರ್ಮುಖ ಬ್ರಹ್ಮನು ಹುಟ್ಟುವಂತೆ ಮಾಡಿದನು ನಾಶರಹಿತನಾದ ಶ್ರೀ ವಿಷ್ಣುವು ತನ್ನಿಂದಲೇ ಪೂರ್ವೋತ್ಪನ್ನವಾದ ನೀರಿನಲ್ಲಿ ಮಲಗಿರುವುವರಿಂದ ನಾರಾಯಣ ಶಬ್ದವಾಚ್ಯನು ಎಂದು ವ್ಯಾಸ ಸ್ಮೃತಿಯು (ಭಾಗವತ ತಾತ್ಪರ್ಯದಲ್ಲಿ ಅಂಧ ಸೃಷ್ಟಿಯು ನಂತರ ಅಪ್ ಸೃಷ್ಟಿಯು ಹೇಳಿದೆ )

**4. ಅಹಂ ತತ್ತ್ವೇಜೋರಶ್ಮೀನ್ನಾರಾಯಣಂ ಪುರುಷಂಜಾತಮಗ್ರತಃ ।**
**ಪುರುಷಾತ್ಪ್ರಕೃತಿರ್ಜಗದಂಡಮಿತಿ ಚತುರ್ವೇದಶಿಖಾಯಾಂ ।**

ಜೀವಪ್ರೇರಕನಾದ ಜಗತ್ಪ್ರಕಾಶಕನಾದ ಪೂರ್ಣಷಡ್ಗುಣನಾದ ನಾರಾಯಣಾಖ್ಯ ಪುರುಷನಿಂದ ಶ್ರೀ ಪ್ರಕೃತಿಯು ದ್ವಾರವಾಗಿ ಜೀವಸಮುದಾಯವು ಯಥಾಯೋಗ್ಯವಾಗಿ ಉತ್ಪನ್ನವಾಯಿತು.

## ಸೂ ॥ ಓಂ ॥ ಭೇದವ್ಯಪದೇಶಾಚ್ಚಾನ್ಯಃ ॥ ಓಂ ॥ 21

ಸಮುದ್ರಸ್ಥತ್ವದಿಂದ ವಿಷ್ಣುವೆಂದು ತಾತ್ಪರ್ಯವಾದರೂ, ಇಂದ್ರಾದಿದೇವತೆಗಳಿಂದ ಭೇದವನ್ನು ತೋರಿಸಲು ಆ ಇಂದ್ರಾದಿದೇವತೆಗಳ ಅಂತರ್ಯಾಮಿತ್ವ ಮತ್ತು ಪ್ರೇರಕತ್ವ ಎಂಬ ಭೇದ ಧರ್ಮಗಳನ್ನು ಹೇಳಿ ಈ ಸೂತ್ರವು ಈ ಭೇದ ಧರ್ಮದಿಂದ ಆವನು ಶ್ರೀ ವಿಷ್ಣುವೇ ಎಂಮ ಸ್ಥಿರಪಡಿಸುವುದು.

**"ಇಂದ್ರಸ್ಯಾತ್ಮಾನಿಹಿತಃ ಪಂಚಹೋತಾ"**

ಈ ವಿಷ್ಣುವು ಇಂದ್ರದೇವತೆಯ ಹೃದಯದಲ್ಲಿದ್ದು ಇಂದ್ರಿಯಗಳಿಂದ ವಿಷಯ ಗಳಿಗೆ ಸಂಬಂಧವನ್ನು ಕಲ್ಪಿಸುವನು

**ವಾಯೋರಾತ್ಮಾನಂ ಕವಯೋನಿಚಿಕ್ಯುಃ ।**

ವಾಯು ದೇವರ ಪ್ರೇರಕನಾಗಿ ಒಳಗೆ ಇರುವವನು ಶ್ರೀ ವಿಷ್ಣುವು ಎಂದು ಬಲ್ಲವರು ಬಲ್ಲರು.

**ಅಂತರಾದಿತ್ಯೇ ಮನಸಾ ಚರಂತಂ ದೇವಾನಾಂ ಹೃದಯಂ ಬ್ರಹ್ಮಾನ್ವವಿಂದತ್ (ತೈ ಆ. 3–11) ಇತ್ಯಾದಿ ಭೇದವ್ಯಪದೇಶಾತ್**

ಸೂರ್ಯನಲ್ಲಿ ಸ್ವೇಚ್ಛೆಯಿಂದ ಸಂಚರಿಸುವವನು ವಿಷ್ಣುವೇ ಎಲ್ಲಾ ದೇವತೆಗಳ ಹೃದಯಾಕಾಶದಲ್ಲಿ ಇರುವ ವಸ್ತುವನ್ನು ಬ್ರಹ್ಮದೇವರು ಹೊಂದಿದರು ಈ ರೀತಿ ದೇವತಗಳಿಂದ ವಿಷ್ಣುವಿನ ಭೇದವನ್ನು ಈ ಶ್ರುತಿಗಳು ತಿಳಿಸಿ ಕೊಡುವುವು

– ಇತಿ ಅಂತಸ್ಥತ್ವಾಧಿಕರಣವು –

– ಆಕಾಶಾಧಿಕರಣಂ –

**1 ಕೋಹ್ಯೇವಾನ್ಯಾತ್ಕಃಪ್ರಾಣ್ಯಾದ್ಯದೇಷ ಆಕಾಶ ಆನಂದೋ ನಸ್ಯಾತ್ (ತೈ. 2-7) ಇತ್ಯಾಕಾಶಸ್ಯಾನಂದಮಯತ್ವೇ ಹೇತುರುಕ್ತಃ ।**
**ನತು ವಿಷ್ಣೋಃ॥**

ಆಕಾಶಶಬ್ದವಾಚ್ಯವು (ಪರಮಾತ್ಮನು) ಆನಂದಮಯನಲ್ಲದಿದ್ದಲ್ಲಿ ಆದರಿಂದ ಆಕಾಶಕ್ಕೆ ಲೋಕ ಚೇಷ್ಟಕತ್ವವು ಹೇಗೆ ಸಾಧ್ಯವು ಎಂದು ಮೇಲಿನ ಶ್ರುತಿಯಿಂದ ಆನಂದಮಯನಿಗೆ ಲೋಕಚೇಷ್ಟಕತ್ವ ಧರ್ಮವನ್ನು ಹೇಳಿದೆ. ಶ್ರೀ ವಿಷ್ಣುವಿಗೆ ಅಲ್ಲ ಎಂದರೆ

**2. ಇತಿ ನಮಂತವ್ಯಂ । ಯತಃ ॥**

ಹಾಗೆ ತಿಳಿಯಲಾಗದು ಏಕೆಂದರೆ—

**ಸೂ॥ ಓಂ ॥ ಆಕಾಶಸ್ತಲ್ಲಿಂಗಾತ್ ॥ ಓಂ ॥ 22 ॥**

ಆಕಾಶ ಶಬ್ದವಾಚ್ಯನು ಶ್ರೀ ವಿಷ್ಣುವೇ ಪ್ರಸಿದ್ಧಾಕಾಶವಲ್ಲ. ಏಕೆಂದರೆ ಛಂದೋಗ ಶ್ರುತಿಯಲ್ಲಿ ಆಕಾಶವಲ್ಲಿ ಪರೋವರೀಯತ್ವಾದಿರೂಪ ವಿಷ್ಣುಲಿಂಗವು ಹೇಳಲ್ಪಟ್ಟಿದೆ

**ಅಸ್ಯ ಲೋಕಸ್ಯಕಾಗತಿರಿತ್ಯಾಕಾಶ ಇತಿ ಹೋವಾಚೇತ್ಯತ್ರ (ಛಂ 1-೪)**
**ಭೂತಾಕಾಶಸ್ಯ ಪ್ರಾಪ್ತಿಃ । ಸಚಾಸೌ ಯುಜ್ಯತೇ ।**
**ಕಿಂತುವಿಷ್ಣುರೇವ 'ಸಏಷ ಪರೋವರೀಯಾನುದ್ಗೀಥಃ ಸಏಷೋಽನಂತ"**
**ಇತ್ಯಾದಿತಲ್ಲಿಂಗಾತ್ ।**

ಛಂದೋಗ ಶ್ರುತಿಯಲ್ಲಿ ಆಕಾಶ ಶಬ್ಧವಾಚ್ಯನಿಗೆ ಸರ್ವಭೂತಗಳಿಂದಲೂ ಶ್ರೇಷ್ಠತ್ವವನ್ನು ಹೇಳಿದೆ ಮತ್ತು ಈ ಲೋಕಕ್ಕೆ ಆಕಾಶವೇ ಆಧಾರವೆಂದೂ ಹೇಳಿದೆ. ಭೂತಾಕಾಶಕ್ಕೆ ಈ ಗುಣಗಳು ಹೊಂದುವುದಿಲ್ಲ ಆದ್ದರಿಂದ ಶ್ರೀ ವಿಷ್ಣುವೇ ಆಕಾಶ ಶಬ್ದವಾಚ್ಯನು

ಶಿಲಕನ ಪ್ರಶ್ನೆಗೆ ಪ್ರವಹಣ ರಾಜನು ಉತ್ತರವಾಗಿ ಪೂರ್ಣ ಪ್ರಕಾಶಮಾನನಾದದ್ದರಿಂದ ಶ್ರೀವಿಷ್ಣುವೇ ಆಕಾಶ ಶಬ್ದವಾಚ್ಯನೆಂದು ಹೇಳಿ ಮಹಿಮೆಯನ್ನು ಹೀಗೆ ಹೇಳಿದ್ದಾನೆ "ಸರ್ವಾಣಿ ಹವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೆ ಆಕಾಶಂಪ್ರತ್ಯಸ್ತಂ ಯಂತಿ ಆಕಾಶೋಹ್ಯೇವೈಭ್ಯೋಜ್ಯಾಯಾನಾಕಾಶಃ ಪರಾಯಣಂ ಸಏಷ ಪರೋವರೀಯಾನುದ್ಗೀಥ ಸ ಏಷ್ಯ ಅನಂತ" ಇತಿ ಅರ್ಥ ಜಡಜೀವಾದಿ ಸಕಲ ಪ್ರಪಂಚವೂ ಆಕಾಶದಿಂದಲೇ ಹುಟ್ಟುತ್ತವೆ ಅವನಲ್ಲಿಯೇ ಲಯವನ್ನು ಹೊಂದುತ್ತವೆ (ಪ್ರಲಯದಲ್ಲಿಯೂ ಮುಕ್ತಿಯಲ್ಲಿಯೂ ಕೂಡ) ಈ ಆಕಾಶವೇ ಸರ್ವಭೂತಗಳಿಂದಲೂ ಉತ್ತಮವು ಮತ್ತು ಸರ್ವಾಶ್ರಯವಸ್ತುವು ಈ ಆಕಾಶವೇ ಉತ್ತಮೋತ್ತಮ ವಸ್ತುವೆಂದು ಉಚ್ಚಕಂಠದಿಂದ ಹೇಳಲ್ಪಡುತ್ತದೆ. ಆತನೇ ದೇಶಕಾಲ ಗುಣಗಳಿಂದ ಅಪರಿಚ್ಛಿನ್ನ ಅನಂತನು ಈ ವಿಷ್ಣುವಿನಲ್ಲಿಯೇ ಈ ಧರ್ಮಗಳು ಪ್ರಸಿದ್ಧ. ಆದ್ದರಿಂದ ಆಕಾಶ ಶಬ್ದವಾಚ್ಯನು ಶ್ರೀ ವಿಷ್ಣುವೇ ಪ್ರಸಿದ್ಧವಾದ ಜಡಾಕಾಶವಲ್ಲ.

**3. ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ**
**ಪಾರ್ಥಿವಾನಿ ವಿಮಮೇ ರಜಾಂಸಿ । (ಋ. 1-154-1)**
**ಪರೋಮಾತ್ರಯಾ ತನ್ವಾ ವೃಧಾನ (ಋ 7-99-1)**
**ಇತ್ಯಾದಿನಾ ತಸ್ಯೈವಹಿ ತಲ್ಲಿಂಗಂ ।**

ಧೂಳಿಯಲ್ಲಿಯ ಕಣಗಳನ್ನು ಎಣಿಸಿ ಹೇಳಲು ಸಮರ್ಥನಾದ ಈ ಸರ್ವಜಗತ್ತಿನ ಶ್ರೇಷ್ಠಜ್ಞಾನಿ ಚತುರ್ಮುಖ ಬ್ರಹ್ಮನೂ ಕೂಡ ಶ್ರೀ ವಿಷ್ಣುವಿನ ಮಹಿಮೆಯನ್ನು ಪೂರ್ಣವಾಗಿ ತಿಳಿಯಲು ಸಮರ್ಥನಲ್ಲ ಎಂದರೆ ಮಿಕ್ಕ ಜೀವರು ಹೇಗೆ ತಾನೆ ತಿಳಿಯಲು ಸಮರ್ಥರಾಗುವರು. ಈ ಶ್ರುತಿಯು ಶ್ರೀ ವಿಷ್ಣುವಿನ ಸರ್ವೋತ್ತಮತ್ವ ವನ್ನು ತಿಳಿಸುವುದು

**4 ಅನಂತೋ ಭಗವಾನ್ ಬ್ರಹ್ಮಾ ಆನಂದೇತ್ಯಾದಿಭಿಃ ಪದೈಃ ।**
**ಪ್ರೋಚ್ಯತೇ ವಿಷ್ಣುರೇವೈಕಃ ಪರೇಷಾಮುಪಚಾರತ ಇತಿಬ್ರಾಹ್ಮೇ ।**

ಬ್ರಹ್ಮಪುರಾಣದ ವಾಕ್ಯದಿಂದ ಅನಂತ ಭಗವಾನ್, ಬ್ರಹ್ಮಾ, ಆನಂದ ಇತ್ಯಾದಿ ಪದಗಳಿಂದ ಶ್ರೀ ವಿಷ್ಣುವೊಬ್ಬನೇ ಮುಖ್ಯವಾಗಿ ಹೇಳಲ್ಪಡುವನು ಮಿಕ್ಕ ಪುರುಷ ರಲ್ಲಿ ಇವುಗಳ ಉಪಯೋಗವು ಉಪಚಾರ ಮಾತ್ರ

**5 ನಾಮಾನಿ ಸರ್ವಾಣಿ ಯಮಾವಿಶಂತೀ(ಭಾಲ್ಲವೇಯ)ತಿಚೋಕ್ತಂ॥**

ಸರ್ವನಾಮಗಳೂ ಶ್ರೀ ವಿಷ್ಣುವಿನ ಮಾಹಾತ್ಮ್ಯೆಯನ್ನು ಹೇಳುತ್ತವೆ ಎಂದು ಭಾಲ್ಲವೇಯ ಶ್ರುತಿಯು ವಾಕ್ಯ ಉಂಟು

– ಇತಿ ಆಕಾಶಾಧಿಕರಣಂ –

– ಪ್ರಾಣಾಧಿಕರಣಂ –

ಈ ಅಧಿಕರಣದಲ್ಲಿ ಲೋಕದಲ್ಲಿ ಇತರತ್ರ ಪ್ರಸಿದ್ಧವಾದ ಆಧ್ಯಾತ್ಮಿಕ ಎಲ್ಲಾ ಶಬ್ದಗಳಿಂದಲೂ ಲಕ್ಷಿತವಾದ ಪ್ರಾಣಶಬ್ದವು ಪರಮಾತ್ಮನಲ್ಲಿ (ಧರ್ಮಗಳ ದ್ವಾರಾ) ಸಮನ್ವಯ ಮಾಡಲ್ಪಡುವುದು

## ಸೂ ॥ ಓಂ ॥ ಅತ ಏವ ಪ್ರಾಣಃ ॥ ಓಂ ॥ 23 ॥

"ತದ್ವೈತತ್ವಂ ಪ್ರಾಣೋ ಅಭವಃ" ಎಂಬ ಶೃತಿಯಲ್ಲಿ ಹೇಳಿದ ಪ್ರಾಣಶಬ್ದ ವಾಚ್ಯನು ಶ್ರೀ ವಿಷ್ಣುವೇ ಅನ್ಯನಲ್ಲ. "ಶ್ರೀಶ್ಚತೆ " ಎಂಬ ಶ್ರುತಿಯಲ್ಲಿ ಶ್ರೀಪತಿತ್ವ ಧರ್ಮವನ್ನು ಈ ಪ್ರಾಣನಲ್ಲಿ ಹೇಳಿರುವುದು.

1 ತದ್ವೈತ್ವಂ ಪ್ರಾಣೋ ಅಭವಃ ಮಹಾನ್ಭೋಗಃ ಪ್ರಜಾಪತೇಃ ಭುಜಃ ಕರಿಷ್ಯಮಾಣಃ ಯದ್ದೇವಾನ್ಪ್ರಾಣಯೋನವೇತಿ (ತೈ ಆ 3-14) ಮಹಾಭೋಗಶಬ್ದೇನ ಪರಮಾನಂದತ್ವಂ ಪ್ರಾಣಸ್ಯೋಕ್ತಂ ।

ಎಲೈ ವಿಷ್ಣುವೆ, ನೀನು ಬ್ರಹ್ಮಾದಿ ಸಕಲ ಜೀವಸಮುದಾಯಕ್ಕೆ ಯೋಗ್ಯ ಭೋಗಾದಿಗಳನ್ನು ಉಂಟುಮಾಡುತ್ತಿರುವೆ ಸರ್ವೇಂದ್ರಿಯ ದೇವತೆಗಳಲ್ಲಿ ಚೇಷ್ಟೆಯನ್ನುಂಟು ಮಾಡುತ್ತಿ ನೀನೆ ಮುಖ್ಯವಾಗಿ ಪ್ರಾಣಶಬ್ದವಾಚ್ಯನು. ಇಲ್ಲಿ ವಾಯು ಹಾಗೂ ಗುಹ್ಯೇಂದ್ರಿಯಗಳ ಐಕ್ಯದಿಂದ ಸರ್ವೇಂದ್ರಿಯ ಎಂದಿದೆ

3-4. ಸ ಚ ಪ್ರಾಣಃಪ್ರಸಿದ್ಧೇರ್ವಾಯುರಿತ್ಯಾಪತತಿ । ನಚೈವಂ । ಯತೋವಿಷ್ಣುರೇವ ಪ್ರಾಣಃ । ಅತ ಏವ ಶ್ರೀಶ್ಚತೇಲಕ್ಷ್ಮೀಶ್ಚಪತ್ನ್ಯೌ । ಅಹೋರಾತ್ರೇಪಾರ್ಶ್ವೇ । (ತೈ. ಆ. 3-13) ಇತ್ಯಾದಿ ತಲ್ಲಿಂಗಾದೇವ ॥

ಮಹಾಭೋಗ ಶಬ್ದದಿಂದ ವಾಯುವನ್ನು ಹೇಳಿದೆ ಅದನ್ನು ಮುಖ್ಯಪ್ರಾಣನಿಗೆ ಹೇಳಿದ್ದರೂ ಆತನು ರೂಢಿಯಿಂದ ಪ್ರಸಿದ್ಧ ಜೀವನ ಶರೀರದಲ್ಲಿದ್ದು ಜೀವನಾದಿಗಳನ್ನು ಮಾಡಿಸುವುದರಿಂದ ತನ್ನ ಶರೀರಗತ ವಾಯು ವಿಕಾರದ್ವಾರಾ ಆತನೇ ಆನಂದಮಯನು. ಎಂದರೆ ಹಾಗಲ್ಲ ಶ್ರೀ ವಿಷ್ಣುವೇ ಪ್ರಾಣಶಬ್ದ ಮುಖ್ಯವಾಚ್ಯನು ಮುಖ್ಯವಾಗಿ ಶ್ರೀ ವಿಷ್ಣುವಿನ ಧರ್ಮವಾದ ವಕ್ಷಸ್ಥಿತ ಶ್ರೀದೇವಿ ಮತ್ತು ಅಂಕಸ್ಥಿತ ಲಕ್ಷ್ಮೀದೇವಿಯರು ನಿನಗೆ ಹೆಂಡಿರು ಮತ್ತು ಸೂರ್ಯ ಚಂದ್ರರು ನಿನ್ನ ಪಾರ್ಶ್ವದಲ್ಲಿರುವವರು ಎಂದು ಹೇಳಿರುವುದರಿಂದ ಪ್ರಾಣಶಬ್ದ ಮುಖ್ಯವಾಚ್ಯನು ಶ್ರೀ ವಿಷ್ಣುವೇ ಅನ್ಯರಲ್ಲ.

– ಇತಿ ಪ್ರಾಣಾಧಿಕರಣಂ –

– ಜ್ಯೋತಿರಧಿಕರಣಂ –

1-2. ಯೋ ವೇದ ನಿಹಿತಂ ಗುಹಾಯಾಂ (ತೈ. ಉ.2-1) ಇತ್ಯುಕ್ತಂ । ತಚ್ಚ ಗುಹಾನಿಹಿತಂ ವಿನೇಕರ್ಣಾಪತಯತೋ ವಿಚಕ್ಷುರ್ವೀ ಇದಂಜ್ಯೋತಿರ್ಹೃದಯ ಆಹಿತಂಯತ್ । ವಿಮೇಮನಶ್ಚರತಿ ದೂರಆಧೀಃ ಕಿಂಸ್ವಿದ್ವಕ್ಷ್ಯಾಮಿ ಕಿಮನೂಮನಿಷ್ಯ (ಋ. 6-9-6) ಇತಿ ಜ್ಯೋತಿರುಕ್ತಂ । ತಚ್ಚ ಜ್ಯೋತಿರಗ್ನಿಸೂಕ್ತತ್ವಾತ್ಪ್ರಸಿದ್ಧೇಶ್ಚ ಅಗ್ನಿರೇವೇತಿಪ್ರಾಪ್ತಂ ಅತಆಹ ॥

ಈ ಶ್ರುತಿಯಲ್ಲಿ ಹೃದಯ ಗುಹೆಯಲ್ಲಿ ಯಾವ ವಸ್ತುವೋ ಅದೇ ಆನಂದಮಯ ವಾಚ್ಯವೆಂದು ಹೇಳಿದೆ. ತದೇವ "ವಿಮೇಕರ್ಣಾ" ಎಂಬ ವಾಕ್ಯದ ಪರ್ಯಾಲೋಚನೆ ಯಿಂದ ಜ್ಯೋತಿಃಶಬ್ದಕ್ಕೆ ಅನ್ಯತ್ವದಿಂದ ಅಗ್ನಿಯೋ ಅಥವಾ ವಿಷ್ಣುವೋ ಎಂದು ಸಂದೇಹವು "ವಿಮೇಕರ್ಣಾ ಯತ್" ಎಂಬ ಶ್ರುತ್ಯರ್ಥವು – ನನ್ನ ಹೃದಯಾವಕಾಶ ದಲ್ಲಿ ಯಾವ ವಸ್ತುವು ಪೂರ್ಣವಾಗಿದೆಯೋ ಆ ವಸ್ತುವು ಅತ್ಯಂತವಾಗಿ ಕರ್ಣಾದಿ ಇಂದ್ರಿಯಗಳಿಂದ ವ್ಯತ್ಯಸ್ತವಾಗಿದೆ. ಮನಸ್ಸು ಸಹಾ ಆ ಜ್ಯೋತಿಯಿಂದ ದೂರ ಸರಿಯುತ್ತದೆ ದರ್ಶನ ಅತೀವ ವಿರುದ್ಧವಾಗಿದೆ ಆದಕಾರಣ ಅಲ್ಪಬುದ್ಧಿ ಯುಳ್ಳ ನಾನು ಆ ವಸ್ತುವನ್ನು ಏನೆಂದು ಹೇಳಲು ಶಕ್ತನು? ಏನೆಂದು ತಾನೆ ಚಿಂತಿಸ ಬಲ್ಲೆನು ? ಅಂದರೆ ಆ ವಸ್ತುವನ್ನು ಅತ್ಯಲ್ಪವಾದ ನನ್ನ ಬುದ್ಧಿಯಿಂದ ಗ್ರಹಿಸುವದು ಅಸಾಧ್ಯವು ಆ ವಸ್ತುವು ಅಚಿಂತ್ಯಾದ್ಭುತ ಮಹಿಮೆಯುಳ್ಳದ್ದು ಹೀಗೆ ಜ್ಯೋತಿಯು ಹೇಳಲ್ಪಟ್ಟಿದೆ ಆ ಜ್ಯೋತಿಯು ಅಗ್ನಿಸೂಕ್ತದಿಂದಲೂ ಪ್ರಸಿದ್ಧ ಅಗ್ನಿಯ ಧರ್ಮ ವಾಗಿಯೂ ಅಗ್ನಿಯೆಂದು ತಿಳಿಯುವುದು.

ಎಂದರೆ ಮುಂದಿನ ಹೇಳಿಕೆಯು—

## ಸೂ ॥ ಓಂ ॥ ಜ್ಯೋತಿಶ್ಚರಣಾಭಿಧಾನಾತ್ ॥ ಓಂ ॥ 24

**3. ವಿಷ್ಣುರೇವಜ್ಯೋತಿಃ । ಕರ್ಣಾದೀನಾಂ ವಿಚರಣಾಭಿಧಾನಾತ್ ॥**

ಪ್ರಸಿದ್ಧಾಗ್ನಿಯು ಆನಂದಮಯನಲ್ಲಿ, ಮತ್ತೆ ಶ್ರೀ ವಿಷ್ಣುವೇ. ಕರ್ಣಾದಿ ಇಂದ್ರಿಯಗಳಿಂದ ಅಲ್ಪಮಾತ್ರ ತಿಳಿವಳಿಕೆ ಸಾಧ್ಯವೆಂದು ಹೇಳಿ ಯಾರಿಂದಲೂ ಆ ವಸ್ತುವು ಸಾಕಲ್ಯೇನ ತಿಳಿಯಲು ಅಸಾಧ್ಯವೆಂಬ ವಿಷ್ಣುವಿನ ಅಸಾಧಾರಣ ಧರ್ಮವನ್ನು ಹೇಳಿರುವುದರಿಂದ "ಪರೋ ಮಾತ್ರಯಾ ತನ್ವಾ ವೃಧಾನ" ಎಂಬ ಶ್ರುತಿಯು ಈ ಅಸಾ ಧಾರಣ ಧರ್ಮವನ್ನು ಶ್ರೀ ವಿಷ್ಣುವಿನಲ್ಲಿ ಹೇಳಿರುವುದು.

**4. ಸ ಹಿ ಪರೋಮಾತ್ರಯಾ ತನ್ವಾವೃಧಾನ** (ಋ. 7-99-1)
**ಇತ್ಯಾದಿನಾ ಕರ್ಣಾದಿವಿದೂರಃ ॥**

ವಿಷಯಗ್ರಾಹಿಗಳಾದ ಎಲ್ಲಾ ಇಂದ್ರಿಯಗಳಿಂದಲೂ ನೀನು ದೂರನಾಗಿರುವೆ



9]

ಯಾವ ಪುರುಷನೂ ನಿನ್ನ ಪೂರ್ಣ ಮಹಿಮೆಯನ್ನು ತಿಳಿಯಲಾರ ಎಂದು ಹೇಳಿದೆ, ಅದರಿಂದ ಶ್ರೀ ವಿಷ್ಣುವೇ ಮುಖ್ಯವಾಗಿ ಜ್ಯೋತಿಶಬ್ದವಾಚ್ಯನು

ಇತಿ ಜ್ಯೋತಿರಧಿಕರಣಂ

## ಛಂದೋಭಿಧಾನಾಧಿಕರಣಂ

## ಸೂ ॥ ಓಂ ॥ ಛಂದೋಭಿಧಾನಾನ್ನೇತಿಚೇನ್ನ ತಥಾ ಚೇತೋಽರ್ಪಣನಿಗದಾತ್ತಥಾ ಹಿ ದರ್ಶನಂ ॥ ಓಂ ॥ 25

ಛಂದೋಗ ಶೃತಿಯಲ್ಲಿ ಗಾಯತ್ರಿ ಪದವು 24 ಅಕ್ಷರಗಳುಳ್ಳ ಛಂದಸ್ಸೆಂದು ಹೇಳಲ್ಪಟ್ಟಿದೆ ಆ ಗಾಯತ್ರೀ ಶಬ್ದವು ವಿಷ್ಣುವಾಚಕವಾಗಲಾರದೆಂದರೆ ಶ್ರೀ ವಿಷ್ಣುವೇ ಗಾಯತ್ರಿ ಶಬ್ದವಾಚ್ಯನು ಶ್ರೀ ವಿಷ್ಣುವಿನ ದರ್ಶನ ವಿಶೇಷಾಂಗವಾಗಿ ಅನುಷ್ಠಾನಕ್ಕೋಸ್ಕರ ಗಾನ, ತ್ರಾಣಕರಣನಿಮಿತ್ತದಿಂದ ಗಾಯತ್ರಿ ಶಬ್ದವಾಚ್ಯತ್ವವು ಹೇಳಲ್ಪಟ್ಟಿದೆ. ಆದರೆ "ಗಾಯತಿ ತ್ರಾಯತಿ ಚ" ಎಂಬ ಬೇರೆ ಶ್ರುತಿಯಿಂದ ಗಾಯತ್ರಿ ಶಬ್ದವು ಶ್ರೀ ವಿಷ್ಣುವನ್ನು ಹೇಳುವುದಿಲ್ಲವೆಂದರೆ ಹಾಗಲ್ಲ ಶ್ರುತಿಯಲ್ಲಿ ಗಾಯತ್ರ್ಯಾದಿ ಶಬ್ದಾರ್ಥ ರೂಪ ನಿಮಿತ್ತದಿಂದ ಹೃದಯಾವಕಾಶದಲ್ಲಿ ಉಪಾಸನ ಪ್ರಯೋಜನಕ್ಕೋಸ್ಕರ ಗಾಯತ್ರಿ ಶಬ್ದವು ಶ್ರೀ ವಿಷ್ಣುವನ್ನೇ ಹೇಳುವುದು ಅವನೇ ಹೃದಯಾವಕಾಶದಲ್ಲಿ ಸ್ಥಿರತೆಯಿಂದ ಧ್ಯಾನಾರ್ಹನು.

ಈ ಅಧಿಕರಣದಲ್ಲಿ ಗಾಯತ್ರ್ಯಾದಿ ಅಧಿವೇದಗತ ಗಾಯತ್ರ್ಯಾದಿ ಅಶೇಷ ಶಬ್ದಗಳ ಸಮನ್ವಯವನ್ನು ಮಾಡಿದೆ.

**3. ಅಥ ಯದತಃಪರೋ ದಿವೋ ಜ್ಯೋತಿರ್ದೀಪ್ಯತೆ (ಛಾ. 6-13-7) ಇತ್ಯುಕ್ತಸ್ಯ ಜ್ಯೋತಿಷೋ ಗಾಯತ್ರೀ ವಾ ಇದಂ ಸರ್ವಂ(ಛಾ3-12-1) ಇತಿಗಾಯತ್ರ್ಯಾ ಸಮಾರಂಭಃ ಕೃತಃ । ತಸ್ಮಾನ್ನವಿಷ್ಣುರಿತಿಚೇನ್ನ । ತಥಾಚೇತೋಽರ್ಪಣಾರ್ಥಂ ಹಿ ನಿಗದ್ಯತೇ ।**

ಪುರುಷರ ಹೃದಯ ಗುಹೆಯಲ್ಲಿ ಯಾವ ಜ್ಯೋತಿಸ್ಸುಂಟೋ ಅದಕ್ಕೆ "ಅಥಯದತ: ಪರೋದಿವೋಜ್ಯೋತಿ: ದೀಪ್ಯತ ವಿಶ್ವತಃ ಪೃಷ್ಠೇಷು ಸರ್ವತ ಪೃಷ್ಠೇಷು ಅನುತ್ತ

ಮೇಷು ಉತ್ತಮೇಷು ಲೋಕೇಷು ಇದಂವಾವ ತದ್ಯದಿಮಸ್ಮಿನ್ ಅಂತ ಪುರುಷೇ ಜ್ಯೋತಿ 'ಛಾಂದೋಗ ಶ್ರುತಿಯಲ್ಲಿ 'ಗಾಯತ್ರೀವಾ ಇದಂ ಸರ್ವಂ' ಎಂದು ಗಾಯತ್ರಿಯಲ್ಲಿ ಐಕ್ಯತೆಯು ತಾತ್ಪರ್ಯದಿಂದ ಉಪಕ್ರಮವಿರುವುದರಿಂದ ಜ್ಯೋತಿಶಬ್ದವೂ ಗಾಯತ್ರೀಶಬ್ದಾರ್ಥವೇ ಈ ಗಾಯತ್ರಿಯು ವರ್ಣ ಸಮಾವೇಶ ಲಕ್ಷಣ ಮಂತ್ರಾತ್ಮಕವು.ವಿಷ್ಣುವಲ್ಲ. ಗಾಯತ್ರೀಶಬ್ದವು ಛಂದಸ್ಸಿನಲ್ಲಿ, ರೂಢಿಯಿಂದ ಅಗ್ನಿಸೂಕ್ತದ ಜ್ಯೋತಿಶಬ್ದವೂ ಗುಹಾನಿಹಿತತ್ವವೂ ಆನಂದಮಯತ್ವವೂ ಶ್ರೀವಿಷ್ಣುವಿನಿಂದ ಬೇರೆಯೇ ಆಗಿವೆ ಗಾಯತ್ರ್ಯಾದಿಶಬ್ದಗಳು ಮಂತ್ರಪರಗಳು ಮತ್ತು ಅವುಗಳ ಮಹಿಮಾಪರಗಳು ಎಂದು ಪೂರ್ವ ಪಕ್ಷವು. ಸಿದ್ಧಾಂತರೀತ್ಯಾ ಅರ್ಥವು ಹೀಗಿದೆ—

ಅರ್ಥಶಬ್ದವು ಶ್ವೇತದ್ವೀಪ ಅನಂತಾಸನ ವೈಕುಂಠಗತ ನಾರಾಯಣ ವಾಸುದೇವ ವೈಕುಂಠನಾಮಕ ರೂಪತ್ರಯಗಳನ್ನು ಹೇಳುತ್ತದೆ ಅತ, ವಿವಕ್ಷಿತ ಬುದ್ಧಿಸ್ಥಿತಿಗಿಂತ ಉಚ್ಚಸ್ಥಾನದಲ್ಲಿರುವುದು. ತೇಜೋರೂಪವಾದುದು ಅಂತರಿಕ್ಷದಲ್ಲಿರುವ ವೈಜಯಂತ, ಮೇರು ಸತ್ಯಲೋಕ ಚತುರ್ಮುಖ ಬ್ರಹ್ಮಲೋಕಗಳಿಗಿಂತ ಕ್ರಮವಾಗಿ ಮೇಲೆ ಮೇಲೆ ಉತ್ತಮತ್ವವಿಲ್ಲದ ಅತ್ಯುತ್ತಮ ಲೋಕಗಳಲ್ಲಿ ಪ್ರಕಾಶಮಾನವಾಗಿದೆ ಈ ಜ್ಯೋತಿಯೇ ಪುರುಷರ ಹೃದಯಾವಕಾಶದಲ್ಲಿದ್ದು ಗಾಯತ್ರೀನಾಮಕ (ಗಾಯತ್ರೀ ದೇವಿಯಲ್ಲಿರುವ ಸ್ತ್ರೀರೂಪ) ಹಯಗ್ರೀವ ರೂಪವು ಪರಮಾತ್ಮನ ಪ್ರಥಮ ರೂಪವು ಎರಡನೇ ರೂಪವು ಶ್ರೀ ಭಗವಂತನ ಮತ್ಸ್ಯಾದಿ ಅವತಾರ ರೂಪಗಳು. ಸರ್ವಪುರುಷರ ಒಳಗೆ ಇರುವ ರೂಪವು ಗಾಯತ್ರಿನಾಮಕ ಭಗವಂತನೇ. ಆತನ ಶ್ರುತಿಯ ರೂಪವು 'ವಾಕ್' ಎಂದು "ಇದಂ ಸರ್ವಂಭೂತಂ ವಾಗ್ವೈ".ಎಲ್ಲಾ ಭೂತಗಳೂ ಭಗವಂತನ ಅಧೀನವೇ ಆದ್ದರಿಂದಲೇ ಸತ್ಯಸ್ವಾಮಿತ್ವದಿಂದಲೇ ಶ್ರೀವಿಷ್ಣುತ್ವವು ಆದ್ದರಿಂದ ಜ್ಯೋತಿಶಬ್ದ ವಾಚ್ಯನು ಶ್ರೀ ವಿಷ್ಣುವೇ. ಗಾಯತ್ರಿ ಶಬ್ದ ಜ್ಯೋತಿಶಬ್ದದಿಂದ ಅಭೇದದರ್ಮದಿಂದ ಉಪಾಸನಾರ್ಥವಾಗಿ ಹೇಳಿದೆ ಹೀಗೆ ಅಗ್ನ್ಯಾದಿ ತೇಜಃ ಶಬ್ದಗಳು ಗಾಯತ್ರ್ಯಾದಿ ಛಂದಃ ಶಬ್ದಗಳು ಸಮನ್ವಯದಿಂದ ಶ್ರೀ ಭಗವಂತನು ಅನ್ನ ಗಾಯತ್ರ್ಯಾದಿಶಬ್ದಾರ್ಥ ಗುಣಸ್ವರೂಪನೆಂದು ಹೃದಯದಲ್ಲಿ ಸ್ಥಿರವಾಗಿ ಉಪಾಸನೆಗಾಗಿ ಹೇಳಿದೆ ಅಭೇದ ವಿಧಾನಾರ್ಥವಾಗಿ ಅಲ್ಲ.

### 3. ತಥಾಹಿ ದರ್ಶನಂ ಗಾಯತಿ ತ್ರಾಯತಿ ಚ (ಛ-3-12-1)ಇತ್ಯಾದಿ।

ಗಾಯತಿ ತ್ರಾಯತಿ ಶ್ರುತಿಯು "ಯಾವೈಸಾಗಾಯತ್ರೀ ಇಯಂವಾವ ಏ ಸಾ ಯೇಯಂ ಪೃಥಿವ್ಯಸ್ಯಾಂ ಹೀದಂ ಸರ್ವಂ ಭೂತಂ ಪ್ರತಿಷ್ಠಿತಂ ಏತಾಮೇವನಾತೀ

ಯತೆ” ಗಾಯತ್ರಿವಾಚ್ಯ ಭಗವಂತನು ವೇದಗಳನ್ನು ಮುಖದಿಂದ ಪ್ರಥಮತಃ ಹೊರಡಿಸಿ ಎಲ್ಲವನ್ನು ರಕ್ಷಿಸುವನು ಆ ಗಾಯತ್ರಿಯು ಶ್ರೀ ವಿಷ್ಣುವೇ ಸಾ ಇಯಂಪೃ ಯೇಯಂ ಪೃಥಿವೀ ’ ತನ್ನಾಮಕ ಭಗವಂತನಲ್ಲಿ ಪೃಥಿವಿಯಲ್ಲಿಯ ಪ್ರಾಣಸಮು ದಾಯವು ಆಶ್ರಯನ್ನು ಹೊಂದಿದೆ ಮತ್ತು ವೇದವಾರ ಅಧ್ಯೇತೃಗಳನ್ನು ರಕ್ಷಿಸುತ್ತದೆ. ಈ ಧರ್ಮವು ಪರಮಾತ್ಮನಲ್ಲಿಯೇ ಇದ್ದು ಗಾಯತ್ರಿಶಬ್ದಕ್ಕೆ ಅವನೇ ಅರ್ಥವು

**4. ಸರ್ವಛಂದೋಭಿದೋಹ್ಯೇಷ ಸರ್ವದೇವಾಭಿಧೋಹ್ಯಸೌ ।**
**ಸರ್ವಲೋಕಾಭಿಧೋಹ್ಯೇಷ ತೇಷಾಂ ತದುಪಚಾರತ ಇತಿ ವಾಮನೇ ॥**

ಶ್ರೀ ವಿಷ್ಣುವು ಸರ್ವಛಂದೋವಾಚಕ ಗಾಯತ್ರ್ಯಾದಿ ಶಬ್ದವಾಚ್ಯನು ಸರ್ವ ಅಗ್ನ್ಯಾದಿ ದೇವತಾವಾಚ್ಯನು ಮತ್ತು ಸರ್ವಲೋಕ ವಾಚಕ ಪೃಥಿವ್ಯಾದಿ ಶಬ್ದ ವಾಚ್ಯನು ಆ ಶಬ್ದಗಳು ಶ್ರೀವಿಷ್ಣುವಿನ ಹತ್ತಿರ ಸಂಬಂಧದಿಂದಲೂ ಅಧೀನದಿಂದಲೂ ಉಪಚಾರತ್ವದಿಂದ ಮಿಕ್ಕವದಾರ್ಥಗಳಿಗೆ ವಾಚ್ಯಗಳು, ಅಮುಖ್ಯವಾಚ್ಯಗಳು ಮಾತ್ರ

## ಸೂ ॥ ಓಂ ॥ ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಂ ॥ ಓಂ ॥ 26

ಗಾಯತ್ರೀ ಶಬ್ದವಾಚ್ಯವು ಬ್ರಹ್ಮವೇ ಸರಿ “ ಪಾದೋಸ್ಯ ಸರ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ಎಂದು ಭೂತಪಾದ ಅಮೃತಾಂಶತ್ವವನ್ನು ಹೇಳಿರುವುದರಿಂದ ಆ ಧರ್ಮವು ಶ್ರೀ ವಿಷ್ಣುವಿನಲ್ಲಿಯೇ ಉಪಪನ್ನವಾಗಿ ಅನ್ಯತ್ರ ಅಸಂಭವವು.

ಛಾಂದೋಗ್ಯದಲ್ಲಿ ಸೈಷಾ ಚತುಷ್ಪದಾಷಡ್ವಿಧಾ ಗಾಯತ್ರೀ’ ಎಂದು ಗಾಯತ್ರೀ ನಾಮಕ ಭಗವಂತನ ಗಾಯತ್ರಿ,ಭೂತ, ವಾಕ್,ಪೃಥಿವೀ ಶರೀರ, ಹೃದಯಲಕ್ಷಣ ಎಂಬ ಆರು ವಿಧತ್ವವನ್ನು ತೋರಿಸಿ ಅಂಶ ಚತುಷ್ಟಯ ಚತುಷ್ಪಾದತ್ವವನ್ನು ಸೂಚಿಸಿ ಈ ಅರ್ಥವೇ ಪುರುಷಸೂಕ್ತ ಸಮಾಖ್ಯಾ ಮಂತ್ರದಲ್ಲಿ “ತದೇತದೃಚಾಭ್ಯನೂಕ್ತಂ” ಎಂಬ ಋಕ್ ಮಂತ್ರದಲ್ಲಿ ನಿಶ್ಯಂಕವಾಗಿ ಹೇಳಿದೆ.

**6 ತಾವಾನಸ್ಯಮಹಿಮಾ ತತೋಜ್ಯಾಯಾಂಶ್ಚಪೂರುಷಃ ।**
**ಪಾದೋಸ್ಯ ಸರ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ**
**(ಛ.3-12-6) ಇತಿ**

ಶ್ರುತಿಯು ಈ ಪುರುಷನ "ಪುರುಷ ಏವೇದಂ ಸರ್ವಂ" ಎಂಬ ಉಕ್ತಿನಿಂದ ಸರ್ವ ಸ್ವಾಮಿತ್ವ ರೂಪ ಮಹಿಮೆಯನ್ನು ಹೇಳಿದೆ ಅಷ್ಟೇ ಅಲ್ಲ ಈ ಪೂರ್ವೋಕ್ತ ಮಹಿಮೆ ಗಿಂತಲೂ ಅಧಿಕ ಮಹಿಮೆಯನ್ನುಳ್ಳವನು. "ಸರ್ವಭೂತಾನಿ" ಸಮಸ್ತ ಜಗತ್ತು ಶ್ರೀ ವಿಷ್ಣುವಿಗೆ ಒಂದು ಪಾದದಂತೆ ಭಿನ್ನಾಂಶವು ಮತ್ತು ನಾಶರಹಿತವಾದ ಸ್ವರೂಪ ಭೂತ ಮೂರು ಪಾದಗಳ ಅಂಶಗಳು, ನಾರಾಯಣ ವಾಸುದೇವ ವೈಕುಂಠನಾಮ ಗಳುಳ್ಳ ಶ್ವೇತದ್ವೀಪ, ಅನಂತಾಸನ, ವೈಕುಂಠಗಳಲ್ಲಿ ಇವೆಯೆಂದು ಹೇಳಿದೆ. ಆದರೆ ಗಾಯತ್ರಿ ಶಬ್ದದಂತೆ ಶ್ರೀ ವಿಷ್ಣುವಿನಲ್ಲಿಯೂ ಭೂತಾದಿವಾದವು ಸೇರುವುದಿಲ್ಲ ಭೂತಾದಿ ಗಳಿಂದ ಭಿನ್ನವೆಂದರೆ "ಸುವರ್ಣಂ ಕೋಶಂ .. ಭಿನ್ನಂಚ" ಶ್ರುತಿಯು ಶ್ರುತಿಸ್ಥ ಪಾದಶಬ್ದವು ಶ್ರೀ ವಿಷ್ಣುವಾದಪರಿಮಿತ ಸಾಮರ್ಥ್ಯವು ವಿಷ್ಣುಪಾದವೆಂದು ಹೇಳಿದೆ ಆದರೆ ಶ್ರುತಿ ಪಾರದಿಂದ ಬಲದಲ್ಲಿ ಕಾಲು ಭಾಗದಷ್ಟು ವಿಶ್ವವು ವಿಷ್ಣು ಸಾಮರ್ಥ್ಯದ ಪರಿಮಿತಿ ಉಳ್ಳದ್ದು ಎಂದು ಅರ್ಥವಲ್ಲ. ಮತ್ತೆ ಶ್ರೀ ವಿಷ್ಣುವಿನ ಒಂದು ದೇಶ ಪರಿಮಿತಿಯುಳ್ಳದ್ದೆಂದು ತಿಳಿಯುತ್ತದೆ

**7. ಸುವರ್ಣಂಕೋಶಂ ರಜಸಾ ಪರೀವೃತಂ ದೇವಾನಾಂ**
**ವಸುಧಾನೀಂ ವಿರಾಜಂ । ಅಮೃತಸ್ಯಪೂರ್ಣಾಂ ತಾಮುಕಲಾಂ ವಿಚಕ್ಷತೇ**
**ಪಾದಂಷಡ್ಕೋತುರ್ನಕಿಲಾ ವಿವಿತ್ಸ (ತೈ. ಆ. 3-1।) ಇತಿಶ್ರುತೇಃ ।**
**ಪಾದ ಇತ್ಯೇಕದೇಶಪರಿಮಿತಂ ಚತುರ್ಭಾಗಬಲ ಇತಿವದ್ಭಿನ್ನಂ ಚ ।**

ಶ್ರುತ್ಯರ್ಥವು–ಸುವರ್ಣಮಯವಾದ ರಜೋಗುಣೋಪಲಕ್ಷಿತ ಗುಣ ಕ್ರಿಯಾತ್ಮಕ ಅತ್ಯಂತ ಪ್ರಕಾಶಮಾನವಾದ ಚತುರ್ಮುಖ ಶರೀರವು ದೇವತೆಗಳಿಗೆ ಪ್ರವೃದತೇಟ ಯಂತೆ. ಮುಕ್ತ ಜೀವರಿಂದ ಪೂರ್ಣವೂ ಆರು ಇಂದ್ರಿಯಗಳ ಸಾರಾನುಭವ ವನ್ನುಂಟು ಮಾಡುವ ಶ್ರೀ ವಿಷ್ಣುವಿನ (ಕಲಾಂ) ಏಕದೇಶ ಪರಿಮಿತ ವಾದುದೆಂದೂ ಪುರುಷ ಸೂಕ್ತಾದಿಗಳಲ್ಲಿ ಹೇಳಿದೆ. ಆ ಪ್ರಕಾಶವು ಮಹಾಪ್ರಕಾಶಮಾನವಾದ (ಸಾಟಿ ಯಿಲ್ಲದ) ಭಗವಂತನ ಪಾದಾವಯವದ ಕನೇ ಒಂದು ಭಾಗದ ಅಂಶ ಪ್ರಕಾಶವನ್ನು ಹೊಂದಲು ಸಾಧ್ಯವಿಲ್ಲ ಆ ಪ್ರಕಾಶವು ಶ್ರೀ ಭಗವಂತನಿಂದ ಅನ್ಯವೇ ಮತ್ತು ಅವರು ಅವನ ಅಧೀನರೇ.

**8. ಸಹಿ ಪುರುಷಸೂಕ್ತಾಭಿಧೇಯಃ ।**
**ಯಜ್ಞೇನ ಯಜ್ಞಮಯಜಂತೇತಿ (ತೈ.ಆ. 3-12) ಯಜ್ಞಶಬ್ದಾತ್**
**ಯಜ್ಞೋ ವಿಷ್ಣುರ್ದೇವತೇತಿ ಹಿ ಶ್ರುತಿ; ।**

ಇಲ್ಲಿ ಭೂತಾದಿಪಾದವು ಶ್ರೀ ವಿಷ್ಣುವಿನ ಧರ್ಮವೆಂದು ವಿಷಯ ಸಮರ್ಥನೆ. ಮೇಲಿನ ಶ್ರುತಿಗಳಿಂದ ಪುರುಷ ಸೂಕ್ತ ಪ್ರತಿಪಾದ್ಯನು ಶ್ರೀ ವಿಷ್ಣುವೇ ಹೇಗೆ ಎಂಬ ಪ್ರಶ್ನೆಗೆ-ದೇವತೆಗಳು ಜ್ಞಾನ ಕರ್ಮಗಳಿಂದಲೂ ರುದ್ರಾಖ್ಯಪಶುವಿನಿಂದಲೂ ಶ್ರೀವಿಷ್ಣುವನ್ನು ಪೂಜಿಸಿದರು ಯಜ್ಞಶಬ್ದದಿಂದ ಹೇಳಲ್ಪಡುವ ದೇವತೆಯು ಶ್ರೀ ವಿಷ್ಣುವೇ

**9 ತಸ್ಮಿನ್ಕಾಲೇಮಹಾರಾಜ ರಾಮ ಏವಾಭಿಧೀಯತೇ ।**
**ಯಥಾಹಿ ಪೌರುಷೇ ಸೂಕ್ತೇ ವಿಷ್ಣುರೇವಾಭಿಧೀಯತ ಇತಿ ಚ ಸ್ಕಾಂದೇ**

ಸ್ಕಾಂದ ಪುರಾಣವಾಕ್ಯವು ಹೇ ಮಹಾರಾಜ ತ್ರೇತಾಯುಗದಲ್ಲಿ ಸರ್ವ ಪುರುಷರ ನಾಮವೂ 'ರಾಮ' ಎಂದೇ ಹೇಗೆಂದರೆ ಸಂಪೂರ್ಣ ಪುರುಷ ಸೂಕ್ತವು ಶ್ರೀವಿಷ್ಣುವನ್ನು ಹೇಳುತ್ತದಲ್ಲವೆ? ಹಾಗೆ ಪುರುಷ ಸೂಕ್ತ ದೇವತೆಯು ಶ್ರೀವಿಷ್ಣುವೇ.

## ಸೂ॥ ಓಂ ॥ ಉಪದೇಶಭೇದಾನ್ನೇತಿಚೇನ್ನೋಭಯಸ್ಮಿನ್ನಪ್ಯ ವಿರೋಧಾತ್ ॥ ಓಂ ॥ 27

ಗಾಯತ್ರೀ ಜ್ಯೋತಿಷ್ ದ್ಯುಸ್ಥತ್ವ "ತ್ರಿಪಾದಸ್ಯಾಮೃತಂದಿವಿ" "ದಿವಃಪರತ್ವ" ಎಂದು ಅನ್ಯಧರ್ಮಗಳು ಹೇಳಲ್ಪಟ್ಟಿರುವುದರಿಂದ ಇಲ್ಲಿ ಶ್ರೀ ವಿಷ್ಣುವೆಂಬ ಒಂದೇ ವಸ್ತುವಾಗಲಾರದು. ಭಿನ್ನತೆ-ಉಂಟು ಎಂದರೆ, ಅಲ್ಲ, ಈ ಎರಡು ಶ್ರುತಿಗಳಲ್ಲಿಯೂ ಒಂದೇ ವಸ್ತು ಪ್ರತಿಪಾದ್ಯವಾಗಿರುವುದರಿಂದ ವಿರೋಧವಿಲ್ಲ ತ್ರಿಸಪ್ತಲೋಕಗಳುಹೇಳಲ್ಪಟ್ಟಿದ್ದರಿಂದ ಅವುಗಳಲ್ಲಿ ವಿರೋಧವಿಲ್ಲವೆಂದು ತಿಳಿಯಬೇಕು.

**10 ತ್ರಿಪಾದಸ್ಯಾಮೃತಂ ದಿವಿ(ಛಾ-3-12-3)ಇತಿ ಪೂರ್ವೋಪದೇಶಃ।**
**ಪರೋದಿವ ಇತಿಪಂಚಮ್ಯಂತಃ ಪಶ್ಚಿಮಃ ।** (ಛಾಂ 3-13-6)
**ತಸ್ಮಾನ್ನೈಕಂವಸ್ತ್ವತ್ರೋಚ್ಯತ ಇತಿಚೇನ್ನ ।**
**ತ್ರಿಸಪ್ತಲೋಕಾಪೇಕ್ಷಯೋಭಯಸ್ಮಿನ್ನಪ್ಯವಿರೋಧಾತ್ ॥**

ತ್ರಿಲೋಕತ್ವವು ಭೂಃ ಭುವ, ಸ್ವಃ ಹೀಗೆ ಮೂರು ಲೋಕಗಳಲ್ಲಿ ಭೂಮಿಯಿಂದ ಲಕ್ಷ ಯೋಜನಗಳಿಂದ ಮೇಲಿರುವ ಅಂತರಿಕ್ಷಾಖ್ಯವು ಭುವಃ ಎಲ್ಲಕ್ಕೂ ಮೇಲಿರುವುದಕ್ಕೆ ಸ್ವಃ ಎಂದು ಅನಂತಾಸನ, ಶ್ವೇತದ್ವೀಪ, ವೈಕುಂಠಲೋಕಗಳು ಅಂತ

ಶಿಕ್ಷದ ಮೇಲೆ 'ದಿವ' ಎಂದು ಹೇಳಲ್ಪಡುತ್ತದೆ. ಸಪ್ತಲೋಕ ವಿವಕ್ಷೆಯಲ್ಲಾದರೂ ಪೃಥ್ವಿಯಿಂದ ಬಹು ಲಕ್ಷ ಯೋಜನದ ಮೇಲೆ ದಿವಿಯೆಂದು ಹೇಳಲ್ಪಡುತ್ತದೆ ಭೂಃ ಭುವಃಸ್ವ ಮಹ, ಜನಃ ತಪ ಸತ್ಯ ಎಂಬ ಲೋಕಗಳ ಮೇಲಿರುವ ದಿವ - ವೈಕುಂಠ ಲೋಕವು ಹೀಗೆ ಈ ಎರಡು ವಾಕ್ಯಗಳೂ ವಿರೋಧವಿರುವುದಿಲ್ಲ

-ಇತಿ ಛಂದೋಭಿಧಾನಾಧಿಕರಣಂ-

## ಪಾದಾಂತ್ಯಪ್ರಾಣಾಧಿಕರಣಂ

**11. ಪ್ರಾಣೋ ವಿಷ್ಣುರಿತ್ಯುಕ್ತಂ । ತತ್ರ ತಾ ವಾ ಏತಾಃ ಶೀರ್ಷಂಚ್ಛ್ರಿ ಯಶ್ರಿತಾಶ್ಚಕ್ಷುಃಶ್ರೋತ್ರಂ ಮನೋವಾಕ್ಪ್ರಾಣ (ಐ ಆ 2-1-4) ಇತ್ಯತ್ರ ಪ್ರಾಣಸ್ಯ ವಿಷ್ಣುತ್ವಂ ನ ಯುಜ್ಯತೇ । ಇಂದ್ರಿಯೈಃ ಸಹಾಭಿಧಾನಾದಿತಿ । ಅತಆಹ ॥**

'ತದ್ವೈತತ್ವಂ' ಎಂಬ ತೈತ್ತರೀಯ ಶ್ರುತಿಯಲ್ಲಿ ಪ್ರಾಣವು ವಿಷ್ಣುವೆಂಬ ವಿಷಯದಲ್ಲ 'ತಾವಾಏತಾಃ ಎಂಬ ಐತರೇಯ ಶ್ರುತಿಯು ಪ್ರಾಣ ಶಬ್ದಕ್ಕೆ ಇಂದ್ರಿಯಗಳ ಸಹ ಪಾಠವನ್ನು ಹೇಳಿರುವುದರಿಂದ ಶ್ರೀ ವಿಷ್ಣುವು ಪ್ರಾಣಶಬ್ದವಾಚ್ಯನಾಗಲಾರನು ಪ್ರಾಣಶಬ್ದವು ವಾಯ್ವಾದಿ ದೇವತೆಗಳೇ ಆಗಬೇಕು ಈ ಶ್ರುತಿಯು ಚತುರ್ಮುಖ ಬ್ರಹ್ಮನ ಶಿರಸ್ಸಿನಲ್ಲಿ ಚಕ್ಷುಃ ಶ್ರೋತ್ರಂ ಮನೋವಾಕ್ ಪ್ರಾಣಶಬ್ದವಾಚ್ಯ ಇಂದ್ರಿಯಗಳ ಅಭಿಮಾನಿ ದೇವತೆಗಳು ಇದ್ದು ಆಶ್ರಿತರಾಗಿರುವರು ಎಂದು ಹೇಳುತ್ತದೆ ಆದ್ದರಿಂದ ಪ್ರಾಣಶಬ್ದವು ಅನ್ಯತ್ರವೆ ಎಂದರೆ—

## ಸೂ॥ ಓಂ ॥ ಪ್ರಾಣಸ್ತಥಾನುಗಮಾತ್ ॥ ಓಂ ॥ 28

ತೈತ್ತರೇಯೋಕ್ತ ಪ್ರಾಣವು ಹೇಗೆ ಶ್ರೀವಿಷ್ಣುವಾಚಕವೋ ಹಾಗೆಯೇ ಐತರೇಯ ಶ್ರುತಿವಾಚ್ಯ ಪ್ರಾಣಶಬ್ದವೂ ಶ್ರೀ ವಿಷ್ಣುವನ್ನೇ ಹೇಳುವುದು ಶ್ರೀ ವಿಷ್ಣುವಿನ ವಿಶೇಷ ಧರ್ಮವಾದ ಸರ್ವ ದೇವತೆಗಳಿಂದ ಉಪಾಸ್ಯತ್ವವನ್ನು ಹಾಗೂ ಬ್ರಹ್ಮ ಶಬ್ದವನ್ನು ಅನೇಕಾವರ್ತಿ ಅಭ್ಯಾಸಮಾಡಿ ಹೇಳಿರುವುದರಿಂದ ಇದು ಸಿದ್ಧವು.

**ತಂದೇವಾಃ ಪ್ರಾಣಯಂತಃ** (ಐ ಆ. 2-1-5)

ಆ ನಾರಾಯಣನನ್ನು ದೇವತೆಗಳು ವಿಶೇಷವಾಗಿ ಶಿಷ್ಯಪ್ರಶಿಷ್ಯರುಗಳಲ್ಲಿ ಉಪದೇಶಿಸಿದರು. ಇದು ಶ್ರೀ ವಿಷ್ಣು ಧರ್ಮವು ಮಾತ್ರ. ಅನ್ಯದೇವತೆಗಳದಲ್ಲ

**ಸ ಏಷೋಽಸುಃ ಸ ಏಷ ಪ್ರಾಣಃ** (ಐ ಆ. 2-1-8)

ಶ್ರೀ ಪರಮೇಶ್ವರನು ದುಷ್ಟಸಂಹಾರದಿಂದ ಅಸು ಶಬ್ದವಾಚ್ಯನು ಶ್ರೇಷ್ಠ ಆನಂದ ರೂಪನಾದ್ದರಿಂದ ' ಪ್ರಾಣನು ' ದೇವತೆಗಳಿಗೆ ಜ್ಞಾನ ಐಶ್ವರ್ಯಗಳನ್ನು ಕೊಡುವವನು ಎಂದು ಭೂತಿ ಶಬ್ದವಾಚ್ಯನು ಮತ್ತು ಮುಂದೆ ತಾವಾಏತಾಃ ಸರ್ವಾ ಋಚ, ಸರ್ವೇವೇದಾಃ ಸರ್ವೇಘೋಷಾ ಏಕೈವ ವ್ಯಾಹೃತಿ "ಪ್ರಾಣ ಏವ ಪ್ರಾಣ ಋಚಃ ಇತ್ಯೇವವಿದ್ಯಾತ್ ॥ ಎಂದು ಪ್ರಾಣನಿಗೆ ಸರ್ವವೇದೋಕ್ತತ್ವವನ್ನು ಹೇಳಿವೆ ಎಲ್ಲಾ ಋಕ್ಕುಗಳು ಒಬ್ಬನೇ ಶ್ರೇಷ್ಠದೇವತೆಯಾದ ಶ್ರೀ ವಿಷ್ಣುವನ್ನು ಹೇಳಲು ಆ ಪ್ರಾಣವೇ ವಿಷ್ಣುವು ಸರ್ವವೇದಗಳೂ ಪ್ರಾಣನಾದ ಶ್ರೀ ವಿಷ್ಣುವನ್ನು ಹೇಳುವುವು ಸಮುದ್ರಘೋಷಗಳೂ ಹಾ ಗೆ ಯೇ ಹೇ ಳು ವ ವು. ಇಲ್ಲಿ ಋಕ್ಕುಗಳು ವಿಶೇಷ ವಾಗಿ ಇಂದ್ರಾದಿ ದೇವತಾನಾಮಗಳಿಂದ ಶ್ರೀವಿಷ್ಣುವಿನ ಗುಣಗಳನ್ನು ಹೇಳುವುದರಿಂದ ಅವರವರ ನಾಮಗಳಿಂದ ಶ್ರೀ ನಾರಾಯಣನೇ ಮುಖ್ಯ ವಾಚ್ಯನು ಎಂದು ನಿರ್ದೋಷ ಗುಣ ಪೂರ್ಣವಾಚಕತ್ವಧರ್ಮವು ಹೇಳಲ್ಪಡುತ್ತದೆ.

**ತದಯಂ ಪ್ರಾಣೋದಿತಿಷ್ಠ** (ಐ ಆ. 2-3-8)

**ತೀತ್ಯಾದ್ಯನುಗಮಾತ್** ॥

ಈ ಶ್ರುತಿಯಲ್ಲಿ ದೇಹವೆಂಬ ರಥವು ಹೇಳಲ್ಪಟ್ಟಿದೆ ಈ ರಥವು ಶ್ರೀ ವಿಷ್ಣು ವಿನ ಅಧ್ಯಾತ್ಮ ಅಧಿದೈವ ರಥವು.

**3. ಅತ್ರಾಪಿ ಪ್ರಾಣೋ ವಿಷ್ಣುರೇವ ।**

ಸರ್ವತ್ರ ಪ್ರಾಣ ಶಬ್ದವು ಶ್ರೀ ವಿಷ್ಣುವನ್ನು ಮುಖ್ಯವಾಗಿ ಹೇಳುತ್ತದೆ. ಸ್ಮೃತಿವಾಕ್ಯವು—

**4. ವಿಷ್ಣುಮೇವಾಸಯಂದೇವಾ ವಿಷ್ಣುಂ ಭೂತಿಮುಪಾಸತೇ ।**
**ಸ ಏವ ಸರ್ವವೇದೋಕ್ತಸ್ತದ್ರಥೋ ದೇಹ ಉಚ್ಯತ ಇತಿಸ್ಕಾಂದೇ**

ಸ್ಕಾಂದ ಪುರಾಣದಲ್ಲಿಯ ವಾಕ್ಯವು—ದೇವತೆಗಳು ಪ್ರಧಾನವಾಗಿ ಶ್ರೀ ವಿಷ್ಣು ವನ್ನೇ ಶಿಷ್ಯರುಗಳಲ್ಲಿ ಜ್ಞಾನ ಸಂಪ್ರದಾಯ ಪ್ರವರ್ತನಕ್ಕೆ ಉಪದೇಶಿಸಿದರು. ಐಶ್ವರ್ಯ

ವನ್ನುದ್ದೇಶಿಸಿ ಶ್ರೀ ವಿಷ್ಣುವನ್ನೇ ಉಪಾಸನೆ ಮಾಡುತ್ತಾರೆ ಆದ್ದರಿಂದ ಈ ದೇಹವೂ ವಿಷ್ಣುವಿನ ರಥವೆ, ಪ್ರಾಣಶಬ್ದವಾಚ್ಯವಾಯು ದೇವತೆಯೂ ಅಂತರ್ಯಾಮಿಯಾದ ಶ್ರೀ ವಿಷ್ಣುವಿನ ವಾಚಕವೇ (ಮುಖ್ಯವಾಗಿ) ಆಗಿದೆ

5. ಬ್ರಹ್ಮಶಬ್ದಾನುಗಮಾಚ್ಚ

ಧ್ಯಾನಾರ್ಥವಾಗಿ ನಿರವಕಾಶ ಬ್ರಹ್ಮಶಬ್ದವು ಅನೇಕ ಸಲ ಅಭ್ಯಾಸದಿಂದ ವಿಷ್ಣುಧರ್ಮವನ್ನೇ ಹೇಳಿದೆ "ಏತದ್ಬ್ರಹ್ಮ" "ಬ್ರಹ್ಮಣೋಲೋಕಃ "ಬ್ರಹ್ಮೇಮಂ ಪುರುಷಂ" "ಉದರಬ್ರಹ್ಮೇತ್ಯಾಚಕ್ಷತೆ" "ಅ-ಇತಿಬ್ರಹ್ಮ" ಹೀಗೆ ಬ್ರಹ್ಮಶಬ್ದವು ಗುಣಪೂರ್ಣ ಶ್ರೀವಿಷ್ಣುವೇ. ಜೀವನು ಶ್ರೀ ವಿಷ್ಣುವನ್ನು ಆಶ್ರಯವಾಗಿ ಉಳ್ಳವನು

## ಸೂ|| ಓಂ|| ನವಕ್ತುರಾತ್ಮೋಪದೇಶಾದಿತಿಚೇದಧ್ಯಾತ್ಮ ಸಂಬಂಧ ಭೂಮಾಹ್ಯಸ್ಮಿನ್ || ಓಂ || 29

ಬೃಹತೀ ಸಹಸ್ರ ವಕ್ತೃ ವಿಶ್ವಾಮಿತ್ರ ಋಷಿಯನ್ನು ಕುರಿತು ಇಂದ್ರದೇವರಿಂದ ಆತ್ಮಾ ಎಂಬ ಉಪದೇಶ ಇರುವುದರಿಂದ ಅವನೇ ಪ್ರಾಣವಾಚ್ಯನು ಶ್ರೀ ವಿಷ್ಣುವಲ್ಲವೆಂದರೆ. ಹಾಗಲ್ಲ ಅನೇಕ ಸಲ ಬ್ರಹ್ಮ ಶಬ್ದಾಭ್ಯಾಸದಿಂದ ಶ್ರೀ ವಿಷ್ಣುವೇ ವಾಚ್ಯನು ಇಂದ್ರದೇವರಲ್ಲ. ಆದರೂ ಉಪದೇಶದಲ್ಲಿ ಭೇದವೂ ಇಲ್ಲ. ಈ ಪ್ರಕರಣದಲ್ಲಿ ಭಗವಂತನ ತಾತ್ಕಾಲಿಕ ಆಧ್ಯಾತ್ಮಸಂಬಂಧ ಬಾಹುಳ್ಯದಿಂದ (ಎಂದರೆ ಇಂದ್ರ ವಿಶ್ವಾಮಿತ್ರಾದಿ ಬಹು ದೇಹ ಸಂಬಂಧವನ್ನು ಹೇಳಿದೆ) ಈ ಇಂದ್ರದೇವತೆಯಲ್ಲಿ ವಿಷ್ಣುವಿನ ಅಧಿಕ ಮಾಹಾತ್ಮ್ಯಾವೇಶವು ಸ್ವರೂಪತಃ ಇರುವುದರಿಂದಲೂ ಮತ್ತು ಆ ಕಾಲದಲ್ಲಿ ಪರಮಾತ್ಮನು ಅಂತರ್ಯಾಮಿ ರೂಪ ಅತ್ಯಧಿಕ ಆಧ್ಯಾತ್ಮಶಕ್ತಿಯಿಂದ ಉಪದೇಶ ಮಾಡಿರುವುದರಿಂದಲೂ ಶ್ರೀವಿಷ್ಣುವು ಮುಖ್ಯ ಉಪದೇಶಕನು. ಇಂದ್ರದೇವತೆ ದ್ವಾರ ಮಾತ್ರವು

**"ಪ್ರಾಣೋ ವಾ ಅಹಮಸ್ಮ್ಯೃಷೇ"** (ಐ.ಆ. 2-2-3) **ಇತಿವಕ್ತುಃ ಆತ್ಮೋಪದೇಶಾದಿಂದ್ರಏವೇತಿ ಚೇತ್.'ನ' । ಪ್ರಾಣಸ್ತ್ವಂ ಪ್ರಾಣಃ ಸರ್ವಾಣಿ ಭೂತಾನಿ** (ಐ.ಆ. 2-2-3) **ಇತಿ ಬಹ್ವಧ್ಯಾತ್ಮ ಸಂಬಂಧೋ ಹ್ಯತ್ರವಿದ್ಯತೇ ||**

**ಆಪಾತತಃ**–ಇಂದ್ರನೇ ಪ್ರಾಣನೆಂದು ಹೇಳಿದೆ ಆದರೆ ಫಲಿತಾರ್ಥವು ಪೂರ್ವ **ವಾಕ್ಯ ಸಂಬಂಧದಿಂದ ವ್ಯಾಖ್ಯಾತವು.** ಇಂದ್ರನ ಹೇಳಿಕೆ "ಎಲೈ ಋಷಿಯೇ ನನ್ನ

ಪ್ರಿಯವಾದ ಸ್ಥಳವನ್ನು ಹೊಂದು" ಹೀಗೆ ವರವನ್ನು ಕೊಡುತ್ತೇನೆ ಎಂದು ಪ್ರಸಿದ್ಧ ವಿಶ್ವಾಮಿತ್ರನು ಇಂದ್ರಾವಿಷ್ಟ ವಿಷ್ಣುವಿನಿಂದ ವರವನ್ನು ಕೊಡುವೆನೆಂದು ಹೇಳಲು ಆತನು ಎಲೈ ವಿಷ್ಣುವೆ ನಿನ್ನನ್ನು ನಾನು ಸಾಮಾನ್ಯತಃ ತಿಳಿದಿರುವೆನು ವಿಶೇಷ ವಾಗಿ ತಿಳಿಯ ಹೇಳು ಎಂಬ ಪ್ರಾರ್ಥನೆಗೆ ಉತ್ತರವಾಗಿ, ನಾನು ಪ್ರಕೃಷ್ಟ ಆನಂದ ರೂಪನಾದ್ದರಿಂದ ಪ್ರಾಣಶಬ್ದ ವಾಚ್ಯನು ಹೀನತ್ವವಿಲ್ಲದವನು (ಅಸ್ಮಿ) ಸರ್ವ ಜ್ಞನು ಸರ್ವ ಸಂಹಾರಕರ್ತ ಎಂದು ಹೇಳಿರುವುದರಿಂದ ಶ್ರೀ ವಿಷ್ಣುವೇ ಇಂದ್ರನದ್ವಾರ ಉಪದೇಶಕನು ಇಂದ್ರನಲ್ಲ, "ಪ್ರಾಣಸ್ತ್ವಂಪ್ರಾಣಃ ಸರ್ವಾನಿಭೂತಾನಿ" ಹೀಗೆ ಆಧ್ಯಾತ್ಮ ಸಂಬಂಧವು

## ಸೂ॥ ಓಂ॥ ಶಾಸ್ತ್ರದೃಷ್ಟ್ಯಾತೂಪದೇಶೋವಾಮ ದೇವವತ್ ಓಂ ॥30॥

ಅಂತರ್ಯಾಮಿ ವಿವಕ್ಷಯಿಂದ ವಾಮದೇವ ಋಷಿಯು 'ಅಹಂಮನುರಭವಂ ಎಂದು ತನ್ನಲ್ಲಿ ಮನು ಸೂರ್ಯಾದ್ಯಂತರ್ಯಾಮಿತ್ವವನ್ನು ಹೇಳುವಂತೆ ಶಾಸ್ತ್ರ ದೃಷ್ಟಿಯು ಸರ್ವವನ್ನು ಶಾಸನ ಮಾಡುವವನು ಎಂಬ ಅರ್ಥದಿಂದ ಅಂತರ್ಯಾಮಿ ಯು ಎಂಬ ಉಪದೇಶ ಸೂಚಕವಾಗಿ 'ಪ್ರಾಣೋಹಂ' ಎಂದು ತಿಳಿಯಬೇಕು. ಐಕ್ಯಾರ್ಥದಿಂದ ಅಲ್ಲ ಈ ಅಂತರ್ಯಾಮಿಯು ಶ್ರೀವಿಷ್ಣುವೇ

**8 ಶಾಸ್ತ್ರಮಂತರ್ಯಾಮಿ 'ಸಂವಿಚ್ಛಾಸ್ತ್ರಂ ಪರಂಪದಂ' ಇತಿ ಭಾಗವತೇ ।**

ವ್ಯಾಸೋಕ್ತ ವಾಕ್ಯವು (ಶ್ರೀ ನಾರದರನ್ನು ಕುರಿತು)-ಜೀವನಿಗೆ ಮೂರು ಅವಸ್ಥೆಗಳು (1) ಮಾಯಾವಾಸ ನಾಖ್ಯಸಂಸ್ಕಾರ ಉಪಾದಾನರೂಪ ವಾದ ಸ್ವಪ್ನವು (2) ಅಗ್ರಹ ಜಾಗ್ರತ ಸ್ವಪ್ನಾದಿ ವಿಷಯಜ್ಞಾನವಿಲ್ಲದ ಸುಷುಪ್ತಿಯು (3) ಅಭಾಸ ಸಂಜ್ಞಾದಿರೂಪ ಜ್ಞಾನವಿಷಯು ಜಾಗ್ರತಿ ಈ ಮೂರು ಅವಸ್ಥೆಗಳು ಶ್ರೀ ಪರಮಾತ್ಮನಿಂದಲೇ. ಆದ್ದರಿಂದ ಅಂಥ ಸರ್ವವಿಷಯಕ ನಿಶ್ಚಯ ಜ್ಞಾನ ರೂಪನಾದ ಸರ್ವನಿಯಾಮಕನಾದ ಸಜ್ಜನರಿಂದಲೇ ಪ್ರಾಪ್ಯನಾದ ಶ್ರೇಷ್ಠವಸ್ತು ವಾದ ಬ್ರಹ್ಮನನ್ನು ನಾನು ಚಿಂತನೆ ಮಾಡುತ್ತೇನೆ' ಎಂದು

**9. ತತ್ತನ್ನಾಮ್ನೋಚ್ಯತೇ ವಿಷ್ಣುಃ ಸರ್ವಶಾಸ್ತೃತ್ವಹೇತುತಃ ।**
**ನಕ್ವಾಪಿ ಕಿಂಚಿನ್ನಾಮಾಸ್ತಿ ತನ್ಮೃತೇ ಪುರುಷೋತ್ತಮಮಿತಿಚಪಾದ್ಮೇ ।**

ಶ್ರೀ ವಿಷ್ಣುವು ಅನ್ಯಪರವಾದ (ಪ್ರಸಿದ್ಧಿಯಿಂದ) 'ಅಹಂ' ಇತ್ಯಾದಿ ಪದಗಳಿಂದ ಹೇಳಲ್ಪಡುವನು. ಇಲ್ಲಿ ವಿದ್ವಧ್ರೂಡಿಯನ್ನು ತೋರಿಸಿದೆ. ಸರ್ವವನ್ನು ನಿಯಾಮಕ ನಿಮಿತ್ತದಿಂದ ಮಹಾಯೋಗವು ಸ್ವಾತಂತ್ರ್ಯದಿಂದ ಶ್ರೇಷ್ಠಪುರುಷನಾದ ಸರ್ವಾಂತರ್ಯಾಮಿಯಾದ ವಿಷ್ಣುವಿನ ಹೊರತು ಅನ್ಯತ್ರ ಜೀವಾದಿಗಳಲ್ಲಿ 'ಅಹಂ' ಆದಿ ರೂಪ ನಾಮಗಳು ಉಪವಾಚಕಗಳು ಮುಖ್ಯವಾಗಿ ಹರಿವಾಚಕಗಳೇ.

10 ಅಹಂ ಮನುರಭವಂ ಸೂರ್ಯಶ್ಚ (ಯ. 4-26-1) ಇತ್ಯಾದಿವತ್॥

'ಅಹಂ' ಎಂಬ ವಾಮದೇವ ಋಷಿಯ ವಾಕ್ಯದಂತೆ ತನ್ನ ಅಂತರ್ಯಾಮಿ ಮತ್ತು ಇತರ ಎಲ್ಲಾ ದೇವತೆ ಮತ್ತು ಭೂತಗಳ ಅಂತರ್ಯಾಮಿಯಾಗಿ ಶ್ರೀ ವಿಷ್ಣುವು 'ಮನುಃ' ಸೂರ್ಯಃ ಇತ್ಯಾದಿ ನಾಮನೂ ಆಗಿದ್ದಾನೆ.

## 11 ಸೂ॥ ಓಂ ॥ ಜೀವಮುಖ್ಯಪ್ರಾಣಲಿಂಗಾನ್ನೇತಿಚೇನ್ನೋಪಾಸಾತ್ರೈವಿಧ್ಯಾದಾಶ್ರಿತತ್ವಾದಿಹತದ್ಯೋಗಾತ್ ಓಂ ॥31॥

ಶತಾಯುಷ್ಯಾದಿ ಜೀವಧರ್ಮಗಳನ್ನು ಇಂದ್ರಿಯ ದೇವತೆಗಳ ಸಂವಾದರೂಪ ಮುಖ್ಯ ಪ್ರಾಣಧರ್ಮಗಳನ್ನು 'ತಾವಂತಿಶತ ಸಂವತ್ಸರಸ್ಯಾಹ್ನಾಂತಾ' ಆಹಿಂಸಂ ತೇತಿ ಎಂಬ ಶೃತಿಗಳ ಭಾಗಗಳು ತಿಳಿಹೇಳುವುದರಿಂದ ಪ್ರಾಣನು ಶ್ರೀವಿಷ್ಣುವಿನಿಂದ ಭಿನ್ನನೇ ಎಂದರೆ ಹಾಗಲ್ಲ. ಅಲ್ಲಿ ಅಂತರ್ಯಾಮಿ ವಿಷಯ ಧರ್ಮವನ್ನೇ ಹೇಳಿದೆ ಅಂತಃಬಹಿಃ ಸರ್ವಗತತ್ವ ಭೇದದಿಂದ ಮೂರು ವಿಧ ಪುಪಾಸನ ತತ್ತಧಿಕಾರಿ ಭೇದದಿಂದ ಉಪಾಸನಾ ಭೇದವು ಹೇಳಲ್ಪಡುತ್ತದೆ ಈ ಅಂತರ್ಯಾಮಿ ಕಥನವು ಶ್ರೀ ವಿಷ್ಣುವಿನ ವಿಷಯವೇ ಯಾವ ಪರಮಾತ್ಮ ದರ್ಮಗಳಿಂದ ಹೀಗೆ ಹೇಳಲ್ಪಟ್ಟಿದೆ ಎಂದರೆ

12. ತಾವಂತಿಶತ ಸಂವತ್ಸರಸ್ಯಾಹ್ನಾಂ ಸಹಸ್ರಾಣಿ ಭವಂತಿ (ಐ.ಆ 2-2-8) ಇತಿಜೀವಲಿಂಗಂ । ಪ್ರಾಣಸಂವಾಜಾದಿಮುಖ್ಯ ಪ್ರಾಣಲಿಂಗಂ ತಸ್ಮಾನ್ನೇತಿಚೇನ್ನ ।

ಶತವರ್ಷಗಳು ಜೀವ ದೇಹದಲ್ಲಿ ಪ್ರಾಣ ಸಂಚಾರವು ಮತ್ತು ಈ ಪ್ರಾಣವು ಸರ್ವ ಜೀವ ದೇಹಗಳಲ್ಲಿಯೂ ಪ್ರತ್ಯೇಕವಾಗಿ ಇರುವುದು ಎಂಬುದರಿಂದ ಜೀವಧರ್ಮ ಮುಖ್ಯ ಪ್ರಾಣಧರ್ಮಗಳು. ಆದ್ದರಿಂದ ಶ್ರೀ ವಿಷ್ಣುವಿನ ಧರ್ಮವನ್ನು ಹೇಳಿಲ್ಲವೆಂದರೆ.

12 ನ ಅಂತರ್ಬಹಿಃ ಸರ್ವಗತತ್ವೇನೇತ್ಯುಪಾಸಾತ್ರೈ
ವಿಧ್ಯಾದಿಹಾಶ್ರಿತತ್ವಾಚ್ಚ ।

ಜೀವ ಮುಖ್ಯಪ್ರಾಣದ ಅಂತರ್ಯಾಮಿಯನ್ನು ಆ ಉಪಾಸಕರ ಯೋಗ್ಯತಾನುಸಾರ ಹೃದಯಾಕಾಶದಲ್ಲಿ, ಹೊರಪ್ರತಿಮೆಗಳಲ್ಲಿ ಮತ್ತು ಸರ್ವವಸ್ತುಗಳಲ್ಲಿ ವ್ಯಾಪ್ತತ್ವ ಧರ್ಮಗಳಿಂದ ಉಪಾಸನಾ ವಿಧಗಳ ಮೂರು ಪ್ರಭೇದಗಳನ್ನು ಹೇಳಿರುವುದರಿಂದ ಪರಮೇಶ್ವರತ್ವ ಧರ್ಮವನ್ನೇ ಮುಖ್ಯವಾಗಿ ಹೇಳಿದೆ.

13 ಸ ಏತಮೇವ ಸೀಮಾನಂ ವಿದ್ಯಾರ್ಯೈತಯಾ ದ್ವಾರಾ ಪ್ರಾಪದ್ಯತ।
(ಅ-2-4-3) ಸ ಏತನೇವ ಪುರುಷಂ ಬ್ರಹ್ಮತ ತಮಪಶ್ಯತ್ ।
(2-4-3) ಏತದ್ಧ ಸ್ಮವೈ ತದ್ವಿದ್ವಾನಾಹ ಮಹಿದಾಸ ಐತರೇಯ
(ಐ.ಆ 2-1-8) ಇತ್ಯಾದಿನಾ ।

ಆ ವಾಸುದೇವನು ಶಿರಸ್ಸಿನ ಮಧ್ಯ ಸುಷುಮ್ನಾ ನಾಡಿದ್ವಾರ ಹೊಂದಲ್ಪಡುವನು (ಚತುರ್ಮುಖನ ಹೃದಯವನ್ನು ಹೊಂದುವನು) ಆತನು ಹಿಂದೆ ಪ್ರಪದಗಳ ಒಳಗೆ ಪ್ರವಿಷ್ಟನಾದ ನಾರಾಯಣ ವ್ಯಾಸ ಕೃಷ್ಣ ಕಪಿಲ ರೂಪಿ ಆತ್ಮ ಸ್ವರೂಪ ಪೂರ್ಣ ಗುಣನು (ಸ್ವಸ್ವಭೂತಾದಿಗಳ ಆಗುಹೋಗುಗಳನ್ನು ಉಂಟು ಮಾಡುವವನು) ಅತಿಯಾಗಿ ವ್ಯಾಪ್ತನಾಗಿ ಸರ್ವವ್ಯಾಪ್ತ ಗುಣಪೂರ್ಣ ಬ್ರಹ್ಮನನ್ನು ನೋಡಿದನು. ಇದರಿಂದ ಸರ್ವಶರೀರತ್ವದ ಉಪಾಸನೋಕ್ತಿಯು ದೇವತೆಗಳನ್ನೆಲ್ಲಾ ದಾಸರನ್ನಾಗಿ ಉಳ್ಳ ಸರ್ವವನ್ನು ತಿಳಿದ ಜ್ಞಾನಿ ಐತರೇಯನ ಮಹಾತ್ಮ ವಾಕ್ಯವು. ಇಲ್ಲಿ ಬಹಿಃ ಉಪಾಸಾರ್ಥವಾಗಿ ಹೇಳಿದ್ದು ಸ್ವರೂಪವೇ ಹೊರ್ತು ಉಪಾಸನವವಿಧಿಯಲ್ಲವೆಂದರೆ ಉಪಾಸನವಿಲ್ಲದೇ ಯಾವ ಪ್ರಯೋಜನವೂ ಇಲ್ಲವಾಗಿ ಉಪಾಸನವನ್ನೇ ಹೇಳಿರುವುದು.

14 ಮಹಿದಾಸಾಭಿಧೋ ಜಜ್ಞ ಇತರಾಯಾಸ್ತ್ರಪ್ರೋಬಲಾತ್ ।
ಸಾಕ್ಷಾತ್ಸ ಭಗವಾನ್ವಿಷ್ಣು ರ್ಯಸ್ತಂತ್ರಂ ವೈಷ್ಣವಂ ವ್ಯಧಾಧಿತಿ
ಬ್ರಹ್ಮಾಂಡೇ ।

ಐತರೇಯನೆಂಬ ಋಷಿಯು ಬೃಹತೀ ಸಹಸ್ರ ಉಪನಿಷದ್ವ್ಯಾಖ್ಯಕನಲ್ಲ, ಅದನ್ನು ಹೇಳಿರುವುದು ಇತರಾದೇವಿಯಲ್ಲಿ ಅವತಾರ ಮಾಡಿದ ಮಹಿದಾಸಾಖ್ಯ ಮಹಾವಿಷ್ಣುವಿಗೇ.

15 16 17 ತತ್ತದುಪಾಸನಾಯೋಗ್ಯತಯಾ ಚ ಪುರುಷಾಣಾಂ ।
ಕೇಷಾಂಚಿತ್ಸರ್ವಗತ್ವೇನ ಕೇಷಾಂಚಿದ್ಧೃದಯೇ ಹರಿಃ ।
ಕೇಷಾಂಚಿದ್ಬಹಿರೇವಾಸಾವುಪಾಸ್ಯಃ ಪುರುಷೋತ್ತಮಃ ।
ಇತಿಬ್ರಾಹ್ಮೇ ॥

ಶ್ರೀ ಹರಿಯು ದೇವತೆಗಳಿಂದ ಸರ್ವಗತತ್ವ ಧರ್ಮದಿಂದ ಉಪಾಸ್ಯನು. ಋಷಿ ಗಂಧರ್ವಾದಿಗಳಿಂದ ಹೃದಯಗಳಲ್ಲಿ ಉಪಾಸ್ಯನು. ಮನುಷ್ಯೋತ್ತಮರಿಂದ ಹೊರಗೆ ಪ್ರತಿಮೆಗಳಲ್ಲಿ ಉಪಾಸ್ಯನು ಅವರವರ ಯೋಗ್ಯತಾನುಸಾರ ಉಪಾಸ್ಯತ್ವವು

18. ಅಗ್ನೌ ಕ್ರಿಯಾವತಾಂ ವಿಷ್ಣುರ್ಯೋಗಿನಾಂ ಹೃದಯೇ ಹರಿಃ ।
ಪ್ರತಿಮಾಸ್ವಪ್ರಬುದ್ಧಾನಾಂ ಸರ್ವತ್ರವಿದಿತಾತ್ಮನಾಮಿತಿಚ ॥

ಯಜ್ಞಾದಿ ಕ್ರಿಯಾನುಷ್ಠಾನವುಳ್ಳ ಗಾರ್ಹಸತ್ಯರು, ಅಗ್ನಿಯಲ್ಲಿಯೂ ಋಷಿಗಳು ಹೃದಯದಲ್ಲಿಯೂ ಅತ್ಯಲ್ಪ ಪ್ರತಿಭೆಯುಳ್ಳ ಮನುಷ್ಯೋತ್ತಮರು ರಾಮಕೃಷ್ಣಾದಿ ವಿಗ್ರಹ ರೂಪಗಳಿಂದಲೂ ಉಪಾಸನೆ ಮಾಡಲು ಯೋಗ್ಯರು ಶ್ರೇಷ್ಠ ಜ್ಞಾನಿಗಳಾದ ದೇವತೆಗಳು ಎಲ್ಲಾ ಸ್ಥಾನಗಳಲ್ಲಿಯೂ ಪರಮಾತ್ಮನ ಉಪಾಸಕರು. ಆದ್ದರಿಂದ ಶ್ರೀವಿಷ್ಣುವೇ ಮುಖ್ಯ ಪ್ರಾಣಶಬ್ದ ವಾಚ್ಯನು ಆನಂದಮಯನೂ ಕೂಡ ಅವನೇ ಜಿಜ್ಞಾಸ್ಯವು ಬ್ರಹ್ಮನು

ಇತಿ ಪಾದಾಂತ್ಯ ಪ್ರಾಣಾಧಿಕರಣಂ
ಪ್ರಥಮಾಧ್ಯಾಯದ ಪ್ರಥಮ ಪಾದ ಮುಕ್ತಾಯವು. ಶ್ರೀ ಕೃಷ್ಣಾರ್ಪಣಮಸ್ತು

ಶ್ರೀಃ

## ದ್ವಿತೀಯಃ ಪಾದಃ

### - ಸರ್ವಗತತ್ವಾದಿಕರಣಂ -

ಅಸಾಧಾರಣ ಧರ್ಮಗಳನ್ನು ಹೇಳುವ ಸಮನ್ವಯವು ವಾಕ್ಯಗಳ ಶ್ರೀ ಪರಮಾತ್ಮನಲ್ಲಿ ಈ ಪಾದದಲ್ಲಿ ಮಾಡಲ್ಪಡುವುದು

**1. ಲಿಂಗಾತ್ಮಕಾನಾಂ ಶಬ್ದಾನಾಂ ವಿಷ್ಣೌ ಪ್ರವೃತ್ತಿಂದರ್ಶಯತ್ಯಸ್ಮಿನ್ಪಾದೇ ಪ್ರಾಧಾನ್ಯೇನ ।**

ಅಸಾಧಾರಣ ಧರ್ಮಗಳನ್ನು ಹೇಳುವ ವೇದ ವಾಕ್ಯಗಳ ಸಮನ್ವಯದ ಮೂಲಕ ಸಕಲ ಯೋಗಿಕಃ ಧರ್ಮಗಳ ಪ್ರವೃತ್ತಿಯಿಂದ ಸಕಲ ಧರ್ಮಗಳನ್ನೂ ಶ್ರೀ ವಿಷ್ಣುವಿನಲ್ಲಿಯೇ ವಿದ್ವಧ್ರೂಢಿಯಿಂದ ಸಮನ್ವಯ ಮಾಡುತ್ತಾರೆ ಈ ಪಾದದಲ್ಲಿ

**2. ಬ್ರಹ್ಮತತಮಿತಿ ಸರ್ವಗತತ್ವಮುಕ್ತಂವಿಷ್ಣೋಃ ।**
**ತಚ್ಚ ತಸ್ಯೈತಸ್ಯಾಸಾವಾದಿತ್ಯೋರಸ್ಯಃ (ಐ-ಆ. 3-2-3)**
**ಇತ್ಯಾದಿನಾಽಽದಿತ್ಯಸ್ಥ ಪ್ರತೀಯತೈತೇಽಽಽಬ್ರವೀತ್ ॥**

ಪೂರ್ವಪಾದದಲ್ಲಿ "ಬ್ರಹ್ಮತತಮಂ" ಎಂದು ಪ್ರಾಣಾಖ್ಯ ವಿಷ್ಣುವಿಗೆ ಸರ್ವ ಹೃದಯಾಂತಸ್ಥವು ಹೇಳಿದೆ. ಆ ವಸ್ತುವೇ ಉತ್ತರ ವಾಕ್ಯವಾದ "ಏತಾಂ ಏವ ಬ್ರಹ್ಮಚಾಬ್ರಹ್ಮೆತ್ಯಾಚಕ್ಷತೆ" ಎಂಬ ಉತ್ತರ ವಾಕ್ಯದಲ್ಲಿಯೂ ಉಕ್ತವಾಗಿದೆ. ಆದಿ ಶಬ್ದದಿಂದ "ಸಯಚ್ಚಾಯಂ ಅಶರೀರಃ" "ಪ್ರಜ್ಞಾತ್ಮಾಯಶ್ಚಾಸೌ ಆದಿತ್ಯ ಏತಂ ಏತದೀತಿ ವಿದ್ಯಾತ್" ತಸ್ಮಾತ್ ಪುರುಷಂ ಪುರುಷಂ ಪ್ರತ್ಯಾದಿತ್ಯೋಭವತಿ."ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ" "ಏತಂಸರ್ವಭೂತೇಷು" ಈ ವಾಕ್ಯಾಗಳು ಗಮನಾರ್ಹಗಳು ಇದರಿಂದ ಆದಿತ್ಯನನ್ನು ಸರ್ವಪ್ರಾಣಿ ಹೃದಯಸ್ಥನನ್ನಾಗಿ ತಿಳಿಯುವ ಸಂಶಯವು ಸಿದ್ಧಾಂತ ರೀತಿಯಾಗಿ ಶ್ರುತ್ಯರ್ಥವು-ಪ್ರಕೃತ ಸಂವತ್ಸರನಾಮಕ ಚತುರ್ಮುಖನ ಸರ್ವಾದಿತತ ನಿಯಾಮಕ ನಿಮಿತ್ತದಿಂದ ಆದಿತ್ಯನಾಮಕ ಪ್ರದ್ಯುಮ್ನನು ರಸಭೂತನು

ಈತನೇ ಪ್ರಾಕೃತ ದೇಹವಿಲ್ಲದೆ ಪುರುಷ ದೇಹಗತ ಅನಿರುದ್ಧ ನಾಮಕನಾಗಿ ಜ್ಞಾನ ರೂಪಿಯಾಗಿ ಪ್ರತಿಪುರುಷರಲ್ಲಿಯೂ ಅಭಿಮುಖನಾಗಿರುತ್ತಾನೆ. ಜಂಗಮ ಸ್ಥಾವರ ವಸ್ತುಗಳ ಆದಾನಾದಿಕರ್ತೃವಾದ ಸೂರಿಗಳಿಂದ ಹೊಂದಲ್ಪಡುವ ಸೂರ್ಯ ಶಬ್ದ ವಾಚ್ಯ. ಶ್ರೀವಿಷ್ಣುವು ಸ್ವರ್ಗ, ಭೂ, ಅಂತರಿಕ್ಷಗಳನ್ನು ಪೂರ್ಣವಾಗಿ ಆವರಿಸಿ ದ್ದಾನೆ ಇವನನ್ನು ಋಗ್ವೇದಿಗಳು ಆದಿತ್ಯಪುರುಷಗತ (ಶ್ರೀವಿಷ್ಣು) ದೇವತೆ ಯನ್ನಾಗಿಯೂ, ಯಜುರ್ವೇದಿಗಳು ಅಗ್ನಿಯಲ್ಲಿ ಚಯನ ಸಾಧನೇಷ್ಟಿಕಾ ದೇವತೆ ಯನ್ನಾಗಿಯೂ, ಸಾಮವೇದಿಗಳು ಮಹಾವ್ರತಾಖ್ಯಸ್ತೋತ್ರ ದೇವತೆಯನ್ನಾಗಿಯೂ ಪೃಥ್ವಿ ಅಂತರಿಕ್ಷ ವಾಯು ದೇವರುಗಳಲ್ಲಿ ಸರ್ವಭೂತಗಳಲ್ಲಿ ಒಳಗೆ ವ್ಯಾಪ್ತ ನಾದವನನ್ನಾಗಿ ವಿದ್ವಾಂಸರುಗಳಿಂದ ತಿಳಿಯುತ್ತಾರೆ ಎಂದು ಐತರೇಯವಾಕ್ಯವು. ಈ ಸರ್ವಭೂತಗಳಲ್ಲಿಯೂ ಇರುವ ಗುಣಪೂರ್ಣನಾದ ವ್ಯಾಪ್ತನಾದ ಮುಖ್ಯ ಶಬ್ದ ಬ್ರಹ್ಮ ವಾಚ್ಯನು ಶ್ರೀವಿಷ್ಣುವೇ

## ಸೂ॥ ಓಂ॥ ಸರ್ವತ್ರಪ್ರಸಿದ್ಧೋಪದೇಶಾತ್ ॥ಓಂ॥ 1

ಪೃಥಿವ್ಯಾದಿ ಸರ್ವವಸ್ತುಗಳಲ್ಲಿಯೂ ಇರುವ ಬ್ರಹ್ಮಾಖ್ಯ ವಸ್ತುವು ಶ್ರೀಮನ್ನಾ ರಾಯಣಾಖ್ಯ ವಿಷ್ಣುವೇ ಅನ್ಯರೂ ಯಾರೂ ಅಲ್ಲ "ಏತಮೇವ ಬ್ರಹ್ಮ" ಎಂಬ ಶೃತಿಯಲ್ಲಿ ಸರ್ವಗತತ್ವ ವಸ್ತುವು ನಾರಾಯಣ ಶಬ್ದದಿಂದ ಪ್ರಸಿದ್ಧೋಪ ದೇಶದಿಂದ ಬ್ರಹ್ಮ ಶಬ್ದವಾಗಿ ಹೇಳಲ್ಪಟ್ಟಿರುತ್ತದೆ.

### 4. ಸಯಶ್ಚಾಯಮಶರೀರಃ ಪ್ರಜ್ಞಾತ್ಮೇತ್ಯಾದಿನಾ ಸರ್ವತ್ರೋಚ್ಯಮಾನೋ ನಾರಾಯಣ ಏವ ।

"ತನ್ನೈತಸ್ಯ " ಎಂಬ ಶೃತಿ ಭಾಗದಿಂದ 'ತತ' ಶಬ್ದ ನಿರ್ದೇಶ್ಯನಾಗಿ "ಸಯಶ್ಚಾಯ ಮಶರೀರಃ ಪ್ರಜ್ಞಾತ್ಮಾ" ಎಂಬುದಾಗಿ ಸಮನ್ವಯವಾದ ವಸ್ತುವು ನಾರಾಯಣ ಶಬ್ದವಾಚ್ಯ ಬ್ರಹ್ಮನೇ ಅಂದರೆ ಸರ್ವ ಪ್ರಾಣಿ ಹೃದಯಾಂತರ್ಗತನು.

ಯಚ್ಚಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಪಿ ವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣ ಸ್ಥಿತಃ ॥

ಎಂಬ ವಾಕ್ಯವು ಇದಕ್ಕೆ ಪ್ರಮಾಣವು

5. ತದೇವಬ್ರಹ್ಮ ಪರಮಂ ಕವೀನಾಂ । (ಮಹಾನಾ-1-6)
ಪರಮಂಬೋ ಮಹದ್ಬ್ರಹ್ಮ ॥

ಯಾವ ವಸ್ತುವು ಜಗತ್ತಿಗೆ ಶ್ರೇಷ್ಟ ಆಶ್ರಯುವೋ ಯಾವ ವಸ್ತುವು ಜಗತ್ತಿಗೆ ಸರ್ವೇಶ್ವರನೋ ಆ ವಸ್ತು ಮುಖ್ಯ ವಾಚ್ಯ ಶ್ರೀಮನ್ನಾರಾಯಣನು.

6. ವಾಸುದೇವಾತ್ಪರಃ ಕೋನು ಬ್ರಹ್ಮ ಶಬ್ದೋದಿತೋಭವೇತ್ ।
ಸಹಿ ಸರ್ವಗುಣೈಃ ಪೂರ್ಣಸ್ತದನ್ಯೇತೂಪಚಾರತಃ ಇತಿ
ತಸ್ಮಿನ್ನೇವ ಪ್ರಸಿದ್ಧ ಬ್ರಹ್ಮ ಶಬ್ದೋಪದೇಶಾತ್ ॥

ವಾಸುದೇವಾಖ್ಯ ಶ್ರೀ ಕೃಷ್ಣನು ಗುಣಪೂರ್ಣನಾದ್ದರಿಂದ ಅನ್ಯದೇವತೆಗಳು ಅಪೂರ್ಣರಾದ್ದರಿಂದ ಆತನೇ ಮುಖ್ಯ ಬ್ರಹ್ಮ ಶಬ್ದ ವಾಚ್ಯ. ಮಿಕ್ಕವರು ಉಪ ಚಾರಕ್ಕಾಗಿ ಹಾಗೆ ಬೋಧಿಸಲ್ಪಡುವರು ಮುಖ್ಯವಾಗಿಯಲ್ಲ. ಹೀಗೆ ಎಲ್ಲ ಉದಾಹೃತ ವಾಕ್ಯಗಳಲ್ಲಿಯೂ ಸರ್ವಗತ ವಸ್ತುವೆಂದು ಶ್ರುತಿ ಸ್ಮೃತಿಗಳಲ್ಲಿ ಹೇಳಿರುವ ವಸ್ತುವು ಅವನೇ "ಸಯಶ್ಚಾಯುಮ ಶರೀರಃ ಪ್ರಜ್ಞಾತ್ಮಾ" "ಸರ್ವೇಷು ಭೂತೇಷು ಏತಮೇವ ಬ್ರಹ್ಮೇತ್ಯಾಚಕ್ಷತೆ" ಎಂದು ಎಲ್ಲಾ ಶಾಖೆಗಳಲ್ಲಿಯೂ ಅಂತರ್ಯಾಮಿಯಾಗಿ ಹೇಳಲ್ಪಡುವವನು ಶ್ರೀಮನ್ನಾರಾಯಣನೇ.

## ಸೂ॥ ಓಂ॥ ವಿವಕ್ಷಿತ ಗುಣೋಪಪತ್ತೇಶ್ಚ ॥ಓಂ॥ 2

7. ಸಯೋಽತೋಽಶ್ರುತ (ಐ-ಆ-3-2-4) ಇತ್ಯಾದಿ

ಸರ್ವಗತ ವಸ್ತುವನ್ನು ಹೇಳಲು ಯೋಗ್ಯವಾದ ಗುಣಗಳನ್ನು ಹೇಳುವ ಅದೃಶ್ಯತ್ವಾದಿ ಗುಣಗಳು ಶ್ರೀ ವಿಷ್ಣುವಿನಲ್ಲಿಯೇ ಯೋಗ್ಯವು ಅನ್ಯರಲ್ಲಿಲ್ಲ ಆತನೇ ಸರ್ವಗತನು.

"ಸಯತೋಽ ಶೃತೋಽ ಗತೋಽ ದೃಷ್ಟೋಽ ವಿಜ್ಞಾತೋಽ ನಾದಿಷ್ಟಃ ಶ್ರೋತಾ ಮಂತಾ ದೃಷ್ಟಾ ದೇಷ್ಟಾ ಘೋಷ್ಟಾ ಪ್ರಜ್ಞಾತಾ ಸರ್ವೇಷಾಂ ಭೂತಾನಾಮಾಂತರಃ ಪುರುಷಃ ಸಮ ಆತ್ಮೇತಿ ವಿದ್ಯಾತ್ ಇತ್ಯಾದಿ ಅರ್ಥವು.

ಈ ಪ್ರಕೃತ ಶ್ರೀ ವಿಷ್ಣುವು ದೇಶ ಕಾಲ ವ್ಯಾಪ್ತನು ಅಧಿಕನು ಪೂರ್ಣವಾಗಿ ಕೇಳಲ್ಪಡನು ಆದರೆ ತಾನೆ ಸ್ವತಂತ್ರವಾಗಿ ತನ್ನನ್ನು ಕೇಳುತ್ತಾನೆ (ನತೆತೆ ಶೃತಿ) ಪೂರ್ಣನಾಗಿ ಅನ್ಯರಿಂದ ತಿಳಿಯಲು ಶಕ್ಯನಲ್ಲ ಪೂರ್ಣನಾಗಿ ಮನನ ಮಾಡಲು ಸಾಧ್ಯನಲ್ಲ ಯಾರಿಂದಲೂ ನಿಯತನಲ್ಲ, ಪೂರ್ಣ ದೃಶ್ಯನಲ್ಲ ವಿಶೇಷವಾಗಿ ತಿಳಿಯಲ್ಪಡುವುದಿಲ್ಲ ಯಾರ ಆಜ್ಞಾಧಾರಕನೂ ಅಲ್ಲ ಬೇರೆ ಆಶ್ರಯವಿಲ್ಲದವನು ಆದರ ಸ್ವಾತಂತ್ರ್ಯ ಶಕ್ತಿಯಿಂದ ಸರ್ವವನ್ನೂ ಕೇಳುವವನು, ತಿಳಿಯುವವನು, ನೋಡುವವನು, ಎಲ್ಲರನ್ನು ನಿಯೋಜಿಸುವವನು ಚನ್ನಾಗಿ ಹೇಳುವವನು ಎಲ್ಲಾ ಜೀವರಲ್ಲಿ ಪೂರ್ಣವಾಗಿ ಸಮನಾಗಿರುವವನು ಸರ್ವರೂಪಗಳಿಂದಲೂ ಜೀವರುಗಳಿಗೆ ಆಗುಹೋಗುಗಳನ್ನುಂಟು ಮಾಡುವವನು ಎಂದು ತಿಳಿಯಲು ಯುಕ್ತವು

**8 ಸ ಹಿ ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ (ಋ-7-99-2) ಇತಾದಿನ್ಯಾಶ್ರುತತ್ವಾದಿಗುಣಕಃ ।**

ಈ ವಾಕ್ಯಗಳಿಂದ ಅಶೃತತ್ವಾದಿ ಗುಣಗಳು ಶ್ರೀ ವಿಷ್ಣುವಿನ ಧರ್ಮಗಳೇ

**9 ಸ ಸವಿತಾ ಸ ವಾಯುಃ ಸ ಇಂದ್ರಃ ಸೋಶ್ರುತಃ ಸೋದೃಷ್ಟೋ ಯೋಹರಿರ್ಯಃ ಪರಮೋ ಯೋ ವಿಷ್ಣುರ್ಯೋನಂತ ಇತ್ಯಾದಿ ಚತುರ್ವೇದೇಶಿಖಾಯಾಂ ।**

ಆತನು ಜಗತ್ತಿಗೆ ಉತ್ಪತ್ತಿ ಕಾರಣನು. ವಾಯುವು ಬಲ ಜ್ಞಾನರೂಪನು ಪರಮಾತ್ಮಾ ಪರಮೇಶ್ವರನು ಶ್ರೀ ವಿಷ್ಣುವು ಪ್ರಸಿದ್ಧನು. ಪರಿಮಿತಿಯಿಲ್ಲದವನು. ಆತನೇ ಹರಿಯು ಅನ್ಯರಲ್ಲ.

**10. ನಚಾದಿತ್ಯಶಬ್ದಾ ಚ್ಚಕ್ಷುರ್ಮಯತ್ವಾದೇಶ್ಚ ಜೀವ ಇತಿ ಶಾಚ್ಯಂ ।**

ಆದಿತ್ಯ ಶಬ್ದ ವಾಚ್ಯತ್ವದಿಂದಲೂ ಚಕ್ಷುರ್ಮಯತ್ವದಿಂದಲೂ ಜೀವನೆಂದು ಹೇಳಲ ಸಾಧ್ಯವಿಲ್ಲ ಏಕೆಂದರೆ "ಆದಿತ್ಯೋರಸಃ" ಚಕ್ಷುರ್ಮಯಃ ಶ್ರೋತ್ರಮಯಃ ಚ್ಛಂದೋಮಯಃ ಮನೋಮಯಃ ವಾಯುಮಯಃ ಆತ್ಮಾ "ಈ ವಾಕ್ಯಗಳಿಂದ ದೇಹಾಭಿಮಾನಿ ಜೀವನಿಗಾದರೂ" "ಶಾರೀರೌ ತಾವುಭಾವ್ರೋಕ್ತೌ ಜೀವಶ್ಚ ಪರಮಸ್ತಥಾ" ಎಂಬ ಶೃತಿಯಿಂದ ಜೀವನ ಜತೆಯಲ್ಲಿ ಆ ಶರೀರದಲ್ಲಿಯೂ ಇರುವವನು.

## ಸೂ ॥ ಓಂ॥ ಅನುಪಪತ್ತೇಸ್ತು ನ ಶಾರೀರಃ ॥ ಓಂ ॥ 3

**ಏಕಸ್ಯ ಸರ್ವಶರೀರಸ್ಥತ್ವಾನುಪಪತ್ತೇರೇವ ।**

ಶರೀರಸ್ಥನಾದ ಜೀವನು (ಆದಿತ್ಯಾದಿಗಳು) ಸರ್ವಗತನಲ್ಲ. ಏಕೆಂದರೆ ಒಬ್ಬ ಜೀವನಿಗೆ ಅಸ್ವಾತಂತ್ರ್ಯ ಧರ್ಮ ನಿಮಿತ್ತವಾಗಿ ಸರ್ವಶರೀರಸ್ಥತ್ವವು ಅಸಾಧ್ಯ

## ಸೂ॥ ಓಂ॥ ಕರ್ಮಕರ್ತೃವ್ಯಪದೇ ಶಾಚ್ಚ ॥ ಓಂ ॥ 4

**ಆತ್ಮಾನಂ ಪರಸ್ಮೈಶಂಸತಿ (ಐ-ಆ-3-2-3) ಇತ್ಯಾದಿ**

ಈ ಶೃತಿಯಲ್ಲಿ ಸರ್ವಗತ ವಸ್ತುವು ಜೀವನಿಗಿಂತ ಶ್ರೇಷ್ಠನೆಂದು ಶ್ಲಾಘನೀಯವಾಗಿ ಹೇಳಿದೆ. ಆದ್ದರಿಂದ ಸರ್ವತ್ರ ಹೇಳಲ್ಪಟ್ಟವನು ಚಕ್ಷುರ್ಮಯತ್ವಾದಿ ಗುಣಗಳುಳ್ಳ ಪರವಸ್ತುವನ್ನು ಅಯೋಗ್ಯನಿಗೆ ಉಪದೇಶಿಸಿದಲ್ಲಿ ಫಲಪ್ರದವಾಗಲಾರದು. "ಯಸ್ತಿತ್ಯಾಜಸಚಿವಿದಂ ಸಖಾಯಂ ನ ತಸ್ಯ ವಾಚ್ಯಪಿಭಾಗೋಽಸ್ತಿ" ಕರ್ಮಸಂಚಯವನ್ನು ತಿಳಿದಿರುವ ಪ್ರೀತಿಯಿಂದ ಒಂದು ಸ್ಥಳದಲ್ಲಿದ್ದು ಸ್ನೇಹಿತನಾಗಿರುವ ಶ್ರೀ ಹರಿಯನ್ನು ಅನ್ಯಥಾ ತಿಳಿಯುವವನು ವೇದಾಧ್ಯಯನವನ್ನು ಮಾಡಿದರೂ ಫಲಭಾಗವನ್ನು ಹೊಂದದೆ ನರಕಭಾಗಿಯಾಗುವನು ಎಂದು

## ಸೂ ॥ ಓಂ ॥ ಶಬ್ದವಿಶೇಷಾತ್ ॥ ಓ ॥ 5

**ಏತಮೇವ ಬ್ರಹ್ಮೇತ್ಯಾಚಕ್ಷತ (ಐ.ಆ-3-2-3) ಇತಿ**

ಮೇಲಿನ ಶೃತಿಯಲ್ಲಿ ಬ್ರಹ್ಮ ಶಬ್ದಕ್ಕೆ "ಏವ" ಶಬ್ದ ವಿಶೇಷಣದಿಂದ ಬ್ರಹ್ಮ ಮುಖ್ಯಾರ್ಥನಾದ ಶ್ರೀವಿಷ್ಣುವೇ ಸರ್ವಗತ್ವನೆಂದು ತಿಳಿ. ಜೀವನಲ್ಲ

**14. ನಹಿ ಜೀವಮೇವ ಬ್ರಹ್ಮೇತ್ಯಾಚಕ್ಷತೇ ।**

ಜೀವನಿಗೆ ಭೂತಸ್ಥತ್ವವು ಕೂಡುವುದಿಲ್ಲವಾಗಿ ಬ್ರಹ್ಮತ್ವವು ಕೂಡುವುದಿಲ್ಲ.

15. ಏಷ ಉ ಏವ ಬ್ರಹ್ಮೈಷ ಉಪಿವಾತ್ಮಾ ಏಷ ಉ ಏವ ಸವಿತೈಷ ಉ ಏವ ಇಂದ್ರ ಏಷ ಉ ಏವಹರಿಹರ್ರತಿ ಪರಃ ಪರಾನಂದ ಇತಿಚೇಂದ್ರದ್ಯುಮ್ನಶಾಖಾಯಾಂ ।

ಈ ಇಂದ್ರದ್ಯುಮ್ನ ಶಾಖೆಯು ಶ್ರೀ ವಿಷ್ಣು ಪರವಾಗಿ ಬ್ರಹ್ಮನನ್ನು ಹೇಳು ತ್ತದೆ ಆತ್ಮಾನಂ ಎಂದು ಹೇಳಿ "ಸ ಸವಿತಾ" ಎಂದು ಹೇಳಿದ ಸವಿತೃವು ವಿಷ್ಣುವೇ ಈ ಹರಿಯೇ ಯಜ್ಞಶಾಲೆಯಲ್ಲಿ ಹುತ ಭಾಗವನ್ನು ಸ್ವೀಕಾರ ಮಾಡು ವವನು ಸಜ್ಜನರ ಪಾಪವನ್ನು ಹರಣ ಮಾಡಿ ಉದ್ಧಾರಕನು, ಉತ್ತಮನು, ಪೂರ್ಣಾ ನಂದನು ಹೀಗೆ ಬ್ರಹ್ಮನು ಸರ್ವ ಭೂತಸ್ಥ ವಿಷ್ಣುವೇ.

## ಸೂ॥ ಓಂ॥ ಸ್ಮೃತೇಶ್ಚ ॥ ಓಂ ॥ 6

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।** (ಗೀತಾ 10-20)
**ಗಾಮಾವಿಶ್ಯಚ ಭೂತಾನಿ ಧಾರಯಾಮ್ಯಹಮೋಜಸಾ** (ಗೀ 15-13)

ಇತ್ಯಾದಿ ಸ್ಮೃತಿ ಸಮಾಖ್ಯೆಯಿಂದಲೂ ಸಮರ್ಥನೆಯು ಇದೇ

ಎಲೈ ಗುಡಾಕೇಶನೇ ನಾನು ಅಂತರ್ಯಾಮಿ ತೇನ ಸರ್ವ ಹೃದಯ ಗುಹೆ ಯಲ್ಲಿದ್ದು ಭೂಮಿಯನ್ನು ಪ್ರವೇಶಿಸಿ ಜೀವರುಗಳನ್ನು ನನ್ನ ಸಾಮರ್ಥ್ಯದಿಂದ ಧರಿ ಸಿರುವೆನು ಎಂದು ಶ್ರೀ ಕೃಷ್ಣನಿಂದ ಅರ್ಜುನನಿಗೆ ಉಪದೇಶವು.

17. **ನ ಚಾಪ್ರಾಮಾಣಿಕಂ ಕಲ್ಪ್ಯಂ ।**

ಅಪ್ರಾಮಾಣಿಕವಾದ ಭೇದ ಮಿಥ್ಯಾತ್ವವನ್ನು ಕಲ್ಪನೆ ಮಾಡಬಾರದು.

## ಸೂ॥ ಓಂ॥ ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚನೇತಿ ಚೇನ್ನ ನಿಚಾಯ್ಯತ್ವಾದೇವಂ ವ್ಯೋಮವಚ್ಚ ॥ ಓಂ ॥ 7

18 **ಸರ್ವೇಷು ಭೂತೇಷ್ವಿತ್ಯಲ್ಪೌಕಸ್ತ್ವಾಚ್ಚಕ್ಷುರ್ಮಯೇತ್ಯಾದಿನಾ ಜೀವವ್ಯಪದೇಶಾಚ್ಚ ನೇತಿಚೇನ್ನ ॥**

ಸರ್ವಗತ ವಸ್ತುವಿನಲ್ಲಿ ಸರ್ವಪ್ರಾಣಿ ಹೃದಯಾಕಾರ ರೂಪ ಅಲ್ಪಸ್ಥಾನವನ್ನು "ಸರ್ವಭೂತೇಷು" ಎಂಬ ಶೃತಿಯಲ್ಲಿ ಹೇಳುವುದರಿಂದ ಅದು ಜೀವಧರ್ಮವಾದ್ದರಿಂದ ಬ್ರಹ್ಮಶಬ್ದವು ಜೀವನೇ ಎಂದರೆ ಹಾಗಲ್ಲ. ಶ್ರೀ ವಿಷ್ಣುವೇ ಹೇಳಲ್ಪಡುವನು, ಈ ಶೃತಿಯಿಂದಲೂ ವಿರೋಧವಿಲ್ಲ ವ್ಯಾಪ್ತನಾದ ವಸ್ತುವಿಗೆ ಅಲ್ಪಸ್ಥಾನಕೋಕ್ತಿಯು ಉಪಾಸನ ಸೌಕರ್ಯಕ್ಕಾಗಿ ಹೇಳಿದೆ ವ್ಯಾಪ್ತಾಕಾಶವು ಅಲ್ಪಸ್ಥಾನದಲ್ಲಿ ಇರುವಂತೆ ಹೇಳಿರುವುದು ಕೂಡುವುದು

**19 ಅರ್ಭಕೌಕಸ್ತ್ವೇನ ಚಕ್ಷುರ್ಮಯತ್ವಾದಿರೂಪೇಣ ಚ ಸೈವ ವಿಷ್ಣೋಃ ನಿಚಾಯ್ಯತ್ವಾತ್ ।**

ಸರ್ವವ್ಯಾಪ್ತ ವಸ್ತುವಿಗೆ ಅಲ್ಪ ಸ್ಥಳ ನಿರ್ದೇಶನವು ಜೀವನಲ್ಲಿ ವಿಲಕ್ಷಣ ವಾದರೂ ಇಲ್ಲಿ ಶೃತಿಯಲ್ಲಿ ಉಪಸಾನೆಗೋಸ್ಕರ ವಿಶೇಷ ವಸ್ತುವು ಹೇಳಲ್ಪಡುವುದ ರಿಂದ ವಿಶೇಷ ಶಕ್ತಿಯಿಂದ ಶ್ರೀ ವಿಷ್ಣುವಿನಲ್ಲಿ ಸಾಧ್ಯವು.

**20. ಸರ್ವಗತೇಽಪ್ಯಲ್ಪೌಕಸ್ತ್ವಂ ಚ ಯುಜ್ಯತೇ ವ್ಯೋಮವತ್ ।**

ಸರ್ವವ್ಯಾಪ್ತತ್ವವೂ ಅಲ್ಪಸ್ಥಳವೂ ಆಕಾಶ ದೃಷ್ಟಾಂತದಿಂದ ಸಾಧ್ಯವು.

**21.** ಸ್ಕಾಂದ ಪುರಾಣ ವಾಕ್ಯವು

**ಸರ್ವೇಂದ್ರಿಯಮಯೋವಿಷ್ಣುಃ ಪರ್ವಪ್ರಾಣಿಷು ಚ ಸ್ಥಿತಃ ।**
**ಸರ್ವನಾಮಾಭಿಧೇಯಶ್ಚ ಸರ್ವವೇದೋದಿತಶ್ಚ ಸ ಇತಿಸ್ಕಾಂದೇ॥**

ಚಕ್ಷುರ್ಮಯ, ಶ್ರೋತ್ರಮಯ, ಮನೋಮಯ, ವಾಙ್ಮಯ ಇವುಗಳಲ್ಲಿ ಸ್ವಾಮಿತ್ವದಿಂದ ವಿಷ್ಣುವು ಹೇಳಲ್ಪಡುವನು. ಆ ಪ್ರಾಣಿಗಳ ಹೃದಯದಲ್ಲಿರುವು ವನಾದ್ದರಿಂದ ಆಯಾ ನಾಮಗಳಿಂದ ವಾಚ್ಯನು ವಿಷ್ಣುವೇ. ಸರ್ವವೇದಗಳಿಂದಲೂ ಆತನೇ ವಾಚ್ಯನು. ಸಂಪೂರ್ಣ ದರ್ಶನ ಶಕ್ತಿಯಿಂದ ಚಕ್ಷುರ್ಮಯನೂ, ಶ್ರವಣ ಶಕ್ತಿಯಿಂದ ಶ್ರೋತ್ರಮಯ ಸತ್ಯ ಕಾಮತ್ವದಿಂದ ಛಂದೋಮಯ, ಸರ್ವಾಂತ ರ್ಯಾಮಿಯಾಗಿ ಮನೋಮಯ, ಸರ್ವವ್ಯಕ್ತ ದಿಂದ ವಾಙ್ಮಯ ಪೂರ್ಣಫಲರೂಪ ನಾದ್ದರಿಂದ ಆತ್ಮಾ? ವಾಚ್ಯನೂ ಕೂಡ. ಸ್ವತಂತ್ರ ಪರಮಾತ್ಮನು ಜೀವನಿಂದ ವಿಲಕ್ಷಣನಾಗಿ ಆತನಲ್ಲಿ ಸರ್ವವೂ ಕೂಡುವುದು.

ಸರ್ವೇವಿಷ್ಣೌಸ್ಥಿಥಾಯಸ್ಮಾತ್ ಅತಃಸರ್ವಮಯೋಹ್ಯಸೌ॥ ಎಂಬವಾಕ್ಯವೂ ಇದೆ.

ಸೂ॥ ಓಂ॥ ಸಂಭೋಗ ಪ್ರಾಪ್ತಿರಿತಿಚೇನ್ನವೈಶೇಷ್ಯಾತ್
॥ ಓಂ ॥ 8

22-23 ಜೀವಪರಯೋರೇಕಶರೀರಸ್ಥತ್ವೇ ಸಮಾನ ಭೋಗಪ್ರಾಪ್ತಿ ರಿತಿಚೇನ್ನ । ಸಾಮರ್ಥ್ಯವೈಶೇಷ್ಯಾತ್ ॥

ಭಗವಂತನಿಗೆ ಆಕಾಶ ಸದೃಸವಾಗಿ ಸರ್ವ ಜೀವ ಶರೀರತ್ವವನ್ನು ಜೀವನ ಜೊತೆಯಾಗಿ ಹೇಳಿದಲ್ಲಿ ಜೀವನ ಸಮಾನ ಭೋಗ ಪ್ರಾಪ್ತಿಯು ಉಂಟಾಗುತ್ತದೆ, ಇದು ಬಾಧಕವೆಂದರೆ ಹಾಗಲ್ಲ ಶ್ರೀ ವಿಷ್ಣುವು ಎಲ್ಲೆಡೆಯಲ್ಲಿಯೂ ಸರ್ವ ಭೋಕ್ತೃವೇ ತನ್ನ ಸಾಮರ್ಥ್ಯ ವಿಶೇಷದಿಂದಲೇ ಜೀವನ ಸಮಾನ ಭೋಗ ಮಾತ್ರ ಹೊಂದುವುದಿಲ್ಲ ಸರ್ವಾನಂಧ ಭೋಕ್ತೃತ್ವವೇ.

24. ಸರ್ವಜ್ಞಾಲ್ಪಜ್ಞತಾಭೇದಾತ್ಸರ್ವಶಕ್ತ್ಯಲ್ಪಶಕ್ತಿತಃ । ಸ್ವಾತಂತ್ರ್ಯಪಾರತಂತ್ರ್ಯಾಭ್ಯಾಂ ಸಂಭೋಗೋನೇಶಜೀವಯೋರಿತಿ

ಪರಮಾತ್ಮ ಜೀವಾತ್ಮರಿಗೆ ಸರ್ವಜ್ಞತ್ವ ಅಲ್ಪಜ್ಞತ್ವ ಬೇಧದಿಂದಲೂ ಸರ್ವ ಶಕ್ತಿತ್ವ ಅಲ್ಪಶಕ್ತಿತ್ವ ಭೇದದಿಂದಲೂ ಸರ್ವಸ್ವಾತಂತ್ರ್ಯಪಾರತಂತ್ರ್ಯ ಭೇದದಿಂದಲೂ ಸಮಾನ ಸಂಭೋಗ ತ್ರಾಪ್ತಿಯು ಇಲ್ಲ. ಈತನು ಪೂರ್ಣನಂದನೇ

– ಇತಿ ಸರ್ವಗತತ್ವಾಧಿಕರಣವು –

– ಅತ್ತೃತ್ವಾಧಿಕರಣಂ –

ಈ ಅಧಿಕರಣದಲ್ಲಿ ಈ ಪ್ರಪಂಚದಲ್ಲಿ ಲೋಕ ವ್ಯವಹಾರರೀತ್ಯಾ ಅನ್ಯತ್ರಅಂದರೆ "ಅದಿತಿ" ಶಬ್ದ ವಾಚ್ಯದೇವಮಾತೆಯಲ್ಲಿ ಕೂಡುವ ಅತ್ತೃಧರ್ಮವು ಶ್ರೀ ವಿಷ್ಣು ದೇವತೆಯಲ್ಲಿ ಸಾಧಿಸಲ್ಪಡುವುದು.

1 ಜನ್ಮಾದ್ಯಸ್ಯಯತಇತ್ಯುಕ್ತಂ । ತತ್ರಾತ್ತೃತ್ವಂ ಸಯದ್ಯದೇವಾ ಸೃಜತ ತತ್ತದತ್ತುಮಧ್ರಿಯತ ಸರ್ವಂ ವಾ ಅತ್ತೀತಿ ತದದಿತೇ ರದಿತಿತ್ವಂ (3-2-5) ಮಿತ್ಯದಿತೇಃ ಪ್ರತೀಯತೇ ।

ಜನ್ಮಾದಿಸೂತ್ರದಲ್ಲಿ ಜನ್ಮಾದಿ ಅಷ್ಟಕರ್ತೃತ್ವವನ್ನು ಶ್ರೀ ವಿಷ್ಣುವಿನಲ್ಲಿ ಹೇಳಿದೆ. ಅದರಲ್ಲಿ ಅತ್ತೃತ್ವವು ಶ್ರೀವಿಷ್ಣು ಧರ್ಮವಾಗಿ ಸೂಚಿಸಲ್ಪಟ್ಟಿದೆ. ಆದರೆ ಈ ಮೇಲಿನ ಶೃತಿಯಲ್ಲಿಯಾದರೋ ದೇವಮಾತೆಯಾದ ಅದಿತಿ ದೇವತೆಯಲ್ಲಿ ಅತ್ತೃತ್ಯವು ಹೇಳಲ್ಪಟ್ಟಿದೆ ಭಕ್ಷಣಾರ್ಥಕ್ರಿಯೆಯು 'ಅದಿತಿ' ಶಬ್ದವಾಚ್ಯತ್ವವನ್ನು ಹೇಳಿದರೂ ಸರ್ವ ಸಂಹರ್ತೃತ್ವ ಧರ್ಮವು ಶ್ರೀ ವಿಷ್ಣುವಿನ ಧರ್ಮ. ಅತಿ ವ್ಯಾಪ್ತಿಯಾಗುವುದಿಲ್ಲ. ಸ್ಕಾಂದ ಪುರಾಣದಲ್ಲಿ ಈ ಧರ್ಮವು ಸಾಕ್ಷಾತ್ತಾಗಿ ಶ್ರೀ ಪರಮಾತ್ಮನಲ್ಲಿ ಉಕ್ತವಾಗಿದೆ.

"ಸ ಸರ್ಗಕಾಲೇತು ಕರೋತಿ ಸರ್ವಂ ಸಂಹಾರಕಾಲೇತು ತದತ್ತಿ ಭೂಯಃ ।
ಸೃಷ್ಟ್ವಾ ಪಾತಾತಥೈವಾತ್ತಾ ಸಃ" ಶ್ರೀ ವಿಷ್ಣುವು ಎಂದು ಶೃತಿಯು

"ನೈವೇಹಕಿಂ ಚನಾಸೀತ್" ಪ್ರಲಯ ಕಾಲದಲಿ ಅಸ್ಯಂತತ್ರ ವರ್ಗಗಳಲ್ಲಿ ಜೀವಜಡ ಯಾವ ವಸ್ತುವೂ ಇರಲಿಲ್ಲ.

"ಸರ್ವಸಂಹಾರಕಂ ವಿಷ್ಣುಂ ದೇವೀಂ ಜೀವಾಂಸ್ತಥೈವಚ ।
ಕಾಲಂ ತ್ರಿಗುಣ ಸಾಮ್ಯಂ ಚ ಕರ್ಮಾಣಿ ಪ್ರಾಣಮಿಂದ್ರಿಯಾಃ ।
ಸಂಸ್ಕಾರಾಂಶ್ಚೈವ ವೇದಾಂಶ್ಚ ನರ್ತೇ ಕಿಂ ಚಿಲ್ಲಯೇತ್ವಭೂತ್ ॥

ಈ ಜೀವಾದಿ ವಸ್ತುಗಳೆಲ್ಲವೂ ಮೃತ್ಯುನಾಮಕ ಜನಾರ್ದನನಿಂದ ಮುಚ್ಚಲ್ಪಟ್ಟಿದ್ದವು ಆಗ ತನ್ನ ಭೋಜನಕ್ಕಾಗಿ ಬೇರೆ ಶರೀರವನ್ನು ಇಚ್ಛಿಸಿದನು, ಅವನ ಚಲನದಿಂದ (ಅಪಃ - ನೀರು) ಪ್ರಲಯಾರ್ಣವವು ಉತ್ಪನ್ನವಾಯಿತು. ಮನಸ್ಸು ಮತ್ತು ವಚನದಿಂದ ಕೂಡಿ ಅಮೃತನಾಮಕ ಪರಮಾತ್ಮನು ಅವನನ್ನು ಇಚ್ಛಿಸಿದನು. ಅದು ರೇತಸ್ಸಾಗಿ ಪರಿಣಮಿಸಿ ಸಂವತ್ಸರ ನಾಮಕ ಬ್ರಹ್ಮನು ಹುಟ್ಟಿದನು ಪರಮಾತ್ಮನು ಆ ಚತುರ್ಮುಖ ಬ್ರಹ್ಮನನ್ನು ತಿನ್ನಲು ಬರಲು ಬ್ರಹ್ಮನು ನಿವಾರಣೆಯನ್ನು ಪ್ರಾರ್ಥಿಸಿ ಶ್ರೀ ಪರಮಾತ್ಮನ ಆಹಾರಾರ್ಥವಾಗಿ ಕನೀಯ ವಸ್ತುಗಳನ್ನು ಸೃಷ್ಟಿ ಮಾಡಿದನು. ಹೀಗೆ ಹೇಳಿರುವ ವಾಕ್ಯಗಳಿಂದ ಈ ಚರಾಚರ ಪ್ರಪಂಚವು ಶ್ರೀ ಪರಮಾತ್ಮನ ಅಶನಕ್ಕಾಗಿ ಸೃಷ್ಟಿಯು ಈ ಪ್ರಕರಣವು ವಿಷ್ಣು ವಿಷಯುಕವಾಗಿ ಶ್ರೀವಿಷ್ಣುವೇ ಈ ಧರ್ಮವುಳ್ಳ (ಅತ್ತೃತ್ವವು) ಮುಖ್ಯ ವಸ್ತುವು.

**2. "ಸಯದ್ಯದೇವಾಸೃಜತೇತಿ ಪುಲ್ಲಿಂಗಂಚ ಕೂಟಸ್ಥೋಽಕ್ಷರ ಉಚ್ಯತೆ (ಗೀತಾ. 15-16) ಇತ್ಯಾದಿವತ್**

ಸ ಎಂಬ ವುಲ್ಲಿಂಗಬೋಧನೆಯಿಂದಲೂ "ಕೂಟಸ್ಥ" "ಅಕ್ಷರಃ" ಎಂಬ ವಚನದಿಂದಲೂ ಶ್ರೀ ವಿಷ್ಣುವೇ ವಾಚ್ಯನು. ಅದಿತಿ ದೇವಮಾತೆಯು ಸ್ತ್ರೀ ಲಿಂಗವು.

ಅತ್ತಿ ವಿಶ್ವಂ ತೇನ ಚೈವಾದಿತಿರಿತಿ ವಿಷ್ಣುಃ

ಗುಣತಃ ಕಾಲತಶ್ಚಾನಂತ್ಯ ರೂಪಮು ಖಂಡಿತತ್ವಂ. ಅದಿತಿ ಶಬ್ದ ಪ್ರವೃತ್ತಿ ನಿಮಿತ್ತಂ ಎಂದು ಶ್ರೀ ವಿಷ್ಣು ಧರ್ಮಪನ್ನೇ ತಿಳಿಸುವುದು

3. ಅತ್ರೋಚ್ಯತೇ ॥

ಇಲ್ಲಿ ಹೀಗೆ ಹೇಳಿದೆ.

## ಸೂ॥ ಓಂ॥ ಅತ್ತಾಚರಾಚರ ಗ್ರಹಣಾತ್ ॥ ಓಂ ॥ 9

"ಸರ್ವಂವಾ ಅತ್ತಿ" ಎಂದು ಹೇಳಿರುವ ಸರ್ವಾತ್ತಾ ಧರ್ಮವು ಶ್ರೀ ವಿಷ್ಣುನಲ್ಲಿಯೇ ಮುಖ್ಯವು. ಅದಿತಿ ದೇವಿಯಲ್ಲಲ್ಲ. ಚೇತನಾ ಚೇತನ ಸರ್ವ ಪ್ರಪಂಚದ ಅತ್ತೃತ್ವವನ್ನು ಇಲ್ಲಿ ಹೇಳಿದೆ.

**4. ನಹಿಂಚರಾಚರಸ್ಯ ಸರ್ವಸ್ಯಾತ್ತೃತ್ವಮದಿತೇಃ ।**

ಅದಿತಿ ದೇವತೆಗೆ ಸರ್ವ ಚರಾಚರ ಪ್ರಪಂಚದ ಅತ್ತೃತ್ವವು ಇಲ್ಲವಷ್ಟೆ.

**5. ಸ್ರಷ್ಟಾ ಪಾತಾ ತಥೈವಾತ್ತಾನಿಖಿಲಸ್ಯೈಕಏವತು ।**
**ವಾಸುದೇವಃ ಪರಃ ಪುಂಸಾಮಿತರೇಽಲ್ಪಸ್ಯವಾನವೇತಿಸ್ಕಾಂದೇ ॥**

ಪುರುಷೋತ್ತಮನಾದ ಶ್ರೀ ವಾಸುದೇವನು ಎಲ್ಲಾ ಪ್ರಪಂಚಕ್ಕೆ ಸ್ವತಂತ್ರವಾಗಿ ಸೃಷ್ಟಿಕರ್ತನು, ರಕ್ಷಣ ಕರ್ತನು. ಸಂಹಾರಕರ್ತನೂ ಹೌದು. ಶ್ರೀ ವಾಸುದೇವನಿಂದ ಇತರರಾದ ಬ್ರಹ್ಮಾದಿದೇವತೆಗಳು ಜಗದೇಕದೇಶದ ಅಸ್ವತಂತ್ರ ಕರ್ತರು ಮಾತ್ರ.

**6 "ಏಕಃ ಪುರಸ್ತಾದ್ಯ ಇದಂಬಬೂವ" "ಭುವನಸ್ಯಗೋಪ್ತಾ" (ಪಾಃ)**
**"ಯಮುಷ್ಯೇತಿ ಭುವನಂ ಸಾಂಪರಾಯೇ" "ಸನೋಹರಿರ್ಘೃತ**
**ಮಿಹಾಯುಷೇತ್ತು ದೇವ ಇತಿಶ್ರುತಿಃ ॥**

ಯಾವಾತನು ಈ ಪ್ರಪಂಚೋದ್ಭವಕ್ಕೆ ಮುಂಚೆ ಪ್ರಲಯ ಕಾಲದಲ್ಲಿದ್ದನೋ ಜಗತ್ತು ಯಾವಾತನಿಂದ ಸೃಷ್ಟಿ ಹೊಂದಿತೋ, ಧರಿಸಲ್ಪಟ್ಟಿದೆಯೋ ಮತ್ತು ಮುಂದಿನ ಪ್ರಲಯದಲ್ಲಿ ತನ್ನಲ್ಲಿ ಈ ಜಗತ್ತನ್ನು ಅಡಗಿಸಿಕೊಳ್ಳುವನೋ ಆ ಹರಿಶಬ್ದ ವಾಚ್ಯ ಶ್ರೀ ಪರಮಾತ್ಮನು ಈ ಯಜ್ಞಸ್ಥಾನದಲ್ಲಿ ನಿಂತು ಆಹುತಿಗಳನ್ನು ಸ್ವೀಕರಿಸಿ ನಮಗೆ ಪೂರ್ಣಾಯುಷ್ಯವನ್ನು ಕರುಣಿಸಲಿ–ಮಂತ್ರ ದ್ರಷ್ಟ ವಾಕ್ಯವು.

## ಸೂ|| ಓಂ|| ಪ್ರಕರಣಾಚ್ಚ || ಓಂ || 10

"ನೈವೇಹಕಿಂಚನ" ಎಂಬ ಶೃತಿಯು ವಿಷ್ಣುಪ್ರಕರಣವಾದ್ದರಿಂದ ಶ್ರೀವಿಷ್ಣುವೇ ಅತ್ರೃತ್ಯ ಧರ್ಮ ಮುಖ್ಯ ವಾಚ್ಯನು.

8. ಅಪ್ಸಂವತ್ಸರಸೃಷ್ಟ್ಯಾದಿನಾ ತತ್ಪ್ರಕರಣಾಚ್ಚ ।

ಅಪ್‌ಸಂವತ್ಸರ ..ಇತ್ಯಾದಿಗಳ ಸೃಷ್ಟಿ ಪ್ರಕರಣದಿಂದಲೂ ಈ ಶೃತಿಯು ಶ್ರೀವಿಷ್ಣು ಪ್ರಕರಣದ್ದು

9 ನೇಹಾಸೀತ್ಕಿಂಚನಾಪ್ಯಾದೌ ಮೃತ್ಯುರಾಸೀದ್ಧರಿಸ್ತದಾ ।
ಸೋತ್ಮನೋ ಮನಸಾಸ್ರಾಕ್ಷೀದಾಪಏವ ಜನಾರ್ದನಃ ||

ಪ್ರಳಯ ಕಾಲದಲ್ಲಿ ಯಾವ ವಸ್ತುವೂ ಇರಲಿಲ್ಲ. ಆಗ ಮೃತ್ಯುನಾಮಕ ಶ್ರೀ. ಹರಿಯು ಮಾತ್ರವೇ ಇದ್ದನು. ಆತನು ತನ್ನ ಮನಸ್ಸಿನಿಂದ ಪ್ರಳಯೋದಕವನ್ನು ಸೃಷ್ಟಿ ಮಾಡಿದನು.

10. ತಯಾನಸ್ತಾಸು ಭಗವಾನ್ನಿರ್ಮಮೇಂಡಂ ಮಹತ್ತರಂ ।
ತತ್ರ ಸಂವತ್ಸರಂನಾಮ ಬ್ರಹ್ಮಾಣಮಸೃಜತ್ಪ್ರಭುಃ ।
ತಮತ್ತುಂ ವ್ಯಾದದಾದಾಸ್ಯಂ ತದಾಸೌ ವಿರುರಾವಹ ।
ಅಥ (ತತ್ಕ್ಯ)ತಂ ಕೃಪಯಾ ವಿಷ್ಣುಃ ಸೃಷ್ಟಿಕರ್ಮಣ್ಯ ಯೋಜಯುತ್ ।
ಸೋಽಸೃಜದ್ಭುವನಂ ವಿಶ್ವಮುದ್ಧಾರ್ಥಂ ಹರಯೋ ವಿಭುರಿತಿ ಬ್ರಹ್ಮವೈವರ್ತೇ ||

ಈ ಜನಾರ್ದನನು ಆ ಪ್ರಳಯೋದಕದಲ್ಲಿ ಮಲಗಿ ಈ ಮಹತ್ ಬ್ರಹ್ಮಾಂಡವನ್ನು ಸೃಷ್ಟಿ ಮಾಡಿದನು. ಹಾಗೆಯೇ ಅದರಲ್ಲಿ ಬ್ರಹ್ಮಾಂಡ ನಾಮಕ ಅಂಡವನ್ನು ಸೃಷ್ಟಿಸಿ ಸಂವತ್ಸರ ನಾಮಕ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿದನು ಮತ್ತು ಆತನನ್ನು ತಿನ್ನಲು ಬಯಸಿ ಬಾಯಿಯನ್ನು ತೆರೆಯಲು ಆತನು "ಭಾಣ" ಎಂದು ಕೂಗಿಕೊಂಡನು. ಆಗ ಆ ಶ್ರೀವಿಷ್ಣುವು ಆತನನ್ನು ಕರುಣೆಯಿಂದ ಸೃಷ್ಟಿ ಕರ್ಮದಲ್ಲಿ ನಿಯೋಜಿಸಿದನು ಸಮರ್ಥನಾದ ಆ ಚತುರ್ಮುಖ ಬ್ರಹ್ಮನು ಈ ಜಗತ್ತನ್ನು ಶ್ರೀಪರಮಾತ್ಮನ ಊಟಕ್ಕಾಗಿ ಸೃಷ್ಟಿ ಮಾಡಿದನು ಎಂದು ಬ್ರಹ್ಮ ವೈವರ್ತವಾಕ್ಯದಿಂದ ವಿಷ್ಣುವೇ ಮುಖ್ಯ ಅತ್ತೃತ್ವ ಧರ್ಮವುಳ್ಳವನು ಅದಿತಿಯು ಅಲ್ಲ

– ಇತಿ ಅತ್ತೃತ್ವಾಧಿಕರಣವು –

## – ಗುಹಾಧಿಕರಣವು –

ಈ ಅಧಿಕರಣದಲ್ಲಿ ಲೋಕದಿಂದ ಅನ್ಯತ್ರ ಪ್ರಸಿದ್ಧ ಕರ್ಮಫಲ ಭೋಕ್ತೃತ್ವ ಧರ್ಮವನ್ನು ಶ್ರೀ ವಿಷ್ಣುವಿನಲ್ಲಿ ಸಮನ್ವಯ ಮಾಡಲ್ಪಡುವುದು

**1. ಸರ್ವಾತ್ತೈಕಃ ಉಕ್ತಃ ॥**

**ಋತಂಪಿಬಂತೌ ಸುಕೃತಸ್ಯ ಲೋಕೇ ಗುಹಾಂಪ್ರವಿಷ್ಟೌ**
**ಪರಮೇಪರಾರ್ಧ್ಯೇ ।**
**ಛಾಯಾತಪೌ ಬ್ರಹ್ಮವಿದೋವದಂತಿ ಪಂಚಾಗ್ನಯೋ ಯೇಚ**
**ತ್ರಿನಾಚಿಕೇತಾ ಇತಿಪಿಬಂತೌ ಪ್ರತೀಯತೇ ತೌಕಾವಿತಿ ॥**

ಹಿಂದಿನ ಅಧಿಕರಣದಲ್ಲಿ ಸರ್ವಾತ್ತೃತ್ವವು ಶ್ರೀ ವಿಷ್ಣುವಿನ ಧರ್ಮವೆಂದು ಹೇಳಿದೆ ಮತ್ತು ಸರ್ವಪಾತೃತ್ವವೂ ಅವನಲ್ಲಿ ಸಮನ್ವಯವಾಗಿದೆ ಈ ವಾಕ್ಯತ್ವ ಧರ್ಮವು ಕಾರಕದಲ್ಲಿ ಮೇಲಿನ ಶೃತಿಯಲ್ಲಿ ದ್ವಿವಚನದಿಂದ ಎರಡು ವ್ಯಕ್ತಿಗಳಲ್ಲಿ ಹೇಳಿದೆ. ಆ ದ್ವಿವ್ಯಕ್ತಿಗಳೂ ಯಾರು ಎಂಬ ಸಂಖ್ಯಾ ಪ್ರಶ್ನೆಯಿಂದ ಹಿಂದಿನ ಅಧಿಕರಣದಲ್ಲಿ ಹೇಳಿರುವ ಒಬ್ಬ ವ್ಯಕ್ತಿಯೇ ಎಂಬ ವಾಕ್ಯಕ್ಕೆ ವ್ಯತಸ್ತವಾಗಿ ಸಂದೇಹ ಪ್ರಾಪ್ತಿಯು. ಶೃತ್ಯರ್ಥವು-ಪುಣ್ಯ ಕಾರ್ಯ ನಿರ್ಮಿತ ಶರೀರದಲ್ಲಿ ಹೃದಯ ಗುಹಾ ಪ್ರವಿಷ್ಟ ಸರ್ವಜೀವೋತ್ತಮ ಮುಖ್ಯ ಪ್ರಾಣ ದೇವರಲ್ಲಿ ಅಧಿಷ್ಠಾನವಾಗಿರುವ

ಶಾಸ್ತ್ರೋಕ್ತ ಕರ್ಮಫಲ ಪುಣ್ಯವನ್ನು ಅನುಭವಿಸುವ 'ಆತ್ಮಾ' 'ಅಂತರಾತ್ಮಾ' ಎಂಬ ಎರಡು ವ್ಯಕ್ತಿಗಳನ್ನು ಬ್ರಹ್ಮಜ್ಞಾನಿಗಳು ಕಂಡರು ಈ ದ್ವಿರೂಪವನ್ನು "ದೇವ ಪಿತೃಭೂತ ಮನುಷ್ಯ ಬ್ರಹ್ಮಯಜ್ಞ ನಿಷ್ಠರು ಅಥವಾ "ಅಗ್ನಿಹೋತ್ರದರ್ಶ ಪೌರ್ಣ ಮಾಸ್ಯ ಪಶುಸೋಮ ಪಂಚಯಜ್ಞ ನಿಷ್ಠರು" ಅಥವಾ ದ್ಯುಪರ್ಜನ್ಯಧರಾಪುಂ ಸ್ತ್ರೀ ಖ್ಯ ಪಂಚಾಗ್ನಿ ನಿಷ್ಠರೂ ಆದ ಬ್ರಹ್ಮ ಜ್ಞಾನಿಗಳು ನಾಚಿಕೇತಾಗ್ನಿಷ್ಠಿಕಾ ಚರ್ಯವೆಂಬ ಯಜ್ಞವನ್ನು ಮೂರು ಸಲ ಆಚರಿಸಿ ಅದರ ಫಲವಾಗಿ ಸುಖ ದುಃಖ ಕಾರಣ ಭೂತರಾದ (ಅಮರರಿಗೆ ಆಹ್ಲಾದಕರೂ ಅಸುರರಿಗೆ ತಾಪಕರೂ) ಆದ ದ್ವಿರೂಪಗಳನ್ನು ಕಂಡರು ಈ ಎರಡು ರೂಪಗಳು ಜೀವ ಪರಮಾತ್ಮರೆಂದು ಕೆಲ ವರು ಅನ್ಯರು ಎರಡೂ ಶ್ರೀ ಪರಮಾತ್ಮ ರೂಪಗಳೆಂದು ಹೇಳುವರು ಹೀಗೆ ಸಂಶ ಯವು. ಪರಮಾತ್ಮ ರೂಪದ್ವಯಗಳೆಂದೆ ಸಿದ್ಧಾಂತವು

2 ಹೀಗೆ ಹೇಳಿದೆ.

## ಸೂ|| ಓಂ|| ಗುಹಾಂಪ್ರವಿಷ್ಟಾವಾತ್ಮಾನೌಹಿತದ್ದರ್ಶನಾತ್ || ಓಂ || 11

**ಗುಹಾಂಪ್ರವಿಷ್ಟಾ ಪಿಬಂತೌ ವಿಷ್ಣು ರೂಪೇ ಏವ।**

ಹೃದಯ ಗುಹಾನಿಹಿತತ್ವ ಧರ್ಮವು "ಯೋವೇದ" ಎಂಬ ಶೃತಿಯಲ್ಲಿ ಶ್ರೀ ವಿಷ್ಣುವಿಗೆ ಹೇಳಿರುವುದರಿಂದ, ದ್ವಿರೂಪ ಸ್ಥಿತಿಯ ರೂಪಗಳೂ ಶ್ರೀ ವಿಷ್ಣುರೂಪ ಗಳೇ "ಘರ್ಮಾಸಂಮತಾ—"ಎಂಬ ಶೃತಿಯು ಶ್ರೀ ಹರಿಯನ್ನು ಎರಡು ರೂಪಗಳಿಂದ ಹೇಳಿದೆ. ಹೃದಯ ಗುಹಾದಲ್ಲಿ ಪ್ರವಿಷ್ಟ ದ್ವಿರೂಪಗಳು ಶ್ರೀವಿಷ್ಣುವಿನವೇ ಜೀವ ಪರ ಮಾತ್ಮರಲ್ಲ.

**3. ಘರ್ಮಾ ಸಮಂತಾ ತ್ರಿವೃತಂವ್ಯಾಪತುಸ್ತಯೋರ್ಜುಷ್ಟಿಂ ಮಾತಾರಿಶ್ವಾ ಜಗಾಮೇ (ಋ 10-114-9) ತ್ಯಾದಿನಾ ತದ್ದರ್ಶನಾತ್ ||**

ಶ್ರೀ ಪರಮಾತ್ಮನಿಗೆ ಒಂದು ರೂಪದಿಂದ ಸರ್ವಶರೀರಗತತ್ವ ಹೇಳಿರುವಾಗ ದ್ವಿ ರೂಪತ್ವವು ಹೇಗೆ ಸಂಭಾವಿತವು ಎಂದರೆ "ಘರ್ಮಾ -" ಎಂಬ ಶೃತಿಯಿಂದ ಎರಡು ರೂಪಗಳದರ್ಶನವನ್ನು ಹೇಳಿರುವುದು ಶೃತ್ಯರ್ಥವು ದೀಪ್ತವಾದ ಪ್ರಕೃತಿಪುರುಷ ಕಾಲ ವ್ಯಾಪ್ತಿಯಿಂದ ದೇಶತಃ ಕಾಲತಃ ಶಕ್ತಿತಃ ಸಂಪೂರ್ಣರಾದ ಎರಡು ಭಗವದ್ರೂಪಗಳ

ತೇಜೋಬನ್ನಾತ್ಮಕ ಶರೀರಗಳು ದೇಹಿಯು ಗುಹಾಸ್ಥಾನದಲ್ಲಿರುವವು ಅವುಗಳ ಸೇವೆಯನ್ನು ಶ್ರೀ ಮುಖ್ಯ ಪ್ರಾಣದೇವರು ತೇಜೋಬನ್ನಾತ್ಮಕ ಶರೀರದಿಂದ ಮಾಡುತ್ತಿರುವರು ಈ ವಾಯು ದೇವರ ಪತ್ನಿಯು ಮಾತ್ರ ಸ್ತನ್ಯಪಾನ ಮಾಡುವ ದೇವತೆಗಳು ಸುಖರೂಪರಾದ ವಾಯು ಸಹಿತರಾದ ಶ್ರೀ ಪರಮಾತ್ಮನ ಎರಡು ರೂಪಗಳನ್ನು ಕಂಡರು

**ಈ ಶೃತಿಯು ಉತ್ತರಾರ್ಧವು—"ಏಕಃ ಸುವರ್ಣಃ ಸಮುದ್ರಮಾವಿವೇಶ್ವಂ ಇದಂವಿಶಂ ಭುವನಂವಿಚಷ್ಟೆ। ತಂ ಪಾಕೇನ ಮನಸಾಽಪಶ್ಯಮಂತಿತಸ್ತಂ ಮಾತಾರೇಲ್ಹಿ ಸಉರೇಲ್ಹಿ ಮಾತರಮ್" ಸುವರ್ಣಂ ವಿಪ್ರಾಃ ಕವಯೋ ವಚೋಭಿರೇಕಂ ಸಂತಂ ಬಹುಧಾಕಲ್ಪಯಂತಿ ||**

**ಒಬ್ಬನೇ ಪರಮಾನಂದ ರೂಪನಾದ ಶ್ರೀ ಪರಮಾತ್ಮನು ಸಮುದ್ರವನ್ನು ಪ್ರವೇಶಿಸಿ ಈ ಜಗತ್ಸರ್ವವನ್ನು ನೋಡುವನು. ಆತನನ್ನು ಪಕ್ವ ಮನಸ್ಸಿನಿಂದ ನಾನು ನೋಡಿದೆನು ಆ ಪರಮಾತ್ಮಾ ಮತ್ತು ಮಾತೆ ಸರಸ್ವತಿಯರ ಪರಸ್ಪರ ಸಂಬಂಧ ಉಂಟಾಯಿತು. ಆ ಪರಮಾತ್ಮನೊಬ್ಬನನ್ನೇ ಕೇಶವಾದಿ 12 ನಾಮಗಳಿಂದಲೂ ಚಿಂತಿಸುವರು. ಹೀಗೆ ದರ್ಶನ ಹೇಳಿರುವುದರಿಂದ ಒಬ್ಬ ವ್ಯಕ್ತಿಗೆ ದ್ವಿರೂಪ ದೃಶ್ಯತ್ವವು ವಿಶೇಷದಿಂದಲೇ ಸಾಧ್ಯವು.**

4. **ಆತ್ಮಾಂತರಾತ್ಮೇತಿ ಹರಿರೇಕ ಏವ ದ್ವಿಧಾಸ್ಥಿತಃ**
**ನಿವಿಷ್ಟೋಹೃದಯೋ ನಿತ್ಯಂ ರಸಂ ಪಿಬತಿ ಕರ್ಮಜಮಿತಿ ಬೃಹತ್ಸಂಹಿತಾಯಾಂ ||**

ಒಬ್ಬನೇ ಶ್ರೀ ಹರಿಯು ದೇಹ ಜೀವ ರೂಪೋಪಾಧಿಯಿಂದ "ಆತ್ಮಾ, ಅಂತರಾತ್ಮಾ" ರೂಪ ಭೇದದಿಂದ ಎರಡು ರೂಪಗಳಿಂದ ದೇಹ ಜೀವಗಳ ಹೃದಯದಲ್ಲಿ ಹೊಕ್ಕಿರುವನು. ಕರ್ಮಫಲ ಜನ್ಯ ಸುಖವನ್ನು ನಿಯಮವಾಗಿ ಹೊಂದುವನು "ರಸ"ಶಬ್ದದಿಂದ ಪರಮಾತ್ಮನು ಜೀವನಿಂದ ಭೋಗ್ಯವಲ್ಲದ ಗುಣ ಭೋಗವನ್ನು ಅನುಭವಿಸುವನು. ಜೀವನಿಂದ ಭೋಗ್ಯವಾದ ದ್ರವ್ಯ ಭೋಕ್ತನಲ್ಲ

ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚರಸನಂ ಘ್ರಾಣಮೇವಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ॥ ಇತಿ ಗೀತಾ

ಗೀತಾವಾಕ್ಯ

5. ಶುಭಂ ಪಿಬತ್ಯಸೌನಿತ್ಯಂ ನಾಶುಭಂ ಸಹರಿಃ ಪಿಬೇತ್ ।
ಪೂರ್ಣಾನಂದಮಯಸ್ಯಾಸ್ಯ ಚೇಷ್ಟಾ ನಜ್ಞಾಯತೇಕ್ವಚಿದಿತಿಪಾದ್ಮೆ

ಸರ್ವಶರೀರಗತ ಪ್ರಾಣನಲ್ಲಿರುವ ಶ್ರೀಹರಿಯು ಯಜ್ಞಗಳಲ್ಲಿ ಹವಿಸ್ಸನ್ನು ಸ್ವೀಕರಿಸುವನು ಪಾಪ ಪರಿಹಾರಕನಾದ ಭಗವಂತನು ಶುಭ ಕರ್ಮ ಫಲವನ್ನು ಮಾತ್ರವೇ ಅನುಭವಿಸುವವನು ಅಶುಭ ಕರ್ಮ ಫಲವನ್ನಲ್ಲ ಈತನು ಪೂರ್ಣಾನಂದನಾದಾಗ್ಯೂ ಐಶ್ವರ್ಯ ಬಲದಿಂದ ಸುಖಭೋಗವೇ "ಅನಶ್ನನ್ನನ್ಯಃ" ಎಂಬ ಶೃತಿಯು ಪರಮಾತ್ಮನಿಗೆ ಪರಾಧೀನ ಭೋಗವಿಲ್ಲ ಮತ್ತು ಅಕ್ರಿಯ ಭೋಗವು ಇಲ್ಲ ಭೋಗದಿಂದ ಉಚ್ಚನೀಚಕಾರ್ಯ ಸಂಪಾದನೆಯೂ ಇಲ್ಲ ಆದ್ದರಿಂದ ವಿರೋಧವಿಲ್ಲ.

6 ಯೋ ವೇದ ನಿಹಿತಂ ಗುಹಾಯಾಮಿತ್ಯಾದಿನಾ ಪ್ರಸಿದ್ಧಂಹಿ
ಶಬ್ದೇನ ದರ್ಶಯತಿ ॥

ಸೂತ್ರದಲ್ಲಿನ 'ಹಿ' ಶಬ್ದವು ಗುಹಾನಿಹಿತತ್ವ ಧರ್ಮವು ಶ್ರೀ ವಿಷ್ಣುವಿನಲ್ಲಿಯೇ ಪ್ರಸಿದ್ಧವೆಂದು ಸೂಚಿಸುವ ವಾಕ್ಯಗಳ ಗ್ರಹಣವು "ಆತ್ಮಾಂತರಾತ್ಮಾ" ಶ್ರೋತ್ರಃ ಚಕ್ಷುಃ " "ಅಹಂವೈಶ್ವಾನರೋಭೂತ್ವಾ " ವಾಕ್ಯಗಳು ಜೀವನಿಗೂ ಈ ಧರ್ಮವಿದ್ದರೂ ಶೃತ್ಯಾದಿ ಪ್ರಸಿದ್ಧ ಮೋಕ್ಷ ಜನಕ ಜ್ಞಾನಪ್ರಕಾರವಾಗಿ ಪ್ರಧಾನವಾಗಿ ಶ್ರೀ ವಿಷ್ಣುವೇ ಗ್ರಾಹ್ಯನು. ಸುಖಾನುಭವವ್ಯುತ್ಪತ್ತಿಯಿಂದ ಆತ್ಮ ಶಬ್ದವು ಶುಭ ಕರ್ಮಫಲಭೋಕ್ತ ಎರಡು ವಿಷ್ಣು ರೂಪಗಳೇ ಅನ್ಯರು ಹೇಳುವಂತೆ ಜೀವ ಪರಮಾತ್ಮರುಗಳಲ್ಲ.

## 7 ಸೂ॥ ಓಂ॥ ವಿಶೇಷಣಾಚ್ಚ ॥ ಓಂ ॥ 12

ಯನೇತುಃ ಎಂಬ ಶೃತಿಯಲ್ಲಿ ಏಕವಚನದಿಂದ ಧರ್ಮವನ್ನು "ಪಿಬತೋರೇಕತ್ವ" ಹೇಳಿ "ಪಾತಾ" ಧರ್ಮವು ಆತನದೇ. ಯಜಮಾನತ್ವ, ಆಶ್ರಯತ್ವ ಬ್ರಹ್ಮತ್ವ ಅಕ್ಷರತ್ವಧರ್ಮಗಳು ಚತುರ್ಮುಖ ಬ್ರಹ್ಮದೇವರಿಂದ ಶ್ರೇಷ್ಠತ್ವೇನ ವಿಶೇಷಣದಿಂದಲೂ ಆ ವಸ್ತುವು ಶ್ರೀವಿಷ್ಣುವೇ ಜೀವಮಾತ್ರನಲ್ಲ. "ಯಸ್ಸೇತುರೀಜಾನಾನಾಮಕ್ಷರಂ ಬ್ರಹ್ಮಯತ್ಪರಂ" (ಕರ 1-3-2) ಇತಿ ॥ ಶೃತ್ಯರ್ಥವು-ಆತ್ಮಾ, ಅಂತರಾತ್ಮಾ ಎಂಬ ಎರಡು ರೂಪ ಭಗವಂತನು ಶ್ರೀ ವಿಷ್ಣುವನ್ನು ಉದ್ದಿಶ್ಯ ಯಾಗ ಮಾಡುವವರಿಗೆ

ಆಶ್ರಯನು ಅವನೇ ಅಕ್ಷರನು. ಬ್ರಹ್ಮಶಬ್ದ ಮುಖ್ಯವಾಚ್ಯನು ಅವನನ್ನು ಧ್ಯಾನ ಮಾಡಲು ನಚಿಕೇತ ಋಷಿಗೆ ಸಾಧನೆಗಾಗಿ ಉಪದೇಶ ಮಾಡಲು ನಾವು ಶಕ್ತರು,

**8 ಪೃಥಗ್ವಕ್ತುಂ ಗುಣಾಂಸ್ತಸ್ಯ ನಶಕ್ಯಂತೇಽಮಿತತ್ವತಃ ।**
**ಯತೋಽತೋ ಬ್ರಹ್ಮಶಬ್ದೇನ ಸರ್ವೇಷಾಂ ಗ್ರಹಣಂ ಭವೇತ್ ॥**

ಏತಸ್ಮಾದ್ಬ್ರಹ್ಮ ಶಬ್ದೋಽಯಂ ವಿಷ್ಣೋರೇವ ವಿಶೇಷಣಂ ।
ಅಮಿತಾಹಿ ಗುಣಾಯಸ್ಮಾನ್ನಾನ್ಯೇಷಾಂತವ್ಯತೀ ಪ್ರಭುಂ ॥ ಇತಿ ಬ್ರಾಹ್ಮೇ

ಬ್ರಹ್ಮ ಶಬ್ದವು ಸಮಸ್ತ ಕಲ್ಯಾಣ ಗುಣಗಳ ಗ್ರಹಣವನ್ನು ತಿಳಿಸುವುದರಿಂದ ಸರ್ವ ಗುಣಗಳ ಜ್ಞಾನಾರ್ಥವನ್ನು ಶ್ರೀ ವಿಷ್ಣುವಿನಲ್ಲಿ ಹೇಳಲು ಬ್ರಹ್ಮ ಶಬ್ದವು ಅವನಲ್ಲಿ ಮುಖ್ಯವು ಆ ಗುಣಗಳು ಅಸಂಖ್ಯಾತವಾಗಿ ಬೇರೆ ಬೇರೆ ಪೂರ್ತಿಯಾಗಿ ಹೇಳಲು ಸಾಧ್ಯವು. ಆದ್ದರಿಂದಲೇ ಶ್ರೀವಿಷ್ಣುವಿನ ಹೊರತು ಇತರರಲ್ಲಿ ಈ ಪದವು ಸೂಕ್ತವಲ್ಲ.

**9 ನ ಚ ಜೀವೇ ಸಮುನ್ವಯೋಽಭಿಧೀಯತೇ ।**

ಪರರ ವ್ಯಾಖ್ಯಾನದಂತೆ ಬುದ್ಧಿ ಜೀವ ಮತ್ತು ಜೀವೇಶ್ವರರು ಈ ದ್ವಿರೂಪಗಳೆಂದು ಹೇಳಿರುವುದು ಅಸಮಂಜಸವು.

**10. ಸತ್ಯ ಆತ್ಮಾ ಸತ್ಯೋಽಜೀವಃ ಸತ್ಯಂಬಿಧಾ ಸತ್ಯಭಿದಾ ಸತ್ಯಂಭಿದಾ**
**ಮೈವಾರುವಣ್ಯೋ ಮೈವಾರುವಣ್ಯೋ ಮೈವಾರುವಣ್ಯ ಇತಿ**
**ಪೈಂಗೀಶ್ರುತಿಃ ॥**

ಜೀವೇಶ್ವರರಲ್ಲಿ ಭೇದವಿಲ್ಲವೆಂದು ಐಕ್ಯವನ್ನು ಜೀವಪರಮಾತ್ಮ ರಲ್ಲಿ ಹೇಳಲು ಪೈಂಗೀಶೃತಿಯು ಇದನ್ನು ದೂಷಣ ಮಾಡುವುದು.

ಆತ್ಮಾ (ಪರಮಾತ್ಮಾ) ಸತ್ಯವು ಜೀವ ಚೈತನ್ಯ ಸತ್ಯವೂ ಸ್ವರೂಪ ಭೇದ ಸೂಚನೆಯು ಮತ್ತು ದರ್ಶನೋಕ್ತ ಐಕ್ಯ ನಿರಾಸಕ್ಕಾಗಿ ದೃಡತೆಗೋಸ್ಕರವೇ ಜೀವ ಪರಮಾತ್ಮರ ಭೇದವು ಸತ್ಯವಲ್ಲವೆಂಬ ಭಾವನೆಯು ಪರಮಾತ್ಮನ ದ್ವೇಷಪರ ಮತ್ತು

ಆತನ ದ್ವೇಷಿಗಳ ಭಾವನೆಯು. ಜೀವ ಪರಮಾತ್ಮ ಭೇದ ಜ್ಞಾನವೇ ಪರಮಾತ್ಮನ ಪೂಜಗೆ ಯೋಗ್ಯ ಜ್ಞಾನವು. ಅನ್ಯಥಾ ಅಲ್ಲ.

ಈಶ್ವರನು ಮೇಲಿನ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನನ್ನು ಪ್ರಶ್ನೆ ಮಾಡಿದನು. ನೀನು ಯಾವ ಸ್ವರೂಪನು. ನನ್ನ ಸ್ವರೂಪವು ಯಾವುದು ಮತ್ತು ಶ್ರೀ ವಿಷ್ಣುವು ಯಾರು ಇದಕ್ಕೆ ಉತ್ತರವು ನಾನು ಪ್ರಥಮ ಪ್ರಜಯು. ನೀವುಗಳು ಅನಂತರದ ಬೇರೆ ಪ್ರಜೆಗಳೂ ನನ್ನಿಂದ ಬೇರೆಯೇ ಇರುವಿರಿ ಶ್ರೀ ಪರಮಾತ್ಮನು ನಮ್ಮೆಲ್ಲರಿಗಿಂತಲೂ ಉತ್ತಮನು ಮತ್ತು ಅತ್ಯಂತ ಭೇದವುಳ್ಳವನು (ಬೇರೆ ಸ್ವರೂಪನು)

11. "ಆತ್ಮಾಹಿ ಪರಮಃ ಸ್ವತಂತ್ರೋಽಧಿಗುಣೋ ಜೀವೋಽಲ್ಪಶಕ್ತಿರ
ಸ್ವತಂತ್ರೋಽವರಇತಿ ಭಾಲ್ಲವೇಯ ಶ್ರುತಿಃ ।

ಶ್ರೀ ಪರಮಾತ್ಮನು ಶ್ರೇಷ್ಠ ಸ್ವತಂತ್ರನು. ಪೂರ್ಣ ಶಕ್ತನು, ಅವನ ಧರ್ಮಗಳಿಗೆ ವಿರುದ್ಧವಾದ ಅಸ್ವತಂತ್ರ ಮತ್ತು ಅಲ್ಪ ಶಕ್ತಿಗಳು ಜೀವನ ಧರ್ಮಗಳು.

12 ಯಥೇಶ್ವರಸ್ಯ ಜೀವಸ್ಯ ಭೇದಃ ಸತ್ಯೋ ವಿನಿಶ್ಚಯಾತ್ ।
ಏವಮೇವಹಿ ಮೇವಾಚಂ ಸತ್ಯಾಂ ಕರ್ತುಮಿಹಾರ್ಹಸಿ ॥
ಯಥೇಶ್ವರಸ್ಯ ಜೀವಶ್ಚ ಸತ್ಯಭೇದೌ ಪರಸ್ಪರಂ ।
ತೇನ ಸತ್ಯೇನ ಮಾಂ ದೇವಾಸ್ತ್ರಾಯಂತು ಸಹ ಕೇಶವಾ
ಇತ್ಯಾದೇರ್ನಾಸತೋ ಭೇದಃ ॥

ಈಶ್ವರನಿಗೂ ಜೀವರಿಗೂ ಭೇದವು ಹೇಗೆ ದೃಢವಾಗಿ ಸತ್ಯವೋ ಹಾಗೆಯೇ ನನ್ನ ವಚನವನ್ನು ಸತ್ಯವಾಗಿ ಮಾಡು. ಈಶ್ವರ ಜೀವರುಗಳಿಗೆ ಪರಸ್ಪರ ಭೇದವು ಸತ್ಯವು. ಹಾಗೆ ತಿಳಿದಿರುವ ನನ್ನನ್ನು ಕೇಶವ ಸಹಿತ ಸಮಸ್ತ ದೇವತೆಗಳೂ ಸತ್ಯವಾಗಿ ಕಾಪಾಡಲಿ

– ಇತಿ ಗುಹಾಧಿಕರಣಂ –

1 ಅದಿತ್ಯೋ ವಿಷ್ಣು ರಿತ್ಯುಕ್ತಂ । ಯಎಷಆದಿತ್ಯೇ ಪುರುಷಃ ಸೋಽಹಮಸ್ಮಿ ಸಎವಾಹಮಸ್ಮಿ" (ಛ 4-11)ತ್ಯಾದಾವಗ್ನೇ ನಾಮೇವಾದಿತ್ಯಾದಿಸ್ಥತ್ವಮುಚ್ಯತೇ ॥

ಈ ಅಧಿಕರಣದಲ್ಲಿ ಚಕ್ಷುರಂತಸ್ಥತ್ವ ಧರ್ಮವು ಶ್ರೀ ವಿಷ್ಣುವಿನಲ್ಲಿ ಸಮನ್ವಯ ಮಾಡಲ್ಪಡುವುದು

ಆನಂದಮಯಾಧಿಕರಣದಲ್ಲಿ ಉದಾಹೃತ ಶೃತಿಗಳು "ಯಶ್ಚಾಸೌವಾದಿತ್ಯೇ" "ಅಂತರಾದಿತ್ಯೇ" ಶ್ರೀ ವಿಷ್ಣುವು ಆದಿತ್ಯನಲ್ಲಿರುವುದೆಂದು ಹೇಳಿದೆ. ಆದರೆ ಮೇಲಿನ ಛಾಂದೋಗ್ಯ ಶೃತಿಯಲ್ಲಿ ಅಗ್ನಿ ದೇವತೆಯನ್ನು ಆದಿತ್ಯನಲ್ಲಿ ಹೇಳುತ್ತದೆ. "ಸೋವಾ ಹಂ ಸ ಏವಾಹಂ" ಎಂಬ ಅಭ್ಯಾಸ ಉಪನ್ಯಾಸದಲ್ಲಿ ಗಾರ್ಹಪತ್ಯ. ದಕ್ಷಿಣಾಗ್ನಿ ಮತ್ತು ಆಹವನೀಯ ಅಗ್ನಿತ್ರಯಾದಿಗಳಲ್ಲಿ ಕ್ರಮವಾಗಿ (1) "ಯಯೇಷ ಆದಿತ್ಯೆ ಪುರುಷೋ ದೃಶ್ಯತೆ ಸೋಽಹಂ ಅಸ್ಮಿಸ ಏವಾಹಮಸ್ಮಿ" (2) ಯ ಏಷ ಚಂದ್ರಮಸಿ " (3) ಯ ಏಷ್ಯ ವಿದ್ಯುತಿ " ಎಂಬ ವಾಕ್ಯಗಳಲ್ಲಿ ಆದಿತ್ಯನಲ್ಲಿರುವವನು ಅಗ್ನಿಯೆಂದು ಹೇಳಿದೆ "ಯ ಯೋಽತರಕ್ಷಿಣಿ ಪುರುಷೋಽದೃಶ್ಯತೆ" ಎಂಬ ಸತ್ಯಕಾಮ ವಾಕ್ಯದಲ್ಲಿಯೂ ಅಕ್ಷ ಅಭಿಮಾನ್ಯ ಅಂತಸ್ಥನು ಅಗ್ನಿಯೆಂದೇ ಹೇಳಿದೆ. "ಏವ ಮೇವಂ ವಿದಿ ಪಾಪಕರ್ಮ ನಶ್ಲಿಷ್ಯತೆ" ಎಂಬ ವಾಕ್ಯದಿಂದ ಪ್ರತ್ಯಕ್ಷ ಅಗ್ನಿಜ್ಞಾನ ಫಲವಾಗಿ ಸರ್ವ ಪಾಪಗಳು ನಷ್ಟವಾಗಿ ಮೋಕ್ಷ ಪ್ರಾಪ್ತಿಯು ಬ್ರಹ್ಮಜ್ಞಾನದಿಂದಲ್ಲ ಎಂದು ಪೂರ್ವ ಪಕ್ಷವು.

2-3. ಅತೋಽಕ್ಷಾದಿತ್ಯಯೋರೈಕ್ಯಾದ್ಯ ಎಷೋಽಂತರಕ್ಷಿಣಿ ಪುರುಷೋ ದೃಶ್ಯತ (ಛ. 4-15) ಇತ್ಯತ್ರಾಪ್ಯಗ್ನಿರೇವೋಽಚ್ಯತೇ । ಅತಸ್ತದ್ಯಥಾ ಪುಷ್ಕರಪಲಾಶೆ ಆಪೋನಶ್ಲಿಷ್ಯಂತ ಎವಮೇವಂದಿ ಪಾಪಂ ಕರ್ಮ ನಶ್ಲಿಷ್ಯತ ಇತ್ಯಗ್ನಿಜ್ಞಾನಾದೇವ ಸರ್ವಪಾಪಾಶ್ಲೇಷಾ ನ್ಮೋಕ್ಷೋಪಪತ್ತಿರಿತಿ ॥

ಹೀಗೆ ಅಗ್ನಿಯೋ ಆದಿತ್ಯನಲ್ಲಿರುವವನು ಅವನ ಜ್ಞಾನದಿಂದಲೇ ಮೋಕ್ಷವು ಬ್ರಹ್ಮ ಜ್ಞಾನದಿಂದಲ್ಲ.

## ಸೂ. ಓಂ॥ ಅಂತರ ಉಪಪತ್ತೇ: ॥ ಓಂ ॥ 13

**ಚಕ್ಷುರಂತಸ್ಥೋ ವಿಷ್ಣು ರೇವ ।**

"ಯ ಏಷೋಂತರಕ್ಷಿಣಿ" ಎಂಬ ಶೃತಿಯಲ್ಲಿ ಹೇಳಿರುವ ಚಕ್ಷುರಂತಸ್ಥನು ಶ್ರೀ ವಿಷ್ಣುವೆ ಅಗ್ನಿ ದೇವತೆಯಲ್ಲ. ಏಕೆಂದರೆ ಆ ವಸ್ತುವು "ಅಮೃತತ್ವ" ಮತ್ತು ಬ್ರಹ್ಮಶಬ್ದಗಳ ಮಧ್ಯದಲ್ಲಿ ಹೇಳಲ್ಪಟ್ಟಿರುವುದರಿಂದಲೂ ಅಧರ್ಮಗಳು ಶ್ರೀ ವಿಷ್ಣುವಿನಲ್ಲಿ ಮುಖ್ಯಾರ್ಥವುಳ್ಳವುಗಳಾದ್ದರಿಂದಲೂ ವಿಷ್ಣುವೇ ಎಂದು ತಿಳಿಯುತ್ತದೆ.

**5-6, "ತ್ರಿಪಾದಸ್ಯಾಮೃತಂದಿವೀ" (ಋ 10-90-3) ತ್ಯಾದಿನಾ ತಸ್ಯೈವಾಮೃತತ್ವಾದ್ಯುಪಪತ್ತೇಃ ॥ ಬ್ರಹ್ಮಶಬ್ದಾದ್ಯುಪಪತ್ತೇಶ್ಚ ॥**

ಚಕ್ಷುರಂತಸ್ಥನು ಚಕ್ಷುರಿಂದ್ರಿಯದಲ್ಲಿ ಒಳಗೆ ಇದ್ದು ಸುಖವಿಶಿಷ್ಟನಾದ್ದರಿಂದ ಅಂತರನೆಂದು ಮತ್ತು ಆತ್ಮಶಬ್ದದಿಂದ "ರಮಣತ್ವ" ಆ "ಆದೇಯತ್ವ" ಧರ್ಮಗಳು ಹೇಳಿವೆ ಆದ್ದರಿಂದ ಶ್ರೀವಿಷ್ಣುವೇ ವಾಚ್ಯ ಅನ್ಯರಲ್ಲ

"ಆತ್ಮಾ ಅಜರೊ ಅಮೃತೋ ಅಭಯೋ ಬ್ರಹ್ಮ ಇತ್ಯಾದಿ ವಾಕ್ಯಗಳಿಂದ ಅನಂತಾಸನ ಶ್ವೇತದ್ವೀಪ ವೈಕುಂಠ ಲೋಕಗಳ ಅಧಿಪತಿಯಾದ ಶ್ರೀ ವಿಷ್ಣುವಿನಲ್ಲಿಯೇ ಮೋಕ್ಷ ದಾತೃತ್ವ ಮತ್ತು ಅಭಯತ್ವ ಧರ್ಮಗಳು (ಬ್ರಹ್ಮ)

"ದೃಶ್ಯತೆ ಜ್ಞಾನ ದೃಷ್ಟ್ಯಾಯ ಸೂರ್ಯೋ ಚಕ್ಷುಷಿ ಚೈಕರಾಡ್ ಎಂದು ಮಾನಸ ಗ್ರಂಥದಲ್ಲಿಯೂ ಶ್ರೀ ವಿಷ್ಣುವೇ ಅಕ್ಷಸ್ಥನೆಂದು ಹೇಳಿದೆ

**7. "ಸೋಹಮಸ್ಮಿ"ತ್ಯಾದಿ ತ್ವಂತರ್ಯಾಮ್ಯಪೇಕ್ಷಯಾ ॥**

"ಸ ಏವಾಹಮಸ್ಮಿ" ಎಂಬಲ್ಲಿ ಅಂತರ್ಯಾಮಿ ವಿಶೇಷಾಭಾವ ಜ್ಞಾಪಕವಾಗಿ ಸೋಹಮಸ್ಮಿ ಎಂಬುದು ಅಧಿಕ ತಾತ್ಪರ್ಯಾರ್ಥವನ್ನು ಸೂಚಿಸುತ್ತದೆ. ಜೀವೈಕ್ಯಪಕ್ಷವಾದ ಆದಿತ್ಯನಲ್ಲಿರುವ ಪುರುಷನು ಚಂದ್ರನಲ್ಲಿ ವಿದ್ಯುತಿಯಲ್ಲಿಯೂ ಉಂಟುದೆಯೆಂಬ

ಅರ್ಥವು ಯುಕ್ತವಲ್ಲ

8 ಅಂತರ್ಯಾಮಿಮಿೀಶೇ ಅನೇಪ್ಯಾಹಂತ್ಯಮಿತ್ಯಸಿ ।
ಸರ್ವೇಶಬ್ದಾಃ ಪ್ರಯುಜ್ಯಂತೆ ಸತಿ ಭೇದೇಷು ವಸ್ತುಷು
ಇತಿ ಮಹಾತೌರ್ಮೇ ||

ವಸ್ತುಗಳಲ್ಲಿ ಭೇದವಿದ್ದಾಗ್ಯೂ ಅವುಗಳಲ್ಲಿರುವ ಅಂತರ್ಯಾಮಿ ವಸ್ತು ವನ್ನುದ್ದೇಶಿಸಿ ಅಹಂ "ತ್ವಂ" ಇತ್ಯಾದಿ ಸರ್ವನಾಮಗಳು ಹೇಳಲ್ಪಡುವುವು "ಮಹಾ ಕೌರ್ಮ" "ಯಃ ಸೂರ್ಯ ಸೋಮ ವಿದ್ಯುತ್ಸು ತತ್ತನ್ನಾಮಾ ಹರಿಃ ಪರಃ"

"ಅಹೇಯತ್ವಾದಹಂ ನಾಮ ಗಾರ್ಹಪತ್ಯಾದಿ ಸಂಸ್ಥಿತಃ- "ತತ್ವ ಸಂಹಿತೆ"

## ಸೂ॥ ಓಂ॥ ಸ್ಥಾನಾದಿವ್ಯಪದೇಶಾಚ್ಚ ॥ ಓ ॥ 14

ಬ್ರಹ್ಮ ಸ್ಥಾನದ ಒಂದು ಮುಖ್ಯ ಧರ್ಮವಾದ "ಅಲಿಪ್ತತ್ವವು" ಪ್ರತ್ಯಕ್ಷತಃ ಚಕ್ಷುರಿಂದ್ರಿಯದಲ್ಲಿ ವಿಶೇಷ ಶಕ್ತಿಯಾಗಿ ಕಾಣಬರುವುದರಿಂದ ಚಕ್ಷುರಂತಸ್ಥನು ಶ್ರೀ ವಿಷ್ಣುವೇ. "ಸರ್ಪಿರ್ವಾ ಉದಕಂ ವಾ ಸಿಂಚತಿ" ಎಂಬ ಶೃತಿಯುಕ್ತಿಯಿಂದ ತಿಳಿಯುತ್ತೆ.

**ತದ್ಯದಸ್ಮಿನ್ ಸರ್ಪಿರ್ವೋದಕಂ ವಾ ಸಿಂಚತಿ ವರ್ತ್ಮನೀ ಏವ ಗಚ್ಛತಿ । (ಛಾ. 4-15) ಇತ್ಯಾದಿ ಸ್ಥಾನ ಶಕ್ತಿಃ ವಾಮನಿರ್ಭಾಮನಿರಿತ್ಯಾದ್ಯಾತ್ಮ ಶಕ್ತಿ ಶ್ಚೋಚ್ಯತೆ । ತಸ್ಯೈತಲ್ಲಿಂಗಂ ॥**

ಯಾವ ಶ್ರೀಹರಿಯ ಸನ್ನಿಧಾನ ವಿಶೇಷದಿಂದ ತುಪ್ಪವಾಗಲೀ, ನೀರಾಗಲೀ ಸ್ವಲ್ಪ ಲೇಪಿಸಲು ಅವು ಕಣ್ಣಿನ ಗುಡ್ಡೆಯ ಒಳಗೆ ಹೋಗದೆ ಹೊರ ಹೊರಡುತ್ತದೋ ಆ ವಸ್ತುವೇ ಚಕ್ಷುರಂತಸ್ಥನು. ಅದು ಭಾಮನನೆಂದು ಸರ್ವವಸ್ತು ಪ್ರಕಾಶವನ್ನು ವಾಮನನೆಂದು ಸೌಂದರ್ಯ ರೂಪವೂ ಎಂದು ಆತ್ಮಶಕ್ತಿಯಿಂದ ವಾಚಕವಾಗಿ ಶ್ರೀ ವಿಷ್ಣುವೇ ಅಕ್ಷಸ್ಥನೆಂದು ಹೇಳುವುದು.

**10. ಸ ಈಶಃ ಸೋಸಪತ್ನಃ ಸಹರಿಃ ಸಪರಃ ಪರೋವರಿಯಾನ್**
**ಯದಿದಂಚಕ್ಷುಷಿ ಸಪಿರ್ವೋದಕಂ ವಾಸಿಂಚತಿ ವರ್ತ್ಮ**

ನೀ ಏವ ಗಚ್ಛತಿ ಸವಾಮನಃ ಭಾಮನಃ ಸ ಆನಂದಃ ಸೋಽಚ್ಯುತ
ಇತಿ ಚತುರ್ವೇದಶಿಖಾಯಾಂ ||

ಚತುರ್ವೇದ ಶೃತಿಯಲ್ಲಿ ಪರಮಾತ್ಮನ ಧರ್ಮಗಳನ್ನು ಈ ರೀತಿಯಲ್ಲಿ ಹೇಳಿದೆ ಯಾವ ಪುರುಷನ ಸನ್ನಿಧಾನ ವಿಶೇಷ ಸಾಮರ್ಥ್ಯದಿಂದ ತುಪ್ಪವಾಗಲೀ ನೀರಾಗಲೀ ಕಣ್ಣಿನಲ್ಲಿ ಸೂಚನೆ ಮಾಡಿದರೆ ಅದು ಗೋಳಕ ದ್ವಾರದಲ್ಲಿಯೇ ಹೊರಡುವುದೋ ಆತನೇ ಸರ್ವಸ್ವಾಮಿಯೂ ಶತ್ರುರಹಿತನು, ಲೋಕವಿಲಕ್ಷಣನು, ಸರ್ವದೇವತೆಗಳಿಗೂ ವರಿಷ್ಠನು, ಆತನೆ ವಾಮನ, ಭಾಮನ, ಆನಂದ, ಅಚ್ಯುತ ಶಬ್ದವಾಚ್ಯನು ಎಂದು

11. ಯಂತ್ಸಾಸ್ಥನತ್ವಾದಿದಂ ಚಕ್ಷುರಸಂಗಂ ಸರ್ವವಸ್ತುಭಿಃ ।
ಸವಾಮನಃ ಪರೋಽಸ್ಮಾಕಂ ಗತಿರಿತ್ಯೇವಚಿಂತಯೇದಿತಿವಾಮನೇ||

ವಾಮನ ಪುರಾಣದಲ್ಲಿ ಯಾವ ಮಹಾಪುರುಷನ ಸನ್ನಿಧಾನ ವಿಶೇಷದಿಂದ ಚಕ್ಷುರಿಂದ್ರಿಯವು ಸರ್ವವಸ್ತುಗಳ ಸಂಗವರ್ಜಿತವೋ ಆ ವಾಮನ ಶಬ್ದವಾಚ್ಯ ಸುಂದರ ಸ್ತ್ರೀರೂಪ ಪ್ರೇರಕ ವಿಷ್ಣುವು ಭಕ್ತರಿಗೆ ಶ್ರೇಷ್ಠ ಗತಿಯನ್ನು ಹೊಂದಲು ಯೋಗ್ಯ

## ಸೂ|| ಓಂ|| ಸುಖವಿಶಿಷ್ಟಾಭಿಧಾನಾದೇವ ಚ || ಓಂ|| 15

ಪ್ರಾಣೋ ಬ್ರಹ್ಮ ಕಂಬ್ರಹ್ಮ ಖಂ ಬ್ರಹ್ಮೇತಿ || ( ಛಾ. 4-10)

"ಕಂ ಬ್ರಹ್ಮ" ಎಂಬ ಶೃತಿಯಲ್ಲಿ ಪೂರ್ಣ ಸುಖವುಳ್ಳ ವಸ್ತು ಮತ್ತು ಜ್ಞಾನ ಪೂರ್ಣನೆಂದು ಹೇಳಿರುವ ವಸ್ತುವಾದ ಚಕ್ಷುರಿಂದ್ರಿಯಾಂತಸ್ಥನು ಶ್ರೀ ವಿಷ್ಣುವೇ. ಶ್ರೀ ಮುಖ್ಯಪ್ರಾಣಾಖ್ಯ ಪರಬ್ರಹ್ಮನು ಅಖಿಲ ಜೀವರುಗಳಿಗಿಂತಲೂ ಶ್ರೇಷ್ಟತ್ವದಿಂದ ಪೂರ್ಣನೂ ಸುಖಪೂರ್ಣನೂ ಜ್ಞಾನಪೂರ್ಣನೂ ಆದ ಚಕ್ಷುರಂತಸ್ಥ ಬ್ರಹ್ಮನು ಈ ಪ್ರಕರಣಬಲದಿಂದ ಶ್ರೀ ವಿಷ್ಣುವೇ ಆಗಬೇಕು ಅನ್ಯರಲ್ಲ.

13. ವಿಜ್ಞಾನಮಾನಂದಂಬ್ರಹ್ಮ । (ಬೃ. 5-9-28)

'ಆನಂದೋ ಬ್ರಹ್ಮೇತಿವ್ಯಜಾನಾತ್' (ತೈ. 3-6) ಇತ್ಯಾದೇಸ್ತಸ್ಯೈವಹಿ

ತಲ್ಲಕ್ಷಣಂ ।

ಪೂರ್ಣಜ್ಞಾನ ಸುಖಸಂಪತ್ತು ಶ್ರೀ ವಿಷ್ಣುವಿನ ವಿಶೇಷ ಲಕ್ಷಣವೆಂದು ಶ್ರುತಿಯಲ್ಲಿ ಹೇಳಿದೆ. "ವಿಜ್ಞಾನಮಾನಂದಂ ಬ್ರಹ್ಮ" "ಆನಂದೋ ಬ್ರಹ್ಮೇತಿವ್ಯ ಜಾನಾತ್" "ಅಷೈವ ಏವ ಪರಮಾನಂದೇತ್ಯಾದಿ ಧರ್ಮಗಳು ಶ್ರೀ ಪರಮಾತ್ಮ ವಿಷ್ಣುವಿನ ವಿಶೇಷ ಧರ್ಮಗಳು.

**14. ಲಕ್ಷಣಂ ಪರಮಾನಂದೋ ವಿಷ್ಣೋರೇವ ನಸಂಶಯಃ ।**
**ಅವ್ಯಕ್ತಾದಿತೃಣಾಂತಾಸ್ತು ವಿಪ್ರುಡಾನಂದಭಾಗಿನ ಇತಿಬ್ರಹ್ಮ**
**ವೈವರ್ತೇ ।**

ಬ್ರಹ್ಮವೈವರ್ತದಲ್ಲಿ—ನಿರವಧಿಃ ಪರಮಾನಂದವು ಶ್ರೀವಿಷ್ಣು ಅನ ವಿಶೇಷ ಧರ್ಮವೇ ಸಂಶಯವಿಲ್ಲ ಅವ್ಯಕ್ತತತ್ವದಿಂದ ಹಿಡಿದು ತೃಣ ಪರ್ಯಂತ ಸರ್ವ ವಸ್ತುಗಳೂ ತಾರತಮ್ಯದನುಸಾರ ಬ್ರಹ್ಮಾನಂದದ ಪ್ರತಿ ಬಿಂಬತ್ವ ಅಪೇಕ್ಷಿತ. ಅಲ್ಪ ಆನಂದ ಭಾಗಿಗಳು

**15. ನಚಮುಖ್ಯೇಸತ್ಯಮುಖ್ಯಂ ಯುಜ್ಯತೇ ।**

ನಿರವಧಿಕಪೂರ್ಣತ್ವವು ಶ್ರೀ ವಿಷ್ಣುವಿತ ಧರ್ಮವಾಗಿರಲು ಇತರ ದೇವತೆಗಳಲ್ಲಿ ಅಗ್ನ್ಯಾದಿ ದೇವತೆಗಳಲ್ಲಿ ಅನ್ಯಾಧೀನ ಪೂರ್ಣತ್ವವೇಇದೆ ಮುಖ್ಯವಾಗಿ ಸ್ವತಂತ್ರವಾಗಿಲ್ಲ

## ಸೂ|| ಓಂ || ಶ್ರುತೋಪನಿಷತ್ಕಗತ್ಯಭಿಧಾನಾಚ್ಚ || ಓಂ|| 16

ಅಗ್ನಿದೇವತೆಯು ಚಕ್ಷುರಂತರನಲ್ಲ ಶ್ರೀ ವಿಷ್ಣುವೇ, ಏಕೆಂದರೆ ಜೀವನಾದ ಅಗ್ನಿ ದೇವತೆಗೆ ಜೀವಾಂತರ ನಿಯಾಮಕತ್ವವನ್ನು ಹೇಳಿದಲ್ಲಿ ಆ ಅನ್ಯಜೀವನಿಗೆ ನಿಯಾಮಕನೂ ಅನ್ಯಜೀವನೇ ಆಗಿ ಹೀಗೆಯೇ ಪರಂಪರೆಯಾಗಿ ಅನ್ಯತಂತ್ರ ಜೀವರಿಗೆ ನಿಯಾಮಕತ್ವವು ಸಂಭವಿದೇ ಹೋಗುವದು.

"ಸ ಏನಾನ್‌ಬ್ರಹ್ಮಗಮಯತಿ || (ಛ, 4–15) ಇತಿ

ಅಗ್ನಿ ದೇವತೆಯಲ್ಲಿ ಜೀವತ್ವ ಸಾಮ್ಯವಾದರೂ ಅಗ್ನಿಗೆ ಸ್ವಾತಂತ್ರ್ಯವು ಅನ್ಯರಿಗೆ

ಇಲ್ಲ ಎಂದರೆ ಈ ಅಗ್ನಿದೇವತೆಗೆ ಸರ್ವ ಸ್ವಾತಂತ್ರ ಹೇಳುವ ಶೃತಿಯು ಯಾವುದೂ ಇಲ್ಲ ಈಶ್ವರ ಶಕ್ತಿಯಿಂದ ಪ್ರೇರೇಪಿಸಲ್ಪಟ್ಟ ಜೀವನು ಅಸ್ವತಂತ್ರನೇ. ಸರ್ವಪ್ರೇರಕಶಕ್ತಿಯು ಶ್ರೀ ಪರಮಾತ್ಮನಲ್ಲಿಯೇ ।

## ಸೂ॥ ಓಂ॥ ಅನವಸ್ಥಿತೇರಸಂಭವಾಚ್ಚ ನೇತರಃ ॥ ಓಂ॥ 17

ಬೇರೆ ಯಾವ ದೇವತೆಯ ವಿದ್ಯೆಯಿಂದಲೂ ಆ ದೇವತೆಗಳ ಗತಿಯು ಯುಕ್ತವಲ್ಲವಾಗಿ "ದೇವಾನ್ ದೇವಯಜೊ ಯಾಂತಿ ಮದ್ಭಕ್ತಾಯಾಂತಿ ಮಾಮಪಿ' ಎಂಬ ಸ್ಮೃತಿ ವಾಕ್ಯದಿಂದ ಶ್ರೀವಿಷ್ಣುವಿನ ಭಕ್ತರೇ ಶ್ರೀ ವಿಷ್ಣುವನ್ನು ಹೊಂದುವರು,

ಶ್ರೀ ವಿಷ್ಣುವಿನಿಂದ ಬೇರೆ ಯಾವ ದೇವತೆಯನ್ನು ಜೀವಾಂತರತ್ವ ಧರ್ಮದಿಂದ ಹೇಳಿದಲ್ಲಿ ಅನವಸ್ಥಿತಿಯು ಸಂಭವಿಸುವುದರಿಂಧ ಸಾಧ್ಯವಿಲ್ಲ.

ಜೀವಸ್ಯ ಜೀವಾಂತರ ನಿಯಾಮಕತ್ವೇನವಸ್ಥಿತೇ, ಸಾಮ್ಯಾದಸಂಭವಾಚ್ಚನ ಜೀವಃ ।

ಜೀವರುಗಳೇ ಒಬ್ಬರಿಗೊಬ್ಬರು ನಿಯಾಮಕರೆಂದಾದರೆ ಸರ್ವ ಜೀವರೂ ಸಮರಾಗಿ ಅನವಸ್ಥಿತಿಯು ಆಗುವುದರಿಂದ ಸಾಧ್ಯವಿಲ್ಲ.

## 19 ನಿಯಮ ಪ್ರಮಾಣಾ ಭಾವಾತ್ । ಅನೀಶ್ವರಾಪೇಕ್ಷತ್ವಾಚ್ಚ ॥

ಜೀವರಲ್ಲಿ ಅನ್ಯಜೀವರನ್ನು ಜೀವಾಂತಸ್ಥವೆಂದು ಹೇಳಲು ಯಾವ ಪ್ರಮಾಣವೂ ಇಲ್ಲ. ಮತ್ತು ಈ ವ್ಯವಸ್ಥೆಯೂ, ಸರ್ವ ಸ್ವಾಮಿತ್ವಕ್ಕೆ ವ್ಯತಿರಿಕ್ತವು ಆದ್ದರಿಂದ ಅಸಾಧ್ಯವು

– ಇತಿ ಅಂತರಾಧಿಕರಣವು –

**"ಯಃ ಪೃಥಿವ್ಯಾಂತಿಷ್ಠನ್ ಪೃಥಿವ್ಯಾ ಅಂತರೋ ಯಂಪೃಥಿವೀನವೇದ ಯಸ್ಯ ಪೃಥಿವೀಶರೀರಂ ಯಃ ಪೃಥಿವೀಮಂತರೋಯಮಯತ್ಯೇಷತ ಆತ್ಮಾಂತರ್ಯಾಮ್ಯಮೃತ ಇತ್ಯಾ(ದ್ಯಂತರ್ಯಾ) ದಿನಾಂತರ್ಯಾ ಮ್ಯುಚ್ಯತೇ ।**

ಈ ಅಧಿಕರಣದಲ್ಲಿ ಅಂತಸ್ಥತ್ವ ರೂಪ ನಿಯಮನ ಕಾರ್ಯವು ಬ್ರಹ್ಮನಲ್ಲಿ ಸಮನ್ವಯ ಮಾಡಲ್ಪಡುತ್ತದೆ ಯಾಜ್ಞವಲ್ಕರು ಉದ್ದಾಲಕರಿಗೆ ಹೇಳಿದ ಬೃಹದಾ ರಣ್ಯಕ ವಾಕ್ಯ ಈ ಮೇಲಿನ ಶೃತ್ಯರ್ಥವು ಯಾವ ವಿಷ್ಣುವು ವಾಹನತ್ವದಿಂದ ಗರುಡನಲ್ಲಿದ್ದರೂ ಗರುದನಿಂದ ಪೂರ್ಣವಾಗಿ ತಿಳಿಯಲ್ಪಡುವುದಿಲ್ಲವೋ ಪರತ್ವ ಧರ್ಮದಿಂದ ಅವನ ಒಳಗೆ ಇದ್ದು ಬಾಹ್ಯ ವಿಷಯಾಪೇಕ್ಷೆಯಿಲ್ಲದೆ ಸ್ವಯಂ ನಿತ್ಯತೃಪ್ತ ನಾದರೂ ಸುಖ ವಿಶೇಷಾನುಭವವುಳ್ಳವನೋ. ಪುತ್ರನೋಪಾದಿಯಿಂದ ಗರುಡನ ಒಳಗೆ ಇದ್ದು ಅವನನ್ನು ಪ್ರೇರೇಪಿಸುವನೋ ಅವನೆ ನಿತ್ಯನಾದ ಶ್ರೀ ಹರಿಯು (ಪೃಥುಂ-ವಿಷ್ಣುಂಊರ್ಧ್ವಾ-ವಾತಿ ಗಚ್ಛತೀತಿ ಪೃಥಿವೀ ಗರುಡಃ)

2. ಅಂತರ್ಯಾಮಿ ಪುರುಷನು ಯಾರು ?

**ತತ್ರಚೈತದಮೃತಮಿತ್ಯುಕ್ತಮಮೃತತ್ವಮುಚ್ಯತೇ । ಸ ಚ ಯಸ್ಯ ಪೃಥಿವೀ ಶರೀರಮಿತ್ಯಾದಿನಾ ಸರ್ವಾತ್ಮಕತ್ವಾತ್ಪ್ರಕೃತಿಸ್ತುಜ್ಜೀವೋವಾ ಯುಕ್ತಃ ॥**

"ಯಃ ಪೃಥಿವ್ಯಾತಿಷ್ಠನ್" ಎಂದು ಹೇಳಿದ ಅಂತರ್ಯಾಮಿಯು "ಏತ ದಮೃತಂ"ಏತದಭಯಂ ಎಂದು ಅಮೃತತ್ವ ಅಭಯತ್ವಧರ್ಮಗಳುಳ್ಳವನೆಂದು ಹೇಳಿದೆ ಆ ಅಂತರ್ಯಾಮಿಯು ಜಡಚೇತನ ಉಭಯರೂಪ ಪ್ರಕೃತಿಯು ಅಥವಾ ಪೃಥಿ ವ್ಯಾದಿ ಆ ಜೀವರುಗಳಾಗಲಿ ಸಾಧ್ಯವು ಜಡ ಪ್ರಕೃತಿಗೆ ಸರ್ವೋಪಾದಾನತ್ವದಿಂದ ಸರ್ವಾತ್ಮಕತ್ವವು ಚಿತ್ಪ್ರಕೃತಿಗೆ ಸರ್ವಾಭಿಮಾನಿತ್ವೇನ ಸರ್ವಾತ್ಮಕತ್ವವು ಸಿದ್ಧವು ಆದ್ದರಿಂದ ಅಮೃತತ್ವ ಧರ್ಮವು ಪ್ರಕೃತಿಗೆ ವಿಶೇಷವು ಶ್ರೀ ಪರಮಾತ್ಮನಿಗಲ್ಲ ಎಂಬ ಶಂಕೆಯು ಪೂರ್ವ ಪಕ್ಷವು.

**3. ನ ಹಿ ವಿಷ್ಣೋಃ ಪೃಥಿವ್ಯಾದಿ ಶರೀರತ್ವಮಂಗೀಕ್ರಿಯತೆ ಇತ್ಯತಆಹ**

ಸಿದ್ಧಾಂತಿಗಳಿಂದ ವಿಷ್ಣುವಿಗೆ ಪೃಥಿವ್ಯಾದಿ ಜಡಭಿನ್ನ ಚಿಚ್ಛರೀರವು ಹೇಳಲ್ಪಡುವುದರಿಂದ, ಶ್ರೀ ವಿಷ್ಣುವಲ್ಲವೆಂದು ಪೂರ್ವಪಕ್ಷವು (ಪ್ರಾಕೃತಿ ಶರೀರವಲ್ಲವೆಂದು)

4 ಅತ ಆಹ

## ಸೂ|| ಓಂ|| ಅಂತರ್ಯಾಮ್ಯಧಿದೈವಾಧಿಷುತದ್ಧರ್ಮ ವ್ಯಪದೇಶಾತ್ || ಓಂ || 18

"ಏಷ ಆತ್ಮಾ ಅಂತರ್ಯಾಮಿಃ" ಎಂಬ ಶೃತಿಯಲ್ಲಿ ಹೇಳಲ್ಪಟ್ಟ ಅಂತರ್ಯಾಮಿ ವಸ್ತುವು ಶ್ರೀವಿಷ್ಣುವೇ ಪೃಥಿವಿಯಲ್ಲ ಅಧಿಭೂತ, ಆಧಿದೈವ ಮತ್ತು ಆಧ್ಯಾತ್ಮ ಪ್ರಕರಣಗಳಲ್ಲಿ ಆ ಅಂತರ್ಯಾಮಿಯಲ್ಲಿನ ಧರ್ಮವು "ಯಂ ಪೃಥಿವಿಯಿಂದ ಸಾಕಲ್ಯೇನ ತಿಳಿಯಲು ಅಸಾಧ್ಯನೆಂದು ಹೇಳಿರುವುದರಿಂದ ಆ ಅಂತರ್ಯಾಮಿಯ ಅಧಿದೈವವಾದ ಪೃಥಿವಿಯೊಳಗೆ ಇರುವ ಅಂತರ್ಯಾಮಿ ಶ್ರೀ ವಿಷ್ಣುವೇ "ಯಂ ಪೃಥಿವೀನವೇದ ..ಯಃ ಪೃಥಿವ್ಯಾ ಅಂತರಃ" ಎಂದು ಹೇಳುವುದರಿಂದಲೇ ಇದು ಸಿದ್ಧವು

**"ಪೃಥಿವೀ ನವೇದ ಯಃ ಪೃಥಿವ್ಯಾ ಅಂತರಃ"** (ಬೃ 5-7-3) **ಇತ್ಯಾದಿನಾ ಅಧಿದೈವಾದಿಷು ತದ್ಧರ್ಮವ್ಯಪದೇಶಾದ್ವಿಷ್ಣುರೇವಾಂತರ್ಯಾಮೀ ||**

ಯಾವಾತನ ವಿಷಯವನ್ನು ಪೃಥಿವಿಯು ಪೂರ್ಣವಾಗಿ ತಿಳಿಯಲಾರದೋ ಯಾರು ಪೃಥಿವಿಯ ಒಳಗೆ ಇರುವನೋ ಅಂತಹ ವಸ್ತು ಶ್ರೀ ವಿಷ್ಣುವೇ ಅಂತರ್ಯಾಮಿಯು ಅಧಿದೈವವಾದ ಪೃಥಿವಿಯಲ್ಲಿ ಅಂತರ್ಯಾಮಿಯಾಗಿರುವವನು ಆತನೇ.

5. **ಸ ಹಿ "ನ ತೇ ವಿಷ್ಣೋಜಾಯಮಾನೋನಜಾತಃ** (ಋ. 7-99-2) **ಸಯೋಽ ತೋಽಶ್ರುಽ ಗತೋಽ ಮತೋಽ ದೃಷ್ಟೋಽ ವಿಜ್ಞಾತೋಽನಾದಿಷ್ಟಃ ಸರ್ವೇಷಾಂ ಭೂತಾನಾಮಾಲಾಂತರಪುರುಷಃ"** (ಐ. ಆ. 3-2-4) **ಇತ್ಯಾದಿನಾಽವಿದಿತೋಂತರಶ್ಚ ||**

ಮೇಲಿನ ಶೃತಿಯು ಶ್ರೀವಿಷ್ಣುವಿಗೇ ಆದಿತ್ಯಾದಿ ವಿಶೇಷ ಧರ್ಮಗಳಿಂದು ಹೇಳುತ್ತದೆ ಅವಿದಿತ :- ಪೂರ್ಣವಾಗಿ ತಿಳಿಯಲ್ಪಡದವನು. ಅಂತರ .- ಒಳಗೆ

ಇದ್ದು ಪುಣ್ಯ ಫಲಭೋಕ್ತೃ-ಇಂತಹ ನಿನ್ನ ವಿಶೇಷ ಮಹಿಮೆಗಳ ಕೊನೆಯನ್ನು ಯಾವಾತನೂ ತನ್ನ ಇಂದ್ರಿಯಗಳಿಂದಲೇ ಪೂರ್ಣವಾಗಿ ಹೊಂದಲಾರನು

## ಸೂ ||ಓಂ|| ನಚಸ್ಮಾರ್ತಮತದ್ಧರ್ಮಾಭಿಲಾಪಾತ್||ಓಂ|| 19

ಕಪಿಲ ಸ್ಮೃತಿಯಲ್ಲಿ ಹೇಳಲ್ಪಟ್ಟ ಪ್ರಧಾನವಾಗಲೀ ಇತರ ಜೀವರುಗಳಾಗಲಿ ಅಂತರ್ಯಾಮಿಯಲ್ಲ. ಏಕೆಂದರೆ ಪ್ರಧಾನ ಮತ್ತು ಜೀವಗಳ ಮುಖ್ಯ ಧರ್ಮಗಳಾದ ತ್ರಿಗುಣ ಇತ್ಯಾದಿ ಸಂಸಾರಿತ್ವ ಗುಣಗಳನ್ನು ಇಲ್ಲಿ ಹೇಳಿಲ್ಲ

ತ್ರಿಗುಣತ್ವಾದಿ ಪ್ರಧಾನಧರ್ಮಾನುಕ್ತೇರ್ನಸ್ಮೃತ್ಯುಕ್ತಂ ಪ್ರಧಾನ ಮಂತರ್ಯಾಮಿ ||

ಪ್ರಧಾನಾದಿ ಜೀವರುಗಳು ಮುಖ್ಯವಾಗಿ ತ್ರಿಗುಣಾತ್ಮಕತ್ವ ಮತ್ತು ಸಂಸಾರ ಧರ್ಮಗಳನ್ನುಳ್ಳವರು ಆ ಮುಖ್ಯ ಧರ್ಮಗಳು ಅಂತರ್ಯಾಮಿ ಧರ್ಮಗಳೆಂದು ಹೇಳಿಲ್ಲವಾಗಿ ಅವುಗಳು ಅಂತರ್ಯಾಮಿಗಳಲ್ಲ.

## ಸೂ|| ಓಂ|| ಶಾರೀರಶ್ಚೋಭಯೇಪಿಹಿಭೇದೇನೈನ ಮಧೀಯತೇ || ಓಂ || 20

ಮಾಧ್ಯಂದಿನ ಮತ್ತು ಕಾಣ್ವ ಶಾಖೆಗಳೆರಡರಲ್ಲಿಯೂ "ಆತ್ಮನೋಂತರಃ ವಿಜ್ಞಾನಾದಂತರಃ" ಎಂದು ಜೀವನನ್ನು ಅಂತರ್ಯಾಮಿಯಿಂದ ಭಿನ್ನನಾಗಿ ಹೇಳುವುದರಿಂದ ಶರೀರವೂ ಅದರಲ್ಲಿರುವ ಜೀವರೂ ಅಂತರ್ಯಾಮಿಗಳಲ್ಲ

ಯ ಆತ್ಮನಿತಿಷ್ಠನ್ ಆತ್ಮನೋಂತರೋ ಯಮಾತ್ಮಾನವೇದ ಯಸ್ಯಾತ್ಮಾಶರೀರಂ ಯ ಆತ್ಮನೋಂತರೋಯಮಯತ್ಯೆದಾತ್ಮಾಂತರ್ಯಾಮ್ಯಮೃತಃ ||
(ಬ್ರ. ಮಾಧ್ಯಂದಿನ ಪಾಠ) "ಯೋ ವಿಜ್ಞಾನೇತಿಷ್ಠನ್ ವಿಜ್ಞಾನಾದಂತರೋ ಯಂ ವಿಜ್ಞಾನಂ ನವೇದ ಯಸ್ಯ ವಿಜ್ಞಾನಂ ಶರೀರ (ಬೃ. 5-7-22) ಮಿತ್ತು ಭಯೇಪಿಹಿಶಾಖಿನೋ ಭೇದೇನೈನಂ ಜೀವಮಧೀಯತೇ ||

ಯಾವಾತನು ಜೀವರ ಜಡ, ಸ್ವರೂಪ ದೇಹಗಳಲ್ಲಿದ್ದು ಅವರುಗಳಿಂದಲೂ ಪೂರ್ಣ ತಿಳಿಯಲ್ಪಡಲು ಸಾಧ್ಯವಿಲ್ಲವೋ, ಯಾವಾತನು ಈ ದೇಹಗಳನ್ನೇ ಶರೀರವಾಗಿ ಮಾಡಿಕೊಂಡು ಒಳಗಿದ್ದು ನಿಯಮಿಸುವನೋ ಅವನು ಅಂತರ್ಯಾಮಿಯು ಶ್ರೀ ವಿಷ್ಣುವು ಮತ್ತೊಂದು ಶಾಖೆಯಲ್ಲಿ ಆತ್ಮನಿಗೆ ಬದಲಾಗಿ ವಿಜ್ಞಾನತ್ವವನ್ನು ಹೇಳಿದೆ ಜೇಧವಿಲ್ಲ.

**8 ಶ್ರೀಯತೇ ನಿತ್ಯಮೇವಾಸ್ಮಾದ್ವಿಷ್ಣೋಸ್ತು ಜಗದೀದೃಶಂ ।**
**ರಮತೇ ಚ ಪರೋಹ್ಯಸ್ಮಿನ್ ಶರೀರಂ ತಸ್ಯ ತಜ್ಜಗದಿತಿ ವಚನಾನ್ನ**
**ಶರೀರತ್ವವಿರೋಧಃ ॥**

ವರ್ತಮಾನ ಜಗತ್ತು ಯಾವ ಶ್ರೀ ಪರಮಾತ್ಮನಿಂದ ಪ್ರಳಯ ಕಾಲದಲ್ಲಿ ನಾಶ ಹೊಂದುವುದೋ ಜೀವಗಳು ದೇಹಗಳಿಂದನಾಶ ಹೊಂದುವರೋ ಯಾವ ಶ್ರೀ ಪರಮಾತ್ಮನು ಜಗತ್ತಿನಲ್ಲಿದ್ದು ವ್ಯಾಪ್ತನಾಗಿ ಶುಭಕರ್ಮಫಲ ಭೋಕ್ತೃವೋ ಆ ಶ್ರೀ ವಿಷ್ಣುವಿಗೆ ಈ ಜಗತ್ತು ದೇಹವೆಂದು ಕರೆಯಲ್ಪಡುವುದು ಯುಕ್ತವು.

ಪೃಥಿವ್ಯಾದ್ಯಾದೇವತಾಸ್ತು ದೇಹವದ್ಯದ್ವಶತ್ವತಃ ।
ಶರೀರಮಿತಿ ಚೋಚ್ಯಂತೆ ಅಸ್ಯ ವಿಷ್ಣೋರ್ಮಹಾತ್ಮನಃ ॥

ಅದ್ದರಿಂದ ಈ ಪೃಥಿವಿಯೂ ಶ್ರೀ ಪರಮೇಶ್ವರನಿಗೆ ದೇಹವೆಂದು ಹೇಳಿದೆ.

– ಇತಿ ಅಂತರ್ಯಾಮ್ಯಧಿಕರಣವು –

## – ಅದೃಶ್ಯತ್ವಾಧಿಕರಣವು –

**1. ಅದೃಶ್ಯತ್ವಾದಿಗುಣಾ ವಿಷ್ಣೋರುಕ್ತಾಃ ।**

ಅದೃಶ್ಯತ್ವಾದಿ ಶುಭ ಧರ್ಮಗಳು ಶ್ರೀ ವಿಷ್ಣುವಿನಲ್ಲಿ ಸಮನ್ವಯಿಸಲ್ಪಡುವುವು.

ಅದೃಶ್ಯೆ ಎಂದು ಆನಂದಮಯಾಧಿಕರಣದಲ್ಲಿ ಹೇಳಿರುವ ವಸ್ತುವನ್ನು ಸರ್ವಗತನಾಗಿ "ಯೋSS "ಶೊ SSಸ್ರುತ" ಎಂದು ಅಂತರ್ಯಾಮಿಯನ್ನು "ಯಂ ಪೃಥಿವೀನ ವೇದ" ಎಂದು ಪೂರ್ವಾಧಿಕರಣದಲ್ಲಿ ಹೇಳಿದೆ

ಮೇಲೆ ಹೇಳಿದ ಅದೃಶ್ಯತ್ವ ಗುಣವು ಶ್ರೀವಿಷ್ಣುವಿನದೆಂದು ಹೇಳಿ

2 ತತ್ರಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃ ಶ್ರೋತ್ರಂ ತದಪಾಣಿಪಾದಂ ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ (ಮು 1-1 -3) ಇತ್ಯುಕ್ತ್ಯಾ.

ಅದೃಶ್ಯ ಗುಣವಾಚ್ಯ ಅಕ್ಷರ ಶಬ್ದದ ವಿಷಯದಲ್ಲಿ "ಯತ್ತದದ್ರೇಶ್ಯಮಗ್ರಾಹ್ಯಂ" ಎಂದು ಹೇಳಿ ಯಥೋರ್ಣನಾಭಿಃಸೃಜತೇಗೃಹ್ಣತೇ ಚ ಯಥಾಪೃಥಿವ್ಯಾಮೋಷಧಯಃಸಂಭವತಿ। ಯಥಾಸತಃ ಪುರುಷಾತ್ ಕೇಶ ಲೋಮಾನಿ ತಥಾಕ್ಷರಾತ್ ಸಂಭವತೀಹ ವಿಶ್ವಂ। ದಿವ್ಯೋಹ್ಯಮೂರ್ತಃ ಪುರುಷೋ ಸ ಬಾಹ್ಯಾಂತರೋಹ್ಯಜಃ। ಹ್ಯಮನಾಃ ಶುಭ್ರೋ ಹ್ಯಮೂರ್ತಃ ಪುರುಷೋಸಭಾಹ್ಯಾಭ್ಯಾಂತರೊಹ್ಯಜಃ।ಅಪ್ರಾಣೊಹ್ಯಮನಾಃ ಶುಭ್ರೋಹ್ಯಕ್ಷರಾತ್ಪರತಃಪರಃ" ಎಂದು(ಮುಂ 1-1-7) ಅಕ್ಷರಾತ್ ಪ್ರಕೃತಿ ಶಬ್ದ ವಾಚ್ಯಳಾದ ಶ್ರೀತತ್ವಕ್ಕಿಂತಲೂ ಬೇರೆಯೆಂದು ಹೇಳಿರುವ ಅದೃಶ್ಯನು ಶ್ರೀವಿಷ್ಣುವಿನಿಂದ ಅನ್ಯನೆಂದು ಆನಂದಮಯಾಧಿಕರಣದಿಂದ ಆಕ್ಷೇಪ ಸಂಗತಿಯು-ಸಿದ್ಧಾಂತ ರೀತ್ಯಾ ಶ್ರುತ್ಯರ್ಥವು-ಯಾವ ವಸ್ತುವು ಪರವಿದ್ಯಾ ಪ್ರಾಪ್ಯ ಅಕ್ಷರ ವಸ್ತುವೋ ಅದು ಅಕ್ಷಯಿಂದ್ರಿಯಕ್ಕೂ ಗೋಚರವಲ್ಲ ಮತ್ತು ಭಿನ್ನಮನೋಇಂದ್ರಿಯದಿಂದ ತಿಳಿಯಲು ಸಾಧ್ಯನು ಮತ್ತು ಭಿನ್ನನು ಪ್ರಾಕೃತ ಜ್ಞಾನೇಂದ್ರಿಯ ಶೂನ್ಯನು ಪ್ರಾಕೃತ ಕರ್ಮೇಂದ್ರಿಯ ಶೂನ್ಯನು ಸ್ವರೂಪತಃ ನಾಶರಹಿತನು ಅತ್ಯಂತ ಸಮರ್ಥನು ಸರ್ವ ವ್ಯಾಪ್ತನು ಅತಿ ಸೂಕ್ಷ್ಮವಸ್ತು ಆ ಸರ್ವಭೂತಗಳ ಉತ್ಪಾದಕನಾದ ಶ್ರೀ ಪರಮಾತ್ಮನೇ ಅದೃಶ್ಯನು

3 ಯತೋರ್ಣನಾಭಿಸ್ಸೃಜತೇ ಗೃಹ್ಣತೇ ಚ।
ಯಥಾಪೃಥಿವ್ಯಾಮೋಷಧಯಃ ಸಂಭವಂತಿ।
ಯಥಾಸತಃ ಪುರುಷಾತ್ಕೇಶಲೋಮಾನಿ।
ತಥಾಕ್ಷರಾತ್ ಸಂಭವತೀಹವಿಶ್ವಂ। (ಎಂದು ಮಾ 1-1-7)
ದೃಷ್ಟಾಂತಗಳು)



14

ಜೇಡರ ಹುಳುವು ತನ್ನ ಭುಕ್ತ ವಸ್ತುವನ್ನು ತಂತುವಾಗಿ ತನ್ನ ದೇಹದಿಂದ ಹೊರಕ್ಕೆ ಹೊರಡಿಸಿ ಪುನಃ ತನ್ನ ದೇಹದಲ್ಲಿ ಹೇಗೆ ಸ್ವೀಕರಿಸುವುದೋ ಹಾಗೆ ಪ್ರಲಯ ದಲ್ಲಿ ಒಳಹೊಕ್ಕ ಪ್ರಪಂಚವು ಸೃಷ್ಟಿ ಕಾಲ ಪ್ರಾಪ್ತವಾದಾಗ ಅಕ್ಷರನಿಂದ ಹೊರಹೊರ ಡುತ್ತದೆ ಅಂದರೆ ಬ್ರಹ್ಮನಿಗೆ ಕರ್ತೃತ್ವವೇ. ಉಪಾದಾನ ಕಾರಣವಲ್ಲ. ಪೃಥಿವಿಯಲ್ಲಿ ಹೇಗೆ ಮರ ಬಳ್ಳಿಗಳು ಹೊರ ಹೊರಡುತ್ತವೋ ಜೀವ ಶರೀರದಿಂದ ಕೂದಲು ಮತ್ತು ಅನ್ಯಲೋಮಗಳು ಹೊರ ಹೊರಡುತ್ತವೋ ಹಾಗೆಯೇ ಅಂಕುರ ಬೆಳವಣಿಗೆಗೆ ಬೀಜ ವು ಹೇಗೆ ಪೃಥಿವಿಯಿಂದಲೋ ಹಾಗೆಯೇ ಪ್ರಪಂಚ ಸೃಷ್ಟಿಯು ಅನಾಯಾಸವಾಗಿ ಪರ ಬ್ರಹ್ಮನಿಂದ ಆಗುವುದು ಈ ಪರಬ್ರಹ್ಮನು ಜಡಾತ್ ಪರತಃ ಅಕ್ಷರಾತ್ ಚಿತ್ಪ್ರಕೃತಿಗೆ ಪರಃ ಉತ್ತಮನು.

4. ಅತೋಬ್ರವೀತಿ-

## ಸೂ|| ಓಂ|| ಅದೃಶ್ಯತ್ವಾದಿಗುಣಕೋಧರ್ಮೋಕ್ತೇಃ || ಓಂ || 21

ಮೇಲಿನ ಶೃತಿ ವಾಕ್ಯಗಳಲ್ಲಿ ಹೇಳಲ್ಪಟ್ಟ ಅದೃಶ್ಯತ್ವಾದಿ ಧರ್ಮ ವಿಶಿಷ್ಟ ಅಕ್ಷರ ಶಬ್ದ ವಾಚ್ಯನು ಶ್ರೀ ವಿಷ್ಣುವೇ ಪ್ರಕೃತ್ಯಾದಿಗಳಲ್ಲ "ಯಯಾ " ಎಂಬ ಶೃತಿಯಲ್ಲಿ ಋಗಾದಿ ಪರ ವಿದ್ಯಾ ವಿಷಯತ್ವವನ್ನು ಶ್ರೀವಿಷ್ಣುವಿನಲ್ಲಿ ಹೇಳಿದೆ.

**5 ಪೃಥಿವ್ಯಾದಿ ದೃಷ್ಟಾಂತಮುಕ್ತ್ವಾ ಅಕ್ಷರಾತ್ಸಂಭವತೀಹ ವಿಶ್ವ ಮಿತ್ಯತಃ ಪರಂ ತತ್ಪರತಃ ಪರಾಭಿಧಾನಾತ್ ಕೂಟಸ್ಥೋಕ್ಷರ ಉಚ್ಯತ ಇತಿಸ್ಮೃತೇಶ್ಚ ಪ್ರಕೃತೇಃಪ್ರಾಪ್ತಿಃ ||**

ಪೃಥಿವ್ಯಾದಿ ದೃಷ್ಟಾಂತವನ್ನ ಹೇಳಿ ಅನಂತರದಲ್ಲಿ "ಅಕ್ಷರಾತ್ಸಂಭವತೀಹವಿಶ್ವಂ" ಎಂದು ಕಾರಣೀ ಭೂತ ಅಕ್ಷರಕ್ಕಿಂತ ಉತ್ತಮವೆಂದು ಹೇಳಿರುವುದರಿಂದಲೂ ಹಾಗೆ ಕೂಟಸ್ಥೋ ಅಕ್ಷರ ಉಚ್ಯತೆ ಎಂಬ ಸ್ಮೃತಿವಾಕ್ಯದಿಂದಲೂ ಜಡ ಪ್ರಕೃತಿಗೂ ಚಿತ್ಪ್ರಕೃತಿಗೂ ಅದೃಶ್ಯತ್ವ ಪ್ರಾಪ್ತಿಯು, ಜಡ ಪ್ರಕೃತಿಯು. ಅಕ್ಷರ ಶಬ್ದ ವಾಚ್ಯವು. ಅದಕ್ಕಿಂತ ಉತ್ತಮನು ಶ್ರೀ ವಾಚ್ಯ ಚಿತ್ಪ್ರಕೃತಿಯು ಎಂದು ಪೂರ್ವಪಕ್ಷ.

**6. ಬ್ರಹ್ಮಶಬ್ದಾತ್ತತ್ಪರತಃ ಪರಾಭಿಧಾನಾದೇವಚ ಹಿರಣ್ಯಗರ್ಭಸ್ಯ |**

ಹಿರಣ್ಯ ಗರ್ಭನಾದ ಅಕ್ಷರನಿಂದ ಶ್ರೀ ತತ್ವದಿಂದ ನರನಾಪವನು ವಿಷ್ಣು ಎಂದು ಹೇಳಲ್ಪಡುವುದರಿಂದ ಹಿರಣ್ಯ ಗರ್ಭನು ಅಕ್ಷರ ಶಬ್ದ ವಾಚ್ಯನು ಅ್ರೃಶ್ಯನು "ಕರ್ತಾರ ಮೀಶಂ" ಎಂಬ ವಾಕ್ಯದಿಂದ ಅದೃಶ್ಯತ್ವವು ರುದ್ರದೇವರಿಗೂ ಪ್ರಾಪ್ತಿಯು (ಈ ಶಬ್ದವು)

7 ತಮೇವಂ ವಿದ್ವಾನಮೃತಇಹಭವತಿ (ತ್ರೈ ಆ 3-1:-7)
ತತ್ಕರ್ಮ ಹರಿತೋಷಂಯತ್ಸಾ ವಿದ್ಯಾ ತನ್ಮತಿರ್ಯಯಾ ।
ಅಥದ್ವೇನಾವ ವಿದ್ಯೆ ವೇದಿತವ್ಯೇ ಪರಾಚೈವಾವರಾಚ ।

ತತ್ರಯೋವೇದಾ ಯಾನ್ಯಂಗಾನಿ ಯಾನುವಾಂಗಾನಿ ಯಾನಿಪ್ರತ್ಯಂಗಾನಿ ನಾಪರಾ । ಅಥ ಪರಾಯಯಾ ಸ ಹರಿರ್ವೇದಿತವ್ಯೋಯೋನಾವದ್ರಶ್ಯೋ ನಿರ್ಗುಣಃ ಪರಃ ಪರಮಾತ್ಮಾ ಇತ್ಯಾದಿನಾ ತದ್ಧರ್ಮತ್ವೇನಾವಗತ ಪರವಿದ್ಯಾ ವಿಷಯ ತ್ವೋಕ್ತೇ ರ್ವಿಷ್ಣೋರೇವಾದೃಶ್ಯತಾದಿ ಗುಣಾಃ ।

ಹೀಗೆ ಪೂರ್ವಪಕ್ಷದಿಂದ ಆಕ್ಷೇಪವು ಸಿದ್ಧಾಂತವು ಹೇಳಲ್ಪಡುತ್ತದೆ "ಅದೃಶ್ಯ ತ್ವಾದಿ ಗುಣತಃ" ಶ್ರೀ ವಿಷ್ಣುವೇ ಹೇಳಲ್ಪಡುವವನು ಎಂದು ಸೂತ್ರಾರ್ಥವು ಏಕೆಂದರೆ "ಅಥಪರಾಯಯಾತ ದಕ್ಷರ ಮಧಿಗಮ್ಯತೆ" "ತದೇತದಕ್ಷರಂ ಬ್ರಹ್ಮ" "ಪುರುಷ ಏವೇ ದಂ ವಿಶ್ವಂ ಕರ್ಮ ತಪ್ರೋಬ್ರಹ್ಮ ಪರಾಮೃತಂ" ಎಂಬ ವಾಕ್ಯಗಳಲ್ಲಿ ಅದೃಶ್ಯತ್ವಾದಿ ಗುಣವುಳ್ಳವಸ್ತು ವಿನಲ್ಲಿ ಪರವಿದ್ಯಾ ವಿಷಯತ್ವ ಧರ್ಮವನ್ನು ಹೇಳಿರುವುದರಿಂದ ಆ ಪರ ವಿದ್ಯಾ ವಿಷಯತ್ವವು "ತದೇವಂ" ಎಂಬ ಶೃತಿಯಿಂದ ಶ್ರೀ ವಿಷ್ಣುವಿನಲ್ಲಿಯೇ ಸ್ಪಷ್ಟವು ಸ್ಮೃತಿಯಲ್ಲಿಯಾದರೋ-ಯಾವುದು ಶ್ರೀಹರಿಗೆ ಪ್ರೀತಿಯೋ ಅದು ಸತ್ಕರ್ಮವು "ದ್ವಿವಿದ್ಯೇವೇದಿತವ್ಯೇ" ಎಂಬಲ್ಲಿಯೂ ಸಹ ಪರಅಪರ ಎಂಬ ಎರಡು ವಿದ್ಯೆಯೂ ತಿಳಿ ಯಲ್ಪಡಬೇಕು ಋಗಾದಿಗಳು, ಶಿಕ್ಷಾದಿಷಡಂಗಗಳು ಆಯುರ್ವೇದ ಧನುರ್ವೇದ, ಗಂಧರ್ವವೇದ, ಶಿಷ್ಟಾ, ಕಲಾ, ವಿದ್ಯೆಗಳು ಅಪರ ವಿದ್ಯೆಗಳು ಯಾವ ವಸ್ತುವು ಕಾಣ ಲ್ಪಡುವ ವಸ್ತುಗಳಿಂದ ಅನ್ಯವೋ, ಸತ್ವಾದಿತ್ರಿಗುಣ ಹೀನನೋ ವಿಲಕ್ಷಣನೋ ಸರ್ವೋತ್ತಮನೋ ಸರ್ವ ವ್ಯಾಪ್ತನೋ ಆ ವಿಷ್ಣುವು ತಿಳಿಯಲ್ಪಡಬೇಕಾದ ಪರವಿದ್ಯೆ ಕರ್ಮಗಳಿಗೆ ಸಕಾಮ, ನಿಷ್ಕಾಮ, ಉಪಾಧಿಭೇದದಿಂದ ಹೇಗೆ ಪ್ರವೃತ್ತಿ ನಿವೃತ್ತಿ ಕರ್ಮ ಪದ ಪ್ರಯೋಗವೋ ಹಾಗೆಯೇ ವಿಷ್ಣು ವಿಷಯಕ ಹಾಗೂ ಕರ್ಮಾದಿ ವಿಷಯಕ ಉಪಾಧಿ ಬೇದದಿಂದ ಪರ, ಅಪರ ವಿದ್ಯಾಭಿಧಾನವು ಅನುಗ್ರಾಹ್ಯ ಯೋಗಾದಿಗಳಿಂದ ಅನುಗ್ರಾಹಕಗಳಾದ ಬ್ರಹ್ಮ ಸೂತ್ರಗಳು ಪರವಿದ್ಯೆಯು

ಚಿತ್ಪ್ರಕೃತಿ, ಜಡ ಪ್ರಕೃತಿ ಮತ್ತು ಚತುರ್ಮುಖ ಬ್ರಹ್ಮ ದೇವರೂ ಕೂಡ ಅದೃಶ್ಯತ್ವಾದಿ ಧರ್ಮವುಳ್ಳವರಲ್ಲ "ತಸ್ಮಾದೇತದ್" ಎಂಬ ಶ್ರುತಿಯಲ್ಲಿ ಅದೃಶ್ಯತ್ವಾದಿ ಧರ್ಮವು ಅಕ್ಷರ, ವಿರಿಂಚಿ, ಮತ್ತು ರುದ್ರದೇವರು ಇವರುಗಳಿಂದ ಭಿನ್ನವಾದ ವಸ್ತುವಿನಲ್ಲಿ ಹೇಳಿದ ಶ್ರೀ ವಿಷ್ಣುವೇ ಅದೃಶ್ಯತ್ವಾದಿ ಧರ್ಮವುಳ್ಳವನು

9. ಯಃಸರ್ವಜ್ಞ, ಸರ್ವವಿದ್ಯಸ್ಯ ಜ್ಞಾನಮಯಂತಪಃ (ಮು 1-1-9) ಇತಿ ವಿಶೇಷಣಾನ್ನಪ್ರಕೃತಿಃ । "ತಸ್ಮಾದೇತದ್ಬ್ರಹ್ಮನಾಮ ರೂಪ ಮನ್ನಂಚ ಜಾಯತೇ (ಮು 1-1-9) ಇತಿ ಭೇದವ್ಯಪದೇಶಾನ್ನವಿರಿಂಚಃ

ಅದೃಶ್ಯತ್ವಾದಿ ಗುಣವುಳ್ಳ ವಸ್ತುವಿಗೆ ಸರ್ವಜ್ಞಾದಿ ವಿಶೇಷಣಗಳನ್ನು ಹೇಳಿರುವುದರಿಂದ ಜಡ ಪ್ರಕೃತಿಯಲ್ಲಿ ವಿರಿಂಚಿನಿಗೆ ಅಕ್ಷರದಿಂದ ಜನ್ಯತ್ವವು ಹೇಗವಾದ್ದರಿಂದ ಆತನೂ ಅಲ್ಲ ಧರ್ಮಗಳಲ್ಲಿ 'ಯ' ಸರ್ವಜ್ಞಃ ಸರ್ವವಿತ್ ಎಂಬ ವಾಕ್ಯದಲ್ಲಿ "ತಪಸಾಚೀಯತೆ ಬ್ರಹ್ಮ' ಎಂದು ಆಲೋಚನಾ ಪರ ಅಜ್ಞಾನನಿರಾಸಕ್ಕೆ' "ಯಸ್ಯ ಜ್ಞಾನಮಯಂ ತಪಃ" ಎಂಬ ವಾಕ್ಯ ಸಂಬಂಧದಿಂದ (ತಪಃ ಕ್ರಿಯೆಯು ಜ್ಞಾನಾರ್ಜನೆಗಾಗಿ ನಿಸ್ಸಂಶಯ ಆಲೋಚನೆ) ಪರಮಾತ್ಮ ಸರ್ವಜ್ಞತ್ವ ಅಪ್ತ ಕಾಮತ್ವ ಧರ್ಮದಿಂದ ಅದೃಶ್ಯತ್ವ ಗುಣಕ ಶ್ರೀ ವಿಷ್ಣುವೇ ಎಂದು ಸಿದ್ಧಾಂತವು (ಯಾವಾತನಿಂದ ಚತುರ್ಮುಖಾಖ್ಯ ಹೆಸರೂ ಮತ್ತು ರೂಪವೂ ಅನ್ನವು ಹುಟ್ಟುವುದು ಅದು )

10. ಅಪರಂ ತ್ವಕ್ಷರಂ ಯಾ ಸಾ ಪ್ರಕೃತಿರ್ಜಡರೂಪಿಕಾ ।
ಶ್ರೀಃಪರಾಪ್ರಕೃತಿಃ ಪ್ರೋಕ್ತಾ ಚೇತನಾವಿಷ್ಣು ಸಂಶ್ರಯಾ ।
ತಾಮಕ್ಷರಂ ಪರಂ ಪ್ರಾಹುಃ ಪರತಃ ಪರಮಕ್ಷರಂ ।
ಹರಿರೇವಾಖಿಲ ಗುಣಮಕ್ಷರತ್ರಯಮೀರಿತಮಿತಿಸ್ಕಾಂದೇ ॥
ಅಕ್ಷರಾಭಿಧಾನಾದಕ್ಷರಾತ್ಪರತಃ ಪರಃ ಇತ್ಯಪಿ ವಿಶೇಷಣಮೇವ ॥

ಅಕ್ಷರತ್ರಯವೆಂಬ ವಾಕ್ಯದಿಂದ ಅಪರಾಕ್ಷರವು ಜಡರೂಪ ಪ್ರಕೃತಿ. ಯಾವುದು ಪರಮಕ್ಷರವೋ ಅದು ಶ್ರೀವಿಷ್ಣ್ವಾಶ್ರಯ ಉತ್ತಮ ಚೇತನ ಪ್ರಕೃತಿ.

ಶ್ರೀಲಕ್ಷ್ಮೀದೇವಿಯು ಈ ಎರೆಡು ರೂಪಗಳನ್ನು ಮೀರಿರುವ ಅಖಿಲ ಗುಣಪಂಪೂರ್ಣ ಶ್ರೀವಿಷ್ಣುವಿಗೆ ಅಕ್ಷರಾತ್ಪರತಃ ಪರಃ ಎಂಬ ಪೂರ್ಣ ಪದವು ವಿಶೇಷಣ ಮಾತ್ರವು

11 ಜುಷ್ಟಂ ಯದಾಪಶ್ಯತ್ಯನ್ಯಮೀಶಮಸ್ಯ ಮಹಿಮಾನಮಿತಿ ವೀತಶೋಕಃ (ಮು 4-1-2) ಇತಿ ಭೇದವ್ಯಪದೇಶಾದೀಶ ಪದಪ್ರಾಪ್ತೋsಪಿ ನ ರುದ್ರಃ ॥

ಎಂಬ ವಾಕ್ಯದಿಂದಲೂ ವಿಷ್ಣ್ವಾಖ್ಯ ಅಕ್ಷರಕ್ಕೆ ರುದ್ರಾದಿ ದೇವತೆಗಳಿಂದ ಅನ್ಯತ್ವವು ಹೇಳಿದೆಯಾಗಿ ಈ ಶಬ್ದ ವಾಚ್ಯನು ರುದ್ರದೇವತೆಯಲ್ಲ

## ಸೂ॥ ಓಂ॥ ರೂಪೋಪನ್ಯಾಸಾಚ್ಚ ॥ ಓಂ ॥ 23

**ಯದಾಪಶ್ಯಃ ಪಶ್ಯತೆ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮಿತಿ (ಮು 3-1-3)**

ಮೇಲಿನ ಶೃತಿಯಲ್ಲಿ ಶ್ರೀ ವಿಷ್ಣುವಿನ ಅಸಾಧಾರಣ ಧರ್ಮ ಸ್ವರ್ಣ ರೂಪವನ್ನು ಹೇಳಿರುವುದರಿಂದ ಅದೃಶ್ಯತ್ವ ಧರ್ಮವುಳ್ಳವನು ಶ್ರೀವಿಷ್ಣುವೇ

ಶುದ್ಧ ಹೇಮವರ್ಣವುಳ್ಳ, ಚತುರ್ಮುಖ ಬ್ರಹ್ಮನಿಗೆ ಕಾರಣನಾದ, ಜಗತ್ತಿಗೆ ಕಾರಣನಾದ, ಪೂರ್ಣ ಷಡ್ಗುಣನಾದ, ತನಗೆ ತಾನೇ ಸ್ವಾಮಿಯಾದ ಶ್ರೀ ವಿಷ್ಣುವನ್ನು ಕಾಣಿಸಿಕೊಳ್ಳುವನೋ ಆಗ ಯೋಗ್ಯ ಜೀವನು ಜೀವನ್ಮುಕ್ತನಾಗಿ ಆರಬ್ಧ ಅನಿಷ್ಟ ಪುಣ್ಯ ಪಾಪಗಳನ್ನು ಕಳೆದುಕೊಂಡು ಅನಂತರ ಜ್ಞಾನೋತ್ತರ ಕರ್ಮ ದೋಷ ರಹಿತನಾಗಿ ಅಜ್ಞಾನಾಖ್ಯ ಅವಿದ್ಯಾರಹಿತನಾಗಿ ಪರಮಾನಂದ ಸಾಮ್ಯ-ನಿರ್ದುಃಖತ್ವಾದಿ ಸಾಮ್ಯವನ್ನು ಹೊಂದುತ್ತಾನೆ.

13 ಏಕೋನಾರಾಯಣ ಆಸೀನ್ನಬ್ರಹ್ಮಾ ನ ಚ ಶಂಕರಃ ।
ಸ ಮುನಿರ್ಭೂತ್ವಾ ಸಮಚಿಂತಯತ್ ತತಏತೇವ್ಯಜಾಯಂತ ।
ವಿಶ್ವೋ ಹಿರಣ್ಯಗರ್ಭೋಽಗ್ನಿರ್ಯಮೋ ವರುಣರುದ್ರೇಂದ್ರಾ ಇತಿ ।
ತಸ್ಯೈತಸ್ಯ ಪರಮತಸ್ಯ ನಾರಾಯಣಸ್ಯ ಚತ್ವಾರಿರೂಪಾಣಿ ಶುಕ್ಲಂ
ರಕ್ತಂ ರೌಕ್ಮಂ ಕೃಷ್ಣಮಿತಿ । ಸ ಏತಾನ್ಯೇಭ್ಯೋ ವ್ಯಚೀಕ್ಲೃಪತ್
ವಿಮಿಶ್ರಾಣಿ ವ್ಯಮಿಶ್ರಯತ್ ॥

ಈ ವಾಕ್ಯದಲ್ಲಿ ಜಗತ್ತಿಗೆ ಮೊದಲು ಪ್ರಳಯ ಕಾಲದಲ್ಲಿ ನಾರಾಯಣನೊಬ್ಬನೆ ಸ್ವತಂತ್ರವಾಗಿದ್ದನು ಆಗ ಬ್ರಹ್ಮಾದಿ ಜಗತ್ತು ಯಾವುದು ಇರಲಿಲ್ಲ (ತಮ ವ್ಯಾಪಾರ ಪೂರ್ವಕವಾಗಿ ಇರಲಿಲ್ಲ) ಆಗ ಶ್ರೀ ವಿಷ್ಣುವು ಮನನ ಶೀಲನಾಗಿ ಜಗತ್ಸೃಷ್ಟಿಗಾಗಿ ಆಲೋಚಿಸಿದನು ಆಗ ವಾಯುದೇವರು ಆರ್ಥಾತ್ಪ್ರಷ್ಟ್ರ ದೇವರು ಇತರ ಆಗ್ನ್ಯಾದಿದೇವತೆಗಳು ಹುಟ್ಟಿದರು ಶೃತಿ ಪ್ರಸಿದ್ಧ ಸರ್ವ ಶರೀರ ಗತನಾದ ಸರ್ವೋತ್ತಮ ಶ್ರೀಮನ್ನಾರಾಯಣನಿಗೆ ನಾಲ್ಕುರೂಪಗಳು "ಶುಕ್ಲ, ರಕ್ತ, ರೌಕ್ಮ, ಕೃಷ್ಣ, ಎಂಬ ವರ್ಣಗಳಾದವು ಈ ರೂಪಗಳಿಂದ ಮಿಶ್ರಣ ಪಡೆದ ರೂಪಗಳನ್ನು ಈ ದೇವತೆಗಳಿಗೆ ಕೊಟ್ಟನು ಪುನಃ ವಿಮಿಶ್ರಿತ ರೂಪಗಳನ್ನು ಮನುಷ್ಯಾದಿಗಳಿಗೂ ಕೊಟ್ಟನು.

14 ಅತ ಏತಾದೃಗೇತದ್ರೂಪಮಿತಿ ತಸ್ಮೈವ ಹಿ ರೂಪಾಣ್ಯಭಿಧೀಯಂತೇ ॥

ಈ ವಿವಿಧ ಮಿಶ್ರಣಗಳಿಂದ ಇತರ ರೂಪಗಳಿದ್ದರೂ ಆದರೂ ಮೂಲ ಶುದ್ಧ ಶುಕ್ಲ ರೂಪವು ಶ್ರೀವಿಷ್ಣುವೇ.

– ಇತಿ ಅದೃಶ್ಯತ್ವಾಧಿಕರಣಂ –

## – ವೈಶ್ವಾನರಾಧಿಕರಣವು –

1. ಅದೃಶ್ಯತ್ವಾದಿಗುಣೇಷು ಸರ್ವಗತತ್ವಂ । ಯಸ್ತ್ವೇತಮೇವಂ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೆ (ಛ 5-18-1) ಇತಿ ವೈಶ್ವಾನರಸ್ಯೋಕ್ತಮಿತ್ಯತಆಹ ॥

ಈ ಅಧಿಕರಣದಲ್ಲಿ ಪಾಚಕತ್ವಾದಿ ಅನೇಕ ಧರ್ಮಗಳನ್ನು ಶ್ರೀ ವಿಷ್ಣುವಿನಲ್ಲಿಸಮನ್ವಯ ಮಾಡಲ್ಪಡುವುದು. ಮಂಡೂಕ ಶೃತಿಯಲ್ಲಿ ಹಿಂದಿನ ಅಧಿಕರಣದಲ್ಲಿ ಹೇಳಿದ ಸರ್ವಗತತ್ವ ಧರ್ಮವು ಛಂದೋ ಶೃತಿಯಲ್ಲಿ ಮೇಲಿನ ವಾಕ್ಯದಲ್ಲಿ ವೈಶ್ವಾನರಾ

ಖ್ಯ ವಸ್ತುವಿಗೆ ಹೇಳಿದೆ ಶ್ರುತ್ಯರ್ಥ ಯಾವ ಅಧಿಕಾರಿಯು ತನ್ನ ದೇಹದ ಹೃದಯದಲ್ಲಿ ಅಷ್ಟೇ ಪರಿಣಾಮವುಳ್ಳ ನಾಕಲ್ಯೇನ ಯಾರಿಂದಲೂ ತಿಳಿಯಲಸಾಧ್ಯನಾದ ಸರ್ವಗತ ನನ್ನು ವ್ಯಾಪ್ತ ಗುಣಗಳುಳ್ಳವನನ್ನಾಗಿ ಶರೀರವಲ್ಲಿರುವ ವೈಶ್ವಾನರಾಖ್ಯ ವಿಷ್ಣುವನ್ನು ಉಪಾಸನೆ ಮಾಡುತ್ತಾನೋ ಅವನು ಸ್ವಯೋಗ್ಯ ಸರ್ವ ಭೋಗವನ್ನು ಅನುಭವಿಸು ವನು

ಸಿದ್ಧಾಂತ ಸೂತ್ರವು

## ಸೂ|| ಓಂ|| ವೈಶ್ವಾನರಃ ಸಾಧಾರಣ ಶಬ್ದ ವಿಶೇಷಾತ್ || ಓಂ || 24

"ಯಸ್ತ್ವೇ ತ್ವಕ್ರೀತಂ" ಎಂಬ ಮೇಲಿನ ವಾಕ್ಯದಲ್ಲಿ ಹೇಳಿರುವ ವೈಶ್ವಾನರ ಶಬ್ದ ವಾಚ್ಯನು ಶ್ರೀವಿಷ್ಣುವೇ ಅಗ್ನಿದೇವತೆಯಲ್ಲ, ಅಗ್ನಿ ವೈಶ್ವಾನರ ದೇವತೆಗಳ ಸಾಧಾ ರಣ ಶಬ್ದಕ್ಕೆ ಆತ್ಮಶಬ್ದವನ್ನು ವೈಶ್ವಾನರ ದೇವತೆಗೆ ಹೇಳಿರುವುದರಿಂದ ಅದು ವಿಷ್ಣುವಿಗೆ ವಿಶೇಷಣ ವಾಚ್ಯವಾದ್ದರಿಂದ ವೈಶ್ವಾನರ ಶಬ್ದವಾಚ್ಯನು ಶ್ರೀವಿಷ್ಣುವೇ, ಅಗ್ನಿ ದೇವತೆ ಯಲ್ಲ.

**ಅಗ್ನಾವಿಷ್ಣ್ವೋಃ ಸಾಧಾರಣಸ್ಯ ವೈಶ್ವಾನರ ಶಬ್ದಸ್ಯ ವಿಷ್ಣಾವೇವ ಪ್ರಸಿದ್ಧಾತ್ಮಶಬ್ದೇನ ವಿಶೇಷಣಾದ್ವೈಶ್ವಾನರಸ್ಯೋಕ್ತಮಿತ್ಯತಆಹ**

ಅಗ್ನಿ ಮತ್ತು ವಿಷ್ಣು ದೇವತೆಗಳಿಗೆ ಹೇಳಲ್ಪಡುವ ಸಾಧಾರಣ ವೈಶ್ವಾನರ ಶಬ್ದವು ವಿಷ್ಣುವಿನಲ್ಲಿಯೇ ವಿಶೇಷವಾಗಿ ಪ್ರಸಿದ್ಧವಾದ ಆ ಶಬ್ದವನ್ನು ವಿಶೇಷಣ ವಾಗಿ ಹೇಳಿರುವುದರಿಂದ ವೈಶ್ವಾನರ ಶಬ್ದ ವಾಚ್ಯನು ಶ್ರೀ ವಿಷ್ಣುವೇ.

## ಸೂ|| ಓಂ|| ಸ್ಮರ್ಯಮಾಣಮನುಮಾನಂ ಸ್ಯಾದಿತಿ || ಓಂ|| 25

ಸಮಾಖ್ಯಾನುವಾಕ್ಯದಿಂದಲೂ ಶ್ರೀ ವಿಷ್ಣುಹೇ ವೈಶ್ವಾನರ ಶಬ್ದ ವಾಚ್ಯನು

ಅಹಂ ವೈಶ್ವಾನರೋ ಭೂತ್ವಾಪ್ರಾಣಿನಾಂ ದೇಹಮಾಶ್ರಿತಃ (ಗೀತಾ 15-14)
ಇತಿ ಸ್ಮರ್ಯಮಾಣಮತ್ರಾಪಿ ನ ಏವೋಚ್ಯತ ಇತ್ಯನ್ಯಾಸುಮಾಪಕಂ ॥

ಗೀತೆಯಲ್ಲಿಯೂ ಶ್ರೀ ಕೃಷ್ಣನು ತಾನೇ ವೈಶ್ವಾನರ ರೂಪನಾಗಿ ಪ್ರಾಣಿಗಳ ದೇಹವನ್ನು ಆಶ್ರಯಿಸಿರುವವನು ಎಂದು ಹೇಳಿರುವುದರಿಂದ ಶ್ರೀ ವಿಷ್ಣುವೇ ವೈಶ್ವಾನರನು.

4 ಸಮಾಖ್ಯಾನಾತ್ । ಇತಿಶಬ್ದಃ ಸಮಾಖ್ಯಾ ಪ್ರದರ್ಶಕಃ ॥

ಶ್ರೀ ವಿಷ್ಣುವೇ ಶ್ರೀ ಕೃಷ್ಣಾವತಾರವಾದ್ದರಿಂದ ಸಮಾನಾಖ್ಯೆಯನ್ನು ಇತಿ ಶಬ್ದದಿಂದ ಹೇಳಿದೆ.

## ಸೂ॥ ಓಂ॥ ಶಬ್ದಾದಿಭ್ಯೋಂತಃ ಪ್ರತಿಷ್ಠಾನಾನ್ನೇತಿಚೇನ್ನ, ತಥಾದೃಷ್ಟ್ಯುಪದೇಶಾದಸಂಭವಾತ್ಪುರುಷವಿಧಮಪಿಚೈನ ಮಧೀಯತೇ ॥ಓಂ॥ 26

ಅಗ್ನಿಶಬ್ದದಿಂದ ಹೋಮಾಧಿಕರಣದಿಂದ ಹೃದಯದಒಳಗೆ ಪ್ರತಿಷ್ಠಾನತ್ವವನ್ನು ಹೇಳಿದ್ದರಿಂದ ವಾಚಕತ್ವಧರ್ಮದಿಂದ ಶರೀರದ ಒಳಗೆ ವೈಶ್ವಾನರನು ಅಗ್ನಿದೇವತೆಯೇ ವಿಷ್ಣುವಲ್ಲ ಅಗ್ನ್ಯಾದಿ ನಾಮ ಧರ್ಮತ್ವೇನ ಉಪಾಸನೆಯು ಹೇಳಲ್ಪಡುತ್ತದೆ ಅಗ್ನ್ಯಾದಿ ಶೃತಿ ಧರ್ಮಗಳು ವಿಷ್ಣುವಿನಲ್ಲಿ ಸಾವಕಾಶವು ಆದ್ದರಿಂದ ವಿರೋಧವಿಲ್ಲವೆಂದರೆ ಶ್ರೀ ವಿಷ್ಣುವೇ ಈ ಶೃತಿಗಳಲ್ಲಿ ಹೇಳಿರುವ ಪ್ರಮುಖ ಧರ್ಮವುಳ್ಳವನು ಆತ್ಮತ್ವ ಮತ್ತು ಬ್ರಹ್ಮತ್ವ ಮುಂತಾದ ಪ್ರಮುಖ ಧರ್ಮಗಳು ಅಗ್ನಿದೇವತೆಯಲ್ಲಿ ಸಂಭವವಲ್ಲವಾಗಿ ಶ್ರೀ ವಿಷ್ಣುವೇ ವೈಶ್ವಾನರನು. ಛಂದೋಗ ಶೃತಿಯಲ್ಲಿ ಈ ವೈಶ್ವಾನರನು. ಛಂದೋಗ ಶೃತಿಯಲ್ಲಿ ಈ ವೈಶ್ವಾನರನನ್ನು ಪುರುಷ ಸೂಕ್ತೋಕ್ತ ಶ್ರೀಮನ್ನಾರಾಯಣನ ಸಮಾನ ಗುಣವಂತನೆಂದು ಹೇಳಿದೆಯಾಗಿಯೂ ಪುರುಷ ಸೂಕ್ತವು ಶ್ರೀ ವಿಷ್ಣುವಾಚಕವೆಂದು ಬಹು ಪ್ರಮಾಣಗಳಿರುವುದರಿಂದಲೂ ಶ್ರೀ ವಿಷ್ಣುವೇ ವೈಶ್ವಾನರನು ಅಗ್ನಿಯಲ್ಲ.

"ಅಯಮಗ್ನಿ ರ್ವೈಶ್ವಾನರಃ" (ಬ್ರ. 7-9-1) "ವೈಶ್ವಾನರ ಮೃತ ಅಜಾತಮಗ್ನಿ" (ಋ.6.7-1) ಇತ್ಯಾದಿ ಶಬ್ದಃ । "ವೈಶ್ವಾನರೆ ತದ್ಧುತಂ ಭವತಿ

(ಉ 5-24-4) ಹೃದಯಂ ಗಾರ್ಹಪತ್ಯೋ ಮನೋನ್ವಾಹಾರ್ಯ ಪಚನ ಅಸ್ಯಮಾಹವನೀಯಃ (ಛ. 5-18-2) ಇತ್ಯಾದ್ಯಗ್ನಿಲಿಂಗಮಾದಿ ಶಬ್ದೋಕ್ತಂ ॥ ಯೇನೇದಮನ್ನಂ ಪಚ್ಯತೇ (ಬೃ 7-9-1) ತದ್ಯ ದ್ಭಕ್ತಂ ಪ್ರಥಮಾಮಾಗಚ್ಛೇತ್ತದ್ಧೋಮೀಯಂ" (ಛ 5-19-1) ಇತ್ಯಾದಿನಾ ಪಾಚಕತ್ವೇನಾತಃ ಪ್ರತಿಷ್ಠಾನಂಚಪ್ರತೀಯತೆ । ತಸ್ಮಾ ನ್ನವಿಷ್ಣುರಿತಿಚೇನ್ನ ॥

ಈ ಮೇಲಿನ ಶೃತಿಗಳು ಅಗ್ನಿಶಬ್ದವಾಚ್ಯತ್ವದಿಂದಲೂ ಪಾಚಕತ್ವದಿಂದಲೂ ದೇಹದ ಏಳಿಗೆಗೆ ಇರುವ ಧರ್ಮದಿಂದಲೂ ವೈಶ್ವಾನರನು ಅಗ್ನಿಯೆಂದು ಸವ್ಯಾಪಾರ ವಾಗಿ ಹೇಳಿದೆ. ಆತ್ಮ ಶಬ್ಧ ಬ್ರಹ್ಮ ಶಬ್ದಗಳ ವಾಚ್ಯತ್ವದಿಂದಲೇ ಶ್ರೀ ವಿಷ್ಣುವಿಗೆ ಸಂಬಂಧವಾಗಿ ನಿರ್ಧಾರ ಮಾಡಲು ಸಾಧ್ಯವಿಲ್ಲ ಎಂದರೆ

6 ಅಥಹೇಮಮಾತ್ಮಾನಮಣೋರಣೀಯಾಂಸಂ ಪರತಃಪರಂ ವಿಶ್ವಂ ಹರಿಮುಪಾಸೀತೇತಿ । ಸರ್ವನಾಮಾ ಸರ್ವಕರ್ಮಸರ್ವಲಿಂಗಃ ಸರ್ವಗುಣಃ ಸರ್ವಕಾಮಃ ಸರ್ವಧರ್ಮಃ ಸರ್ವರೂಪ ಇತಿ ।

ಅದಕ್ಕೆ ಪರಿಹಾರವು ಹೀಗೆ : ಆತ್ಮಶಬ್ದ ಬ್ರಹ್ಮಶಬ್ದಗಳ ಅನ್ವಯದಿಂದ ಶ್ರೀ ವಿಷ್ಣು ವೇ ವೈಶ್ವಾನರ ಶಬ್ದ ವಾಚ್ಯನು ಅಗ್ನಿದೇವತೆಯಲ್ಲ ಮೇಲೆ ಶೃತಿಯ ಅರ್ಥವು ಆದಾನಾದಿ ಕರ್ತನಾದ ಸೂಕ್ಷ್ಮ ವಸ್ತುವಿಗಿಂತಲೂ ಅತಿ ಸೂಕ್ಷ್ಮನಾದ ಮಹತ್ವಕ್ಕಿಂತ (ಅನ್ಯ) ಬೇರೆಯಾದ ಪೂರ್ಣನಾದಹರಿಯ ಉಪಾಸನಾಕ್ರಮವನ್ನು ಈರೀತಿ ಹೇಳಿದೆ ಸ್ವತಂತ್ರ ಸರ್ವಕರ್ಮಕರ್ತನು (ನರ್ತೇತ್ವತ್ಕ್ರಿಯತೆ) ವಜ್ರಧರತ್ವಾದಿ ಸರ್ವ ಧರ್ಮ ವುಳ್ಳವನು, ಜ್ಞಾನಾನಂದಾದಿ ಸರ್ವಗುಣಪೂರ್ಣನು. ಸರ್ವಕಾಮಗಳೂ ಆತನ ಇಚ್ಛೆ ಯಿಂದಲೇ ಹೊಂದಲ್ಪಡುವುದರಿಂದ ಸರ್ವಕಾಮನು ಸರ್ವಧರ್ಮ ಮತ್ತು ಸರ್ವ ರೂಪಗಳಲ್ಲಿರುವುದರಿಂದ ಸರ್ವರೂಪನೆಂದು ಉಪಾಸನಾ ಮಾಡಬೇಕು

7 ಮತ್ತು ಹೀಗೆ ಉಪಾಸನೆ ಮಾಡುವುದಕ್ಕೆ ಫಲವೂ ಹೇಳಿದೆ

"ಸಯಏತಮೇವಮಾತ್ಮಾನಂ ವಿಶ್ವಂ ಹರಿಮಾರಾದರಮುಪಾಸ್ತೇ ತಸ್ಯ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷು ದೇವೇಷು ಸರ್ವೇಷು ವೇದೇಷು ಕಾಮಚಾರೋ ಭವತೀತಿ" ತತ್ತ್ವನ್ನಾಮಲಿಂಗಾದಿನಾ ತಸ್ಮೈವ ದೃಷ್ಟ್ಯಪದೇಶಾನ್ಮಹೋಪನಿಷದಿ ॥

ಮೇಲೆ ಹೇಳಿದ ರೀತಿಯಿಂದ ಶ್ರೀ ಹರಿಯನ್ನು ಸಹೃದಯತೆಯಿಂದ ಉಪಾಸನೆ ಮಾಡುವ ಭಕ್ತನು ಅಗ್ನ್ಯಾದಿ ದೇವತೆಗಳ ನಾಮ, ಲಿಂಗ, ಕರ್ಮಗಳನ್ನು ಹೇಳುವ ಸೂಕ್ತಗಳಲ್ಲಿ ಸೂಚಿಸಲ್ಪಟ್ಟಿರುವ, ಕಾಮ ಸಂಚರಣ, ಸರ್ವಪೂಜ್ಯತ್ವ ಸರ್ವಜ್ಞತ್ವಾದಿ ಗುಣಗಳನ್ನು ಹೊಂದುವನು ಎಂದು ಹೇಳಿರುವುದರಿಂದಲೂ ಶ್ರೀ ವಿಷ್ಣುವೇ ಉಪಾಸ್ಯನು ಅಗ್ನಿದೇವತೆಯಲ್ಲ

**8 ಅನಾತ್ಮತ್ವಾದನಾತ್ಮಾನ ಊನತ್ವಾದ್ಗುಣರಾಶಿತಃ ।**
**ಅಬ್ರಹ್ಮಾಣಃ ಪರೇ ಸರ್ವೇಬ್ರಹ್ಮಾತ್ಮಾ ವಿಷ್ಣುರೇವ ಹಿ ।**

ಇತ್ಯಾದಿನಾ "ಕೋನ ಆತ್ಮಾ ಕಿಂ ಬ್ರಹ್ಮ" (ಛ 5-11-1) ಇತ್ಯಾರಂಭಾಚ್ಚ ಅನ್ಯೇಷಾಮಸಂಭವಾತ್ ವಿಷ್ಣುರೇವ ವೈಶ್ವಾನರಃ ।

ಕೇವಲ ಆತ್ಮ ಶಬ್ದ ಶೃತಿ ಸಮಾಖ್ಯದಿಂದಲೆ ಮಾತ್ರವಲ್ಲ ಪ್ರಕರಣ ಬಲದಿಂದಲೂ ವೈಶ್ವಾನರನು ಶ್ರೀವಿಷ್ಣುವೇ "ಕೋ ನ ಆತ್ಮಾ ಕಿಂಬ್ರಹ್ಮ" ಎಂಬ ಪ್ರಕರಣಬಲದಿಂದಲೂ "ಅನಾತ್ಮತ್ವಾತ್" ಮತ್ತು ಬ್ರಹ್ಮ ಆತ್ಮ ಶಬ್ದಗಳಿಂದ ಹೇಳಲ್ಪಡುವ ಗುಣಪೂರ್ಣತ್ವ ವ್ಯಾಪ್ತತ್ವ ಧರ್ಮಗಳು ಇತರರಲ್ಲಿ ಕೂಡುವುದಿಲ್ಲವಾಗಿಯೂ ಮುಖ್ಯವಾಗಿ ಶ್ರೀವಿಷ್ಣುವಿನಲ್ಲಿಯೇ ಕೂಡುವುದರಿಂದಲೂ ಆತನೇ ವೈಶ್ವಾನರನು

**9. 'ಚಂದ್ರ ಮಾಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ (ತೈ ಆ. 3-12) ಇತ್ಯಾದಿನಾ ಯಃ ಪುರುಷಾಖ್ಯೋ ವಿಷ್ಣುರಭಿಹಿತ ಸ್ತದ್ವಿಧಮೇವಾತ್ರ ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪೃಥ್ವಿಗತ್ಮಾ (ಛ. 5-18-2) ಇತ್ಯಾದಿನೈನಂ ವೈಶ್ವಾನರ ಮಧೀಯತೇ ।**

ಪುರುಷವಿಧಮಪಿ ಏನಮಧೀಯತೇ ಎಂಬ ಸೂತ್ರ ಪಾಠದ ವ್ಯಾಖ್ಯಾನವು ಹೀಗೆ "ಶೀರ್ಷ್ಣೋದ್ಯೌಸ್ಸಮ" "ಪ್ರಾಣಾದ್ವಾಯುರಜಾಯತ" ಪದ್ಭ್ಯಾಂ ಭೂಮಿಃ" ಹೀಗೆ ಪುರುಷಸೂಕ್ತದಲ್ಲಿ ಹೇಳಿದಂತೆ ಯಾವ ಪುರುಷಸೂಕ್ತ ವಾಚ್ಯ ವಿಷ್ಣುವಿನ ತಲೆಯ ಮೇಲೆ ತ್ರಿಲೋಕಗಳನ್ನು ಮತ್ತು ಅವುಗಳಲ್ಲಿ ತನ್ನ ಸನ್ನಿಧಾನ ಸ್ವಾಮಿತ್ವವುಳ್ಳ ಮಾಹಾತ್ಮ್ಯವುಳ್ಳವ ವೈಶ್ವಾನರನೆಂಬ ನಾಮಧೇಯವುಳ್ಳ ಧರ್ಮಗಳುಳ ವನ್ನು ವನ್ನೇ "ಮೂರ್ಧೈವ ಸುತೇಜಾಃ" ಎಂಬ ಛಾಂದೋಗ್ಯ ಶೃತಿಗಳು ಹೇಳುವವು. ಆದ್ದರಿಂದಲೇ ಶ್ರೀ ವಿಷ್ಣುವೇ ವೈಶ್ವಾನರ ಶಬ್ದದಿಂದ ಹೇಳಲ್ಪಡುವ ದೇವತೆ

10. ಚ ಶಬ್ದೇನ ಸಕಲವೇದತಂತ್ರ ಪುರಾಣಾದಿಷು ವಿಷ್ಣುಂಪರತ್ವಂ
**ಪುರುಷಸೂಕ್ತಸ್ಯ ದರ್ಶಯತಿ ||**

ಆತ್ಮ ಶಬ್ದ ಸ್ಮೃತಿಸಮಾಖ್ಯಾ ಪ್ರಕರಣ ಸಮುಚ್ಚಯವೇ "ಚ" ಶಬ್ದದಿಂದ ಲಭ್ಯವಾದುದು

11 **ತಥಾಚಬ್ರಾಹ್ಮೇ ।**
**ಯಥೈವ ಪೌರುಷಂ ಸೂಕ್ತಂ ನಿತ್ಯಂ ವಿಷ್ಣುಪರಾಯಣಂ ||**
**ತಥೈವ ಮೇಮನೋ ನಿತ್ಯಂ ಭೂಯಾದ್ವಿಷ್ಣುಪರಾಯಣಂ||**

ಬ್ರಾಹ್ಮ ಪುರಾಣದಲ್ಲಿ ಪುರಾಣದಲ್ಲಿ ಪುರುಷಸೂಕ್ತವು ಶ್ರೀ ವಿಷ್ಣುಪರವೆಂದೇ ಹೇಳಿದೆ ಪುರುಷಸೂಕ್ತವು ನಿಯಮವಾಗಿ ಶ್ರೀ ವಿಷ್ಣುವಿನ ಮಹಾತ್ಮ್ಯೆ ತಾತ್ಪರ ವಾಗಿ ಇರುವಂತೆ ನನ್ನ ಮನಸ್ಸು ಕೂಡ ನಿಯಮವಾಗಿ ಶ್ರೀ ವಿಷ್ಣುವಿನಲ್ಲಿ ಸ್ಥಿರವಾಗಿ ನೆಲಸಲಿ

12 **ಚತುರ್ವೇದಶಿಖಾಯಾಂಚ ।**
**ಸಹಸ್ರಶೀರ್ಷಾಪುರುಷಃ ಸಹಸ್ರಾಕ್ಷಃ ಸಹಸ್ರಪಾದಿತ್ಯೇಷ್ಯಹ್ಯೇ**
**ವಾಂಚಿತ್ಯಃ ಪರಃ ಪರಮೋ ಹರಿದಿರನಾದಿರನಂತೋ ನಂತಶೀರ್ಷೋ**
**ಅನಂತಾಕ್ಷೋ ಅನಂತ ಬಾಹುರನಂತಗುಣೋ ಅನಂತರೂಪಃಇತಿ**

ಚತುರ್ವೇದ ಶಿಖೆಯಲ್ಲಿ ಪುರುಷಸೂಕ್ತವನ್ನು ಉಪನ್ಯಾಸ ಮಾಡಿ ಅದರ ವಿವರಣೆಯಿಂದ ಶ್ರೀಹರಿಯೇ ಪ್ರತಿಪಾದ್ಯನು ಅನ್ಯರಲ್ಲವೆಂದು ಹೇಳಿದೆ ಪುರುಷ ಪ್ರತಿ ಪಾದ್ಯ ದೇವತೆಯು ಯಾರ ಮನಸ್ಸಿಗೂ ಅಗೋಚರನು ಉತ್ತಮನು ಪ್ರಪಂಚ ಕ್ಕೆ ಕಾರಣಭೂತನು ಅನಾದಿಯು (ಉತ್ಪತಿ, ಶೂನ್ಯ. ರಹಿತನು) ನಾಶ ಶೂನ್ಯನು ಸ್ವರೂಪತಃ ವ್ಯತ್ಯಾಸವಿಲ್ಲದವನು ಎಂಬ ಶ್ರೀಹರಿಯು ಆತನು ಅನಂತ ಶೀರ್ಷನು ಅನಂತಾಕ್ಷನು ಅನಂತ ಬಾಹುವು ಅನಂತ ಪಾಲಕನು ಮತ್ತು "ಸಭೂಮಿಂ" ಎಂಬ ವಾಕ್ಯದಿಂದ ಅನಂತರೂಪ, ಅನಂತಗುಣ ಮತ್ತು ಅನಂತಾಕಾರ ವುಳ್ಳವನು.

13. ಬೃಹತ್ಸಂಹಿತಾಯಾಂಚ
ಯಥಾಹಿ ಪೌರುಷಂಸೂಕ್ತಂ ವಿಷ್ಣೋರೇವಾಭಿದಾಯಕಂ ।
ನತಥಾ ಸರ್ವ ವೇದಾಶ್ಚ ವೇದಾಂಗಾನಿ ಚ ನಾರದ ॥

ನಾರದರಿಗೆ ಬ್ರಹ್ಮದೇವರ ಉಪದೇಶವು ಪುರುಷಸೂಕ್ತ ಸರ್ವ ವೇದಗಳು ಮತ್ತು ವೇದಾಂಗಗಳೂ ಹೇಗೆ ಮುಖ್ಯವಾಗಿ ಶ್ರೀ ವಿಷ್ಣು ಪರಗಳು (ಹಾಗೆ ಇತರ ದೇವರುಗಳಲ್ಲ.)

ಸರ್ವತಃ ಪೌರುಷೀ ಸೂಕ್ತೇ ಗುಣಾ ವಿಷ್ಣೋರುದುರೀತಾಃ ।

14 ಯಸ್ಮಾದ್ಯಜ್ಜಾಯತೇ ಚಾಂಗಾಲ್ಲೋಕವೇದಾದಿತಂ ಹರೇಃ
ತನ್ನಾಮವಾಚ್ಯಮಂಗಂ ತದಪ್ಯಥಾಬ್ರಹ್ಮಾದಿಕಂ ಮುಖಿಗಿ೦ತಿ
ನಾರದೀಯವಚನಾನ್ನಾಭೇದೋಕ್ತಿ ವಿರೋಧಃ ।

ಶ್ರೀ ಹರಿಯ ಅಂಗಾಂಗಗಳಿಂದ ಯಾವ ಯಾವ ವೇದ ಲೋಕಗಳು ಉತ್ಪನ್ನ ವಾದವೋ, ಅವನನ್ನೇ ಆಶ್ರಯಿಸಿ ಕೊನೆಗೆ ಲಯ ಹೊಂದುವವು. ಆದ್ದರಿಂದಲೇ ಸರ್ವವೂ ಶ್ರೀವಿಷ್ಣು ಮುಖ್ಯ ವಾಚಕವು ಮತ್ತು ಅವನ ಅನಂತರ ಇತರ ವಸ್ತುಗಳು ಅಮುಖ್ಯ ವಾಚಕಗಳು ವಿರೋಧವಿಲ್ಲ

## ಸೂ॥ ಓಂ॥ ಅತ ಏವ ನ ದೇವತಾ ಭೂತಂ ಚ ಓಂ॥ 27

**ಅಗ್ನಿ ವೈಶ್ವಾನರಾದಿ ಶಬ್ದಸ್ತೇಜಸಿ ಭೂತೆ ಅಗ್ನಿ ದೇವತಾಯಾಂಚ ಪ್ರಸಿದ್ಧೋಪ್ಯತಃ॥ಪೂರ್ವೋಕ್ತಹೇತುತ ಏವಾತ್ರನ ಸಾತಚ್ಛಾಭಿಧೀಯತೆ।**

ಅಗ್ನಿ ವೈಶ್ವಾನರಾದಿ ಶಬ್ದಗಳು ತೇಜಸ್ಸು ಭೂತದಲ್ಲಿಯು ಅಗ್ನಿದೇವತೆಯಲ್ಲಿ ಪ್ರಸಿದ್ಧವಿದ್ದರೂ ಹಿಂದೆ ಹೇಳಿದ ನಿರವಕಾಶ ಆತ್ಮ ಶಬ್ದ ಬ್ರಹ್ಮ ಶಬ್ದ ವಾಚ್ಯತ್ವಗಳಿಂದ ಶ್ರೀ ವಿಷ್ಣುವೇ ವೈಶ್ವಾನರ ಶಬ್ದ ವಾಚ್ಯನು (ಮುಖ್ಯವಾಗಿ)

## ಸೂ॥ ಓಂ॥ ಸಾಕ್ಷಾದಪ್ಯವಿರೋಧಂ ಜೈಮಿನಿಃ ॥ಓಂ॥ 28

ಅಗ್ನ್ಯಾದಿ ಶಬ್ದಗಳು ಮುಖ್ಯ ವೃತ್ತಿಯಿಂದ ಪರಬ್ರಹ್ಮ ವಾಚ್ಯವಾದರೂ ಅಜ್ಞಾನದಿಂದಲಾಗಲೀ ವ್ಯವಹಾರಕ್ಕಾಗಲೀ ಅಗ್ನ್ಯಾದಿದೇವತೆಗಳ ಪರಅಮುಖ್ಯವಾಗಿ ಹೇಳಿದಲ್ಲಿ ವಿರೋಧವನಿಸದು ಇದು ಜೈಮಿನ್ಯಾಚಾರ್ಯರ ಮತ

ನಾಗ್ನ್ಯಾದಯಃ ಶಬ್ದಾಃ ಅಗ್ನ್ಯಾದಿವಾಚಕಾಸ್ತಥಾಪಿ ನಾಕ್ಷಾದೇವಾಸನ್ಯ
ಯೋಗೇನ ಬ್ರಹ್ಮವಾಚಕೈಶಬ್ದೈಃ ವ್ಯವಹಾರಾರ್ಥಮನಭಿಜ್ಞಾನಾಚ್ಚ
ಅನ್ಯತ್ರ ವ್ಯವಹರಂತೀ ತ್ಯಭ್ಯುಪಗಮೇಽ ವಿರೋಧಂ ಜೈಮಿನಿರ್ಮಕ್ತಿ ॥

ಯೋಗ್ಯ ವ್ಯಕ್ತಿಭಾವದಿಂದ ಪರಬ್ರಹ್ಮನಲ್ಲಿ ಆ ಶಬ್ದಗಳು ಸಮನ್ವಯಹೊಂದಿದರೂ ಅವುಗಳನ್ನು ಇತರ ದೇವತೆಗಳಲ್ಲಿ ವ್ಯವಹಾರಾರ್ಥಕ್ಕಾಗಿ ಅಮುಖ್ಯವ್ಯಕ್ತಿಯಿಂದ ಜ್ಞಾನಿಗಳೂ ಕೂಡ ಉಪಯೋಗಿಸಿದರೂ ಅದು ವ್ಯವಹಾರಾರ್ಥಕ್ಕಾಗಿ ಬುದ್ಧಿಯಲ್ಲಿ ಸ್ಥಾಪಿತ ಲಕ್ಷಣವೇ ಹೊರ್ತು ಮುಖ್ಯ ವೃತ್ತಿಯಿಂದಲ್ಲ. ಉದಾ. ಅಜಮಿಳನು ತನ್ನ ಅಂತ್ಯ ಕಾಲದಲ್ಲಿ ಉಚ್ಚರಿಸಿದ ನಾರಾಯಣ ಶಬ್ದವು ವ್ಯವಹಾರಾರ್ಥವಾಗಿ ಅವನ ಮಗನ ಹೆಸರಾದರೂ ಮುಖ್ಯವಾಗಿ ಶ್ರೀಮನ್ನಾರಾಯಣನಿಗೆ ಸ್ತೋತ್ರವಾಗಿ ಪರಿಣಮಿಸಲು ಕಾರಣವಾಯಿತು.

17. **ವ್ಯಾಸಚಿತ್ತಸ್ಥಿತಾಕಾಶಾದವಚ್ಛಿನ್ನಾನಿ ಕಾನಿ ಚಿತ್ ಅನ್ಯೇವ್ಯವಹರಂತ್ಯೇತಾನ್ಯೂರೀ ಕೃತ್ಯ ಗೃಹಾದಿವದಿತಿ ಸ್ಕಾಂದವಚನ್ನಾನ್ನ ಮತಾನಾಂ ಪರಸ್ಪರವಿರೋಧಃ ॥**

ಹೀಗಾದರೆ ಜ್ಞಾನಿಗಳ ಮತದಲ್ಲಿ ವಿರೋಧವು ಬರುವುದಿಲ್ಲವೇ ಎಂದರೆ. ಅಲ್ಲ ಸರ್ವಜ್ಞಾನಿಗಳೂ ಜ್ಞಾನಿ ಶ್ರೇಷ್ಟರಾದ ಶ್ರೀ ವೇದವ್ಯಾಸರಿಂದಲ್ಲವೇ ಜ್ಞಾನವನ್ನು ಹೊಂದಿದರು ವ್ಯಾಪ್ತವಾದ ಶ್ರೀವೇದವ್ಯಾಸರ ಜ್ಞಾನಾಕಾಶದಲ್ಲಿ ತಮ್ಮ ತಮ್ಮ ಅಲ್ಪ ಬುದ್ಧಿಗಳಲ್ಲಿ ದೃಢವಾದ ವಿಷಯಗಳನ್ನು ಮಾತ್ರ ತಮ್ಮ ಮತವೆಂದು ನಿರ್ದಿಷ್ಟವಾಗಿ ಹೇಳುವರೇ ಹೊರತು ಜ್ಞಾನಿಗಳ ಮತಗಳಲ್ಲಿ ವ್ಯತ್ಯಾಸವಿಲ್ಲ

## ಸೂ॥ ಓಂ॥ ಅಭಿವ್ಯಕ್ತೇರಿತ್ಯಾಶ್ಮರಥ್ಯಃ ॥ಓಂ॥ 29

ಅಗ್ನ್ಯಾದಿ ದೇವತೆಗಳಲ್ಲಿ ಬ್ರಹ್ಮನನ್ನು ಅಂತರ್ಯಾಮಿತ್ವೇನ ಉಪಾಸನಾ ಮಾಡಿ ಆ ದೇವತೆಗಳಲ್ಲಿ ಬ್ರಹ್ಮ ದರ್ಶನ ಪಡೆಯಲು ಆ ಅಗ್ನ್ಯಾದಿ ಸೂಕ್ತ ನಿಯಮಗಳನ್ನು

ವೇದದಲ್ಲಿ ಹೇಳಿದೆ ಎಂದು ಅಶ್ಮರಥ್ಯಾಚಾರ್ಯರು ತಿಳಿಯುತ್ತಾರ

ತತ್ರತತ್ರ ಪ್ರಸಿದ್ಧಾವವ್ಯಗ್ನ್ಯಾದಿಷು ಬ್ರಹ್ಮಣೋಭಿವ್ಯಕ್ತೇರಗ್ನ್ಯಾದಿ ಸೂಕ್ತ ನಿಯಮ ಇತ್ಯಾಶ್ಮರಥ್ಯಃ ।

ವೇದಗಳಲ್ಲಿ ಅಗ್ನಿಸೂಕ್ತ ವಾಯುಸೂಕ್ತ ಇತ್ಯಾದಿ ದೇವತಾ ನಾಮಗಳಿಂದ ಹೇಳಿರುವ ಸೂಕ್ತಗಳ ನಿಯಮವು ಆ ದೇವತೆಗಳಲ್ಲಿ ನಿಯಮವಾಗಿ ಉಪಾಸನಾ ಮಾಡಿದ ಭಕ್ತರಿಗೆ ಆ ದೇವತೆಗಳ ಅಂತರ್ಯಾಮಿ ರೂಪಗಳ ದರ್ಶನವನ್ನು ಸ್ವೇಚ್ಛೆಯಿಂದ ಶ್ರೀ ಪರಮಾತ್ಮನು ಕೊಡುವುದರಿಂದ ಆ ಆ ಸೂಕ್ತ ನಿಯಮವು ಎಂದು ಅಶ್ಮರಥ್ಯಾಚಾರ್ಯರ ಅಭಿಮತವು

## ಸೂ|| ಓಂ|| ಅನುಸ್ಮೃತೇರ್ಬಾದರಿಃ ಓಂ|| 30

ತತ್ರ ತತ್ರೋಕ್ತಸ್ಯವಿಷ್ಣೋರಗ್ನ್ಯಾದಿಷ್ವನುಸ್ಮರ್ಯಮಾಣತ್ವಾತ್ತನ್ನಿಯಮ ಇತಿ ಬಾದರಿಃ ||

ಶ್ರೀ ವಿಷ್ಣುವಿಗೆ ಅಗ್ನ್ಯಾದಿ ಸೂಕ್ತ ಪ್ರತಿಪಾದ್ಯತ್ವವು ಆದರೂ ಆ ಸೂಕ್ತೋಪಾಸಕರು ಆ ಆ ದೇವತೆಯಲ್ಲಿಯೇ ಅಂತರ್ಯಾಮಿ ಪರಮಾತ್ಮನನ್ನುಪಾಸಿಸಲು ನಿಯಮಕ್ಕಾಗಿ ಆ ಆ ದೇವತಾ ಸೂಕ್ತಗಳೆಂಬ ನಿಯಮವು ಎಂದು ಶುಕ್ಲಾಚಾರ್ಯರು

## ಸೂ|| ಓಂ|| ಸಂಪತ್ತೇರಿತಿ ಜೈಮಿನಿಸ್ತಥಾಹಿ ದರ್ಶಯತಿ

ಜೈಮಿನ್ಯಾಚಾರ್ಯರ ಮತವಾದರೋ ಅಗ್ನ್ಯಾದಿ ಸೂಕ್ತ ಉಪಾಸಕರಿಗೆ ಆ ಆ ದೇವತೆಗಳಲ್ಲಿ ಅನುಸಂಧಾನ ಕಾರಣದಿಂದ ಆ ದೇವತೆಗಳಲ್ಲಿ ಪರಮಾತ್ಮನ ಪ್ರಾಪ್ತಿ ರೂಪ ದರ್ಶನವಾಗುವುದರಿಂದ ಆ ಸೂಕ್ತಿಗಳ ನಿಯಮವು ಎಂದು.

ಸಾಕ್ಷಾದಪ್ಯವಿರೋಧಂವದನ್ ಜೈಮಿನಿಃ ಸೂಕ್ತಾದಿ ನಿಯಮ ಮಗ್ನ್ಯಾದಿ ಸಂಪ್ರಾಪ್ತ್ಯಮನ್ಯತೆ.

ಸಾಕ್ಷಾತ್ತಾಗಿ ಅವಿರೋಧವನ್ನು ಸೂಚಿಸಿಯೂ ಆ ದೇವತೆಗಳಲ್ಲಿ ಪರಮಾತ್ಮನ ಸಂಪ್ರಾಪ್ತಿರೂಪ ನಿಯಮಕ್ಕಾಗಿ ಸೂಕ್ತಗಳ ನಿಯಮವು.

18 **ತಂ ಯಥಾಯಥೋಪಾಸತೇ ತದೇವಭವತೀತಿ ದರ್ಶಯತಿ ।**

ಶ್ರೀ ಪರಮಾತ್ಮನನ್ನು ಯಾವ ಯಾವ ಪ್ರಕಾರವಾಗಿ ಉಪಾಸನೆ ಮಾಡುವರೊ ಆರೀತಿಯಲ್ಲಿ ಆತನ ದರ್ಶನವಾಗುವುದು ಋಗ್ಭಾಷ್ಯದಲ್ಲಿ"ಪೃಥಗ್ರೂಪಾಣಿವಿಷ್ಣೋಸ್ತು ದೇವತಾಂತರಗಾನಿಚ । ಅಗ್ನ್ಯಾದಿ ಶಬ್ದ ವಾಚ್ಯಾನಿ ನಾಮ್ನಾನೂತಾಭಿಧಾಭವೇತ್"ಎಂದು ಅಗ್ನಾದಿ ಶಬ್ದಯೋಗವು ಸೂಕ್ತಕ್ಕೆ ವ್ಯವಸ್ಥಾಪಿಪಯವು

19 **ನಹ್ಯನ್ಯೋಪಾಸಕೋಽನ್ಯಂ ಪ್ರಾಪ್ನುತ ಇತಿಯುಜ್ಯತ ಇತ್ಯತ ಆಹ ॥**

ಒಂದು ವ್ಯಕ್ತಿಯನ್ನು ಉಪಾಸಿಸಲು ಅನ್ಯ ವ್ಯಕ್ತಿಯ ದರ್ಶನವು ಹೊಂದುವುದಿಲ್ಲ.

## ಸೂ॥ ಓಂ ಅಮನಂತಿ ಚೈನಮಸ್ಮಿನ್ ಓಂ॥ 32

ಶ್ರೀ ವಿಷ್ಣುವನ್ನು ಅಗ್ನ್ಯಾದಿ ದೇವತೆಗಳಲ್ಲಿರುವನೆಂದು ಶೃತಿಗಳು ಪ್ರತಿಪಾದನೆ ಮಾಡುವುದರಿಂದ ಮತ್ತು ಅಗ್ನ್ಯಾದಿಗಳಲ್ಲಿ ಅಂತರ್ಯಾಮಿತ್ವೇನ ಇರುವ ಭಗವತ್ಪ್ರಾಪ್ತಿಯಾಗುವುದರಿಂದ ಪ್ರಾಪ್ತಿಯೇ ಇಷ್ಟವಾಗಿವುಳ್ಳದ್ದರಿಂದ ಈ ನಿಯಮವು

20 **ಏನಂ ವಿಷ್ಣುಮಸ್ಮಿನ್ನಗ್ನ್ಯಾದಾವಾಮನಂತಿ ॥**

"ಯೋಗ್ನೌತಿಷ್ಠನ್" (ಬ್ರ-5-7-5) ಯ ಏಷ ಏತಸ್ಮಿನ್ನಗ್ನೌತೇಜೋಮಯೋಽಮೃತಮಯಃ ಪುರುಷಃ (ಬೃ-4-5-3) ಇತ್ಯಾದಿನಾ.

ಈ ಶೃತಿಗಳಲ್ಲಿ ಹಾಗೆ ಹೇಳಿರುವುದು.

– ಇತಿ ವೈಶ್ವಾನರಾಧಿಕರಣವು –

ಪ್ರಥಮಾಧ್ಯಾಯದ ದ್ವಿತೀಯ ಪಾದದ ಮುಕ್ತಾಯವು

ಶ್ರೀ ಕೃಷ್ಣಾರ್ಪಣಮಸ್ತು

## – ದ್ಯುಭ್ವಾದ್ಯಧಿಕರಣಂ –

1. ತತ್ರ ಚಾನ್ಯತ್ರ ಚ ಪ್ರಸಿದ್ಧಾನಾಂ ಶಬ್ದಾನಾಂ ವಿಷ್ಣೌ ಸಮನ್ವಯಂ ಪ್ರಾಯೇಣಾಸ್ಮಿನ್ಪಾದೇ ದರ್ಶಯತಿ । ವಿಷ್ಣೋಃ ಪರವಿದಾ ವಿಷಯತ್ವಮುಕ್ತಂ ॥

ಈ ಪಾದದಲ್ಲಿ ಶ್ರೀ ಹರಿಯಲ್ಲಿಯೂ ರುದ್ರ ಪ್ರಕೃತ್ಯಾದಿಗಳಲ್ಲಿಯೂ ಶ್ರುತಿ ಲಿಂಗಾದಿಗಳಿಂದ ಪ್ರಸಿದ್ಧವಾದ ನಾಮಲಿಂಗಾತ್ಮಕ ಶಬ್ದಗಳನ್ನು ಪರಮ ಮುಖ್ಯ ವೃತ್ತಿಯಿಂದ ಶ್ರೀ ವಿಷ್ಣುವಿನಲ್ಲಿ ಸಮನ್ವಯ ಮಾಡಲ್ಪಡುವುದು (ತಾತ್ಪರ್ಯ ಪ್ರಬಲ ಕಾರಣದ್ವಾರಾ

2. ಅದೃಶ್ಯತ್ವಾದಿ ಗುಣಗಳಿಂದ ಅಕ್ಷರ ಶಬ್ದ ವಾಚ್ಯ ಶ್ರೀ ವಿಷ್ಣುವಿಗೆ ಪರ ವಿದ್ಯಾ ವಿಷಯತ್ವವು ಹೇಳಿದೆ ಈ ಅಥರ್ವಣ ಶ್ರುತಿಯಲ್ಲಿ ಪರವಿದ್ಯಾ ವಿಷಯತ್ವವನ್ನು ಹೇಳುವಲ್ಲಿ

ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋ ತಂಮನಃ ಸಹ ಪ್ರಾಣೈಶ್ಚಸರ್ವೈಃ
ತಮೇವೈಕಂಜಾನಥ ಆತ್ಮಾನಮನ್ಯಾ ವಾಚೊ ವಿಮುಂಚಥ (ಮು. 2–2-4)

"ಅಮೃತಸ್ಯೈಷಸೇತುಃ" ಎಂಬ ವಾಕ್ಯದಲ್ಲಿ ಪ್ರಾಣಧಾರಣತ್ವ ಸಹಿತ ರುದ್ರ ಜೀವರು ಭೂಮಿ ಆಕಾಶಗಳ ಸ್ವಾಮಿತ್ವವನ್ನು ಹೇಳಿದೆಯಾಗಿ ಸಂಶಯವು.

ಪ್ರಾಣಾನಾಂ ಗ್ರಂಥಿರಸಿ ರುದ್ರೋಮಾ ವಿಶಾಂತಕಃ (ಮಹಾನಾಮ್ನಿ–35) ತೇನಾನ್ನೇನಾಪ್ಯಾಯಸ್ವ" ಮತ್ತು ಪ್ರಾಣೇಶ್ವರಃ ಕೃತ್ತಿವಾಸಾಃ ಪಿನಾಕೀ (ಭೃತಸೂ) ಇತ್ಯಾದಿನಾ ರುದ್ರಸ್ಯ ಪ್ರಾಣಾಧಾರತ್ವ ಪ್ರತೀತೇಃ ಈ ವಾಕ್ಯಗಳು ಪ್ರಾಣಾಧಾರತ್ವವನ್ನು ರುದ್ರನಲ್ಲಿ ಹೇಳುತ್ತವೆ.

ಸ ಏಷೋಂತಶ್ಚರತಿ ಬಹುಧಾ ಜಾಯಮಾನಃ (ಮು 2-2-6) ಇತಿ ಜೀವಲಿಂಗಾ ಚ್ಚೇತಯೋಃ ಪ್ರಾಪ್ತಿಃ ಹೀಗೆ ಜೀವರ ಧರ್ಮದಿಂದ ಜೀವರು ಹೇಳಲ್ಪಡುತ್ತಾರೆ

ಶೃತ್ಯರ್ಥವು ಮೋಕ್ಷ ಜನಕ ಜ್ಞಾನ ವಿದ್ಯಾವಿಷಯತ್ವ ರೂಪ ಪರ ವಿದ್ಯಾ ವಿಷ ಯತ್ವವನ್ನು ರುದ್ರ ಮತ್ತು ಜೀವರಲ್ಲಿ ಪ್ರಾಧಾನ್ಯವಾಗಿ ಹೇಳಿ "ತಮೇವಂ" "ಅಮೃತ ಸ್ಯಷ ನೇತುಃ ಎಂದಿದೆ ಆದ್ದರಿಂದ ಅದೃಶ್ಯತ್ವಾಧಿಕರಣದಲ್ಲಿ ಹೇಳಿದ ವಿಷ್ಣು ವಲ್ಲವೆಂಬ ಸಂಶಯವು ಯಾವ ಪುರುಷನು, ಮನಸ್ಸು ಇಂದ್ರಿಯಗಳು ತದಭಿಮಾನಿ ದೇವತೆಗಳೂ ಇವರುಗಳ ಜತೆಯಿಂದ ಒಳಹೊಕ್ಕು ವ್ಯಾಪಾರ ಮಾಡುವನೋ ಆ ಪರ ಮಾತ್ಮನನ್ನು ಪ್ರಧಾನವಾಗಿ ತಿಳಿಯಿರಿ ಆತನೇ ಮೋಕ್ಷದಾತನು ಎಂದು ಶೃತ್ಯರ್ಥವು. ಹೇ ರುದ್ರನೇ ನೀನು ಇಂದ್ರಿಯಗಳಿಗೆ ಆಶ್ರಯನು ಸಂಹಾರಕನೂ ಕೂಡ ನೀನು ನನ್ನಲ್ಲಿ ಸನ್ನಿಹಿತನಾಗಿ ಅಂತಕನಾಗಿ ಪ್ರವೇಶಿಸಬೇಡ. ಈ ಆಹುತಿ ರೂಪ ಅನ್ನದಿಂದ ನನ್ನನ್ನು ಸುಖಪಡಿಸು ಎಂದು.

ಹೀಗೆ ರುದ್ರದೇವರು ಇತರ ಜೀವರುಗಳೂ ದುಭ್ವಾದ್ಯಾಯತನರು

3 ಅತ ಉಚ್ಯತೆ

## ಸೂ|| ಓಂ|| ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ||ಓಂ||

"ಯಸ್ಮಿನ್" ಎಂಬ ವಾಕ್ಯದಲ್ಲಿ ಹೇಳುವ ಸ್ವರ್ಗ ಭೂಮ್ಯಾದಿ ಸರ್ವ ಜಗ ತ್ತಿಗೂ ಆಶ್ರಯನು ಶ್ರೀವಿಷ್ಣುವೇ ಅನ್ಯರಲ್ಲ ಏಕೆಂದರೆ ಸ್ವಶಬ್ದದಿಂದ ಸೂಚಿಸಲ್ಪ ಡುವ ಆತ್ಮ ಶಬ್ದವು ಪರಬ್ರಹ್ಮನನ್ನೆ ಮುಖ್ಯವಾಗಿ ಹೇಳುವುದರಿಂದ ಶ್ರೀ ವಿಷ್ಣುವಿಗೇ ದ್ಯುಭ್ವಾದ್ಯಾಯತನತ್ವವು ಶ್ರೀವಿಷ್ಣುವಿಗಿಂತ ಅನ್ಯದೇವತೆಗಳಿಗೆ ಅಂದರೆ ಬ್ರಹ್ಮಾದಿ ಪ್ರಮುಖ ಜೀವ ಸಮುದಾಯಗಳೂ ಗುಣ ಪೂರ್ಣರಲ್ಲವಾದ್ದರಿಂದ ಮುಖ್ಯವಾಗಿ ಆತ್ಮ ಶಬ್ದ ವಾಚ್ಯರಲ್ಲ

ತಮೇವೈಕಂ ಜಾನಥ ಆತ್ಮಾನಂ (ಮು 2-2-5) ಇತ್ಯಾತ್ಮ ಶಬ್ದಾತ್ ದ್ಯುಭ್ವಾ ದ್ಯಾಶ್ರಯೋ ವಿಷ್ಣುರೇವ.

ಆತ್ಮ ಶಬ್ದ ಮುಖ್ಯವಾಚ್ಯನಾದ ಶ್ರೀ ವಿಷ್ಣುವನ್ನೇ ಮುಖ್ಯವಾಗಿ ತಿಳಿಯಿರಿ.

"ಆತ್ಮಾಬ್ರಹ್ಮಾದಯಃ ಶಬ್ದಾಸ್ತಮೃತೆ ವಿಷ್ಣುಮವ್ಯಯಂ ।

ನ ಸಂಭವಂತಿಯಸ್ಮಾತ್ತ್ರೈ ಸ್ನೇವಾಪ್ತಾಗುಣಪೂರ್ಣತಾ॥ ಇತಿ ಬ್ರಹ್ಮ ವೈವರ್ತ್ಯೆ ಬ್ರಹ್ಮ ವೈವರ್ತಪಲ್ಲಿ ಹೇಳಿದೆ

ಆತ್ಮಾ ಬ್ರಹ್ಮ ಮುಂತಾದ ಗುಣ ಪೂರ್ಣತ್ವ ವಾಚಕ ಶಬ್ದಗಳು ನಾಶರಹಿತ ನಾದ ಶ್ರೀವಿಷ್ಣುವನ್ನಲ್ಲದೆ ಮತ್ಯಾವ ದೇವತೆಯನ್ನೂ ಹೊಂದುವುದಿಲ್ಲ. ಆತನೇ ಗುಣಪೂರ್ಣನು ಅನ್ಯರಲ್ಲ.

## ಸೂ॥ ಓಂ॥ ಮುಕ್ತೋಪಸೃಪ್ಯವ್ಯಪದೇಶಾತ್ ॥ಓಂ॥ 2

ದ್ಯುಭ್ವಾದ್ಯಾಯತನತ್ವ ಧರ್ಮವುಳ್ಳ. ವಸ್ತು ಶ್ರೀವಿಷ್ಣುವೇ ಬೇರೆಯಾವ ದೇವ ತೆಯೂ ಅಲ್ಲ ಈ ಧರ್ಮ ಮುಖ್ಯವಾಗಿರುವ ವಸ್ತುವಿನಲ್ಲಿ ಮೋಕ್ಷಕ್ಕೂ ಆಶ್ರಯನು ಎಂಬ ಮತ್ತೊಂದು ಮುಖ್ಯಧರ್ಮವನ್ನು ಹೇಳಿರುವುದರಿಂದ ಆ ಮೋಕ್ಷಕ್ಕ ಮುಖ್ಯಾ ಶ್ರಯನು ಶ್ರೀ ವಿಷ್ಣುವೆ.

"ಅಮೃತಸ್ಯೈಷಸೇತುಃ (ಮು. 2-2-5) ಇತಿ ಈತನೇ ಮೋಕ್ಷಕ್ಕೆ ಆಶ್ರಯನು ಮತ್ತು ಮುಕ್ತರಿಗೂ ಆಶ್ರಯನು.

5. **ಬ್ರಹ್ಮವಿದಾಪ್ನೋತಿಪರಂ।** (ತೈ 2-1) **ನಾರಾಯಣಂ ಮಹಾ ಜ್ಞೇಯಂ ವಿಶ್ವಾತ್ಮಾನಂ ಪರಾಯಣಂ"** (ಮಹನಾ-11) **ಮುಕ್ತಾನಾಂ ಪರಮಾಗತಿಃ ॥ "ಏತಮಾನಂದಮಯ ಮಾತ್ಮಾನಮುಪ ಸಂಕ್ರಾಮತೀತ್ಯಾದಿನಾ ತಸ್ಯೈವ ಮುಕ್ತಪ್ರಾಪ್ಯತ್ವವ್ಯಪ ದೇಶಾತ್**

1. ಬ್ರಹ್ಮಜ್ಞಾನಿಯು ಮುಕ್ತನಾಗಿ ಶ್ರೀ ವಿಷ್ಣುವನ್ನು ಹೊಂದುತ್ತಾನೆ.
2. ಜಗತ್ತಿಗೆ ಶ್ರೇಷ್ಠ ಪೂಜ್ಯ ಮುಕ್ತ ಜೀವರುಗಳಿಗೆ ಆಶ್ರಯನೂ ನಾರಾ ಯಣ ಶಬ್ದ ವಾಚ್ಯ ಶ್ರೀವಿಷ್ಣುವೇ.

3 ಮುಕ್ತ ಜೀವರಿಂದ ಮುಖ್ಯವಾಗಿ ಹೊಂದಲ್ಪಡುವವನೂ ಈತನೇ ಆನಂದಮಯನು. ಹೀಗೆ ಶ್ರೀವಿಷ್ಣುವೇ ಮುಕ್ತಜೀವರುಗಳಿಂದ ಪ್ರಾಪ್ಯನು. ಅನ್ಯ ದೇವತೆಗಳು ಯಾಕೆ ಆಗಲಾರರು ಎಂಬ ಶಂಕೆಗೆ ಉತ್ತರವು ಆದಿತ್ಯ ಪುರಾಣೋಕ್ತ ವಾಕ್ಯವು.

**ಹುನಾತ್ರಕಿಮುಕ್ತೀನ ಯಾವತ್ ಶ್ವೇತಂ ನಗಚ್ಛತಿ ।**
**ಯೋಗೀತಾವನ್ನ ಮುಕ್ತಸ್ಯಾದೇಷಶಾಸ್ತ್ರ ವಿನಿರ್ಣಯಃ ॥**

ಎಲ್ಲಿಯವರೆಗೆ ಶ್ವೇತ ದ್ವೀಪವನ್ನು ಹೊಂದಿ ಅಲ್ಲಿರುವ ಶ್ರೀವಿಷ್ಣುವನ್ನು ದರ್ಶನ ಮಾಡಿ ಅವನು ದಯಪಾಲಿಸುವ ಆತ್ಯಂತಿಕ ಸುಖನನ್ನು ಅನುಭವಿಸುವುದಿಲ್ಲವೋ ಅಲ್ಲಿಯವರೆಗೂ ಆ ಜೀವನು ಮುಕ್ತನೆಂದು ಹೇಳಲ್ಪಡುವುದಿಲ್ಲ ಇದು ಬಹು ಶಾಸ್ತ್ರಗಳ ಮಥಿತಾರ್ಥವು ಭಗವಂತನ ಇಚ್ಛಾರೂಪ ಆವರಣಗಳಿಂದ ಮುಕ್ತನಾಗಿ ಲಿಂಗ ಭಂಗವನ್ನು ಹೊಂದಿ ಶ್ವೇತದ್ವೀಪದಲ್ಲ ಶ್ರೀ ವಿಷ್ಣುವನ್ನು ನೇರುವುದೇ "ಮುಕ್ತಿ" ಎಂದು ಉಕ್ತಿಯು

## ಸೂ|| ಓಂ|| ನಾನುಮಾನಮತಚ್ಛಬ್ದಾತ್ ||ಓಂ|| 3

7 **ನಾನು ಮಾನಾತ್ಮಕಾಗಮ ಪರಿಕಲ್ಪಿತ ರುದ್ರೋ ಽತ್ರವಾಚ್ಯಃ||**
**ಭಸ್ಮಧರೋಗ್ರತ್ವಾದಿ ತಚ್ಛಬ್ದಾಭಾವಾತ್||**

ಅನುಮಾನ ಕಲ್ಪಿತವಾದ ಪಾಶುಪತಾದಿ ಆಗಮಗಳಿಂದ ಸರ್ವಾಶ್ರಯತ್ವರೆಂದು ಹೇಳಲ್ಪಡುವ ರುದ್ರಪ್ರಧಾನಾದಿಗಳು ದ್ಯುಬ್ವಾಧ್ಯಾಯತನರಲ್ಲ ಆತನ ಮುಖ್ಯ ಧರ್ಮ ಬೋಧಕ ಭಸ್ಮಧರ ಉಗ್ರತ್ವಾದಿ ಧರ್ಮಗಳು ಹೇಳಲ್ಪಡಲಿಲ್ಲವಾಗಿ ರುದ್ರ ದೇವರು ಅಲ್ಲ ರುದ್ರಪದವು ಪ್ರಧಾನಾದಿಗಳ ಉಪಲಕ್ಷಕವು

8. **ಸೋಂತಕಃ ಸರುದ್ರಃ ಸಪ್ರಾಣಭೃತ್ಸಪ್ರಾಣನಾಯಕಃ ಸ್ಯ ಈಶೋ ಯೋಹರಿರ್ಯೋನಂತೋ ಯೋವಿಷ್ಣುರ್ಯಃ ಪರಃ ಪರೋವರೀಯಾನಿತ್ಯಾದಿನಾ ಪ್ರಾಣಗ್ರಂಥಿರುದ್ರತ್ವಾದೇ ರ್ವಿಷ್ಣೋರೇವೋಕ್ತತ್ವಾತ್ ॥**

ಪ್ರಾಣಗ್ರಂಥಿ, ಉಗ್ರತ್ವಾದಿ ಶಬ್ದಗಳು ವಿಷ್ಣುವಾಚಕಗಳೇ-ಯಾವಾತನು

ಸರ್ವ ಸಂಹರ್ತನೋ ಅಂತಕ ಶಬ್ದ ವಾಚ್ಯನೋ ಅವನು ವಿಷ್ಣುವೇ ರುದ್ರ ಶಬ್ದವಾಚ್ಯನೂ ಆತನೇ. ಪ್ರಾಣಾಧಾರತ್ವ ಪ್ರಾಣಗ್ರಂಥಿ ವಾಚ್ಯನೂ ಅವನೇ ಪ್ರಾಣ ಸ್ವಾಮಿಯು ವಿಷ್ಣುವೇ, ಈತನು, ಆತನೂ ಪರೋವರೀಯಾನ್ ಎಂದು ಸರ್ವ ಶ್ರೇಷ್ಠನೂ ಆತನೇ ಬೇರೆ ಯಾರು ಮುಖ್ಯವಾಗಿ ಇಲ್ಲ ಈ ಶಬ್ದಗಳೆಲ್ಲವೂ ಮುಖ್ಯ ವೃತ್ತಿಯಿಂದ ಪರಮಾತ್ಮನ ಧರ್ಮ ಬೋಧಕಗಳು ಅನ್ಯರಲ್ಲಿ ಅಮುಖ್ಯವಾದವು.

9 ಬ್ರಹ್ಮಾಂಡ ಪುರಾಣ ವಾಕ್ಯವು

ರುಜಂ ದ್ರಾವಯತೆ ಯಸ್ಮಾದ್ರುದ್ರಸ್ತಸ್ಮಾಜ್ಜನಾರ್ದನಃ ।
ಈಶಾನಾದೇವ ಚೇಶಾನೋ ಮಹಾದೇವೋ ಮಹತ್ವತಃ ।
ಪಿಬಂತಿ ಯೇ ನರಾ ನಾಕಂ ಮುಕ್ತಾಸ್ಸಂಸಾರಸಾಗರಾತ್ ।
ತದಾಧಾರೋ ಯತೋ ವಿಷ್ಣುಃ ಪಿನಾಕೀತಿ ತತಃಸ್ಮೃತಃ ।
ಶಿವಃ ಸುಖಾತ್ಮಕತ್ವೇನ ಶರ್ವಃ ಶಂರೋಧನಾದ್ಧರಿಃ ।
ಕೃತ್ತ್ಯಾತ್ಮಕಮಿದಂ ದೇಹಂ ಯತೋವಸ್ತೇ ಪ್ರವರ್ತಯನ್ ।
ಕೃತ್ತಿವಾಸಾಸ್ತತೋ ದೇವೋ ವಿರಿಂಚಶ್ಚವಿರೇಚನಾತ್ ।
ಬೃಂಹಣಾದ್ಬ್ರಹ್ಮನಾಮಾ ಸೌ, ಐಶ್ವರ್ಯಾದಿಂದ್ರ ಉಚ್ಯತೆ ॥

ರೋಗಗಳ ಉತ್ಪತ್ತ್ಯಾದಿ ನಿವಾರಣದಿಂದ ರುದ್ರನೆಂದು ಕರೆಯಲ್ಪಡುವವನು ಜನಾರ್ದನನೇ ಬ್ರಹ್ಮಾದಿದೇವತೆಗಳಲ್ಲಿ ಜೇಷ್ಟಕನಾದ್ದರಿಂದ ಈಶಾನನು ಮಹಾಮಹಿಮನಾದ್ದರಿಂದ ಮಹಾದೇವನು ಸಂಸಾರದಿಂದ ಮುಕ್ತರಾಗಿ ಪರಮ ಸುಖವನ್ನು ಹೊಂದುವ 'ಪಿನಾಃ'ಗಳಿಗೆ ಆಧಾರನಾಗಿ 'ಪಿನಾಕಿ'ಯು ಜೀವರಿಗೆ ಮುಕ್ತಿ ಪರ್ಯಂತ ಸ್ವರೂಪ ಭೂತ ಸುಖವನ್ನು ತಡೆಹಿಡಿಯುವುದರಿಂದ ಶರ್ವನು ಕೃತ್ತ್ಯಾತ್ಮಕವಾದ ಈ ಶರೀರವನ್ನು ಸೃಷ್ಟಿಸಿ, ಪ್ರವರ್ತಿಸಿ ವಾಸಿಸುವವನಾದ್ದರಿಂದ 'ಕೃತ್ತಿವಾಸ'ನು (ಜೀವಾಂತರ್ಯಾಮಿ) ಜಗತ್ತನ್ನು ಪ್ರೇರಿಸಿ ಬೆಳೆಸುವುದರಿಂದ 'ಬ್ರಹ್ಮ'ನು ಪರಮೈಶ್ವರ್ಯವುಳ್ಳವನಾದ್ದರಿಂದ ಇಂದ್ರನೂ ಶ್ರೀ ವಿಷ್ಣುವೇ

**10. ಏವಂ ನಾನಾವಿಧೈಃ ಶಬ್ದೈಃ ಏಕ ಏವ ತ್ರಿವಿಕ್ರಮಃ ।**
**ವೇದೇಷು ಸ ಪುರಾಣೇಷು ಗೀಯತೇ ಪುರುಷೋತ್ತಮಃ ।** ಇತಿ

ಹೀಗೆ ಮೇಲೆ ಹೇಳಿದ ವಿವಿಧ ವ್ಯವಹಾರಿಕ ಧರ್ಮವಾಚಕಗಳಾದ ಶಬ್ದರಾಶಿ

ಗಳಿಂದ ಸರ್ವಗುಣ ಸಂಪೂರ್ಣ ಸರ್ವವ್ಯಾಪಿ, ಶ್ರೀ ತ್ರಿವಿಕ್ರಮಾವತಾರಿ ಶ್ರೀ ವಿಷ್ಣುವು ವೇದಪುರಾಣಾದಿಗಳಲ್ಲಿ ಪುರುಷೋತ್ತಮನೆಂದು ಹೇಳಲ್ಪಟ್ಟಿದ್ದಾನೆ

11. ವಾಮನೇ ಚ

ನತು ನಾರಾಯಣಾದೀನಾಂ ನಾಮ್ನಾ ಮನ್ಯತ್ರ ಸಂಭವಃ ।
ಅನ್ಯ ನಾಮ್ನಾಂ ಗತಿರ್ವಿಷ್ಣುಃ ಏಕ ಏವ ಪ್ರಕೀರ್ತಿತಃ । ಇತಿ

'ರುದ್ರೋ ಮಾ ವಿಶಾಂತಕಃ' ಎಂಬ ವಾಕ್ಯಗಳು ನಿರ್ಣಯಗಳಲ್ಲವೆಂಬ ಸಂಶಯಕ್ಕೆ ವಾಮನ ಪುರಾಣ ವಾಕ್ಯವು ನಾರಾಯಣಾದಿ ಶಬ್ದಗಳು ಅನ್ಯದೇವತೆಗಳಲ್ಲಿ ಹೊಂದವು ರುದ್ರಾದಿ ಶಬ್ದಗಳು ವಿಷ್ಣುವಿನ ವಿನಹ ಅನ್ಯರಲ್ಲಿ ಮುಖ್ಯವಲ್ಲ. ಶ್ರೀ ವಿಷ್ಣುವೇ ಮುಖ್ಯ ವಾಚ್ಯನು (ಸರ್ವಶಬ್ದ ರಾಶಿಗೂ)

12. ಸ್ಕಾಂದ ಪುರಾಣವು

ರುತೇನಾರಾಯಣಾದೀನಿ ನಾಮಾನಿ ಪುರುಷೋತ್ತಮಃ ।
ಪ್ರಾದಾದನ್ಯತ್ರ ಭಗವಾನ್ ರಾಜೇವರ್ತೇ ಸ್ವಕಂಪುರಂ ।

ನಾರಾಯಣಾದಿ ನಾಮಗಳನ್ನು ಬಿಟ್ಟು ಮಿಕ್ಕ ನಾಮಗಳನ್ನು ಮಾತ್ರ ಇತರರಲ್ಲಿ ವ್ಯವಹಾರೋಪಯೋಗಕ್ಕಾಗಿ ಪುರುಷೋತ್ತಮನಾದ ಭಗವಂತನು ಕೊಟ್ಟಿರುವನು. ರಾಜನಾದವನು ತನ್ನ ಪಟ್ಟಣವನ್ನು ಮಾತ್ರ ಬಿಟ್ಟು ಮಿಕ್ಕವುಗಳನ್ನು ತನ್ನ ಸಾಮಂತರ ಆಳ್ವಿಕೆಗೆ ಒಪ್ಪಿಸಿ ತಾನು ವಾಸವಾಗಿರುವ ಪಟ್ಟಣವನ್ನು ತಾನೇ ಸ್ವತಃ ಆಳುವಂತೆ ಎಂದು ದೃಷ್ಟಾಂತವು

13 ಬ್ರಹ್ಮ ಪುರಾಣದಲ್ಲಿ

ಚತುರ್ಮುಖಶ್ಶತಾನಂದೋ ಬ್ರಹ್ಮಣಃ ಪದ್ಮಭೂರಿತಿ ।
ಉಗ್ರೋ ಭಸ್ಮಧರೋ ನಗ್ನಃ ಕಾಪಾಲೀಚ ಶಿವಸ್ಯಚ ।
ವಿಶೇಷನಾಮಾನಿದದೌ ಸ್ವಕೀಯಾನ್ಯಪಿ ಕೇಶವಃ ॥

ಸರ್ವನಾಮಗಳೂ ಸ್ವವಾಚಕಗಳಾದಾಗ್ಯೂ ಪರಮಾತ್ಮನು ಮಿಕ್ಕದೇವತೆಗಳಿಗೆ ವಿಶೇಷವಾಗಿ ಕೆಲವು ನಾಮಗಳ ವಾಚಕತ್ವವನ್ನು ಕೊಟ್ಟಿರುವನು ಬ್ರಹ್ಮದೇವರಿಗೆ,

ಚತುರ್ಮುಖ, ಶತಾನಂದ, ಪದ್ಮೋದ್ಭವ, ಮತ್ತು ರುದ್ರದೇವರಿಗೆ ಉಗ್ರ,ಭಸ್ಮಧರ, ಕಪಾಲಿ, ಶಿವ, ಎಂಬ ನಾಮಗಳು.

## ಸೂ|| ಓಂ|| ಪ್ರಾಣಭೃಚ್ಚ ||ಓಂ|| 4

ಈ ಹಿಂದಿನ ಕಾರಣಗಳಿಂದಲೇ ಜೀವರುಗಳೂ ಕೂಡ ದ್ಯುಭ್ವಾದ್ಯಾಯತನರಲ್ಲ.

ಏತೈರೇವ ಹೇತುಭಿಃ ನ ಜೀವೋ ವಾಯುಶ್ಚ

ಹಿಂದಿನ ಪ್ರಮಾಣಗಳಿಂದಲೇ ಜೀವರುಗಳು ಮತ್ತು ವಾಯುದೇವತೆಯು ಮೇಲಿನ ಧರ್ಮವುಳ್ಳವರಲ್ಲ.

15. ಅಜಾಯ ಮಾನೋ ಬಹುಧಾವಿಜಾಯತೇ (ತೈ -3-1)
ಇತಿ ತಸ್ಯೈವ ಬಹುಧಾ ಜನ್ಮೋಕ್ತೇಃ ||

ಬಹು ಜನ್ಮಪ್ರಾಪ್ತಿ ಜೀವ ಧರ್ಮವಾದರೂ ಶ್ರೀವಿಷ್ಣುವಿಗೆ ಪ್ರಕೃತಿ ದೇಹದಿಂದ ಜನ್ಮವಿಲ್ಲ, ರಾಮಕೃಷ್ಣಾದಿ ರೂಪದಿಂದ ವಿಶೇಷವಾಗಿ ಪ್ರಾದುರ್ಭಾವವಾಗುವದು. ಮತ್ತು ಪುರುಷ ಸೂಕ್ತದಲ್ಲಿ ಬ್ರಹ್ಮಜನ್ಮ ಸಂಭವವು ಹೇಳಿದೆ.

## ಸೂ|| ಓಂ|| ಭೇದವ್ಯಪದೇಶಾತ್ ಓಂ|| 5

ಜೀವ ಬ್ರಹ್ಮರಿಗೆ ಐಕ್ಯವನ್ನು ಹೇಳಕೂಡದು. ಮೇಲಿನ ಭೇದ ಶ್ರುತಿಯಲ್ಲಿ ಪಶ್ಯತಿ ಎಂಬ ಕರ್ಮದಿಂದ ಜೀವನಿಗೆ ಈಶ್ವರನಿಂದ ಭೇದವೇ ಹೇಳಿದೆ ಶ್ರೀ ವಿಷ್ಣುವೇ ಮುಕ್ತಾಶ್ರಯನು.

## ಸೂ|| ಓಂ|| ಪ್ರಕರಣಾತ್ ||ಓಂ|| 6

"ದ್ವೇವಿದ್ಯೇವೇದಿತವ್ಯೇ" (ಮು. 1-1-4) ಇತಿ ತಸ್ಯಹ್ಯೇತತ್ಪ್ರಕರಣಂ ||

ಪ್ರಕರಣ ಬಲದಿಂದಲೂ ಶ್ರೀ ವಿಷ್ಣುವೇ ವಾಚ್ಯನು. "ಜುಷ್ಟಂ" ವಾಕ್ಯ

ಜಾಲವು ಪರವಿದ್ಯಾ ವಿಷಯದಲ್ಲಿ ಪರಮಾತ್ಮನ ಪ್ರಕರಣ ಬಲದಿಂದ "ಅನಶ್ನನ್ನನ್ಯೋ ಎಂಬ ಶೃತಿಯು ಜೀವ ಪರಮಾತ್ಮ ಭೇದವನ್ನೇ ತೋರಿಸುತ್ತದೆ.

## ಸೂ|| ಓಂ|| ಸ್ಥಿತ್ಯದನಾಭ್ಯಾಂಚ ಓಂ|| 7

ದ್ವಾಸುಪರ್ಣಾ ಸಯುಜಾಸಖಾಯಾಸಮಾನಂ ವೃಕ್ಷಂ ಪರಿಷಸ್ವಜಾತೇ ।
ಇತಿ ಈಶ ಜೀವಯೋಃ ಸ್ಥಿತ್ಯದ ನೋಕ್ತೇಃ (ಮು 3-1-1)

ಸಂಯುಕ್ತರಾಗಿ ಉಪಕಾರ್ಯ ಉಪಕಾರಕ ಭಾವದಿಂದ ಪರಸ್ಪರಾಪರಿಹಾರತ್ವ ದಿಂದ ಇರುವ ಸ್ನೇಹಿತರಿಬ್ಬರು ಪ್ರೀತಿಯಿಂದ ಪರಮಾನಂದ ರೂಪವುಳ್ಳ ಜೀವೇಶ್ವರರು ಗಳು ಸಮನಾಗಿ ಬಂದು ವೃಕ್ಷಾಖ್ಯ ದೇಹವನ್ನು ಆಶ್ರಯಿಸುವರು ಅವರುಗಳ ಮಧ್ಯ ಷಲ್ಲಿ ಈಶ್ವರನಿಂದ ಅತ್ಯಂತ ಭಿನ್ನ ಜೀವನು ದೇಹಜನಿತ ಕರ್ಮಫಲವನ್ನು ಸುಖವಲ್ಲ ದಿದ್ದರೂ ಸುಖವೆಂದೇ ಅನುಭವಿಸುವನು. ಇವನಿಂದ ಅತ್ಯಂತ ಭಿನ್ನನಾದ ಈಶ್ವರ ನಾದರೊ ಜೀವನಿಂದ ಅನುಭವಿಸಲು ಯೋಗ್ಯವಾದ ಕೇವಲ ಚಿತ್ಸುಖವನ್ನು ಅನು ಭವಿಸುತ್ತಾ ಪ್ರಕಾಶಕನಾಗಿರುತ್ತಾನೆ ಹೀಗೆ ಹೇಳಿರುವುದರಿಂದ ದ್ಯುಭ್ವಾದ್ಯಾಯತನನು ಶ್ರೀ ವಿಷ್ಣುವೇ ಜೀವರಿಗಿಂತ ಅತ್ಯಂತ ಭಿನ್ನನು.

– ಇತಿ ದ್ಯುಭ್ವಾದ್ಯಧಿಕರಣವು –

ಈ ಅಧಿಕರಣದಲ್ಲಿ "ಭೂಮಾ" ಎಂಬ ನಾಮಧೇಯವು ಶ್ರೀ ವಿಷ್ಣುವಿನಲ್ಲಿಯೇ ಸಮನ್ವಯ ಮಾಡಲ್ಪಡುವುದು ಪೂರ್ಣತ್ವವು ಎಂದರೆ ಗುಣತಃ ಉತ್ತಮತ್ವವು ಸುಖವುಳ್ಳ ಶ್ರೀ ಪರಮಾತ್ಮನೇ ಭೂಮಶಬ್ದವಾಚ್ಯನು

**1. ಪ್ರಾಣೋವಾ ಆಶಾಯಾ ಭೂಯಾನ್ ಇತ್ಯುಕ್ತ್ವಾಃ ಯೋವೈಃ (ಛಾ 7-23) ಇತ್ಯುಕ್ತೇಸ್ತಸ್ಯೈವ ಭೂಮತ್ವಪ್ರಾಪ್ತಿಃ ||**

ಮೇಲಿನ ಶೃತಿಯಲ್ಲಿ ಪ್ರಾಣಶಬ್ದವು ಪೂರ್ವಪಕ್ಷದ ರೀತ್ಯಾ ವಾಯು ಪರವು ಸಿದ್ಧಾಂತ ರೀತ್ಯಾ ಶ್ರೀವಿಷ್ಣುಪರವು ವಾಯು ಪರವೂ ಕೂಡ ಶ್ರುತ್ಯರ್ಥವು ಪ್ರಾಣನು ಭಾರತೀ ದೇವಿಗಿಂತ ಗುಣದಲ್ಲಿ ಶ್ರೇಷ್ಠನು ತದಂತರ್ಗತ ಶ್ರೀ ವಿಷ್ಣುವು ಭಾರತಿದೇವಿಗಿಂತ ಶ್ರೇಷ್ಠನೇ ಪೂರ್ವಪಕ್ಷ ಪ್ರಾಣಶಬ್ದದಿಂದ ಉಪಕ್ರಮವಾಗಿರುವುದರಿಂದ ಪೂರ್ಣಾನಂದರೂಪ ಪೂರ್ಣತ್ವವು ಶ್ರೀ ವಿಷ್ಣುವೇ ಆದ್ದರಿಂದ ಆಕ್ಷೇಪವು "ಯೋವೈ ಭೂಮಾತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವಸುಖಂ" ಎಂಬವಾಕ್ಯದಲ್ಲಿ ಭೂಮ ಶಬ್ದಕ್ಕೆ ಪೂರ್ಣಸುಖತ್ವವು ಹೇಳಿದೆ. ಅನನ್ಯಾಧೀನ ಪೂರ್ಣನಂದ ಸುಖವು ಶ್ರೀ ವಿಷ್ಣುವಿನಲ್ಲಿಯೇ ಆತನೇ ಪ್ರಾಣಾಂತರಯಾಮಿ ನಾರಾಯಣನು ಅಪೂರ್ಣನಾದ ವಾಯು ದೇವರಲ್ಲಿ ಪರಮಾತ್ಮನ ಅನುಗ್ರಹವಿಲ್ಲದೆ ಸುಖವಿಲ್ಲವಾದ್ದರಿಂದ ಪ್ರಾಣಶಬ್ಧ ವಾಚ್ಯನು ಮುಖ್ಯವಾಗಿ ಶ್ರೀ ವಿಷ್ಣುವೆ. ಆತನೇ "ಭೂಮ"ವಾಚ್ಯನು ಕೂಡ

**2. ಉತ್ಕ್ರಾಂತ ಪ್ರಾಣಾ ನಿತ್ಯಾದಿ ತಲ್ಲಿಂಗಾತ್ಪ್ರಾಣ ಶಬ್ದಶ್ಚ ವಾಯುವಾ ಚೀತ್ಯತೋವಕ್ತಿ ||**

ಆದರೆ ಛಾಂದೋಗ್ಯ ಶೃತಿಯಲ್ಲಿ "ಉತ್ಕ್ರಾಂತಪ್ರಾಣಾನ್" ಎಂದು ಪ್ರಾಣ ವಾಯುವಿನ ದೇಹದಿಂದ ಹೊರಹೊರಡುವಿಕೆಯನ್ನು ಹೇಳಿರುತ್ತದೆ. ಉತ್ಕ್ರಮಣಾದಿ ಧರ್ಮದಿಂದ ಇಲ್ಲಿ ಪ್ರಾಣನು ಮುಖ್ಯಪ್ರಾಣನೇ ಆಗಬೇಕು ಎಂದರೆ

"ಯೋವೈ ಭೂಮಾ" ಶ್ರುತಿಯಲ್ಲಿ ಭೂಮಶಬ್ದೋಕ್ತ ಪೂರ್ಣನು ವಿಷ್ಣುವೆ ಸಂಪ್ರಸಾದ ಶಬ್ದದಿಂದ ಹೇಳಲ್ಪಡುವ ಪೂರ್ಣಸುಖ ರೂಪತ್ವವು ತಿಳಿಯುವುದರಿಂದಲೂ ಮತ್ತು ನಾಮಾದಿದೇವತೋತ್ತಮತ್ವೇನ "ಭೂಮ್ನಃ" ಎಂದು ಹೇಳಿರುವುದರಿಂದಲೂ (ಅಧ್ಯುಪದೇಶಾತ್) ಶ್ರೀ ವಿಷ್ಣುವೇ. ಈಶ್ವರನಲ್ಲಿ ಪೂರ್ಣ ಸುಖತ್ವದ ಸಂಪ್ರಸಾದ ಕಾರಣ ದುಃಖಾಭಾವನಿಶ್ಚಯವೂ ಆಗಿದೆ ಭೂಮ್ನ ಶಬ್ದದಿಂದ ಎಲ್ಲಾ ಜೀವರುಗಳೂ ಅಧಿಪತಿಯೆಂದು ಹೇಳಿದೆಯಾಗಿ ಅಖಿಲಾಧಿಪತ್ಯವು ಶ್ರೀ ವಿಷ್ಣುವಿಗೆ ವಾಯು ದೇವರು ಗಲ್ಲ.

4 ಸಹಸ್ರ ಶೀರ್ಷಂದೇವಂ ವಿಶ್ವಾಕ್ಷಂ ವಿಶ್ವಶಂಭುವಂ ।
ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಂ ।
ವಿಶ್ವತಃ ಪರಮಾನ್ನಿತ್ಯಂ ಇತಿಃ ಶೃತಿಃ (ಮಹಾನಾ-11

ಶ್ರೀಮನ್ನಾರಾಯಣನು ಅಮಿತ ಶಿರಸ್ಸುಗಳುಳ್ಳವನು, ಪ್ರಕಾಶರೂಪನು ಸರ್ವವನ್ನು ನೋಡುವುದರಿಂದ ವಿಶ್ವಾಕ್ಷನು (ಸರ್ವರಲ್ಲಿಯೂ ದೃಷ್ಟಿಯುಳ್ಳವನು) ಪೂರ್ಣ ಸುಖಾಶ್ರಯನು ಪ್ರಪಂಚವನ್ನು ಪ್ರವೇಶಿಸಿ ಇರುವವನು ಸರ್ವದೇವತೋತ್ತಮನು ಸರ್ವರಿಂದಲೂ ಹೊಂದಲು ಯೋಗ್ಯನು, ಅಕಾರ ಶಬ್ದ ವಾಚ್ಯ ಸರ್ವೋತ್ತಮನು. ದೇಹಕ್ಕೂ ನಾಶರಹಿತನು ಗುಣತಃ ಪೂರ್ಣನು. ಯಜ್ಞಗಳಲ್ಲಿ ಹವಿಸ್ಸನ್ನು ಸ್ವೀಕರಿಸುವವನಾದ್ದರಿಂದ "ಹರಿ"ಯು ಕ್ರೀಡಾದಿ ಗುಣವಿಶಿಷ್ಟ ನಾರಾಯಣ ದೇವರನ್ನೇ ಈ ಜಗತ್ತು ಆಶ್ರಯಿಸಿಕೊಂಡಿದೆ.

5 ತಮುತ್ಕ್ರಾಮಂತಂ ಪ್ರಾಣೋನೂತ್ಕ್ರಾಮತಿ (ಬೃ 6-4-2
ಇತ್ಯಾದಿನಾನೋತ್ಕ್ರಮಣಾದಿ ಲಿಂಗವಿರೋಧೋಪಿ ॥

ದೇಹದಿಂದ ಉತ್ಕ್ರಮಣ ಧರ್ಮವು ಶ್ರೀ ವಿಷ್ಣುವಿನಲ್ಲಿಯೂ ಉಂಟು ಆದ್ದರಿಂದ ಪ್ರಾಣಶಬ್ದದಿಂದ ಉಪಕ್ರಮವೂ ವಿರೋಧವಿಲ್ಲ. ಅಲ್ಲದೆ ವಾಜಸನೇಯ ವಾಕ್ಯದಲ್ಲಿ "ತಸ್ಯಹೈತಸ್ಯ ಹೃದಯಸ್ಯಾಗ್ರಂಪ್ರದ್ಯೋತತೆ । ತೇನ ಪ್ರದ್ಯೋತೇನೇಷ ಅತ್ಮಾನಿಷ್ಕ್ರಾಮತಿ" ಪ್ರಾಣೋತ್ಕ್ರಮಣ ಕಾಲದಲ್ಲಿ ಮುಕ್ತ ಜೀವರ ಶರೀರದ ಹೃದಯದ ಕೊನೆಯು ಪ್ರಕಾಶ ಪೂರ್ಣವಾಗಿ ಅಲ್ಲಿರತಕ್ಕ ಶ್ರೀಪರಮಾತ್ಮನು ಹೊರ ಹೊರಡಲು ಆತನನ್ನು ಅನುಸರಿಸಿ ಮುಖ್ಯ ವಾಯುವೂ ದೇಹದಿಂದ ಹೊರ ಹೊರಡುವನು ಎಂದು ಹೇಳಿದೆ.

# ಸೂ॥ ಓಂ॥ ಧರ್ಮೋಪಪತ್ತೇಶ್ಚ ಓಂ॥ 9

ಸರ್ವಗತತ್ವಾದಿ ಧರ್ಮೋಪಪತ್ತೇಶ್ಚ ॥

"ಸ ಏವ ಅಧಸ್ತಾತ್" ಎಂಬ ವಾಕ್ಯದಿಂದ "ಭೂಮ್ನ" ವಸ್ತುವಿನಲ್ಲಿ ಸರ್ವಗತತ್ವಾದಿ ಧರ್ಮವನ್ನು ಹೇಳಿರುವುದರಿಂದಲೂ ಈ ಧರ್ಮಗಳು ಶ್ರೀ ವಿಷ್ಣುವಿನಲ್ಲಿಯೇ ಮುಖ್ಯವಾದ್ದರಿಂದ ಈತನೇ "ಭೂಮ" ಶಬ್ದ ವಾಚ್ಯನು ಛಾಂದೋಗ್ಯದಲ್ಲಿ "ಅತ್ರ ಸಾನ್ಯತ್‌ಶೇ" ಎಂಬಸ್ವಾತಂತ್ರ್ಯೋಕ್ತ್ಯನಂತರದಲ್ಲಿ "ಸಏವ ಅಧಸ್ತಾತ್"ಎಂಬಸರ್ವಗತತ್ವವನ್ನು ಹೇಳಿ "ಸರ್ವ ಏವೇದಂ ಸರ್ವಂ" ಎಂದು ಸರ್ವ ಜಗತ್ತಿನಲ್ಲೂ ವ್ಯಾಪನಾಗಿ ಸರ್ವಸತ್ತಾಪ್ರದನಾಗಿ ಎಲ್ಲೆಡೆಯಲ್ಲಿಯೂ ಇರುವವನು "ಯತ್ರ" ಎಲ್ಲಿ ಯಾವ ಪುರುಷನ ವಿನಹ ಸ್ವತಂತ್ರವಾಗಿರುವ ಅನ್ಯ ವಸ್ತುವು ಕಾಣುವುದಿಲ್ಲವೋ ಎಲ್ಲವೂ ಆತನ ಅಧೀನವಾಗಿಯೇ ಕೇಳಿ ತಿಳಿಯಲ್ಪಡುವುದೋ ಆಮಹಾಪುರುಷನು ಸ್ವಮಹಿಮೆಯೇ ಆಶ್ರಯವಾಗಿರುವನು ಸರ್ವ ಸ್ವತಂತ್ರನು ಅವನೇ "ಭೂಮ" ವಾಚ ವಿಷ್ಣುವು.

– ಇತಿ ಭೂಮಾಧಿಕರಣವು –

## – ಅಥ ಅಕ್ಷರಾಧಿಕರಣವು –

ಈ ಅಧಿಕರಣದಲ್ಲಿ ಅಕ್ಷರನಾಮಧೇಯದ ಸಮನ್ವಯವು ಶ್ರೀವಿಷ್ಣುನಲ್ಲಿ

1. **ಅದೃಶ್ಯತ್ವಾದಿಗುಣಾ ವಿಷ್ಣೋರುಕ್ತಾಃ। ಅದೃಷ್ಟಂ ದೃಷ್ಟ್ರಶ್ರುತಂ ಶ್ರೋತೃ (ಬೃ–5-8-11) ಇತ್ಯಾದಿನಾ। ಅಹಂ ಸೋಮಮಾಹನಸಂ ಬಿಭರ್ಮಿ(ಯ-10-125-2) ಇತ್ಯಾದೇಸ್ತಸ್ಯಾಪಿ ಸಂಭವಾನ್ಮಾಧ್ಯಮಾಕ್ಷರ ನೈವೋಕ್ತಾ ಇತ್ಯತೋಬ್ರೂತೇ ॥**

ಅದೃಶ್ಯತ್ವಾಧಿಕರಣದಲ್ಲಿ ಅಕ್ಷರ ಶಬ್ದ ವಾಚ್ಯ ಶ್ರೀ ವಿಷ್ಣುವಿನಲ್ಲಿ ಆ ಗುಣಗಳು ಹೇಳಿದೆ ಆದರೆ ವಾಜಸನೇಯ ವಾಕ್ಯದಲ್ಲಿ "ತದ್ವಾಏತದಕ್ಷರಂಗಾರ್ಗಿ ಅದೃಷ್ಟಂ, ದೃಷ್ಟೃ" ಎಂಬ ಮಧ್ಯಮಾಕ್ಷರೋಕ್ತ ಶ್ರೀ ತತ್ವದಲ್ಲಿ ಹೇಳಿದೆ ಆದ್ದರಿಂದ ಅದೃಶ್ಯ

ತ್ವಾದಿ ಗುಣಗಳನ್ನು ಮಧ್ಯಮಾಕ್ಷರದಲ್ಲಿ ಹೇಳಿ "ಅಹಂ ಸೋಮಮಾಹನಸಂ" ಎಂಬು ದಾಗಿ ಚಂದ್ರಾದ್ಯಾಧಾರತ್ವವನ್ನು ಹೇಳಿರುವುದರಿಂದ ಮಧ್ಯಮಾಕ್ಷರವೇ ಅಕ್ಷರ ವಾಚ್ಯ ವು ಎಂದು ಆಕ್ಷೇಪ ಸಂಗತಿ ದ್ರಶ್ಯತ್ವಾದಿ ಉತ್ತರ ವಾಕ್ಯದಿಂದ ಜಡ ಪ್ರಕೃತಿಯಲ್ಲಿ ಸಾಧ್ಯವಲ್ಲವಾಗಿ ಚೇತನ ಪ್ರಕೃತಿ ಶ್ರೀತತ್ವ ಮತ್ತು ಶ್ರೀ ವಿಷ್ಣುವೆಂದು ಸಿದ್ಧಾಂತವು. ಆಕಾಶಾತ್ರಯದಿಂದ ಹೇಳಿರುವ ಅಕ್ಷರ ಶಬ್ದಕ್ಕೆ ನಾಶ ರಹಿತವೆಂಬ ಅರ್ಥದಿಂದ ಶ್ರೀ ವಿಷ್ಣುವೇ "ಅಕ್ಷರ" ಮುಖ್ಯ ವಾಚ್ಯನು ಆತನು ಮಿಕ್ಕವರಿಂದ ಪೂರ್ಣವಾಗಿ ತಿಳಿಯ ಲ್ಪಡದವನು. ಆದ್ದರಿಂದ ಅಕ್ಷರನಿಗಿಂತ ಬೇರೆ ವಸ್ತು ಸ್ವತಂತ್ರ ದ್ರಷ್ಟೃ, ಶ್ರೋತೃ ಮಂತೃ ಜ್ಞಾತೃ ಇಲ್ಲವಾದ್ದರಿಂದ ಆತನೇ ಅಕ್ಷರನು ದೀಪ್ತಿ ಶಬ್ದ ವಾಚ್ಯ ಶ್ರೀತತ್ವವೂ ಸರ್ವಾಕಾರದಿಂದಲೂ ವಿಷ್ಣುವನ್ನೇ ಆಶ್ರಯವಾಗಿ ಹೊಂದಿದೆ ಚಂದ್ರಸೂರ್ಯ, ಮತ್ತು ಬ್ರಹ್ಮ ರುದ್ರಾದಿ ಸರ್ವದೇವತೆಗಳೂ ಶ್ರೀ ವಿಷ್ಣುವಿನಿಂದಲೇ ಧರಿಸಲ್ಪಟ್ಟರು ವರು. "ಅಹಂ ಬಿಭರ್ಮಿ" ಎಂಬ ವಾಕ್ಯಾರ್ಥವು ಯಜ್ಞಗಳಲ್ಲಿ ಹವಿಸ್ಸನ್ನು ಕೊಡುವ ಸೋಮಲತಾಭಿಮಾನಿ ಚಂದ್ರ ತ್ವಷ್ಟಾರ, ಪೂಷಣ ಭಗ ಇವರು ಗಳನ್ನು ಧರಿಸುವೆನು ಎಂದು ಅಂಭೃಣಿ ಸೂಕ್ತವು ಗೀತಾ ವಾಕ್ಯವು-

> ಯೇತ್ವಕ್ಷರ ಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೆ ।
> ಸರ್ವತ್ರಗಂ ಅಚಿಂತ್ಯಂಚ ಕೂಟಸ್ಥಮ ಚಲಂಧ್ರುವಂ ॥

ದೇಶನಾಶವಿಲ್ಲದ ಶಬ್ದದಿಂದ ಗ್ರಾಹ್ಯನಲ್ಲದ (ಬಹುಗುಣಗಳ ಬಹು ಶ್ರೇಷ್ಠ ಪ್ರಮಾಣವುಳ್ಳವನಾಗಿ) ಆಕಾಶಾಭಿಮಾನಿಯಾಗಿ ಅದರಲ್ಲಿರುವ ತನ್ನ ಸ್ಥಾನದಿಂದ ಕದಲದ ಉತ್ಪತ್ತಿ ಶೂನ್ಯ ರಹಿತನಾದ ಶ್ರೀತತ್ವ (ಅದರ ಅಂತರ್ಯಾಮಿ) ಶ್ರೀವಿಷ್ಣು ವೆಂದುಹೇಳುವುದು

> ಆಸೀದಿದಂ ತಮೋಭೂತಮಪ್ರಜ್ಞಾತಮಲಕ್ಷಣಂ ।
> ಅಪ್ರತರ್ಕ್ಯ ಮವಿಜ್ಞೇಯಂ ಪ್ರಸುಪ್ತಮಿವ ಸರ್ವತಃ ॥

ಸರ್ವಕಾಲ ವ್ಯಾಪ್ತಿಯಿಂದ ಪ್ರಲಯ ಕಾಲದಲ್ಲಿ ಉದ್ಭವಿಸದವನು ಪ್ರತ್ಯಕ್ಷವಾಗಿ ಕಾಣಿಸಲ್ಪಡದವನು ಆದ್ದರಿಂದಲೇ ಅನುಮಾನಗಳಿಂದಲೂ ತಿಳಿಯಲು ಅಸಾಧ್ಯನು ಅನಾದಿ ಅವಿದ್ಯಾಭಿಮಾನಿತ್ವವುಳ್ಳ ಆಗಮದಿಂದಲೂ ಪೂರ್ಣ ತಿಳಿಯಲ್ಪಡದವನು ನಿರ್ವ್ಯಾಪಕನೂ ಆದರೂ ಸರ್ವತ್ರ ಇರುವವನು (ಅದರ ಅಂತರ್ಯಾಮಿ ಶ್ರೀವಿಷ್ಣು)

## 2. ಅತೋಬ್ರೂತೆ। ಸಿದ್ಧಾಂತ ಸೂತ್ರವು

## ಸೂ॥ ಓಂ॥ ಅಕ್ಷರಮಂಬರಾಂತ ಧೃತೇಃ ಓಂ॥ 10

"ತದ್ಯ ಏತತ್" ಎಂಬ ವಾಕ್ಯದಲ್ಲಿ ಹೇಳಿರುವ ಅಕ್ಷರನು ಶ್ರೀವಿಷ್ಣುವೆ ಚಿತ್ರಕೃತಿಯಲ್ಲ "ಏತಸ್ಮಿನ್ ಖಲು ಅಕ್ಷರೇ" ಎಂಬ ವಾಕ್ಯದಿಂದ ಆಕಾಶದಲ್ಲಿರುವ ಸರ್ವ ವಸ್ತುಗಳ ಧಾರಣೆ ಪೋಷಣೆಗಳನ್ನು ಮಾಡುವ ಆ ವಸ್ತುವೂ ಶ್ರೀವಿಷ್ಣುವೆ

ಏತಸ್ಮಿನ್ ಖಲ್ವಕ್ಷರೆ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚ(ಬೃ-5-8-1) ಇತ್ಯಂಬ ರಾಂತಸ್ಯ ಸರ್ವಸ್ಯ ಧೃತೇಃ ಬ್ರಹ್ಮೈವಾಕ್ಷರಂ ।

ಅಕ್ಷರವಾಚ್ಯ ಚಿತ್ರಕೃತಿಗೆ ಪ್ರಕೃತ್ಯಾಧಾರತ್ವ ಅಂತರ್ಯಾಮಿ ದ್ವಾರ ಸರ್ವಾಧಾರತ್ವವನ್ನು ಹೇಳಿರುವುದರಿಂದ ಅಕ್ಷರ ಮುಖ್ಯ ವಾಚ್ಯನು ವಿಷ್ಣುವೇ

3 **ಯ ಉ ತ್ರಿಧಾತು ಪೃಥಿವೀಮುತ ದ್ಯಾಮೇಕೋದಾಧಾರ ಭುವನಾನಿ ವಿಶ್ವಾ** ಎಂಬ ಶೃತಿಯಲ್ಲಿಯೂ ಸ್ವತಂತ್ರ ಸರ್ವಧಾರಣತ್ವವು ಶ್ರೀವಿಷ್ಣುವಿಗೆ

4 **ಭರ್ತಾಸನ್ಭ್ರಿಯಮಾಣೋಬಿಭರ್ತಿ ।**
**ಏಕೋ ದೇವೋ ಬಹುಧಾ ನಿವಿಷ್ಟಃ ।**
**ಯದಾಧಾರಂ ತಂದ್ರಯತೇ ಸ ಭರ್ತಾ ।**
**ವರಾಸ್ಯ ಭಾರಂ ಪುನರಸ್ತಮೇತಿ ।** (ತೈ ಆ-3-14)

ಪ್ರಾಣ ಶಬ್ದ ವಾಚ್ಯ ಸರ್ವಾಧಾರಕ ಶ್ರೀ ಪರಮಾತ್ಮನು ಸ್ವಯಂ ಜೀವನೊಂ-ದಿಗೆ ಹೃದಯದಲ್ಲಿದ್ದು ಸರ್ವವಸ್ತುವನ್ನು ಪೋಷಿಸುವನು ಆತನು ಯಾವಾಗ ಈ ಜಗದ್ಭಾರವನ್ನು ಧರಿಸಲು ಇಚ್ಛಿಸುವುದಿಲ್ಲವೋ ಆಗ ಆ ಭಾರವು ನಾಶವಾಗುತ್ತದೆ (ಪ್ರಳಯ)

5 **ಯಸ್ಮಿನ್ನಿದಂ ಸಂಚ ವಿ ಚೈತಿ ಸರ್ವಂ**
**ಯಸ್ಮಿಂದೇವಾ ಅಧಿವಿಶ್ವೇನಿಷೇದುಃ**(ಮಹಾನಾ-1-2)ಇತಾದಿಶೃತೇಃ

ಯಾವ ಜಗತ್ತು ಈ ಪುರುಷನಲ್ಲಿ ಆಶ್ರಯ ಹೊಂದಿ ಬೆಳೆಯುವುದೋ ಸರ್ವ ದೇವತೆಗಳೂ ಯಾರ ಆಧಾರ ಉಳ್ಳವರೋ. ಯಾ ವಾತನಿಂದ ಆಕಾಶಭೂಮಿ ಸ್ವರ್ಗ ಮುಂತಾದ ಸ್ಥಾನಗಳು ಪ್ರಕಾಶಮಾನವಾಗಿ, ಸೂರ್ಯ ಚಂದ್ರಾದಿಗಳಿಗೂ ಪ್ರಕಾಶ

ದೊರೆಯುವದೋ ಅನಾದಿಯಾದ ವೃತ್ಯಶಬ್ದವಾಚ್ಯ ಶ್ರೀ ವಿಷ್ಣುವಿನಿಂದಲೇ ಸರ್ವ ಧಾರಣ ಪೋಷಣತ್ವವು ಆಗುತ್ತದೆ (ಮಹಾನಾಮ್ನಿ)

6 ಪೃಥಿವ್ಯಾಧಿ ಪ್ರಕೃತ್ಯಂತಂ ಭೂತಂ ಭವ್ಯಂ ಭವಚ್ಚಯತ್ ।
ವಿಷ್ಣುರೇಕೋ ಬಿಭರ್ತೀದಂ ನಾನ್ಯಸ್ತಸ್ಮಾತ್ ಕ್ಷವೋದ್ಧೃತೌ ॥
ಇತಿ ಚ ಸ್ಕಾಂದೇ

ಹಿಂದಿನ, ಈಗಿರುವ ಮತ್ತೆ ಮುಂಬರುವ ಸರ್ವಜಗತ್ತುಗಳನ್ನು ಶ್ರೀ ವಿಷ್ಣು ವೊಬ್ಬನೇ ಅಸಹಾಯಕನಾಗಿಯೇ ಧರಿಸಲು ಸಮರ್ಥನು (ಸ್ಕಾಂದದಲ್ಲಿ)

## ಸೂ॥ ಓಂ॥ ಸಾಚಪ್ರಶಾಸನಾತ್ ॥ಓಂ॥ 11

ಸಾಚ ಧೃತಿಃ ಪ್ರಶಾಸನಾದುಚ್ಯತೆ । ಏತಸ್ಯವಾ ಅಕ್ಷರಸ್ಯ ಪ್ರಶಾಸನೆಗಾರ್ಗಿ ಸೂರ್ಯಾಚಂದ್ರಮಸೌ ವಿಧೃತ ತಿಷ್ಠತಃ (ಬೃ-5-8-9) ಇತ್ಯಾದಿನಾ

ಆಕಾಶಾಂತಧಾರಣವು ಶ್ರೀ ವಿಷ್ಣುವಿನ ಆಜ್ಞಾ ಮಾತ್ರದಿಂದಲೇ ಆಗುತ್ತದೆ ಎಂಬ ಮೇಲಿನ ಶೃತಿ ವಾಕ್ಯದಿಂದ ಬ್ರಹ್ಮನೇ ಅಕ್ಷರನು. ಚಿತ್ಪ್ರಕೃತಿಯಲ್ಲ. ಈ ರೀತಿಯಲ್ಲಿ ಅನೇಕ ಪ್ರಕರಣಗಳ ವಾಕ್ಯಗಳು ಇವೆಯಾಗಿ ಶ್ರೀವಿಷ್ಣುವಿನ ಆಜ್ಞಾಧಾರ ತತ್ವದಿಂದಲೇ ಸರ್ವಾಧಾರತ್ವವು

8 ತಸ್ಯ ಪ್ರಶಾಸನಂ ವಿಷ್ಣೋರೇವ

ಶ್ರೀ ವಿಷ್ಣುವಿನ ಆಜ್ಞಾಮಾತ್ರದಿಂದಲೆ ಆಕಾಶದ ಸರ್ವ ಧಾರಣತ್ವವು ಆಗುವುದು.

9 ಸಸ್ತಾರ್ಧ ಗರ್ಭಾ ಭುವನಸ್ಯರೇತೋವಿಷ್ಣೋಸ್ತಿಷ್ಠಂತಿ
ಪ್ರದಿಶಾವಿಧರ್ಮಣಿ (ಋ 1-164-36)

ಭುವನಕ್ಕೆ ರತಿಪ್ರದನಾದ (ಸಾರಭೂತ) ಭೂಮತ್ವ, ಪೂರ್ಣತ್ವ, ವನನೀಯತ್ವ ಭಜನೀಯತ್ವ ಕಾರಣಗಳಿಂದ ಮಹದಾದ್ಯಹಂಕಾರ, ಪಂಚ ಮಹಾಭೂತಾಖ್ಯ ದೇವತೆಗಳು ಜಗತ್ತಿಗೆ ಗತಿ ಪ್ರದನಾದ ಶ್ರೀ ವಿಷ್ಣುವಿನ ಆದೇಶ ಮಾತ್ರದಿಂದಲೇ ವಿವಿಧ ರೀತಿ

ಯಲ್ಲಿ ಈ ಜಗತ್ತನ್ನು ಧಾರಣೆ ಪೋಷಣೆ ಮಾಡುವರು

10. ಏಕಃ ಶಾಸ್ತಾ ನದ್ವಿತೀಯೋಸ್ತಿಶಾಸ್ತಾ । ಯೋಹೃಚ್ಛ್ರಯಸ್ತ್ರೆ ಮಹಮಿಹಬ್ರವೀಮಿ ॥

11. ಚತುರ್ಭಿಸ್ಸಾಕಂ ನವತಿಂಚ ನಾಮಭಿಃ ।
ಚಕ್ರಂ ನವೃತ್ತಂ ವ್ಯತೀರವೀವಿಪತ್ (ಋ. 1-155-6)
ಇತ್ಯಾದಿಶ್ರುತೇಃ ॥

ಸರ್ವಾಧಾರಕ್ಕೆ ಕಾರಣಭೂತನಾದ ಸ್ತುತಿಸಲ್ಪಟ್ಟ ಒಬ್ಬನೇ ಶ್ರೀವಿಷ್ಣುವು ಈತನು ಸರ್ವಭೂತ ಹೃತ್ಪದ್ಮಗಳಲ್ಲಿ ವಾಸಮಾಡಿ ಸರ್ವಶಾಸಕನು

ಈ ದೊಡ್ಡ ಶರೀರವುಳ್ಳ ಮೂಲರೂಪಿ ಶ್ರೀವಿಷ್ಣುವು ವಾಸುದೇವಾದಿ ನಾಲ್ಕು ನಾಮಾದಿ ರೂಪಗಳಿಂದ ಮತ್ತು ಇತರ ದೇವತೆಗಳಾದ 90 ಸಂಖ್ಯೆ ಬ್ರಹ್ಮ ರುದ್ರಾದಿ ದೇವತೆಗಳನ್ನು ರಥದ ಚಕ್ರಕ್ಕೆ ಕಟ್ಟೆ ಹಾಕಿದಂತೆ ಸಂಸಾರ ಚಕ್ರದಲ್ಲಿ ತಿರುಗಿಸುವನು.

12. ನ ಕೇವಲಂ ಮೇ ಭವತಶ್ಚರಾಜನ್ಸ ।
ವೈಬಲಂಬ ॥ ಲಿನಾಂಚಾಪರೇಷಾಬಂ ಇತ್ಯಾದೇಶ್ಚ ಭಾಗವತೇ ॥

ಇದು ಪ್ರಹ್ಲಾದನು ತನ್ನ ತಂದೆ.ಹಿರಣ್ಯಕಶಿವುವಿಗೆ ಹೇಳಿದ ಭಾಗವತ ವಚನವು ಈ ವಿಷ್ಣುವು ನನಗೆ ಮತ್ತು ನಿನಗೆ ಬಲಪ್ರದನು ಮಾತ್ರವಲ್ಲ ಸರ್ವ ಬಲಿಷ್ಠರ ಬಲಕ್ಕೂ ಆತನೇ ಕಾರಣನು ಮತ್ತು ಸ್ವಾಮಿಯು,

## ಸೂ ಓಂ॥ ಅನ್ಯಭಾವವ್ಯಾವೃತ್ತೇಶ್ಚ ಓಂ॥ 12

ಅನ್ಯದೇವತೆಗಳಲ್ಲಿ ಸ್ವಭಾವವಲ್ಲದ ಸ್ಥೂಲತ್ವ ಅಣುತ್ವವೇ ಮೊದಲಾದ ಸರ್ವ ಭಿನ್ನ ಭಾವಗಳೂ ಶ್ರೀಪರಮಾತ್ಮನಾದ ಅಕ್ಷರನಲ್ಲಿ ಹೇಳಿರುವುದರಿಂದ ಅಕ್ಷರನು ಶ್ರೀವಿಷ್ಣುವೇ.

"ಅಸ್ಥೂಲ ಮನಣು" (ಬೃ-5-8-7) ಇತ್ಯಾದಿನಾ ಸ್ಥೂಲ ಅಣುತ್ವಾದಿನಾ

ನ್ಯ ವಸ್ತು ಸ್ವಭಾವಾನಾಂ ವ್ಯಾವೃತ್ತೀಶ್ಚ ||

ಏತದ್ವೈತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತಿ-"ಅಸ್ಥೂಲ ಮನಣ್ವ ಹ್ರಸ್ವಮದೀರ್ಘಮ ಲೋಹಿತ ಮಸ್ನೇಹಮಚ್ಛಾಯ ಮತಮೋ ವಾಯೂ ಕಾಶಮಸಂಗಮರಸಮಗಂಧಮಚಕ್ಷುಷ್ಕಮಶ್ರೋತ್ರಮವಾಗಮನೋ ತೇಜ ಸ್ಕಮಪ್ರಾಣಮಮುಖಮಮಾತ್ರಮನಂತರಬಾಹ್ಯಂ ನತದಶ್ನಾತಿಕಿಂಚನ ತದಶ್ನಾತಿಕಶ್ಚನ"

ಅನ್ಯ ಸಕಲ ವಸ್ತುಗಳ ಭಾವಸ್ವರೂಪ ಸ್ಥೌಲ್ಯಾದಿ ಧರ್ಮಗಳ ವಿವಕ್ಷಯಿಂದ ಅಸಾಧ್ಯ ಅಪೇಕ್ಷಾ ರಹಿತ ವಿರುದ್ಧ ಧರ್ಮಗಳೆಲ್ಲವನ್ನು ಈ (ಸ್ಥೂಲ, ಅಸಣು ಇತ್ಯಾದಿ ಗಳು) ಈ ವಸ್ತುವಿನಲ್ಲಿ ಸಾಧಿಸಿರುವುದರಿಂದ ಬ್ರಹ್ಮನೇ ಅಕ್ಷರ ಶಬ್ದವಾಚ್ಯನು. ಪೂರ್ವ ಪಕ್ಷಗಳು ಈ ವಿರುದ್ಧ ಧರ್ಮಗಳನ್ನು ಚಿತ್ಪ್ರಕೃತಿಯಲ್ಲಿ ಹೇಳುವವು. ಸಿದ್ಧಾಂತ ರೀತಿಯಲ್ಲಿ ಲೋಕಪ್ರಸಿದ್ಧ ಲಕ್ಷಣಗಳಿಗಿಂತ ವಿಲಕ್ಷಣ ಧರ್ಮಗಳನ್ನು ಅಕ್ಷರ ನಲ್ಲಿ ಹೇಳಿದೆಯಾಗಿ ಶ್ರೀವಿಷ್ಣುವೇಅಕ್ಷರನು. ಇದುಶೃತ್ಯರ್ಥವು ಅಲೋಹಿತಂರಕ್ತೋಪ ಲಕ್ಷಿತ ಪ್ರಾಕೃತ ಶರೀರವಿಲ್ಲದವನು ಅಸ್ನೇಹ. ಪ್ರಾಕೃತ ಸ್ನೇಹರಹಿತನು ಅಚ್ಛಾಯಂ. ಅವಿದ್ಯಾ ವಾಚ್ಯ ಅಜ್ಞಾನರಹಿತನು ಪ್ರಾಕೃತದೇಹದಂತೆ ನೆರಳಿಗೆ ಅವಕಾಶವಿಲ್ಲದವನು ಅತಮಃ ಆವರಣ ರಹಿತನು ಅವಾಯುಃ ಪೀಡಾರೂಪಶ್ವಾಸೋಛ್ವಾಸ ರಹಿತನು (ಪ್ರಾಕೃತ ಶರೀರ ಸಂಬಂಧವಿಲ್ಲದವನು) ಅಸಂಗಂ-ಸರ್ವ ವ್ಯಾಪ್ತನಾದರೂ ಸರ್ವವಸ್ತು ಸಂಬಂಧವಿಲ್ಲದವನು ಅರಸಂ-ಪ್ರಾಕೃತ ರಸಗಂಧಾದಿ ರಹಿತನು ಅಚಕ್ಷುಃ ತನಗಿಂತ ಬೇರೆಯಾದ ಪ್ರಾಕೃತ ಜ್ಞಾನೇಂದ್ರಿಯವಿಲ್ಲದವನೂ ಅಪ್ರಾಣಂ-ಪ್ರಾಣನಿಂದ ಧರಿಸಲ್ಪ ಡುವನು ಅಮಾತ್ರಂ-ಪ್ರಾಕೃತ ಜ್ಞಾನೇಂದ್ರಿಯ ಕರ್ಮೇಂದ್ರಿಯ ಮತ್ತು ರೂಪಗಳಿಲ್ಲ ದವನು, ಪರಿಮಿತಿಯಿಲ್ಲದವನು ಪರಿಮಿತ ಶರೀರಾರಂಭಕ ಪಂಚ ಮಾತ್ರಗಳಿಲ್ಲದವನು ಅನಂತರಂ ಅಬಾಹ್ಯಂ- ಎಲ್ಲವಸ್ತುಗಳಿಗೂ ಒಳಗೂ ಹೊರಗೂ ವ್ಯಾಪ್ತನು ಈ ಗುಣಸಾರಸ್ವರೂಪನಾದ ಶ್ರೀ ಪರಮಾತ್ಮನು ತನ್ನ ಜೀವನಕ್ಕಾಗಿ ತಿನ್ನುವವನಲ್ಲ ಮತ್ತು ಸಂಹಾರ ಮಾಡುವವನಲ್ಲ ಈತನನ್ನು ಯಾರೂ ಸಂಹರಿಸಲಾರರು ಇಂಥಾ ಅಸಾಧ್ಯ ಲಕ್ಷಣ ಧರ್ಮಗಳುಳ್ಳ ಅನಾದಿ ನಿತ್ಯ ವಸ್ತುವು ಅಕ್ಷರ ಶಬ್ದವಾಚ್ಯನು.

14 "ಅಸ್ಥೂಲೋ ಮಣುರಮಧ್ಯಮೋ ಮಧ್ಯಮೋ ವ್ಯಾಪಕೋऽ ವ್ಯಾಪ ಕೋ ಯೋಸೌ ಹರಿರಾದಿರನಾದಿರವಿಶ್ವಃ ಸಗುಣೋ ನಿರ್ಗುಣಃ" ಇತ್ಯಾದೇರ್ವಿಷ್ಣೋರೇವತೇ ಧರ್ಮಾಃ|| ಸಗುಣಃ ಜ್ಞಾನಾನಂದಾದಿ

ವಿಶಿಷ್ಟನು. ನಿರ್ಗುಣಃ :- ಸತ್ವಾದಿ ಪ್ರಾಕೃತ ಗುಣರಹಿತನು. ಈ ಅಸಾಧ್ಯ ಲಕ್ಷಣಗಳ ಸಂಘವು ಪರಮಾತ್ಮನ ಆಜ್ಞೆಯಿಂದಲೇ ಶ್ರೀಪ್ರಕೃತಿಯಲ್ಲಿ ಸಾಧ್ಯವು.

15. **"ಅಸ್ಥೂಲೋ ನಣುರೂಪೋಽಸೌ ಅವಿಶೋವಿಶ್ರವಿವಚ ।
ವಿರುದ್ಧ ಧರ್ಮರೂಪೋಽಸಾವೈಶ್ವರ್ಯಾತ್ಪುರುಷೋತ್ತಮಃ ॥**

ಈ ವಿರುದ್ಧ ಧರ್ಮಗಳ ಏಕತ್ರ ಸ್ಥಾನವು ಪುರುಷೋತ್ತಮನಾದ ವಿಷ್ಣುವಿನಲ್ಲಿ ವಿಶೇಷ ಶಕ್ತಿಯಿಂದ ಸಾಧ್ಯವು ಅನ್ಯರಿಗೆ ಸರ್ವಥಾ ಸಾಧ್ಯವಲ್ಲ

– ಇತಿ ಅಕ್ಷರಾಧಿಕರಣವು –

## – ಸದಧಿಕರಣವು –

1. ಸದೇವ ಸೋಮ್ಯೇದಮಗ್ರ ಅಸೀತ್ । (ಛಾ। ಕ-2-1) ಇತ್ಯಾದಿನಾ ಸತಃ ಸ್ರಷ್ಟೃತ್ವಮುಚ್ಯತೆ ।

ಈ ಅಧಿಕರಣದಲ್ಲಿ ಅನೇಕ ಪ್ರಕರಣಾತ್ಮಕವಾದ "ಸದೇವ" ಎಂದು ಹೇಳಲ್ಪಡುವ ಸೃಷ್ಟತ್ವವು ಶ್ರೀ ವಿಷ್ಣುವಿನಲ್ಲಿ ಸಮನ್ವಯ ಮಾಡಲ್ಪಡುವುದು. ಈ ಧರ್ಮವು ಅನನ್ಯಾಧೀನ ಕಾರಣತ್ವದಿಂದ ಸರ್ವೋತ್ತಮತ್ವ ಸರ್ವಾಧಾರತ್ವ ಮತ್ತು ಸುಪ್ತಿಗಮ್ಯತ್ವ ವಿಶಿಷ್ಟ ಧರ್ಮಗಳನ್ನು ಶ್ರೀ ವಿಷ್ಣುವಿನಲ್ಲಿ ಹೇಳಿದೆ (ಜನ್ಮಾಧಿಕರಣದಲ್ಲಿ)ಆದರೆ ಛಾಂದೋಗ್ಯ ವಾಕ್ಯದಲ್ಲಿ "ಸದೇವ ಸೌಮ್ಯೇದ ಮಗ್ರ ಆಸೀತ್"-ಎಲೈ ಭಕ್ತಿ ಜ್ಞಾನ ಲಕ್ಷಣ ಸೋಮಾರ್ಹ ಶ್ವೇತಕೇತುವೇ ಈ ಜಗತ್ತಿನ ಸೃಷ್ಟಿಗೆ ಮುಂಚೆ ಅೀದರೆ ಪ್ರಲಯದಲ್ಲಿ ಸಚ್ಛಬ್ಧ ವಾಚ್ಯ ಬ್ರಹ್ಮನೊಬ್ಬನೇ ಸ್ವಾತಂತ್ರ್ಯದಿಂದಿದ್ದನು "ಏಕಮೇವ ದ್ವಿತೀಯಂ" ಸ್ವಗತಸ್ವಾವಯವ ಭೇದಾಭೇದ ಶೂನ್ಯ ಸರ್ವೋತ್ತಮ "ಸನ್ಮೂಲಾಃ ಸೊಮ್ಯೇಮಾಃ"— ಈ ಪ್ರಜೆಗಳು "ಸತ್" ಶಬ್ದವಾಚ್ಯ ಬ್ರಹ್ಮನನ್ನೇ ಮೂಲವಾಗಿವುಳ್ಳವರು. "ಸತಾ ಸೌಮ್ಯ ತದಾ ಸಂಪನ್ನೋಭವತಿ-ಸುಪ್ತಿ ಸ್ಥಿತಿಯಲ್ಲಿ ಜೀವರು "ಸತ್" ಶಬ್ದವಾಚ್ಯ ಬ್ರಹ್ಮನಲ್ಲಿ ಸಂಪನ್ನರು. ಹೀಗೆ ಶ್ರುತ್ಯರ್ಥಗಳು.

2 ತಚ್ಚಸತ್ ಬಹುಸ್ಯಾಂ ಪ್ರಜಾಯೇಯೇತಿ ಪರಿಣಾಮ
ಪ್ರತೀತೇರ್ನವಿಷ್ಣುಃ ।

ಈ ತಚ್ಚಸತ್ "ಸತ್" ಶಬ್ದ ವಾಚ್ಯ ವಸ್ತುವು ಮೇಲಿನ ವಾಕ್ಯದಲ್ಲಿ ಪರಿಣಾಮತ್ವ ಕಾರಣದಿಂದ ಶ್ರೀ ವಿಷ್ಣುವಲ್ಲವೆಂದು ಸಂಶಯವು.

3. ಸಹ್ಯವಿಕಾರಃ ಸದಾ ಶುದ್ಧೋ ನಿತ್ಯ ಆತ್ಮಾ ಸದಾ ಹರಿರಿತ್ಯಾ
ದಿನ್ಯಾವಿಕಾರಃ ಪ್ರಸಿದ್ಧ ಇತ್ಯತೋ ಬ್ರವೀತಿ ॥

ಮೇಲಿನ ವಾಕ್ಯದಲ್ಲಿ ಶ್ರೀ ಹರಿಯು ವಿಕಾರವಿಲ್ಲದವನು ಸದಾ ಶುದ್ಧನು ನಿತ್ಯನು ಮತ್ತು ಸರ್ವಸ್ವಾಮಿಯು ಎಂದು ಹೇಳುತ್ತದೆಯಾಗಿ ವಿಕಾರ ಭಾವವು ಶ್ರೀ ವಿಷ್ಣುವಿನ ಲಕ್ಷಣವಲ್ಲವಾಗಿ ಸತ್ ಶಬ್ದವಾಚ್ಯತ್ವವು ವಿಷ್ಣುವಿಗಿಲ್ಲ ಪ್ರಕೃತಿಗೆ ಈ ಶಬ್ದ ವಾಚ್ಯತ್ವವು ಎಂದು ಪೂರ್ವಪಕ್ಷವು.

4 ಅತೋಬ್ರವೀತಿ. ಸಿದ್ಧಾಂತವು ಹೀಗೆ

## ಸೂ॥ ಓಂ॥ ಈಕ್ಷತಿಕರ್ಮವ್ಯಪದೇಶಾತ್ಸಃ ಓಂ॥ 13

"ಸದೇವ" ಎಂಬ ಶೃತಿಗಳಲ್ಲಿ ಹೇಳಲ್ಪಟ್ಟಿರುವ ಸರ್ವೋತ್ತಮ ವಸ್ತುವು ಶ್ರೀ ವಿಷ್ಣುವೇ ಪ್ರಧಾನವಿಲ್ಲ. "ತದೈಕ್ಷತ್" ಎಂಬ ವಾಕ್ಯದಿಂದ ಆತನಲ್ಲಿ ದೃಷ್ಟಿತ್ವಪೂರ್ವ ಸೃಷ್ಟ್ಯಾದಿ ಕರ್ತವನ್ನುತ್ವ ಹೇಳಿರುವುದರಿಂದಲೂ "ಏಕೋನ ನಾರಾಯಣಸೀ ಆ ನವುನಿರ್ಭೂತ್ವಾ ಈಸಮಾಖ್ಯಾದಿಂದಲೂ ಶ್ರೀವಿಷ್ಣುವೇ ಸತ್ ಎಂಬ ವಾಚ್ಯನು.

"ತದೈಕ್ಷತ್" ಇತೀಕ್ಷತಿ ಕರ್ಮವ್ಯಪದೇಶಾತ್ಸ ಏವ ವಿಷ್ಣು ತತ್ರೋಚ್ಯತೆ ।

ಈವಾಕ್ಯದಲ್ಲಿ ಈಕ್ಷಣ ಕರ್ಮಕತ್ವವನ್ನು ಹೇಳಿರುವುದರಿಂದ ಸೃಷ್ಟ್ಯಾದಿಕ್ರಿಯೆಯನ್ನು ನೋಡುವನು ಎಂದು ಚೇತನತ್ವದ ಮುಖ್ಯಲಿಂಗವು ಹೇಳಲ್ಪಟ್ಟು ಜಡ ಪ್ರಕೃತಿಯಲ್ಲಿ ಸಂಭವವಲ್ಲದ್ದರಿಂದ ಶ್ರೀ ವಿಷ್ಣುವೇ ಮುಖ್ಯವಾಗಿ "ಸತ್" ವಾಚ್ಯನು

5. **ನಾನ್ಯೋಽತೋಽಸ್ತಿದ್ರಷ್ಟಾ (ಬ್ರ-5-7-23) ನಾನ್ಯದತೋಽಸ್ತಿದೃಷ್ಟೃ (ಬೃ-5-8-11) ಇತ್ಯಾದಿನಾ ತಸ್ಯೈವಹಿ ತಲ್ಲಕ್ಷಣಂ ।**

ಬೃಹದಾರಣ್ಯ ವಾಕ್ಯದಲ್ಲಿ ಬ್ರಹ್ಮನಿಂದ ಬೇರೆ ಯಾರೂ ಸ್ವತಂತ್ರವಾಗಿ ನೋಡುವವರೂ ನೋಡಿಸಿಕೊಳ್ಳುವವರೂ ಇಲ್ಲ ಎಂಬ ಹೇಳಿಕೆಯಿಂದಲೂ ಶ್ರೀ ವಿಷ್ಣುವೇ ಸತ್‌ಶಬ್ದ ವಾಚ್ಯನು.

6. **ಬಹುತ್ವಂ ಚಾವಿಕಾರೇಣೈವೋಕ್ತಂ । ಅಜಾಯಮಾನೋ ಬಹುಧಾವಿಜಾಯತೆ (ತೈ ಆ 3-13-1) ಇತಿ ॥**

ಆದರೂ ಬ್ರಹ್ಮನಿಗೆ ನಿರ್ವಿಕಾರತ್ವ ಧರ್ಮದಿಂದ ಬ್ರಹ್ಮ ಭಾವವು ಹೇಗೆ ಸೂಕ್ತವು ಎಂದರೆ ಬ್ರಹ್ಮನು ಅವಿಕಾರಿಯಾಗಿಯೇ ಸ್ವರೂಪ ಬಾಹುಳ್ಯ ಧರ್ಮದಿಂದ ಬಹುಭಾವವು ಸೂಕ್ತವೇ ನಿಯಮಕತ್ವ ಧರ್ಮದಿಂದಲೂ ಬಹು ವಸ್ತುಗಳಲ್ಲಿ ಸ್ವರೂಪದಿಂದಿರುವನು.

– ಇತಿ ಸದಧಿಕರಣವು –

## – ದಹರಧಿಕರಣ –

ಈ ಅಧಿಕರಣದಲ್ಲಿ ಸರ್ವಾಧಾರತ್ವದಿಂದ ಹೇಳಲ್ಪಡುವ ಬ್ರಹ್ಮ ವಸ್ತುವು ಸಾಕ್ಷಾತ್ತಾಗಿಯೂ ಸಾಮಾನ್ಯವಾಗಿಯೂ ಹೃತ್ಪದ್ಮ ಸ್ಥಿರತ್ವ ಧರ್ಮವುಳ್ಳದ್ದೆಂದು ಸಮರ್ಥನೆ ಮಾಡಲ್ಪಡುವುದು.

1. **ಚಂದ್ರಾದಿತ್ಯಾಧಾರತ್ವಂ ವಿಷ್ಣೋರುಕ್ತಂ । ತಚ್ಚ ಅಥ ಯದಿ ಹ್ಯಸ್ಮಿನ್ಬ್ರಹ್ಮಪುರೇದಹರಂ ಪುಂಡರೀಕಂ ವೇಶ್ಮ ದಹರೋಸ್ಮ್ಯಂತರಾಕಾಶಃ......... ..ಕಿಂತದತ್ರ ವಿದ್ಯತೆ. (ಛಾ-8-1-2)**

ಛಾಂದೋಗ್ಯ ಶೃತಿಯಲ್ಲಿ ಅಕ್ಷರಾಧಿಕರಣದಲ್ಲಿ ಹೇಳಲ್ಪಟ್ಟ ಚಂದ್ರ ಆದಿತ್ಯಾದಿ ದೇವತೆಗಳಿಗೆ (ಬ್ರಹರುದ್ರಾದಿ ದೇವತೆಗಳೂ) ಸಮಾನಾಧಿಕರಣದಲ್ಲಿ ಹೃತ್ಪದ್ಮಸ್ಥಿತ

"ಆಕಾಶ" ನಾಮಕ ವಸ್ತುವಿನಲ್ಲಿ "ಅಥ" ಎಂಬ ವಾಕ್ಯದಿಂದ **ಹೇಳಿದೆ.** ಶ್ರೀವಿಷ್ಣುವಿನಲ್ಲಲ್ಲ.

ಉಭೆ ಅಸ್ಮಿನ್ ಧ್ಯಾವಾಪೃಥಿವೀ ಅಂತರೇವ ಸಮಾಹಿತೆ ಉಭೌ ಅಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ ವಿದ್ಯುನ್ನಕ್ಷತ್ರಾಣಿ (-8-1-3) ಇತ್ಯಾದಿನಾ ಆಕಾಶಸ್ಯಪ್ರತೀಯತೆ

ಈ ಹೃತ್ಪದ್ಮಸ್ಥವಸ್ತುವಿನಲ್ಲಿ ಸ್ವರ್ಗ ಪೃಥಿವೀ ಲೋಕಗಳೂ, ಅಗ್ನಿ ಮತ್ತು ವಾಯು ದೇವತೆಗಳೂ ಸೂರ್ಯ ಚಂದ್ರರೂ ತೇಜಸ್ಸು ಮತ್ತು ನಕ್ಷತ್ರಗಳು ಒಳಗೊಂಡಿರುತ್ತವೆ ಎಂಬ ವಾಕ್ಯದಿಂದ ಆ ವಸ್ತುವು ಆಕಾಶವೇ **ವಿಷ್ಣು**ವಲ್ಲವೆಂದು

2. **ಸ ಚಾಕಾಶೋ ನ ವಿಷ್ಣುಃ । ತಸ್ಯಾಂತೇ ಸುಷಿರಗಂ ಸೂಕ್ಷ್ಮಂ ತಸ್ಮಿನ್ಸರ್ವಂ ಪ್ರತಿಷ್ಠಿತಂ ಇತಿ** (ಮಹಾನಾ-11) **ಶ್ರುತೇರಿತ್ಯತ ಆಹ ॥**

"ಆಕಾಶಸ್ತಲ್ಲಿಂಗಾತ್ ಎಂಬ ಸೂತ್ರದಂತೆ ಹೃತ್ಪದ್ಮಸ್ಥಿತತ್ವವು ಶ್ರೀವಿಷ್ಣುವಿಗೆ ನಾಧಿಸಲ್ಪಟ್ಟಿದ್ದರೂ, ಆಕಾಶ ಶಬ್ದವಾಚ್ಯವು ವಿಷ್ಣುವಲ್ಲ ಭೂತಾಕಾಶವೇ ಸರ್ವಾಧಾರತ್ವ ಧರ್ಮದಿಂದ ಹುತ್ಪದ್ಮಸ್ಥಿತತ್ವವು ಸಮಾಖ್ಯದಲ್ಲಿ ಹೇಳಿದ, (ಸುಷಿರಂ ಛಿದ್ರಂ)

3 ಅ ತಆಹ ಆದ್ದರಿಂದ ಹೇಳಲ್ಪಡುವುದು.

## ಸೂ॥ ಓಂ॥ ದಹರ ಉತ್ತರೇಭ್ಯಃ ಓಂ॥ ।4

"ದಹರಂ ಪುಂಡರೀಕಂ ವೇಶ್ಮ"ಎಂಬ ವಾಕ್ಯೋಕ್ತ ಅಲ್ಪಾಕಾಶದಲ್ಲಿರುವ ವಸ್ತುವು ಶ್ರೀವಿಷ್ಣುವೇ ಜೀವಾದಿಗಳಲ್ಲಿ ಉತ್ತರ ವಾಕ್ಯದಲ್ಲಿ "ಯ ಆತ್ಮಾ ಅಪಹತ ಪಾಪ್ಮಾ" ಎಂದು ನಿರ್ಗತ ಪಾಪತ್ವಾದಿ ಧರ್ಮವನ್ನು ಆವಸ್ತುವಿನಲ್ಲಿ ಹೇಳಿದೆ ಅದು ಶ್ರೀವಿಷ್ಣುವಿನ **ಅಸಾಧಾರಣ ಧರ್ಮವೇ.**

"ಯ ಆತ್ಮಾಪಹತ ಪಾಪ್ಮಾ ವಿಜರೋವಿಮೃತ್ಯುರ್ವಿಶೋಕೋ "ವಿಜಿಘತ್ಸೋ" ಽಪಿಪಾಸಃ ಸತ್ಯಕಾಮ ಸ್ಸತ್ಯ ಸಂಕಲ್ಪಃ ಸೋನ್ವೇಷ್ಟವ್ಯ· ಸ ವಿಜಿಜ್ಞಾಸಿತವ್ಯಃ

(ಛಾ-8-7-3)ಇತ್ಯಾದಿಭ್ಯೋ ಉತ್ತರೇಭ್ಯೋಗುಣೇಭ್ಯೋದಹರೆ ವಿಷ್ಣುರೇವ।

ಯಾವ ವಸ್ತುವು ಜಡ ಶರೀರ ನಾಶವಾಗದಿರುವನೆಂದು ಹೇಳಿದೆಯೋ ಅಂತಹ ನಿತ್ಯನು ಯಾವಾಗಲೂ ಪಾಪಲೇಶವಿಲ್ಲದವನು ಹಸಿವೆ ನೀರಡಿಕೆಗಳೆಂಬ ಪೀಡೆಗಳಿಂದ ಹಿಂಸಿಸಲ್ಪಡುವವನಲ್ಲ ತನಗೆ ಬೇಕಾದ ಸರ್ವೇಷ್ಟವು ಸ್ವತಃ ಲಭ್ಯವಾದ್ದರಿಂದ ಸತ್ಯಕಾಮನು, ಸತ್ಯ ಸಂಕಲ್ಪನು ಈ ಧರ್ಮಗಳುಳ್ಳ ವಸ್ತುವು ಚಿಂತಿಸಲ್ಪಡಬೇಕು ಎಂದು ಉತ್ತರ ವಾಕ್ಯದಲ್ಲಿ ಹೇಳಿರುವುದರಿಂದ ಆತನು ಶ್ರೀ ವಿಷ್ಣುವೇ.

4 **ಯೋಶನಾಯಾ ಪಿಪಾಸೇ ಶೋಕಂ ಮೋಹಂ ಜರಾಂ**
**ಮೃತ್ಯುಮತ್ಯೇತಿ ।** (ಬೃ-5-5) **ಸ ಏಷ ಸರ್ವೇಭ್ಯಃ ಪಾಪ್ಮಭ್ಯ॥**
**ಉದಿತಃ** (ಛಾ-1-6-7) **ಇತ್ಯಾದಿನ ವಿಷ್ಣೋರೇವ ಹಿ ತೇ ನಾಗುಃ**

ಆ ಪುರುಷನು ಅನ್ನ ಪಾನೇಚ್ಛೆಗಳನ್ನತಿಕ್ರಮಿಸಿ, ಶೋಕ, ಮೋಹ ಮರಣಾದಿ ಅನಿಷ್ಟಗಳನ್ನು ಜಯಿಸಿರುವನು ಅಂತಹ ಅಪಹತಪಾಪತ್ವಾದಿ ಧರ್ಮವುಳ್ಳವನು. ಇತರರಲ್ಲ.

5. **ನಿತ್ಯತೀರ್ಣಾಶನಾಯಾದಿರೇಕ ಏವ ಹರಿಸ್ವತಃ ।**
**ಅಶನಾಯಾದಿ ಕಾನ್ಯೇಯೋ ತತ್ಪ್ರಸಾದಾತ್ತರಂತಿಹಿ ॥ ಇತಿಪಾದ್ಮೇ.**

ಸ್ವತಃ ಸ್ವತಂತ್ರವಾಗಿಯೇ ಯಾವಾಗಲೂ ಊಟಪಾನಾದಿ ದುಃಖಗಳನ್ನು ಅತಿಕ್ರಮಿಸಿರುವನೋ ಮತ್ತು ಇತರರಿಗೆ ದುಃಖವುಂಟಾಗದಂತೆ ಮಾಡುವ ಸ್ವಭಾವವುಳ್ಳವನೋ ಆತನೇ ಶ್ರೀಹರಿಯು

6. **ಸಾಪೇಕ್ಷ ನಿರಪೇಕ್ಷಯೋಶ್ಚ ನಿರಪೇಕ್ಷಂ ಸ್ವೀಕರ್ತವ್ಯಂ ।**

ಮತ್ತೊಬ್ಬರ ಅಧೀನ ಮತ್ತು ಸ್ವತಂತ್ರ ವಸ್ತುಗಳಲ್ಲಿ ಸ್ವತಂತ್ರ ವಸ್ತುವಿನ ಗ್ರಹಣವು ಯುಕ್ತವು

7. **ಸತ್ಯಕಾಮಃ ಪರೋನಾಸ್ತಿ ತಮೃತೇ ವಿಷ್ಣುಮವ್ಯಯಂ ।**
**ಸತ್ಯಕಾಮತ್ವಮನ್ಯೇಷಾಂ ಭವೇತ್ತತ್ಕಾಮ್ಯ ಕಾಮಿತೇತಿಸ್ಕಾಂದ್ಯೇ**

ಸರ್ವತಂತ್ರ ಸ್ವತಂತ್ರನಾದ ಶ್ರೀ ವಿಷ್ಣುವೇ ಸತ್ಯ ಶಂಕಲ್ಪನು. ಬೇರೆ ಯಾರೂ

ಅಲ್ಲ ಈತನ ಅನುಗ್ರಹದಿಂದಲೇ ಇತರರಿಗೆ ಸತ್ಯಸಂಕಲ್ಪತ್ವವು ಹೊರ್ತು ಸ್ವತಂತ್ರ ವಾಗಿಯಲ್ಲ.

## ಸೂ॥ ಓಂ॥ ಗತಿಶಬ್ದಾಭ್ಯಾಂ ತಥಾಹಿ ದೃಷ್ಟಂ ಲಿಂಗಂಚ ಓಂ॥ 15

ಅಹರಹರ್ಗಚ್ಛಂತ್ಯ ಏತಂ ಬ್ರಹ್ಮಲೋಕಂ ನ ವಿಂದಂತಿ (ಛಾ-8-3-2) ಇತಿ ಸುಪ್ತಸ್ಯತದ್ಗತಿ ಬ್ರಹ್ಮಶಬ್ದಶ್ಚೋಚ್ಯತೇ ।

ಈ ಶೃತಿಯಲ್ಲಿ ಸುಪ್ತ ಪ್ರಾಪ್ಯತ್ವವೂ ಬ್ರಹ್ಮಶಬ್ದವೂ ಹೇಳಲ್ಪಟ್ಟಿರುವುದರಿಂದ ಹೃತ್ ಪದ್ಮಸ್ಥನು ಬ್ರಹ್ಮನೇ ಹಾಗೆಯೇ ಛಾಂದೋಗ್ಯ ವಾಕ್ಯದಲ್ಲಿ "ಅರಶ್ಚ" ಎಂಬ ವಾಕ್ಯದಲ್ಲಿ ಸುಪ್ತ ಪ್ರಾಪ್ಯತ್ವವನ್ನುಹೇಳಿದೆ ಶ್ರೀವಿಷ್ಣುವಿನ ಧರ್ಮವಾದ ಅರಣ್ಯಾಖ್ಯ ಸುಧಾಸಮುದ್ರಾಶ್ರಯ ಲೋಕದ ಜ್ಞಾಪಕದಿಂದಲೂ ಹೃಪದ್ಮಸ್ಥಿತತ್ವವು ಕಂಡಿದೆಯಾಗಿ ಹೃತ್ಪದ್ಮ ಸ್ಥಿತನು ಶ್ರೀವಿಷ್ಣುವೇ.

ಸುಖನಿದ್ರೆಯಲ್ಲಿ ಪ್ರಜೆಗಳು ಪ್ರತಿದಿನವೂ ಹೊಂದುವಂತಹುದು ಯಾವ ಬ್ರಹ್ಮ ಲೋಕವೊ ಆ ವಿಷ್ಣುವಿನ ವಾಸಸ್ಥಾನವಾದ ಬ್ರಹ್ಮ ಶಬ್ದವಾಚ್ಯ ಶ್ರೀ ವಿಷ್ಣುವನ್ನೂ ಯಾರೂ ಪೂರ್ಣವಾಗಿ ತಿಳಿಯಿರು ಆ ಆತ್ಮ ಶಬ್ದ ವಾಚ್ಯನೇ ಹೃದ ಯಾಕಾಶದಲ್ಲಿರುವವನು.

**9 ಸತಾಸೋಮ್ಯ ತದಾ ಸಂಪನ್ನೋ ಭವತೀತಿ । (ಛ-6-8-1) ತಂಹಿ ಸುಪ್ತೋ ಗಚ್ಛತಿ ।**

ಹೇ ಭಕ್ತಿ ಜ್ಞಾನಾರ್ಹ ಶ್ವೇತಕೇತುವೇ. ನಿದ್ರೆಯ ಕಾಲದಲ್ಲಿ ಯೊವ ಬ್ರಹ್ಮ ನ ಜತೆಯಲ್ಲಿ ಸುಖವಾಗಿರುವೆಯೋ ಆ ವಿಷ್ಣುವನ್ನು ನೀನು ಅರಿಯೆ

**10. ಅರಶ್ಚ ಣ್ಯಶ್ಚಾರ್ಣವೌ ಬ್ರಹ್ಮಲೋಕೆ (ಛ-8-5-3) ಇತಿ ಲಿಂಗಂಚ ತಥಾಹಿ ದೃಷ್ಟಂ ॥**

ಹೇಗೆ ಪ್ರತಿನಿತ್ಯವೂ ಸುಪ್ತಗಮ್ಯತ್ವವನ್ನು ಹೇಳಿದೆಯೋ ಹಾಗೆಯೇ ಅರವೈಣ್ಯ ನಾಮಕ ಸಮುದ್ರಗಳ ಆಶ್ರಯವನ್ನು ಹೃತದ್ಮಸ್ಥವಸ್ತುವಿನಲ್ಲಿ ಶೃತಿಯು ಹೇಳುವುದ ರಿಂದ ಶ್ರೀ ವಿಷ್ಣುಲೋಕದ ಶ್ವೇತ ದ್ವೀಪದಲ್ಲಿ ಈ ಸುಧಾ ಸಮುದ್ರಗಳು ಇರುವ ದೆಂದು ಶೃತಿಗಳು ಹೇಳುವುದರಿಂದಲೂ ಹೃತ್ಪದ್ಮಸ್ಥನು ಶ್ರೀವಿಷ್ಣುವೇ.

11. ಅರಶ್ಚಹ ವೈ ಶ್ಚ ಸುಧಾಸಮುದ್ರಾ ದ್ವಾನಿತ್ಯಾದಿನಾ ತಸ್ಮೈ ವಹಿತಲ್ಲಕ್ಷಣತ್ವೇನೋಚ್ಯತೇ ||

ಕ್ಷೀರಾಬ್ಧಿ ಮಧ್ಯದಲ್ಲಿರುವ ಸರ್ವೇಷ್ಟಗಳನ್ನೂ ಕೊಡಲು ಸಾಮರ್ಥ್ಯವುಳ್ಳ ಶ್ರೀ ವಿಷ್ಣು ಲೋಕವಿದೆ ಎಂದು ಹೇಳಿ "ಅರಣ್ಯ" ಶಬ್ದ ಸಮುದ್ರಗಳೆರಡೂ ವಿಷ್ಣುಲೋಕ ದಲ್ಲಿ ಆಶ್ರಯವುಳ್ಳದ್ದರಿಂದಲೂ ಶ್ರೀ ವಿಷ್ಣುವೇ ಹೃತ್ಪದ್ಮಸ್ಥನು.

## ಸೂ|| ಓಂ|| ಧೃತೇಶ್ಚ ಮಹಿಮ್ನೋಸ್ಯಾಸ್ಮಿನ್ನುಪಲಬ್ದೇಃ ಓಂ|| 16

ಏಷ ಸೇತುರ್ವಿಧೃತಿಃ (ಛಾ 8-4-1) ಇತಿಧೃತೇಃ |

ಸ ಏಷ ಸೇತುಃ ವಿಧೃತಿಃ" ಎಂಬ ಶೃತಿಯಲ್ಲಿ ಸರ್ವಾಧಾರತ್ವ ಧರ್ಮವು ಹೃತ್ಪ ದ್ಮಸ್ಥನಲ್ಲಿ ಹೇಳಿರುವುದರಿಂದ ಆತನೇ ವಿಷ್ಣುವು ಮತ್ತು "ಏಷಸರ್ವೇಶ್ವರಃ ಎಂಬ ವಾಜಸನೇಯ ವಾಕ್ಯದಲ್ಲಿಯೂ ಸರ್ವೋತ್ತಮತ್ವಾದಿ ಧರ್ಮಗಳು ಶ್ರೀ ವಿಷ್ಣು ಧರ್ಮಗಳೆಂದು ಹೇಳುವ ಸಮಾಖ್ಯಾ ಶೃತಿಗಳಿಂದಲೂ ಹೃತ್ಪದ್ಮಸ್ಥನು ಶ್ರೀ ವಿಷ್ಣುವೇ

13. ಏಷಸೇತು ರ್ವಿಧೃತಿರಿತಿ ಧೃತೇಃ| ಏಷಭೂತಾಧಿಪತಿಃ ಏಷ ಭೂತಪಾಲ ಇತ್ಯಾದ್ಯಸ್ಯ ಮಹಿಮ್ನೋಸ್ಮಿನ್ನುಪಲಬ್ದೇಃ |

ವಾಜಸನೇಯದಲ್ಲಿ "ಯ ಏಷ ಅಂತರ್ಹೃದಯ ಆಕಾಶ ತಸ್ಮಿನ್ಶೇತೂ ಸರ್ವಸ್ಯವ ಶೀ" ಎಂದು ಹೇಳಿ ಮುಂದೆ "ಏಷ ಸರ್ವೇಶ್ವರ ಏಷ ಭೂತಾದಿಪತಿ ರೇಷ ಭೂತಪಾಲ ಏಷಸೇತುರ್ವಿಧರಣ ಏಷಾಂ ಲೋಕಾನಾಂ ಅಸಂಭೇದಾಯಃ" ಎಂದು ಧಾರಣ ಪೋಷಣಾದಿಧರ್ಮಗಳನ್ನು ಹೃತ್ಪದ್ಮಸ್ಥಿತನಲ್ಲಿ ಹೇಳಿರುವುದರಿಂದ ಶ್ರೀ ವಿಷ್ಣುವೇ ಅಲ್ಲಿರುವವನು

14 ಏತಸ್ಮಿನ್ ಖಲುಅಕ್ಷರೇ ಗಾರ್ಗ್ಯಾಕಾಶ ಓತಸ್ಚ ಪ್ರೋತಶ್ಚ (ಬೃ-5-8-11)| ಏತಸ್ಯವಾ ಅಕ್ಷರಸ್ಯಪ್ರಶಾಸನೇಗಾರ್ಗಿ (ಬೃ-5-8-11)

ಬೃಹದಾರಣ್ಯಕ ವಾಕ್ಯಗಳಲ್ಲಿ ಬಹುಸ್ಥಳಗಳಲ್ಲಿ ಧಾರಣ ಪೋಷಣ ಧರ್ಮಗಳು

ಅಕ್ಷರದಲ್ಲಿ ಸರ್ವಾಧಾರಕತ್ವದಿಂದ ಹೇಳಿರುವುದರಿಂದ ಹೃತ್ಪದ್ಮಸ್ಥಿತನು ಶ್ರೀವಿಷ್ಣುವೇ

15. ನಹಿಸರ್ವಾಧಿಪತಿಃ ನಹಿಸರ್ವಪಾಲಃ ಸ ಈತಃ ವಿಷ್ಣುಃಪತಿಂ ವಿಶ್ವಸ್ಯಾತ್ಮಸಂ (ಮಹಾನಾ 11) ಇತ್ಯಾದಿ ಶೃತಿಭ್ಯಸ್ತ್ರಸ್ಯಹ್ಯೇಷ ಮಹಿಮಾ।

ಮಹಿನಾಮ್ನಿ ಶೃತಿಯಲ್ಲಿಯೂ ಹೇಳಿದೆ ಯಾವ ಪುರುಷನು ಸರ್ವಾಧಿಪತಿಯೋ ಸರ್ವಪಾಲಕನೋ ಸರ್ವೇಶ್ವರನೋ ಆ ಪುರುಷನು ವಿಷ್ಣುವೇ ಈತನೇ ಚೇತನಾತ್ಮಕ ಸರ್ವ ಪ್ರಪಂಚಕ್ಕೂ ಈಶ್ವರನು

16. **ಸರ್ವೇಶೋ ವಿಷ್ಣುರೇವೈಕೋ ನಾನ್ಯೋsಸ್ತಿ ಜಗತಃ ಪತಿರಿತಿ ಸ್ಕಾಂದೇ ॥**

ಸ್ಕಾಂದ ಪುರಾಣದಲ್ಲಿಯೂ ಶ್ರೀವಿಷ್ಣುವೊಬ್ಬನೇ ಚೇತನಾಚೇತನ ಪ್ರಪಂಚಕ್ಕೆ ಪಾಲಕನು ಮತ್ತೊಬ್ಬನ್ಯಾರೂ ಇಲ್ಲ ಎಂದು ಹೇಳಿದೆ.

## ಸೂ॥ ಓಂ॥ ಪ್ರಸಿದ್ಧೇಶ್ಚ ಓಂ ॥ 17

ತತ್ರಾಪಿ ದಹರಂಗಗನಂ ವಿಶೋಕಸ್ತಸ್ಮಿನ್ ಯದಂತಸ್ತ ಸರ್ವದುಪಾಸಿ ಂತವ್ಯಂ।

"ದಹರಂ ವಿಪಾಪ್ಮಂ" ಶೃತಿಯಲ್ಲಿ ವಿಷ್ಣುವಿಗೆ ಹೃತ್ಪದ್ಮಸ್ಥಿತತ್ವವು ಪ್ರಸಿದ್ಧವೇ
"ದಿವ್ಯೆಬ್ರಹ್ಮಪುರೆ ಹ್ಯೇಷವ್ಯೋಮ್ನ್ಯಾತ್ಮಾ ಸಂಪ್ರತಿಷ್ಟಿತ (ಅಥರ್ವಣ)
"ಯ ಏಷೋಂತರ್‌ಹೃದಯೇ ಆಕಾಶಃ ತಸ್ಮಿನ್‌ಅಯಂ ಪುರುಷಃ(ತೈತ್ತರೀಯ)
ದಹರಂ ವಿಪಾಪ್ಮಂ ಪರವೇಶ್ಮ ಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಂ।

ಅಲ್ಪವಾದ ಬ್ರಹ್ಮನ ವಾಸಸ್ಥಾನವಾದ ಆದ್ದರಿಂದಲೇ ಪಾಪಲೇಶವಿಲ್ಲದ ದೇಹಾಖ್ಯ ಬ್ರಹ್ಮಪುರ ಮಧ್ಯದಲ್ಲಿರುವ ಹೃದಯ ಕಮಲದಲ್ಲಿ ಅಲ್ಪಾಕಾಶವಿದೆ. ಅಲ್ಲಿ ಜರಾದಿ ದುಃಖಗಳಿಲ್ಲದೆ ಯಾವ ಪರಬ್ರಹ್ಮನು ಪ್ರತಿಷ್ಠಿತನೋ ಆತನ ಉಪಾಸನೆ ಮಾಡಬೇಕು.

ಯ ಆತ್ಮಾ ಅಪಹತಪಾಪ್ಮಾವಿಜರೋವಿಮೃತ್ಯುಃ ವಿಶೋಕಃ ।

ಈಮೇಲಿನ ವಾಕ್ಯಗಳ ಐಕ್ಯಧರ್ಮ ಬಲದಿಂದ ಪ್ರಸಿದ್ಧ ವಸ್ತುವು ಶ್ರೀವಿಷ್ಣುವ್ಯ

18. ತದಂತಸ್ಸತ್ವಾವೇಕ್ಷತ್ವಾನ್ನ ಸುಷಿರ ಶೃತಿ ವಿರೋಧಃ ॥

ಸುಷಿರ ಶೃತಿ ವಿರೋಧವು ಇಲ್ಲ ಪದ್ಮಗತ ಸುಷಿರಂತಸ್ಥ ಪರಮಾತ್ಮನ ಅಪೇಕ್ಷೆಯಿಂದ ಪ್ರವೃತ್ತಿವಾದ್ದರಿಂದಲೂ ಮತ್ತು ಸರ್ವಾಧಾರತ್ವದಿಂದಲೂ ವಿರೋಧವಿಲ್ಲ ಗೃಹದಲ್ಲಿರುವ ಬೆಳಕಿನಲ್ಲಿರುವ ವಸ್ತುವು ಗೃಹದಲ್ಲಿದ್ದಂತೆಯೇ

## ಸೂ॥ ಓಂ॥ ಇತರಪರಾಮರ್ಶಾತ್ಸಇತಿಚೇನ್ನಾಸಂಭವಾತ್ ಓಂ॥ 18

"ಪರಂಜ್ಯೋತಿ ರುಪ ಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೆ"
(ಛಾ 8-12-3) ಏಷ ಆತ್ಮೇತಿ ಹೋವಾಚ (ಛಾ 4-15-1)ಇತಿ ಪರಾಮರ್ಶಾತ್ಸ ಇತಿಚೇತ ನ ತಸ್ಯಸ್ವತೊಪಹತ ಪಾಪ್ಮತ್ವಾದ್ಯಸಂಭವಾತ್ ॥

"ಸ್ವೇನ ರೂಪೇಣನಿಷ್ಪದ್ಯತೆ" ಎಂಬಲ್ಲಿ ಜೀವನಲ್ಲಿ ಹೃತ್ಪದ್ಮಸ್ಥಧರ್ಮವು "ಏಷ ಆತ್ಮಾ" ಎಂಬ ವಾಕ್ಯದಲ್ಲಿ ಪರಾಮರ್ಶದಿಂದ ಜೀವನೇ ಹೃತ್ಪದ್ಮಸ್ಥನು ಎಂದರೆ ಹಾಗಲ್ಲ ಹೃತ್ಪದ್ಮಸ್ಥಿತ ವಸ್ತುವಿನಲ್ಲಿ ಮುಖ್ಯ ಅಪಹತಪಾಪ್ಮತ್ವಾದಿ ಧರ್ಮಗಳು ಜೀವನಲ್ಲಿ ಸ್ವತಂತ್ರವಾಗಿರುವುದು ಅಸಂಭವವಾದ್ದರಿಂದ ಅಸ್ವತಂತ್ರ ವಸ್ತುವೇ ಪರಮಾತ್ಮನು ಎಂಬುದು ಯುಕ್ತವುಅದೇ ಶ್ರೀ ವಿಷ್ಣುವು ಅನ್ಯರಲ್ಲ.

## ಸೂ॥ ಓಂ॥ ಉತ್ತರಾಚ್ಚೇದಾವಿರ್ಭೂತಸ್ವರೂಪಸ್ತು ಓಂ॥ 19

ಸತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಣಃ ॥ (ಛ-8-12-3) ಇತ್ಯಾದ್ಯುತ್ತರವಚನಾಜ್ಜೀವ ಏವೇತಿ ಚೇತ್

22. ಸತತ್ರಹಿ ಪರಮೇಶ್ವರಪ್ರಸಾದಾದಾವಿರ್ಭೂತಸ್ವರೂಪೋ ಮುಕ್ತ ಉಚ್ಯತೇ ।

"ಸತತ್ರ ಪರ್ಯೇತಿ"ಎಂಬ ಉತ್ತರ ವಾಕ್ಯದಿಂದ ಜೀವನಿಗೂ ಸತ್ಯಕಾಮತ್ವಾದಿ ಧರ್ಮಗಳನ್ನು ಹೇಳಿರುವುದರಿಂದ ಮೇಲಿನ ಆಕ್ಷೇಪವು ಅಸಂಭವವಾಗಿ ಜೀವನೇ ಹೃತದ್ಮಸ್ಥನುಎಂದು ಹೇಳಲು ಅಡ್ಡಿಯಿಲ್ಲವೆಂದರೆ ಹಾಗಲ್ಲ. ಈ ಮೇಲಿನ ವಾಕ್ಯದಿಂದ ಶ್ರೀ ಪರಮಾತ್ಮನಾನುಗ್ರಹದಿಂದಲೇ ಆವಿರ್ಭೂತ ಆನಂದ ಸ್ವರೂಪವು ಮುಕ್ತ ಜೀವಿಗೆ ಹೇಳಿದೆಯಾಗಿ ಸ್ವತಃ ಈ ಧರ್ಮವು ಆತನಿಗೆ ಕೂಡುವುದಿಲ್ಲ ಶ್ರೀ ವಿಷ್ಣುವಿಗೆ ಸಲ್ಲು ವುದು,

23. ಯತ್ಪ್ರಸಾದಾತ್ಸಮುಕ್ತೋಭವತಿ ಸಭಗವಾನ್ಪೂರ್ವೋಕ್ತಃ ॥

ಶ್ರೀ ಪರಮಾತ್ಮನ ಅನುಗ್ರಹ ಮಾತ್ರದಿಂದಲೇ ಜೀವನು ಜನನ ಮರಣ ರೂಪಸಂಸಾರದಿಂದ ಮುಕ್ತನಾಗಿ ಆತನ ಧರ್ಮಗಳನ್ನು ಅಲ್ಪಮಾತ್ರಹೊಂದಿ ಶ್ರೀಪರ ಮಾತ್ಮನ ಅಧೀನದಲ್ಲಿಯೇ ಇರುವನೇ ಹೊರತು ಸರ್ವ ಸ್ವತಂತ್ರವಾಗಿಯಲ್ಲ. ಇಂಥಹ ಮುಕ್ತ ಜೀವನು ಪರಂಜೀವನು ಪರಂಜ್ಯೋತಿಯೆಂದು ಹೇಳಲ್ಪಡುವನು. ಈತನು ಪರಮಾತ್ಮನ ಅನುಗ್ರಹದಿಂದಲೇ ವಿಷಯ ಸುಖಗಳನ್ನು ಹೊಂದುವನು.

## ಸೂ॥ ಓಂ॥ ಅನ್ಯಾರ್ಥಶ್ಚ ಪರಾಮರ್ಶಃ ಓಂ॥ 20

"ಏಷ ಆತ್ಮಾ" ಎಂಬ ವಾಕ್ಯದಲ್ಲಿ ಏತತ್‌ಶಬ್ದವು ಪರಂಜ್ಯೋತಿಃ ಎಂದು ಪರ ಮಾರ್ಥದಲ್ಲಿಯೇ ಹೊರತುಜೀವ ಪರವಲ್ಲವೆಂದರೆ ಶೃತ್ಯರ್ಥವು-ಯಾವ ಶ್ರೀ ಪರ ಮಾತ್ಮನನ್ನು ಅಪರೋಕ್ಷದಿಂದ ತಿಳಿದು ಅವನ ಸಮೀಪವನ್ನು ಹೊಂದಿ ಅವಿದ್ಯಾ ನಾಶ ಪೂರ್ವಕ ಆನಂದಾದಿ ತನ್ನ ಸ್ವರೂಪ ಧರ್ಮವನ್ನು ಹೊಂದುವನೋ ಎಂದು "ಆತ್ಮಾ" ಶಬ್ದ ಪರಾಮರ್ಶವಿದೆಯಾದ್ದರಿಂದ ಈ ಆತ್ಮನು ವಿಷ್ಣುವೇ.

## ಸೂ॥ ಓಂ॥ ಅಲ್ಪಶ್ರುತೇರಿತಿಚೇತ್ತದುಕ್ತಂ ಓಂ॥ 21

26 ನ "ನಿಜ್ಞಾಯ್ಯತ್ವಾದೇವಂ ನ್ಯೋಮವಚ್ಚ" ಇತ್ಯುಕ್ತತ್ವಾತ್ ||
ದಹರ ಇತ್ಯಲ್ಪ ಶೃತೇ ರ್ನೇತಿ ಚೇತ್ (ಛಾ-8-1-1)

ಅಲ್ಪಶೃತಿಯಲ್ಲಿ "ದಹರ" ಎಂದು ಅಲ್ಪಸ್ಥಾನದಲ್ಲಿರುವವನಂತೆ ಹೇಳಿರುವುದ ರಿಂದ ಜೀವನೇ ಪರಮಾತ್ಮನು ಎಂದರೆ ಹಾಗಲ್ಲ ಅಲ್ಪಸ್ಥಾನತ್ವವು ಶ್ರೀ ಪರಮಾತ್ಮನಲ್ಲಿ ಉಪಾಸನಾ ಪ್ರಯೋಜನಾರ್ಥವಾಗಿ ಹೇಳಿದೆ ಶೃತಿಯಲ್ಲಿಯೂ ಆತ್ಮಾಂತ ಹೃದಯೆ ಎಂದು ಹೇಳಿರುವುದರಿಂದಲೂ ಶ್ರೀವಿಷ್ಣುವಿನದೇ ಪರಾಮರ್ಶವು ಜೀವನದಲ್ಲ ವ್ಯಾಪ್ತಾಕಾಶದಲ್ಲಿ ಮಠಾಕಾಶ ರೀತಿಯಿಂದ ವ್ಯಾಪ್ತನಾದ ಶ್ರೀಹರಿಗೆ ಅಲ್ಪಸ್ಥಾನತ್ವವು ಯುಕ್ತವು ಆದ್ದರಿಂದ ಸರ್ವಗತತ್ವಾದಿ ಧರ್ಮಗಳು ಶ್ರೀ ವಿಷ್ಣುವಿನ ಧರ್ಮವೇ

27. ಏಷಮೇ ಆತ್ಮಾಂತರ್ಹೃದಯೇ ಜ್ಯಾಯಾನ್ (ಛ-3-14-3)
ಇತಿಶೃತತ್ವಾಚ್ಚ ||

ಶ್ರೀ ಪರಮಾತ್ಮನಿಗೆ ಅಚಿಂತ್ಯಾದ್ಭುತ ಶಕ್ತಿಯಿರುವುದರಿಂದ "ಗುಣಾಶ್ರುತಾಃ" ಮತ್ತು "ಯಸ್ಮಿನ್ವಿರುದ್ಧಗತಯಃ" ಈ ವಚನಗಳಂತೆ ಹೃದಯದಲ್ಲಿರುವ ವಸ್ತುವೇ, ಸರ್ವ ಹೃದಯಸ್ಥ ಶ್ರೀ ಪರಮಾತ್ಮನು. ಈ ಅಂಶಭೂತ ಭಗವಂತನು ದೇಶಕಾಲ ಗುಣಗಳಿಂದ ಪೂರ್ಣನು

– ಇತಿ ದಹರಾಧಿಕರಣವು –

– ಅನುಕೃತ್ಯಧಿಕರಣವು –

1. ಅದೃಶ್ಯತ್ವಾದಯಃ ಪರಮೇಶ್ವರಗುಣಾಉಕ್ತಾಃ । ತೇಷಾಂ ಸುಖಿರಿ ಶಾಶ್ವತಂನೇತರೇಷಾಂ । ತದೇತದಿತಿಮನ್ಯಂತೇಽನಿರ್ದೇಶ್ಯಂ ಪರ

ಮಂ ಸುಖಂ (ಕರ 5-12-14) ಇತ್ಯಾದಿನಾ ಜ್ಞಾನಿಸುಖಸ್ಯಾಪ್ಯ ನಿರ್ದೇಶ್ಯತ್ವಮಜ್ಞೇಯತ್ವಂಚೋಚ್ಯತ ಇತಿ ।

ಆನಂದಮಯಾಧಿಕರಣದಲ್ಲಿ ಪರಮಾತ್ಮನಿಗೆ ಅದೃಶ್ಯತ್ವ ಅಜ್ಞೇಯತ್ವಾದಿ ಧರ್ಮ ಹೇಳಿವೆ ಆದರೆ ಈ ಧರ್ಮಗಳು "ಕಥಂನು ತದ್ವಿಜಾನೀಯಾಂ ಕಿಮು ಭಾತಿನ ಭಾತಿವಾ" ಎಂಬ ಮೇಲಿನ ವಚನದಿಂದ ಜ್ಞಾನಿ ಸುಖಕ್ಕೂ ಈ ಧರ್ಮಗಳು ಸಾಧ್ಯವೆಂದು ಹೇಳಿರುವುದರಿಂದ ಪರಮೇಶ್ವರನಿಂದ ಅನ್ಯವಸ್ತುವಿನಲ್ಲಿಯೂ ಈ ಧರ್ಮ ಗಳು ಸಾಧ್ಯವೆಂದು ಹೇಳಿರುವುದರಿಂದ ಪರಮೇಶ್ವರನಿಂದ ಅನ್ಯವಸ್ತುವಿನಲ್ಲಿಯೂ ಈ ಧರ್ಮಗಳು ಇವೆ ಎಂಬ ಸಂಶಯವು.

2. ಅತೋ ವಕ್ತಿ —

## ಸೂ ॥ ಓಂ॥ ಅನುಕೃತೇಸ್ತಸ್ಯಚ ಓಂ॥ 22

"ತಮೇವಭಾಂತಮನುಭಾತಿಸರ್ವಂ" ಇತ್ಯನುಕೃತೇಃ "ತಸ್ಯ ಭಾಸಾ ಸರ್ವ ಮಿದಂ ವಿಭಾತಿ" (5-15) ಇತಿ ವಚನಾಚ್ಚ ಪರಮಾತ್ಮೈವ ಅನಿರ್ದೇಶ್ಯ ಸುಖರೂಪಃ ॥

"ಕಥಂನು ತದ್ವಿಜಾನೀಯಾಂ" ಎಂದು ಜ್ಞಾನಾರ್ಥವಾಗಿ ಪ್ರಾರ್ಥನಾನುಕೂಲ ಕ್ಕಾಗಿ ಹೇಳಿರುವ ವಸ್ತುವು ಶ್ರೀಬ್ರಹ್ಮನೇ "ತಮೇವ ಭಾಂತಂ—" ಎಂಬ ವಾಕ್ಯ ಶೇಷದಲ್ಲಿ ಸೂರ್ಯಾದಿ ಪ್ರಕಾಶ ವಸ್ತುಗಳಿಗೆ ಭಗವಂತನ ಕ್ರಿಯಾನುಗುಣ ಪ್ರಾಕಾ ಶ್ಯ ಕ್ರಿಯಾಕರ್ತೃತ್ವವನ್ನು ಹೇಳಿ,-ತಸ್ಯ ಭಾಸಾ ಸರ್ವಮಿದಂ ವಿಭಾತಿ ಎಂದು ಈ ಜಗ ತ್ತಿಗೆ ಪರಮಾತ್ಮನ ಪ್ರಾಕಾಶ್ಯತ್ವ ಪ್ರಭೆಯನ್ನು ಸಾಕ್ಷಾತ್ತಾಗಿ ಹೇಳಿದೆ. ಆದ್ದರಿಂದ ಅನಿರ್ದೇಶ್ಯತ್ವಾದಿ ಧರ್ಮಗಳು ಶ್ರೀಪರಮಾತ್ಮನದೇ ಅನ್ಯರದಲ್ಲ.

ಪಾದ್ಮ ವಚನವು "ತಾಪಿನೀ ಪಾಚಿನೀಚ್ಚೈವ ಶೋಷಿಣೀಚ ಪ್ರಕಾಶಿನೀ ॥
ನೈವರಾಜನ್ ರವೇಶ್ಶಕ್ತಿಃ ಶಕ್ತಿರ್ನಾರಾಯಣಸ್ಯಸಾ ॥ ಕಾಠಕ ವಾಕ್ಯವು-
ಏಕೋ ವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾಯಃ ಕರೋತಿ
ತ ಮಾತ್ಮಸ್ಥಮನು ಪಶ್ಯಂತಿ ಧೀರಾಃ

ಜ್ಞಾನಾನಂದಾದ್ಯಭಿನ್ನ ಸಮಾಭ್ಯಧಿಕ ರಹಿತ ವಸ್ತುವೇ ಸರ್ವಪ್ರಾಣಿಗಳೊಳಗೆ ನಿಯಮನ ಮಾಡುವವನು ಅವನು ಸ್ವಸ್ವರೂಪವನ್ನೇ ನಿಯಾಮಕ ಬ್ರಹ್ಮರೂಪ ಗಳನ್ನಾಗಿ ಮಾಡುವವನು ಅಂತಹಜೀವರುಗಳ ಹೃದಯಸ್ಥನನ್ನುಯಾರು ಜ್ಞಾನಿಗಳು ನೋಡುವರೋ ಅವರ ಸುಖವು ಶಾಶ್ವತ ಆನಂದಾಭಿವ್ಯಕ್ತ ಮುಕ್ತ ಜೀವರ ಸುಖವು ಅಂಥವರದು ಭಗವತ್ಪ್ರಸಾದ ಪ್ರಾಪ್ಯ ಸುಖವೇ ಸ್ವತಂತ್ರವಾಗಿ ಜೀವರ ಶಕ್ತಿಯಲ್ಲ.

3. **ನಹಿ ಜ್ಞಾನಿ ಸುಖಮನು ಭಾತಿಸರ್ವಂ ನಚತದ್ಭಾಸಾ ॥**

ಸೂರ್ಯಾದಿ ಸರ್ವಪ್ರಕಾಶ ವಸ್ತುಗಳಿಗೆ ತೇಜಸ್ಸುಳ್ಳಜ್ಞಾನಿ ಸುಖವನ್ನನು ಸರಿಸಿಪ್ರಕಾಶಿಸುವುದಲ್ಲ. ಜ್ಞಾನಿಸುಖಪ್ರಕಾಶವು ಸರ್ವಜಗತ್ತನ್ನೂ ಪ್ರಕಾಶಪಡಿಸ ಲಾರದು

4 **"ಅಹಂತತ್ತೇಜೋ ರಶ್ಮೀನ್" ಇತಿ ನಾರಾಯಣ ಭಾಸಾಹಿ ಸರ್ವಂಭಾತಿ ।**

ಈ ವಾಕ್ಯದಿಂದ ಶ್ರೀಮನ್ನಾರಾಯಣನ ಪ್ರಕಾಶವೇ ಈ ಪ್ರಪಂಚದ ಸರ್ವ ವಸ್ತುಗಳ ಪ್ರಕಾಶಕ್ಕೂ ಕಾರಣವು. ಆದ್ದರಿಂದ ಸೂರ್ಯಾದಿ ಪ್ರಕಾಶವಸ್ತುಗಳ ಪ್ರಕಾಶತ್ವವು ಶ್ರೀ ಪರಮಾತ್ಮಾಧೀನ ನಿಯಂತ್ರತ್ವ ರೂಪ ಪ್ರಕಾಶಾಂಶವೇ ಹೊರ್ತು. ಸ್ವತಂತ್ರ ಪ್ರಕಾಶವಾದ್ದಲ್ಲ. ಸರ್ವಪ್ರಕಾಶಕ್ಕೂ ಶ್ರೀ ಪರಮಾತ್ಮನೇ ನಿಯಂತೃವು.

## ಸೂ ॥ ಓಂ॥ ಅಪಿಸ್ಮರ್ಯತೇ ಓಂ॥ 23

**ಯದಾದಿತ್ಯ ಗತಂತೇಜೋ ಜಗದ್ಭಾಸಯತೇಽಖಿಲಂ ॥**
**ಯಚ್ಚಂದ್ರಮಸಿಯಚ್ಚಾಗ್ನೌತತ್ತೇಜೋದ್ಧಿಮಾಮಕಂ ॥**

ಶ್ರೀ ಕೃಷ್ಣನ ವಚನವು ಸರ್ವಪ್ರಕಾಶವೂ ಶ್ರೀ ಪರಮಾತ್ಮನಿಂದಲೇ ಆದಿತ್ಯಾದಿ ಗಳದಿರುವ ಯಾವ ತೇಜಸ್ಸೊ ಅವು ನನ್ನ ಅಧೀನವು ಮತ್ತು ನನ್ನ ತೇಜಸ್ಸಿನಾಂಶವೇ ಅಗ್ನಿ ಮತ್ತು ಚಂದ್ರ ಮತ್ತು ಇತರರಲ್ಲಿರತಕ್ಕ ಎಲ್ಲಾ ತೇಜಸ್ಸು ನನ್ನಿಂದಲೇ ಪ್ರವೃತ್ತವು.

6. ನತದ್ಭಾಸಯತೇ ಸೂರ್ಯೋ ನಶಶಾಂಕೋ ನ ಪಾವಕಃ ।
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮೇತಿ ಚ ॥

ಜ್ಞಾನಿಗಳು ನನ್ನ ಪ್ರಸಾದದಿಂದ ಮಾತ್ರವೇ ನನ್ನ ಸ್ವರೂಪ ಸ್ಥಾನಗಳನ್ನು ಹೊಂದಿ (ಅನಂತಾಸನ ವೈಕುಂಠ ಶ್ವೇತದ್ವೀಪ) ಹಿಂದಕ್ಕೆ ತಿರುಗಿ ಬರುವುದಿಲ್ಲ ಸಂಸಾರದಿಂದ ಪೂರ್ಣ ಮುಕ್ತರಾಗುತ್ತಾರೆ ಆ ಸ್ಥಾನದ ಪ್ರಕಾಶಗಳನ್ನು ಸೂರ್ಯ ಚಂದ್ರ ಅಗ್ನಿಗಳು ಪ್ರಕಾಶಪಡಿಸಲಾರವು. ಗೀತಾವಾಕ್ಯ

– ಇತಿ ಅನುಕೃತ್ಯಧಿಕರಣವು –

– ವಾಮನಾಧಿಕರಣವು –

ಈ ಅಧಿಕರಣದಲ್ಲಿ "ಈಶಾನ" ನಾಮ ಸಮನ್ವಯವು ವಿಷ್ಣುವಿನ ಜ್ಞಾನದಿಂದ ಲೇ ಹೊಂದಲು ಸಾಧ್ಯವಾದ ಈ ಅಪರೋಕ್ಷ ಜ್ಞಾನಕ್ಕೆ ಜಿಜ್ಞಾಸ್ಯ ದೇವತೆಯೇ ಸಾಧನವೆಂದ ಹೇಳಿದೆ. ಆ ಜಿಜ್ಞಾಸ್ಯ ದೇವತೆಯು ಶ್ರೀವಿಷ್ಣುವೇ ಜಿಜ್ಞಾಸ್ಯನೆಂದರೆ ವೇದವಾಕ್ಯಗಳ ಪೂರ್ವಾಪರ ವಿಚಾರಗಳ ಆಲೋಚನೆಯಿಂದ ಸಿದ್ಧವಾದ ಉಪಾಸ್ಯ ದೇವತೆ. ಅದು ವಿಷ್ಣುವೇ ಆದರ.

1 ವಿಷ್ಣುರೇವ ಜಿಜ್ಞಾಸ್ಯ ಇತ್ಯುಕ್ತಂ। ತತ್ರಊರ್ಧ್ವಂ ಪ್ರಾಣ
ಮುನ್ನಯತ್ಯಪಾನಂ ಪ್ರತ್ಯಗಸ್ಯತಿ । ಮಧ್ಯೇವಾಮನಸೀನಂ
ವಿಶ್ವೇದೇವಾ ಉಪಾಸತೇ ಇತಿ ಸರ್ವದೇವೋಪಾಸ್ಯಃ
ಕಶ್ಚಿತ್ಪ್ರತೀಯತೆ ॥

ಮೇಲಿನ ಕಾಠಕ ಶೃತಿಯಲ್ಲಿ ಸರ್ವದೇವೋಪಾಸ್ಯತ್ವವನ್ನು ಹೇಳಿರುವ ದೇವತೆಯು ಶ್ರೀ ವಿಷ್ಣುವೊ ಅಥವಾ ವಾಯು ದೇವರೋ ಎಂಬ ಸಂಶಯವು ಮೇಲಿನ ಶೃತ್ಯರ್ಥವು ಯಾವ ದೇವತೆಯು ಜೀವರುಗಳ ದೇಹದಿಂದ ಪ್ರಾಣ ವಾಯುವನ್ನು ಮೇಲಕ್ಕೇರಿಸು ವುದೂ ಮತ್ತು ಅಪಾನ ವಾಯುವನ್ನು ಕೆಳಗೆ ಹೊರಡಿಸುವುದೋ ಅಂಧ ದೇಹ

ಮಧ್ಯಸ್ಥ ವಸ್ತುವನ್ನು ಸರ್ವದೇವತೆಗಳೂ ಉಪಾಸನೆ ಮಾಡುತ್ತಾರೆ ಎಂದು ಪ್ರಾಣ ವ್ಯವಸ್ಥಾಪಕತ್ವ ಮಧ್ಯಸ್ಥತ್ವ ಕುತ್ತು ಸರ್ವ ದೇವೋಪಾಸ್ಯತ್ವ ಧರ್ಮಗಳನ್ನು ಹೇಳಿರುವುದರಿಂದ ಆ ದೇವತೆಯು ಶ್ರೀ ಮುಖ್ಯ ಪ್ರಾಣನೆಂದು ಸಂಶಯವು "ಕುವಿದಂಗವಿ ಸೂರ್ಯೇಣ" ಎಂಬ ಶೃತಿಯಲ್ಲಿ ಪೂರ್ವದಲ್ಲಿ ಸರ್ವದೇವತೆಗಳು ಯಾವ ದೇವತೆಯ ನಮಸ್ಕಾರಾದಿ ಸೇವೆಗಳಿಂದ ಜ್ಞಾನಾದಿ ಗುಣಪೂರ್ಣರಾಗಿ ಅಜ್ಞಾನ ರಾಗಾದಿ ಶೂನ್ಯರೂ ಆಗಿ ಸೂರ್ಯ ದೇವನೊಡನೆ ರಹಸ್ಯ ಸ್ಥಾನದಲ್ಲಿ ಜ್ಞಾನಿಗಳಿಗೆ ಶರಣ್ಯನಾದ ವಾಯುದೇವರಿಗೆ ಸೇವೆ ಮಾಡಿದರೋ ಎಂದು ಮುಖ್ಯ ಪ್ರಾಣನಿಗೆ ಉಪಾಸ್ಯತ್ವ ಧರ್ಮವನ್ನು ಹೇಳಿದೆ ಎಂದು.

2 ಸಜ ಏವನೋವ್ಯೈಷಪ್ರಾಣ ಇತರಾನ್ಪ್ರಾಣಾನ್ಪೃಥಕ್ಪೃಥಗೇವ ಸನ್ನಿಧತ್ತೇ । (ಪ್ರಶ್ನ-3-4) ಯೋಯಂ ಮಧ್ಯಮಃ ಪ್ರಾಣಃ (ಬೃ-3-5-21) ಕುವಿದಂಗ (ಋ-7-91-1) ಇತ್ಯಾದಿನಾ ಪ್ರಾಣವ್ಯವಸ್ಥಾಪಕತ್ವಾತ್ಸರ್ವದೇವೋಪಾಸ್ಯತ್ವಾಚ್ಚ ವಾಯುರೇವೇತಿ ಪ್ರತೀಯತೆ ಎಂದು ಶೃತಿವಾಕ್ಯಗಳು ಮೇಲಿನ ಅರ್ಥವನ್ನು ಹೇಳಿದೆ ಅಂದರೆ

3. ಅತೋ ಬ್ರವೀತ್

## ಸೂ|| ಓಂ|| ಶಬ್ದಾದೇವಪ್ರಮಿತಃ ಓಂ|| 24

ವಾಮನ ಶಬ್ದಾದೇವ ವಿಷ್ಣುರಿತಿ ಪ್ರಮಿತಃ

ಹಾಗೆಲ್ಲ ಶ್ರೀವಿಷ್ಣುವೇ ಉಪಾಸ್ಯ ದೇವತೆಯು. ವಾಮನ ಶಬ್ದ ವಾಚಕ ವಾಮನ ಶೃತಿಯಿಂದ ಶ್ರೀ ವಿಷ್ಣುವೇ ಉಪಾಸ್ಯ ದೇವತೆಯು "ಈಶಾನೋ ಭೂತ ಭವ್ಯಸ್ಯ ಎಂಬಲ್ಲಿ ಈಶಾನ ಶಬ್ದ ವಾಚ್ಯನೂ ವಿಷ್ಣುವೇ. ಮಹಾವಿದ್ವದ್ರೂಢಿಯಿಂದ ಪ್ರಸಿದ್ಧ "ಮಧ್ಯೇವಾಮನಂ" ಎಂದು ವಾಮನ ಶಬ್ದವನ್ನು ಶೃತಿಯಲ್ಲಿ ಸಾಕ್ಷಾತ್ತಾಗಿ ಹೇಳಿರುವುದರಿಂದಲೂ ಶ್ರೀ ವಿಷ್ಣುವೇ ಹೇಳಲ್ಪಟ್ಟಿರುವನು

3. "ನಹಿಶೃತೇರ್ಲಿಂಗಂ ಬಲವತ್" ಲಿಂಗಕ್ಕಿಂತಲೂ ಬಲಿಷ್ಠವಾದುದು ಶಬ್ದವು "ವಾಮನ" ಎಂಬುದು.

4. ಶೃತಿರ್ಲಿಂಗಂ ಸಮಾಖ್ಯಾ ಚ ವಾಕ್ಯಂ ಪ್ರಕರಣಂ ತಥಾ ।
ಪೂರ್ವಪೂರ್ವಂ ಬಲೀಯಃ ಸ್ಯಾದೇವಮಾಗಮ ನಿರ್ಣಯಃ । ಸ್ಕಾಂದೆ.

ಮೇಲಿನ ವಿಷಯದಲ್ಲಿ ಸ್ಕಾಂದ ಪುರಾಣ ವಾಕ್ಯವು

ವಾಚಕ ಶಬ್ದವು (ಶೃತಿಯು) ಅಸಾಧಾರಣ ಧರ್ಮವು ಬೋದಕ ಶಬ್ದವು ಲಿಂಗವು) ಸಾಧಾರಣ ಧರ್ಮವು ಮೇಲಿನಿಂದ ನಿರ್ಣಯವಾದುದಕ್ಕೆ ಸಮಾನ ವಾಕ್ಯವು ಸಮಾಖ್ಯ. ಒಂದೇ ಪ್ರಮೇಯವನ್ನು ಪ್ರತಿಪಾದಿಸುವ ವಾಕ್ಯಗಳ ತಾತ್ಪರ್ಯ ನಿರ್ಣಯದಲ್ಲಿ ಈ ಮೇಲೆ ಮೇಲಿನವು ಪ್ರಬಲ ಪ್ರಬಲ ಪ್ರಮಾಣಗಳು.

5 ತಚ್ಚ ಲಿಂಗಂ ವಿಷ್ಣೋರೇವ । ತಸ್ಯೈವಪ್ರಾಣತ್ವೋಕ್ತೇಸ್ತದ್ವೈತ್ವಂ ಪ್ರಾಣೋ ಅಭವ ಇತಿ ॥

ಪೂರ್ವ ಪಕ್ಷದಲ್ಲಿ ಹೇಳಿದ ಧರ್ಮವೂ ಶ್ರೀವಿಷ್ಣುವಿನದೇ ಈ ಮೇಲಿನ ಶೃತಿಯಲ್ಲಿ ಶ್ರೀ ವಿಷ್ಣುವೇ ಪ್ರಾಣಶಬ್ದದಿಂದ ಹೇಳಲ್ಪಟ್ಟಿರುವನು. ಶಾಸ್ತ್ರ ದೃಷ್ಟಿಯಿಂದಲೂ ಅಂತರ್ಯಾಮಿ ಪರತ್ವ ಹೇಳುವ ಸೂತ್ರಕಾರ ವಚನವೂ ಈ ವಿಷಯದಲ್ಲಿ ದೃಢಪಡವುದು

## ಸೂ॥ ಓಂ॥ ಹೃದ್ಯಪೇಕ್ಷಯಾತು ಮನುಷ್ಯಾಧಿಕಾರತ್ವಾತ್ ಓಂ॥ 25

ಸರ್ವಗತಸ್ಯಾಪಿ ತಸ್ಯಾಂಗುಷ್ಟಂಮಾತ್ರತ್ವಂ ಹೃದ್ಯವಕಾಶಾಪೇಕ್ಷಯಾಯುಜ್ಯತೆ

ಸರ್ವಗತನಾದರೂ ಶ್ರೀ ವಿಷ್ಣುವಿಗೆ ಹೃದಯಾವಕಾಶದ ಅಂಗುಷ್ಠ ಮಾತ್ರ ಪರಿಮಿತಿಯಿಂದ ಹೇಳಿದ್ದರೂ ಶ್ರೀ ವಿಷ್ಣುವಿಗೆ ಪರಿಮಿತಿಯನ್ನು ತಿಳಿಯಬಾರದು. ಆದರೂ ಪಶ್ವಾದಿಗಳಿಗೆ ಅಂಗುಷ್ಟಗಳೇ ಇಲ್ಲದಿರುವುದರಿಂದ ಈ ಪರಿಮಿತ ವಚನವು ಸರ್ವಾಧಿಕಾರಕವಾಗಲಾರದೆಂಬ ಅಂಶವು ಸಂಶಯಕ್ಕೆ ಕಾರಣವು ಆದರೆ ಈ ಉಪಾಸನಾ ವಿದ್ಯೆಗೆ ಮನುಷ್ಯರೇ ಅಧಿಕಾರಿಗಳಾದ್ದರಿಂದ ಅವರುಗಳ ಪರವಾಗಿಯೇ ಈ ವಾಕ್ಯವು ಹೊರಟಿದೆ ಆದ್ದರಿಂದ ಪಶುಗಳಿಗೆ ಅಂಗುಷ್ಟವಿಲ್ಲದಿದ್ದರೂ ಬಾಧಕವಿಲ್ಲ (ಪಶುಗಳಿಗೆ ಈ ವಿದ್ಯಾಧಿಕಾರವಿಲ್ಲವಾಗಿ) ಶ್ರೀವಿಷ್ಣುವು ಸರ್ವಗತನಾದರೂ ಅಂಗುಷ್ಠ ಮಾತ್ರ ಪರಿಮಾಣೋಕ್ತಿಯು ಯುಕ್ತವು. ಯಾಕೆಂದರೆ ಹೃದಯದಲ್ಲಿರುವ ಅವಕಾಶವು

ಅಂಗುಷ್ಠ ಮಾತ್ರ ಪರಿಮಿತಿಯಿಂದ ಆ ಪ್ರದೇಶದಲ್ಲಿ ಅಭಿವ್ಯಕ್ತಾಪೇಕ್ಷಿತ ಮೂರ್ತಿ ವಿಶೇಷದ ವ್ಯಕ್ತಿತ್ವವೂ ಅಂಗುಷ್ಟ ಮಾತ್ರ ಉದ್ದೇಶಿತವೇ.

ಹೃದಯೇ ಸರ್ವತೋವ್ಯಾಪೀ ಪ್ರಾದೇಶಃ ಪುರುಷೋತ್ತಮಃ ।
ಜೀವಾನಾಂ ಸ್ಥಾನಮುದ್ದಿಷ್ಟಃ ಸರ್ವದೈವ ಸನಾತನಃ ।
ಹೃತ್ಕರ್ಣಿಕಾ ಮೂಲಗತಃ ಸೋಂಗುಷ್ಠಾಗ್ರ ಪ್ರಮಾಣಕಃ ।
ಮೂಲೇಶ ಇತಿ ನಾಮಾಸ್ಮಿನ್ ಸರ್ವೇಜೀವಾಃ ಪ್ರತಿಷ್ಠಿತಾಃ ।
ಅಂಗುಷ್ಠ ಮಾತ್ರೇ ಪುರುಷೇ ಕರ್ಣಿಕಾಗ್ರಸ್ಥಿತೇಹರೌ ।
ಪ್ರವಿಶಂತಿ ಸುಷುಪ್ತೌತು ಪ್ರಭುದ್ಯಂತೆ ತತಸ್ತಥಾ ।

ಹೃದಯಾಕಾಶದಲ್ಲಿ ಪ್ರಾದೇಶ ಪರಿಮಿತ ರೂಪ ವಿಶೇಷದ ಹೃದಯಗತ ಕಮಲ ಕರ್ಣಿಕಾ ಮೂಲಗತಾವಕಾಶದಲ್ಲಿ ಅಂಗುಷ್ಠಾಗ್ರ ಪರಿಮಿತ ರೂಪಾಂತರದ ಅಭಿವ್ಯಕ್ತಿಯ ಸಂಭವದಿಂದ ತದ್ಗತಸ್ಥಾನ ಧರ್ಮದಸ್ಥಾನವುಳ್ಳ ವ್ಯಕ್ತಿಯಉಪಚರಿತೋಕ್ತಿಯು

7 **ಇತರ ಪ್ರಾಣಿನಾಮಂಗುಷ್ಟಾ ಭಾವೇಪಿ ಮನುಷ್ಯಾಧಿಕಾರಿತ್ವಾನ್ನ ವಿರೋಧಃ ।**

ಅಂಗುಷ್ಟವು ಮಾನುಷಾಕಾರದಲ್ಲಿಯೇ ಇರುತ್ತದೆಯಾಗಿ ಇತರ ಪ್ರಾಣಿಗಳಲ್ಲಿ ಇಲ್ಲದಿದ್ದರೂ ಪ್ರಮಾದವೇನಿಲ್ಲ. ಈ ಉಪಾಸನೆಗೆ ಅಧಿಕಾರಿಗಳು ಮನುಷ್ಯರೇ ಪ್ರಾಣಿಗಳಲ್ಲ.

**– ಇತಿ ಪ್ರಮಿತಾಧಿಕರಣಂ –**

## – ದೇವತಾಧಿಕರಣಂ –

ಈ ಅಧಿಕರಣದಲ್ಲಿ ದೇವತೆಗಳಿಗೂ ಬ್ರಹ್ಮ ವಿದ್ಯಾಧಿಕಾರದ ಸಮರ್ಥನವು.

1. **ಮನುಷ್ಯಾಣಾಮೇವ ವೇದವಿದ್ಯಾಧಿಕಾರ ಇತ್ಯುಕ್ತಂ ।**

ಹಿಂದಿನ ಸೂತ್ರದಲ್ಲಿ ಮನುಷ್ಯರಿಗೆ ವೇದ ವಿದ್ಯಾಧಿಕಾರವು ಇದೆ ಅನ್ಯರಿಗೆ ಅಧಿಕಾರವಿಲ್ಲವೆಂದು ತಿಳಿಯುವುದರಿಂದ ದೇವತೆಗಳಿಗೆ ವೇದ ವಿದ್ಯಾ ಆಧಿಕಾರವಿಲ್ಲವೆಂದು ಸಂಶಯವು. "ವಿಶ್ವೇದೇವಾ ಉಪಾಸತೆ" ಎಂದು ದೇವತೆಗಳಿಗೂ ಹಿಂದೆ ಹೇಳಿರುವ ಅನೇಕ ವಾಕ್ಯಗಳಿಂದ ವಿರೋಧವು ಬರುವುದು. ಆದ್ದರಿಂದ ದೇವತೆಗಳಿಗೆ ವೇದ ವಿಧ್ಯಾಧಿಕಾರವು ಇದೆಯೋ ಇಲ್ಲವೊ ಎಂಬ ಸಂಶಯವು.

2. **ತಿರ್ಯಗಾದ್ಯಪೇಕ್ಷಯೈವ ಮನುಷ್ಯತ್ವವಿಶೇಷಣ ಮುಕ್ತಂ ನತು ದೇವಾದ್ಯಪೇಕ್ಷಯೇತ್ಯಾಹ ॥**

ವಿಶೇಷ ಬುಧ್ಯಾದಿಗಳಲ್ಲದ ಪಶ್ವಾದಿಗಳಿಗೆ ಅಧಿಕಾರವಿಲ್ಲವೆಂದು ತಿಳಿಸುವದಕ್ಕಾಗಿ ಮನುಷ್ಯರಲ್ಲದವರಿಗೆ ಇಲ್ಲ ಎಂದು ಹೇಳಿದೆಯೇ ಹೊರತು ದೇವತೆಗಳ ಪಕ್ಷದಲ್ಲಿ ಹಾಗೆ ತಿಳಿಯಕೂಡದು.

## ಸೂ॥ ಓಂ॥ ತದುಪರ್ಯಪಿ ಬಾದರಾಯಣಃ ಸಂಭವಾತ್ ಓಂ॥ 26

3. **ತದುಪರಿ ಮನುಷ್ಯಾಣಾಂ ಸತಾಂ ದೇವಾದಿತ್ವಪ್ರಾಪ್ತ್ಯುಪರಿ ಸಂಭವತಿ ಹಿ ತೇಷಾಂವಿಶಿಷ್ಟ ಬುಧ್ಯಾದಿಭಾವಾತ್ ॥**

ದೇವತಾಪದ ಯೋಗ್ಯ ಮನುಷ್ಯರಿಗೆ ಕೇವಲ ಮನುಷ್ಯತ್ವದೆಶೆಯಲ್ಲಿಯೇ ಮಾತ್ರವಲ್ಲದೆ ದೇವತಾ ಪದ ಪ್ರಾಪ್ತ್ಯನಂತರದಲ್ಲಿಯೂ ವೇದ ವಿದ್ಯಾಧಿಕಾರವು ಇರುತ್ತದೆ ಅವರುಗಳಿಗೆ ಅಧಿಕಾರ ಪ್ರಯೋಜಕ ವಿಶಿಷ್ಟ ಬುದ್ಧ್ಯಾಧಿಯೋಗ ದಿಂದಲೇ ಅಧಿಕಾರವುಂಟೆಂದು ಬಾದರಾಯಣರು ಹೇಳುವರು. ವಿದ್ಯಾಸಾಧ್ಯ ಜ್ಞಾನ ಮೋಕ್ಷಗಳ ಅರ್ಥಿತ್ವವು ದೇವತೆಗಳಲ್ಲಿಯೂ ಕೂಡುವುದು.

4 ತಿರ್ಯಗಾದೀನಾಂ ತದಭಾವಾದಭಾವಃ । ತೇಷಾಮಪಿ ಯತ್ರ ವಿಶಿಷ್ಟಬುದ್ಧ್ಯಾದಿಭಾವಸ್ತತ್ರಾವಿರೋಧಃ ॥

ತಿರ್ಯಗಾದಿ ಜಂತುಗಳಲ್ಲಿ (ಜಡವಸ್ತುಗಳೂ ಮೂಢ ಜನ ಸಮುದಾಯಗಳೂ ಸೇರಿ) ವಿಶಿಷ್ಟ ಬುಧ್ಯಾದಿಗಳು ಸಾಮಾನ್ಯವಾಗಿಲ್ಲವಾದ್ದರಿಂದ ಅಧಿಕಾರವಿಲ್ಲವು. ಆದರೆ ದೇವತಾದಿಗಳಂತೆ ಅವುಗಳಲ್ಲಿಯೂ ಜರಿತಾರ್ಯಾದಿ ಪಕ್ಷಿಗಳಲ್ಲಿ ಉಕ್ತವಾಗಿರ್ರು ವುದರಿಂದ ಈ ಉಪಾಸನೆಯಲ್ಲಿ ವಿಶಿಷ್ಟ ಬುಧ್ಯಾದಿಗಳಿರುವುದೇ ಕಾರಣವೇ ಹೊರತು ಮನುಷ್ಯ ಮಾತ್ರದಿಂದಲೇ ಅಲ್ಲ

5. ನಿಷೇಧಾಭಾವಾತ್ ದೃಶ್ಯಂತೇಹಿ ಜರಿತಾರ್ಯಾದಯಃ ॥

ಮನುಷ್ಯೇತರ ವಸ್ತುಗಳಲ್ಲಿ ಈ ಅಧಿಕಾರವು ನಿಷೇಧ ಮಾಡುವ ವಾಕ್ಯಗಳಿಲ್ಲ ಮತ್ತೆ ಇರುವಿಕೆಯಲ್ಲಿ ದೃಷ್ಟಾಂತವಾಗಿ ಈ ಆಖ್ಯೆಯು ಅಗ್ನಿಯಿಂದ ಖಾಂಡವವನವು ದಹಿಸಲ್ಪಡುತ್ತಿರಲು ತನ್ನ ತಮ್ಮಂದಿರುಗಳಿಂದ ವಿಜ್ಞಾಪಿಸಲ್ಪಟ್ಟ ಜರಿತಾರ್ ಪಕ್ಷಿಯು ಅಗ್ನಿ ಸೂಕ್ತದಿಂದ ಅಗ್ನಿದೇವತೆಯನ್ನು ಸ್ತುತಿಸಿ ತನ್ನನ್ನೂ ತನ್ನ ಸಹೋದರ ಪಕ್ಷಿ ಗಳನ್ನೂ ದಹನದಿಂದ ತಪ್ಪಿಸಿಕೊಂಡಿರುವ ಕಥೆಯು ಭಾರತದಲ್ಲಿ ಬಂದಿದೆ. ಅದ್ದರಿಂದ ವಿಶಿಷ್ಟ ಬುಧ್ಯಾದಿತ್ವವೇ ವೇದ ವಿದ್ಯಾಧಿಕಾರಕ್ಕೆ ಪ್ರಯೋಜಕವೆಂದು ತಿಳಿಯುತ್ತದೆ (ಜಾತಿಗಳಲ್ಲ)

## ಸೂ॥ ಓಂ॥ ವಿರೋಧಃಕರ್ಮಣೀತಿಚೇನ್ನಾನೇಕ ಪ್ರತಿಪತ್ತೇ ರ್ದರ್ಶನಾತ್ ಓಂ॥ 27

ಮನುಷ್ಯಾ ಏವ ದೇವಾದಯೋ ಭವಂತೀತಿ ತದುಪರೀತ್ಯುಕ್ತಂ । ತತ್ರ ಯದಿ ಮನುಷ್ಯಾಃ ಸಂತೋ ದೇವಾದಯೋ ಭವಂತಿ ತರ್ಹ್ಯಪೂರ್ವಂ ದೇವತ್ವಾ ಭಾವಾ

ದ್ದೇವತೋದ್ದಿಷ್ಟ ಕರ್ಮಣಿ ವಿರೋಧ ಇತಿ ಚೇತ್-

7 **ಅನೇಕೇಷಾಂದೇವತಾಪದಪ್ರಾಪ್ತೇರ್ದರ್ಶನಾತ್ ।**
**ತೇಹನಾಕಂ ಮಹಿಮಾನಃ ಸಚಂತ ।**
**ಯತ್ರಪೂರ್ವೇ ಸಾಧ್ಯಾ ಸಂತಿ ದೇವಾಃ ॥ ಇತಿ**

ದೇವಾದಿ ಪದಗಳಿಗೆ ಪೂರ್ವಕಲ್ಪದಲ್ಲಿ ಪ್ರವೃತ್ತಿ ಜ್ಞಾನ ಕರ್ಮಗಳಿಂದ ವಿಷಯ ಸಾಧನೆಯಾಗಿದ್ದರೂ ಪದಪ್ರಾಪ್ತ್ಯನಂತರದಲ್ಲಿ ಉದ್ದೇಶ್ಯವಿಲ್ಲವೆಂಬ ನಿಮಿತ್ತದಿಂದ ಅಧಿಕಾರತ್ವವು ವ್ಯರ್ಥವೆಂದರೆ ಹಾಗಲ್ಲ ಅನೇಕ ಯೋಗ್ಯ ಮನುಷ್ಯರುಗಳಿಂದ ದೇವತಾ ಪದ ಪ್ರಾಪ್ತಿಯು ನಾನಾ ಕಾಲಗಳಲ್ಲಿ ಕಂಡಿರುವುದರಿಂದಲೂ (ಯತ್ರ ಪೂರ್ವೇ ..) ಎಂಬ ವಾಕ್ಯದಲ್ಲಿ ಹೇಳಿರುವಂತೆ ಉದ್ದೇಶವು ಇದೆ. ದೇವತಾ ಪದಗಳು ಅನೇಕ ಜೀವ ರುಗಳಿಂದ ಹಿಂದಿನ ಕಲ್ಪಗಳಲ್ಲಿ ಪ್ರಾಪ್ಯಗಳಾಗಿ ಮುಂದೆಯೂ ಅನೇಕರಿಂದ ಲಭ್ಯವಾಗ ಬೇಕಾಗಿರುವುದರಿಂದ ಪ್ರವಾಹತಃ ದೇವತಾ ಪದಗಳಿಗೆ ನಿತ್ಯತ್ವವು ಇರುವುದರಿಂದ ಉದ್ದಿಷ್ಟೋಪಾಸನೆಗಳು ವ್ಯರ್ಥವಲ್ಲ

## ಸೂ॥ ಓಂ॥ ಶಬ್ದ ಇತಿಚೇನ್ನಾತಃ ಪ್ರಭವಾತ್ಪ್ರತ್ಯಕ್ಷಾನು ಮಾನಾಭ್ಯಾಂ ಓಂ॥ 28

"ವಾಚಾ ವಿರೂಪ ನಿತ್ಯಯಾ (ಋ-8-64-6) ಇತ್ಯಾದಿಶೃತೇ ರಾಷ್ಟ್ರ್ಯೈ ನಿಶ್ಚಯಾನ್ನಿತ್ಯತ್ವಾಪೇಕ್ಷತ್ವಾಚ್ಚ ಮೂಲ ಪ್ರಮಾಣಸ್ಯ ॥

ದೇವತೆಗಳ ಆದ್ಯಂತತ್ವ ಶೃತಿಯು ಅನಾದಿತ್ವವನ್ನು ದೇವತಾಪದಗಳಿಗೆ ಹೇಳುವ ಅನೇಕ ವಚನಗಳ ವಿರೋಧ ಮತ್ತು ಯಾವುದಾದರೊಂದು ಸಂದರ್ಭದಲ್ಲಿ ದೇವತಾ ವಾಚ್ಯ ವಸ್ತುವಲ್ಲದಿರುವ ಸಾಧ್ಯತೆಯ ಶಂಕಯನ್ನು ನಿವಾರಿಸಲು ಪ್ರತಿ ಕಲ್ಪದಲ್ಲಿ ಯೂ ನಿರಂತರವಾಗಿ ಪ್ರವಾಹತಃ ದೇವರುಗಳ ನಿತ್ಯತ್ವವು ಇರುತ್ತದೆ ಎಂದ ಹೇಳಿದೆ.

9, **ಸ್ವತಃಪ್ರಾಮಾಣ್ಯಸಿದ್ಧೇಶ್ಚ ನಿತ್ಯತ್ವಾದ್ವೇದಸ್ಯ ತದುದಿತಾನಾಂ ದೇವಾನಾಮನಿತ್ಯತ್ವಾತ್ ॥**

10 ಪುನರಸ್ಯ ಭಾವನಿಯಮಾಭಾವಾಚ್ಚ ಶಬ್ದೇ ವಿರೋಧ ಇತಿಚೇತ್ ।

ನಿತ್ಯ ವಾದ ವೇದ ವಾಕ್ಯಗಳಿಗೆ ಸ್ವತಃ ಪ್ರಮಾಣ ಸಿದ್ಧಿಯಿರುವುದರಿಂದ ಅಲ್ಲಿ ಹೇಳಿರುವ ದೇವತೆಗಳಿಗೆ ಅನಿತ್ಯತ್ವವು ತಿಳಿಯುವುದರಿಂದ ಸಮಾಧಾನವು ಹೇಗೆ ಎಂದರೆ ವೇದದಿಂದ ತಿಳಿಯಲ್ಪಡುವ ದೇವತಾಧಿಕಾರ ಪದಗಳು ನಿತ್ಯಗಳು ಕಾಲಕಾಲಗಳಲ್ಲಿ ಆ ಆ ಅಧಿಕಾರದಲ್ಲಿರುವ ಅಧಿಕಾರ ಜೀವರುಗಳ ಅಧಿಕಾರಕ್ಕೆ ಅನಿತ್ಯರು ಹಿಂದೆ ಪದ ಹೊಂದಿದ್ದ ಜೀವರುಗಳು ತಮ್ಮ ಕಾಲ ನಿಯಮಾ ನಂತರದಲ್ಲಿ ಮೋಕ್ಷವನ್ನು ಹೊಂದಿ ಆ ಸ್ಥಾನಗಳಿಗೆ ಬೇರೆ ಯೋಗ್ಯ ಜೀವರುಗಳು ನಿಯಮವಾಗಿ ಬರುವುದ ರಿಂದಲೂ ಮತ್ತೆ ಮುಂದೆಯೂ ಇದೇ ರೀತಿ ನಿಯಮದಿಂದಲೂ ದೇವತಾ ಪದ ಸ್ಥಾನ ಕ್ಕೆ ನಿತ್ಯತ್ವವು. ಆದರೆ ದೇವತಾಪದ ಪ್ರಾಪ್ತ ಜೀವರುಗಳಿಗೆ ಅಧಿಕಾರಿ ಸ್ಥಾನವು ಅನಿತ್ಯವು.

11 ನ. ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮ ಕಲ್ಪಯತ್ (ಮ ನಾ. 5)ಯಥೈವ ನಿಯಮಃ ಕಾಲೇ ಸುರಾದಿನಿ ಯಿಮಸ್ತಥಾ ತಸ್ಮಾನ್ನಾನಿಶಂಕ್ಯಾಪಿವಿಷ್ಣ ಮೇತದ್ಭವಿಷ್ಯತೀದೃ ತ್ಯಾದೇಃ । ಅತ ಏವ ಶಬ್ದಾತ್ತೇಷಾಂ ಪ್ರಭವನಿಯಮಾತ್ ॥ ಮಹತಾಂ ಪ್ರತ್ಯಕ್ಷಾತ್ ಚ ॥

ವೇದವಾಕ್ಯಕ್ಕೆ ಅಪ್ರಮಾಣವನ್ನು ಕಲ್ಪನೆ ಮಾಡಬಾರದು. ವೇದಗಳಲ್ಲಿ ಹೇಳ ಲ್ಪಡುವ ದೇವತೆಗಳ ಪ್ರವಾಹವು ಕಾಲಕಾಲಗಳಲ್ಲಿ ನಿಯಮವಾಗಿ ಆಗುವುದರಿಂದ ಈ ಸ್ಥಾನಗಳಲ್ಲಿರುವ ವ್ಯಕ್ತಿಗಳೂ ಪ್ರವಾಹತಃ ನಿತ್ಯರೆಂದು ಸಿದ್ಧವಾಗುತ್ತಭ. ಈಗ ಇರುವ ಪ್ರಪಂಚವು ಈಗಿರುವಂತೆಯೇ ಸರ್ವಕಾಲಗಳಲ್ಲಿಯೂ ನಿಯಮವಾಗಿ ದೇವತಾ ಪದಗಳಲ್ಲಿ ನಿತ್ಯತ್ವವು ಇರುವುದೆಂದು ಮಹಾತ್ಮರ ಪ್ರತ್ಯಕ್ಷವೂ ಸಿದ್ಧವಾಗುತ್ತವೆ. ಅನು ಮಾನದಿಂದಲೂ ಸಿದ್ಧವು

12. ಯಥೇದಾನೀಂ ತಥೋಪರ್ಯಪಿ ದೇವಾ ಭವಿಷ್ಯಂತೀತೀತರೇಷಾ ಮನುಮಾನಾಚ್ಚ ।

ಈ ಪ್ರಪಂಚದಲ್ಲಿ ಹೇಗೋ ಹಾಗೆ ಯಾವ ಸ್ಥಾನವೂ ಖಾಲಿಯಾಗದಂತೆ ಬೇರೆ

ಅಧಿಕಾರಿಗಳ ನಡವಳಿಕೆಯೂ ತಡೆಯಿಲ್ಲದೆ ನಿತ್ಯವಾಗಿ ನಾಗುವುದೋ ಹಾಗೆಯೇ ಮೇಲಿನ ಪ್ರಪಂಚದಲ್ಲಿಯೂ ಇರಲು ಸಾಧ್ಯವೆಂಬ ಅನುಮಾನವೂ ಸ್ಥಾಪಿತವು

## ಸೂ|| ಓಂ || ಅತ ಏ ವಚ ನಿತ್ಯತ್ವನರ್ ಓಂ|| 29

ಅತ ಏವ ಶಬ್ದಸ್ಯ ನಿತ್ಯತ್ವಾದೇವ ಚ ದೇವಪ್ರವಾಹ ನಿತ್ಯತ್ವಂ ||

ವೇದ ವಾಕ್ಯಗಳಿಗೆ ನಿತ್ಯತ್ವ ಸಿದ್ಧಿಸುವುದರಿಂದಲೇ ಅದರಲ್ಲಿ ಹೇಳಿದಂತೆ ದೇವತೆಗಳ ಪ್ರವಾಹವು ನಿತ್ಯವು ಎಂದು ಸ್ಪಷ್ಟವು.

## ಸೂ|| ಓಂ|| ಸಮಾನನಾಮರೂಪತ್ವಾಚ್ಚಾವೃತ್ತಾವಪ್ಯ ವಿರೋಧೋ ದರ್ಶನಾತ್ ಸ್ಮೃತೇಶ್ಚ ಓಂ|| 30

ಪೂರ್ವಕಲ್ಪದಲ್ಲಿ ಮುಕ್ತರಾದ ದೇವತೆಗಳು ಪುನಃ ತಮ್ಮ ಸ್ಥಾನಗಳಲ್ಲಿಲ್ಲದಿದ್ದರೂ ವೇದ ವಾಕ್ಯಗಳಲ್ಲಿ ಪ್ರತಿಪಾದಿಸಿರುವ ಏಕ ನಾಮಗಳಿಂದ ವಿರೋಧವಿಲ್ಲ ಏಕೆಂದರೆ ಹಿಂದಿನ ಕಲ್ಪದಲ್ಲಿದ್ದ ನಾಮರೂಪಗಳನ್ನೇ ಈ ಕಲ್ಪದಲ್ಲಿ ಉತ್ಪನ್ನರಾದ ದೇವತೆಗಳಿಗೂ ಹೆಸರಿಸಿರುವುದರಿಂದ ಅವರುಗಳನ್ನು ಪ್ರತಿಪಾದಿಸುವ ವೇದವಾಕ್ಯಗಳಲ್ಲಿ ಏಕ ರೀತಿಯು ಉಕ್ತವಾಗಿ ವ್ಯತ್ಯಾಸಕ್ಕೆ ಕಾರಣವಿರುವುದಿಲ್ಲ.

ಅತೀತಾನಾಗತಾನಾಂ ದೇವಾನಾಂ ಸಮಾನ ನಾಮರೂಪತ್ವಾತ್ ಪ್ರಾಪ್ತ ಪದಾನಾಂ ಮುಕ್ತ್ಯಾವೃತಾವಪ್ಯ ವಿರೋಧಃ । ಎಂದು

15 **"ಯಥಾಪೂರ್ವಂ" ಇತಿ ದರ್ಶನಾತ್** (ಮಹಾನಾ- 5-7)

ಈ ಮೇಲಿನ ವಾಕ್ಯದಿಂದಲೂ ಅನಾದಿನಿಧನಾ ಎಂಬ ಸ್ಮೃತಿಯಿಂದಲೂ ಅದು ಸಾಧ್ಯವು.

16. **ಅನಾದಿನಿಧನಾ ನಿತ್ಯಾ ವಾಗುತ್ಸೃಷ್ಟಾ ಸ್ವಯಂಭುವಾ ।
ಋಷೀಣಾಂ ನಾಮಧೇಯಾನಿ ಯಾಶ್ಚ ವೇದೇಷು ದೃಷ್ಟಯಃ ।
ವೇದಶಬ್ದೇಭ್ಯ ಏವಾದಾ ನಿರ್ಮಮೇಮಸ ಮಹೇಶ್ವರ ಇತಿ
ಸ್ಮೃತೇಶ್ಚ ||**

ಸೃಷ್ಟಿ ಕಾಲದಲ್ಲಿ ಸರ್ವಸ್ವತಂತ್ರವಾದ ಮಹೇಶ್ವರನಾದ ಶ್ರೀವಿಷ್ಣುವು ಯಾವ ನಾಮ ಶಬ್ದಗಳು ಉಚ್ಚರಿಸಲ್ಪಟ್ಟವೋ ಅದೇ ನಾಮ ಶಬ್ದಗಳಿಂದ ಸರ್ವ ದೇವತಗಳು ಮತ್ತು ಋಷ್ಯಾದಿಗಳನ್ನು ಸೃಷ್ಟಿಸುವನು.

## ಸೂ॥ ಓಂ॥ ಮಧ್ವಾದಿಷ್ವಸಂಭವಾದನಧಿಕಾರಂಜೈಮಿನಿಃ ಓಂ॥ 31

"ಅಸೌವಾ ಆದಿತ್ಯೋದೇವ ಮಧುಃ" ಎಂದು ಹೇಳಿರುವ ಮಧು ವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರಾಭಾವವನ್ನು ಜೈಮಿನ್ಯಾಚಾರ್ಯರು ಪ್ರತಿಪಾದಿಸುವರು ಏಕೆಂದರೆ ಅವರುಗಳಿಗೆ ಅರ್ಥಿತ್ವದಿಂದ ಲಭ್ಯವದ ಯೋಗ್ಯವಲ್ಲದ್ದರಿಂದ ಅಸಂಭವವು ಎಂದು ಅಭಿಪ್ರಾಯವು

ವಸೂನಾಮೇವೈಕೋ ಭೂತ್ವಾ (ಷ-3-6-2) ಇತ್ಯಾದಿನಾ ಪ್ರಾಪ್ಯಫಲ ತ್ವಾತ್ ಪ್ರಾಪ್ತಪದಾನಾಂಮಧ್ವಾದಿ ವಿದ್ಯಾಸ್ವನಧಿಕಾರಂ ಜೈಮಿನಿಃ ಮನ್ಯತೆ ॥

ಮಧ್ವಾಧಿ ವಿದ್ಯೆಯಲ್ಲಿ "ಅಸೌ ಆದಿತ್ಯೋದೇವಮಧು" ಎಂಬ ವಾಕ್ಯದಲ್ಲಿ ಸಿದ್ಧಿಸುವ ಫಲಗಳೇ ಪ್ರಾಪ್ತವಾಗಿರುವ ಫಲವಾದ್ದರಿಂದ ಆ ನೂಕ್ತೋಪಾಸನವು ಸಿದ್ಧಿಯಾಗಿರುವುದರಿಂದಲೇ ಪುನಃ ಅವರುಗಳಿಂದ ಆ ಸ್ಥಾನಗಳ ಅರ್ಥಿತ್ವವು ಕೂಡುವುದಿಲ್ಲವಾದ್ದರಿಂದ ಉಪಾಸನೆಯೂ ನೂಕ್ತವಲ್ಲ. ಇತರ ಉತ್ತಮ ಸ್ಥಾನಾಪೇಕ್ಷೆಯಲ್ಲಿ ಯಾದರೋ ರುದ್ರಪದಾದಿಪದಗಳು ವಸ್ವಾದಿ ದೇವತೆಗಳಿಂದ ಹೊಂದಲು ಯೋಗ್ಯವಲ್ಲವಾದ್ದರಿಂದಲೂ ಅರ್ಥಿತ್ವ ಸಂಬಂಧವಿಲ್ಲವಾಗಿ ಅಧಿಕಾರಾಭಾವನ್ನು ಹೇಳಿದೆ

## ಸೂ॥ ಓಂ॥ ಜ್ಯೋತಿಷಿ ಭಾವಾಚ್ಚ ಓಂ॥ 32

ಜ್ಯೋತಿಷಿ ಸರ್ವಜ್ಞತ್ವೇ ಭಾವಾಚ್ಚ । ಆದಿತ್ಯ ಪ್ರಕಾಶೇಂತರ್ಭಾವವತ್ತ ಜ್ಞಾನೇನಸರ್ವವಸ್ತೂನಾಮಂತರ್ಭಾವಾತ್। ನಿತ್ಯಸಿದ್ಧತ್ವಾಚ್ಚ ವಿದ್ಯಾನಾಂ॥

ದೇವತೆಗಳಿಗೆ ಸರ್ವಜ್ಞತ್ವಭಾವದಿಂದ ಸರ್ವವಸ್ತುಗಳಲ್ಲಿಯೂ ವಿಷಯಗಳಅಂತರ್ಭಾವದಿಂದ ಸಿದ್ಧ ಜ್ಞಾನಿಗಳಾಗಿ ಜ್ಞಾನಾರ್ಥಕ ಅರ್ಥಿತ್ವವು ಇರುವುದಿಲ್ಲ ಆದ್ದರಿಂದ

ಅವರುಗಳು ಮೋಕ್ಷ ಪ್ರಾಪ್ಯತ್ವ ವಿಷಯಕ ಜ್ಞಾನಾರ್ಥಕ ಅರ್ಥಿತ್ವವು ಇರುವುದಿಲ್ಲ ಆದ್ದರಿಂದ ಅವರುಗಳು ಮೋಕ್ಷ ಪ್ರಾಪ್ಯತ್ವ ವಿಷಯಕ ವಿದ್ಯೆಯನ್ನು ಹೊಂದಿರುವುದರಿಂದ ಪುನಃ ಅರ್ಥಿತ್ವವು ಇಲ್ಲ ಜೈಮಿನಿ ಆಚಾರ್ಯರು ದೇವತೆಗಳಿಗೆ ಸರ್ವವಿಷಯ ಜ್ಞಾನವು ಯಥಾ ಯೋಗ್ಯತೆಯಂತೆ ಲಭ್ಯವಾಗಿರುವುದರಿಂದ ಜ್ಞಾನಸಾಧನ ವಿದ್ಯಾಧಿಕಾರವೇ ಇಲ್ಲವೆಂದು ಹೇಳುವರು

ದೇವತೆಗಳಿಗೆ ವಿದ್ಯಾಸಾಧ್ಯ ವಿಶೇಷ ಪ್ರಕಾಶವು ಮೋಕ್ಷ ಫಲದಲ್ಲಿ ಅತಿಶಯ ಹೊಂದಲು ಸಾಧ್ಯದಿಂದ ದೇವತೆಗಳಿಗೆ ವಿದ್ಯಾಧಿಕಾರ ದ್ಯಾತ್ವವು ಇದೆಯೆಂದು ಬಾದರಾಯಣಾಚಾರ್ಯರು ಹೇಳುವರು ಜೈಮಿನಿಮತವಾದರೋ ಪ್ರಾಪ್ತಫಲ ಫಲಾರ್ಥಿತವು ಇಲ್ಲವೆಂದು ಅಭಿಪ್ರಾಯವಾದ್ದರಿಂದ ವಿರೋಧವಿಲ್ಲ.

**ಸೂ|| ಓಂ|| ಭಾವಂ ತು ಬಾದರಾಯಣೋಽಸ್ತಿ ಹಿ ಓಂ|| 33**

ಫಲ ವಿಶೇಷ ಭಾವಾಪ್ರಾಪ್ತ ಪದಾನಾಮಪಿ ದೇವಾನಾಂ ಮಧ್ವಾದಿಷು
ಧಿಕಾರಂ ಬಾದರಾಯಣೋ ಮನ್ಯತೆ । ಅಸ್ತಿಹಿ ಪ್ರಕಾಶ ವಿಶೇಷಃ ।

ಯದ್ಯಪಿ ದೇವತಾ ಸ್ಥಾನವುಳ್ಳವರು ಬ್ರಹ್ಮ ಜ್ಞಾನತ್ವದಿಂದ ಲಭ್ಯ ಮೋಕ್ಷ ತದಿತರ ಫಲಗಳನ್ನು ಹೊಂದುವವರು, ಆದರೆ ಅವರಿಗೂ ಮದ್ವಾದಿವಿದ್ಯೆಯಿಂದ ಜ್ಞಾನದಿಂದಲೇ ಸಾಧ್ಯವಲ್ಲದ ಅತಿಶಯ ಮೋಕ್ಷ ಸುಖ ಪ್ರಾಪ್ತಿಯಲ್ಲಿ ಸಾಧ್ಯವು ಎಂದು ಬಾದರಾಯಣ ಮತವು ಅಂದರೆ ಮಧುವಿದ್ಯೆಯಲ್ಲಿ ದೇವತೆಗಳಿಗೂ ಅಧಿಕಾರ ಉಂಟು. ವಿಶೇಷ ಸುಖಾಪೇಕ್ಷೆಯೇ ಅರ್ಥಿತ್ವವು.

20 **ಯಾವತ್ಸೇವಾ ಪರೇ ತತ್ವೇ ತಾವತ್ಸುಖ ವಿಶೇಷತಾ ।**
**ಸಂಭವಾಚ್ಚ ಪ್ರಕಾಶಸ್ಯ ಪರಮೋಕ್ಷಮ್ಯತೇ ಹರಿಮ್ ।**
**ತೇಷಾಂ ಸಾಮರ್ಥ್ಯಯೋಗಾಚ್ಚ ದೇವಾನಾಮಪ್ಯುಪಾಸನಮ್ ।**
**ಸರ್ವಂ ವಿಧೀಯತೇ ನಿತ್ಯಂ ಸರ್ವಯಜ್ಞಾದಿಕರ್ಮಚೇತಿ**
**ಸ್ಕಾಂದೇ ||**

ವಿದ್ಯಾವಿಚಾರದಿಂದ ಸಾಧ್ಯವಾದ ಪ್ರಕಾಶಜ್ಞಾನ ವಿಶೇಷ ಪ್ರಾಪ್ತಿರೂಪ ಪ್ರಯೋಜನವು ಮೋಕ್ಷದಲ್ಲಿ ಇರುವುದರಿಂದ ದೇವತೆಗಳು ಪ್ರಾಪ್ತಸ್ಥಾನರಾದಾಗ್ಯೂ ಸರ್ವವಿದ್ಯೋಕ್ತ ಉಪಾಸನೆಯೂ ಯಜ್ಞಾದಿ ಕರ್ಮಗಳನ್ನೂ ಮಾಡಬೇಕೆಂದು

ಶೃತಿಗಳಲ್ಲಿ ಕರ್ತವ್ಯವನ್ನುತೆ ನಿಯಮವು ಹೇಳಿದೆ. ಶ್ರೀವರವತ್ಸನೊಬ್ಬನೇ ಸರ್ವಜ್ಞ ಸಾದ್ದರಿಂದ ಈ ನಿಯಮಗಳಿಂದ ಬಿಡಲ್ಪಟ್ಟಿರುವವನು.

**21. ಉಕ್ತಫಲಾನಧಿಕಾರ ಮಾತ್ರಂ ಜೈಮಿನಿಮತಂ ಅತೋ ನ ತನ್ಮತವಿರೋಧಃ ।**

ಆ ಆ ಉಪಾಸನೆಗಳಿಂದ ಪ್ರಾಪ್ಯ ಫಲದ ವಿಷಯದಲ್ಲಿ ಮಾತ್ರ ಜೈಮಿನಿಯು ನಿಷೇಧ ಹೇಳುವುದರಿಂದ ಈ ಮತವು ಹಿಂದಿನ ಬಾದರಾಯಣ ಮತಕ್ಕೆ ವಿರೋಧವಿಲ್ಲ.

**22. ಸರ್ವಜ್ಞಸ್ಯೈವ ಕೃಷ್ಣಸ್ಯ ತ್ವೇಕದೇಶವಿಚಿಂತಿತಮ್ ।
ಸ್ವೀಕೃತ್ಯ ಮುನಯೋಬ್ರೂಯುಸ್ತನ್ಮತಂ ನ ವಿರುಧ್ಯತೇ ॥**

ಜೈಮಿನ್ಯಾಸ ಜ್ಞಾನಿಗಳು ನಿರುಪ ಚರಿತ ಸರ್ವಜ್ಞ ಶ್ರೀವೇದವ್ಯಾಸಾಚಾರ್ಯರ ಉಕ್ತಿಯ ಏಕದೇಶ ಮಾತ್ರವನ್ನು ಚಿಂತನದಿಂದ ಹೊರಗೆ ಹೊರಡಿಸುವರು ಮತ್ತು ಸರ್ವಜ್ಞಪೂರ್ಣ ಚಿಂತನವನ್ನು ಹೇಳಲು ಸಾಧ್ಯವಿಲ್ಲ ಅಸಮರ್ಥರು.

– ಇತಿ ದೇವತಾಧಿಕರಣವು –

**– ಅಪಶೂದ್ರಾಧಿಕರಣಂ –**

**ಈ ಅಧಿಕರಣದಲ್ಲಿ ತ್ರೈವರ್ಣಿಕೇತರನಾದ ಶೂದ್ರನಿಗೆ ವೇದ ವಿದ್ಯಾಧಿಕಾರವು ನಿರಾಕೃತವಾಗಿದೆ.**

1 ಮನುಷ್ಯಾಧಿಕಾರತ್ವಾದಿತ್ಯುಕ್ತೇ(ಽ)ವಿಶೇಷಾಚ್ಛೂದ್ರಸ್ಯಾಪಿ ಅಹಹಾರೇತ್ವಾ ಶೂದ್ರ"(ಛಾ 4-2-3) ಇತಿ ಪೌತ್ರಾಯಣೋಕ್ತೇ ರಧಿಕಾರ ಇತಿ ।

ಮನುಷ್ಯ ಮಾತ್ರರಿಗೆ ವೇದವಿದ್ಯಾಧಿಕಾರವನ್ನು ಹೇಳಿರುವುದರಿಂದ ಶೂದ್ರಜಾತಿ ಮನುಷ್ಯರಿಗೂ ವೇದವಿದ್ಯಾಧಿಕಾರವುಂಟೆಂದು ಮತ್ತು ಆ ವೇದ ವಿದ್ಯಾಧಿಕಾರಕ್ಕೆ ಮುಖ್ಯ ಅಧಿಕಾರವಾದ ವಿಶಿಷ್ಟಬುಧ್ಯಾದಿಖುತ್ಮವು ಆತನಿಗೆ ಸಾಧ್ಯವೆಂದು ಸಂಶಯವು. ಈ ಚೋದ್ಯಕ್ಕೆ ಸಮರ್ಥನವು "ಶಾಕ್ಮ" ಋಷಿಯು ಪೌತ್ರಾಯಣಾಖ್ಯ ಮನುಷ್ಯನಿಗೆ "ಶೂದ್ರ" ಪದದಿಂದ ಸಂಭೋಧಿಸಿ ಆತನಿಗೆ ಅಧಿಕಾರವಿದೆಯೆಂಬ ವ್ಯಾಜದಿಂದ ವೇದ ವಿದ್ಯಾಧಿಕಾರವುಂಟೆಂದು ಹೇಳಿದ್ದರಿಂದ ಸಂದೇಹವು

ಛಾಂದೋಗ್ಯ ಚತುರ್ಥಾಧ್ಯಾಯದಲ್ಲಿ ಹೇಳಿರುವ ಈ ಕಥೆಯು ಹೀಗೆ —

ಪೌತ್ರಾಯಣನೆಂಬ ರಾಜನು ತನ್ನ ಪ್ರಾಸಾದದ ಮೇಲೆ ಮಲಗಿರಲು ಬೆಳಗಿನ ಜಾವದಲ್ಲಿ ಎರಡು ಹಂಸ ಪಕ್ಷಿಗಳು ಆ ಪ್ರಾಸಾದ ಗೋಪುರದ ಮೇಲೆ ಕೂತು ಪರಸ್ಪರ ಸಂವಾದ ಮಾಡಿಕೊಂಡವು ಮೊದಲನೆಯ ಹಂಸವು ಹೇಳಿತು ಎಲೈ ಸ್ನೇಹಿತನೇ ನೀನು ಈ ಪೌತ್ರಾಯಣ ರಾಜನ ತೇಜಸ್ಸನ್ನು ಅರಿಯೆ ಅದು ನಿನ್ನನ್ನು ಸುಡಲು ಸಮರ್ಥವು ಎಂದು. ಆಗ ಮತ್ತೊಂದು ಹಂಸವು ಈ ವಾಕ್ಯಕ್ಕೆ ಉತ್ತರವಾಗಿ ಈ ರಾಜನನ್ನು ಕಡೆಗಣಿಸಿ "ಋಕ್ಮ" ಎಂಬ ಋಷಿಯನ್ನು ಪ್ರಶಂಶೆ ಮಾಡಿತು ಪೌತ್ರಾಯಣನು ಇದನ್ನು ಕೇಳಿ ಖೇದಗೊಂಡವನಾಗಿ ಮುಂಜಾವಿನಲ್ಲಿಯೇ ಆ ಋಷಿಯ ಅನ್ವೇಷಣೆಗೆ ಪ್ರಯತ್ನ ಮಾಡಿ ರಥಚೋಡನೆ ಆತನನ್ನು ಸಮೀಪಿಸಿ ಗುರುದಕ್ಷಿಣೆ ಸಹಿತ ಆದರಿಸಿ ಗಾಡಿಯ ನೆರಳಿನಲ್ಲಿರುವ ಆತನನ್ನು ಬ್ರಹ್ಮ ವಿದ್ಯೆಗಾಗಿ ಪ್ರಾರ್ಥಿಸಿದನು. ಆ ಋಷಿಯು ಈ ರಾಜನನ್ನು "ಆಹ ಹಾರೇತ್ವಾ ಶೂದ್ರ" ಎಂಬ ಸಂಬೋಧನದಿಂದ ಪುರಸ್ಕರಿಸಿ ಬ್ರಹ್ಮವಿದ್ಯೆಯನ್ನು ಉಪದೇಶಿಸಿದನು ಎಂದು ಈ ಆಖ್ಯಾನದಿಂದ ಶೂದ್ರ ಜಾತಿ ಮನುಷ್ಯರಿಗೂ ಬ್ರಹ್ಮವಿದ್ಯೆಗೆ ಅಧಿಕಾರವುಂಟೆಂದು ಸಂಶಯವು

2 ಅದಕ್ಕೆ ಹೇಳುವರು. "ಅತ ಆಹ"

**ಸೂ॥ ಓಂ॥ ಶುಗಸ್ಯತದನಾದರಶ್ರವಣಾತ್ತದಾದ್ರವಣಾತ್ಸೂಚ್ಯತೇಹಿ ಓಂ॥ 34**

ಪೌತ್ರಾಯಣ ರಾಜನು ಹಂಸದಿಂದ ಶ್ರುತವಾದ ಅನಾದರ ವಾಕ್ಯದಿಂದ (ಕಂವರ ಏನಂ) ಶೋಕ ತಪ್ತನಾಗಿ "ಸಹ ಸಂಜಿಹಾನ ಏವ" ಎಂಬ ವಾಕ್ಯವೂ ಸೂಚಿತ ಉತ್ತರ ವಾಕ್ಯದಿಂದ ಪ್ರಾತಃ ಕಾಲದಲ್ಲಿಯೇ (ಅತಿ ಜಾಗ್ರತೆಯಾಗಿ ಆತುರದಿಂದಲೇ) ರೈತ್ವಋಷಿಯನ್ನು ಹುಡಿಕಿಸಿ ಆತನನ್ನು ಸಂಬಂದಿಸಿದ್ದರಿಂದ ಅವನ ಆ ಶೋಕನಿಮಿತ್ತ "ಶೂದ್ರ" ಶಬ್ದದಿಂದ ಸಂಭೋದಿಸಲ್ಪಟ್ಟನೇ ಹೊರತು ಶೂದ್ರ ಜಾತಿಯವನೆಂದಲ್ಲ ಆದ್ದರಿಂದ ಶೂದ್ರ ಜಾತಿ ಮನುಷ್ಯರಿಗೆ ವೇದ ವಿದ್ಯಾಧಿಕಾರವಿದೆಯೆಂದು ತಿಳಿಯ ಬಾರದು.

3 ನಾಸೌ ಪೌತ್ರಾಯಣಃ ಶೂದ್ರಃ।ಶುಚಾ ದ್ರವಣಮೇವಶ ಶೂದ್ರತ್ವಂ "ಕಂವರ ಯೇನಮೇಕಂ ಸತ್ರಂ" ಇತ್ಯನಾದರಶ್ರವಣಾತ್ ॥

ಆ ಅನಾದರ ವಚನವು—ಹಂಸ ಪಕ್ಷಿಯು ಜತೆಯ ಪಕ್ಷಿಗೆ ಪೌತ್ರಾಯಣ ರಾಜನ ವಿಷಯದಲ್ಲಿ ಅನಾದರದಿಂದ ಹೇಳಿ ರೈಕ್ಷ ಋಷಿಯ ಶ್ರೇಷ್ಠತೆಯನ್ನು ಶ್ಲಾಘಿ ಸಿದ್ದರಿಂದ ರಾಜನಿಗೆ ದುಃಖವು.

4. ಸ ಹ ಸಂಜಿಹಾನ ಏವ ಕ್ಷತ್ತಾರಮುವಾಚ (4-1-?) ಇತ್ಯನಾದ ರಶ್ರವಣಾತ್ ಸೂಚ್ಯತೆ ಹಿ ॥

ರಾಜನು ಹಂಸಗಳ ಸಂಭಾಷಣೆಯನ್ನು ಕೇಳಿದೊಡನೆಯೇ ಅತಿಯಾಗಿ ಮನೋ ವ್ಯಗ್ರತೆಯನ್ನು ಹೊಂದಿ "ಋಷಿ" ಇರುವ ಸ್ಥಾನವನ್ನು ಶೋಧಿಸಿ ಅವನ ಬಳಿಗೆ ಅತಿ ಶೀಘ್ರವಾಗಿಯೇ ಬಂದದ್ದರಿಂದ ಅವನಲ್ಲಿ ಶೋಕತ್ವವನ್ನು ತಿಳಿದು ಸರ್ವಜ್ಞ ನಾದ ಆ ಋಷಿಯಿಂದ ಆತನ ಶೋಕ ಸಂಭ್ರಮಗಳ ಸೂಚಕನಾಗಿ "ಶೂದ್ರ"ನೆಂಬ ಸಂಬೋದನೆಯು (ಶುಚಾದ್ರವಣಾತ್ ಶೂದ್ರಃ–ವ್ಯಗ್ರಮನದಿಂದ ಆಗಮನವು ಶೂದ್ರತ್ವವು) ಜಾತಿಯ ವಿಷಯವಾಗಿ ಅಲ್ಲ,

ರಾಜಾಪೌತ್ರಾಯಣಶೋಕಾತ್ ಶೂದ್ರೇತಿ ಮುನಿನೋದಿತಃ ।
ಪ್ರಾಣ ವಿದ್ಯಾ ಮವಾಪ್ಯಾಸ್ಮಾತ್ ಪರಂಧರ್ಮಂ ಅವಾಪ್ತವಾನ್ ॥

## ಸೂ॥ ಓಂ॥ ಕ್ಷತ್ರಿಯತ್ವಾವಗತೇಶ್ಚೋತ್ತರತ್ರ ಚೈತ್ರ ರಥೇನಲಿಂಗಾತ್ ಓಂ॥ 35

"ಅಯಂ ಅಶ್ವತರೀರಥಃ" ಇತಿ ಚಿತ್ರರಥ ಸಂಬಂಧಿತ್ವೇನ ಲಿಂಗಾತ್ ಪೌತ್ರಾ ಯಣಸ್ಯ ಕ್ಷತ್ರಿಯತ್ವಾವ ಗತೇಶ್ಚ ॥

ಉತ್ತರ ವಾಕ್ಯದಲ್ಲಿ "ಅಶ್ವ ತರೀರಥಃ" ಎಂದು ಹೇಳಲ್ಪಟ್ಟಿರುವುದರಿಂದಲೂ ಆತನ ಕ್ಷತ್ರಿಯತ್ವ ಧರ್ಮವು ತಿಳಿಯುತ್ತದೆ ಅಶ್ವತರೀರಥನೆಂದು ಹೇಳಲ್ಪಟ ಚಿತ್ರ ರಥ ಸಂಬಂಧದಿಂದ ಕ್ಷತ್ರಿಯತ್ವವು ಜ್ಞಾಪಕವಾಗಿ ಪೌತ್ರಾಯಣನು ಶೂದ್ರನಲ್ಲ ವೆಂದು ಸೂಚನೆ.

**6 ರಥಸ್ತ್ವ ವತರೀ ಯುಕ್ತಶ್ಚಿತ್ರಇತ್ಯಭಿದೀಯತ ಇತಿ ಬ್ರಾಹ್ಮೆ ।**

ಬ್ರಹ್ಮ ಪುರಾಣದಲ್ಲಿ ಅಶ್ವತರಿಗಳಿಂದ ಯುಕ್ತವಾದ ರಥ ಚಿತ್ರಕ್ಕೆ ರಥವೆಂದು ನಾಮಧೇಯವು ತಿಳಿಯುವುದು

ಕುದುರೆಯಿಂದ ಕತ್ತೆಯಲ್ಲಿ ಜನಿಸಿದ ಪ್ರಾಣಿಗೂ ಕತ್ತೆಯಿಂದ ಕುದುರೆಯಲ್ಲಿ ಜನಿಸಿದ ಪ್ರಾಣಿಗೂ "ಅಶ್ವತರೀ" ಎಂದು ಹೆಸರು.

**7 ಯತ್ರವೇದೋ ರಥಸ್ತತ್ರ ನ ವೇದೋ ಯತ್ರ ನೋ ರಥ ಇತಿ ಬ್ರಹ್ಮವೈವರ್ತೇ ॥**

ಬ್ರಹ್ಮವೈವರ್ತದಲ್ಲಿಯಾದರೋ, ಯಾವ ಪುರುಷನ ಸ್ವಾಭಾವಿಕವಾಗಿ ರಥ ವಾಹನವುಳ್ಳವನೋ ಆತನು ವೇದ ವಿದ್ಯಾಧಿಕಾರವುಳ್ಳವನು ಅಂದರೆ ಜಾತ್ಯಾತ್ರೈ ವರ್ಣಿಕನು ಅನ್ಯ ಜಾತಿಯವನಲ್ಲಿ ರಥವಿರುವುದಿಲ್ಲ. ಎಂದು ಹೇಳಿದೆ.

## ಸೂ॥ಓಂ॥ ಸಂಸ್ಕಾರ ಪರಾಮರ್ಶಾತ್ತದಭಾವಾಲಾಭಿಸಾಚ್ಚ ಓಂ 36

"ಅಷ್ಟವರ್ಷಂ ಬ್ರಾಹ್ಮಣ ಮುತಪನಯೀತ, ತಮಧ್ಯಾಪಯೀತ" ಎಂಬ ವೇದ ವಾಕ್ಯದಿಂದ ಉಪನಯನ ಸಂಸ್ಕಾರ ಯುಕ್ತನಿಗೆ ಮಾತ್ರ ವೇದ ವಿದ್ಯಾಧ್ಯಯನಾಧಿ ಕಾರವು ಉಕ್ತವಾಗಿ-ಶೂದ್ರ ಜಾತಿಗೆ-"ನಾಗ್ನಿಃ ನಯಜ್ಞಃ" ಎಂದು ಸಂಸ್ಕಾರಾ ಭಾವವನ್ನು ಹೇಳಿರುವುದರಿಂದ ಶೂದ್ರ ಜಾತಿಗೆ ವೇದವಿದ್ಯಾಧಿಕಾರವಿಲ್ಲ ಅಧ್ಯಯನ ಪ್ರಾರಂಭಕ್ಕೆ ಬ್ರಾಹ್ಮಣನಿಗೆ ಸಂಸ್ಕಾರವನ್ನು ಪೂರ್ವದಲ್ಲಿಯೇ ವಿಧಿಸಿರುವುದರಿಂದಲೂ ಈ ನಿರ್ಧಾರವು ಸೂಕ್ತವು.

ಅಷ್ಟವರ್ಷಂ ಬ್ರಾಹ್ಮಣಮುಪನಯೀತ ತ ಮಧ್ಯಾಪಯೀತ ।
ಇತ್ಯಧ್ಯಯನಾರ್ಥಂ ಸಂಸ್ಕಾರ ಪರಾಮರ್ಶಾತ್ ಹೀಗೆ ಸಂಸ್ಕಾರ ವಿಷಯೋಕ್ತಿ ಉಂಟು

9. **ನಾಗ್ನಿರ್ನ ಯಜ್ಞೋ ನ ಕ್ರಿಯಾ ನ ಸಂಸ್ಕಾರೋ ನ ವ್ರತಾನಿ ಶೂದ್ರಸ್ಯೇತಿ ಪೈಂಗಿಶ್ರುತೌ ಸಂಸ್ಕಾರಾಭಾವಾಭಿಲಾಪಾಚ್ಚ ॥**

ಶೂದ್ರನಿಗೆ ಅಗ್ನಿಯಿಲ್ಲ ಯಜ್ಞವಿಲ್ಲ ಅದರ ಸಂಬಂಧ ಕ್ರಿಯೆಗಳೂ ಇಲ್ಲ ಸಂಸ್ಕಾರವಿಲ್ಲ ಮತ್ತು ಸಂಬಂಧಪಟ್ಟ ವ್ರತಾದಿಗಳೂ ಇಲ್ಲ ಎಂದು ಪೈಂಗೀ ಶೃತಿಯಲ್ಲಿ ಶೂದ್ರನಿಗೆ ಸಂಸ್ಕಾರವನ್ನೂ ಕೈಬಿಟ್ಟಿದ್ದಾರೆ

10. **ಉತ್ತಮ ಸ್ತ್ರೀಣಾಂ ತು ನ ಶೂದ್ರವತ್। ಸಪತ್ನೀಂ ಮೇಪರಾಧ ಮಿತ್ಯಾಧಿಕಾರ ದರ್ಶನಾತ್ ॥**

ಉತ್ತಮ ಸ್ತ್ರೀಯರಿಗೆ (ತ್ರೈವರ್ಣೀರಿಗೆ)ಶೂದ್ರರ ಹಾಗಲ್ಲ "ಸಪತ್ನೀಂ ಲೇಮೆಪರಾಧಮ" ಎಂದು ಅಧಿಕಾರವನ್ನು ಹೇಳಿದೆ ಉತ್ತಮ ದೇವತಾ ಸ್ತ್ರೀಯರಿಗೆ ವೇದ ವಿದ್ಯಾಧಿಕಾರವು ಇದೆ

11 **ಸಂಸ್ಕಾರಾಭಾವೇನಾಭವಸ್ತು ಸಾಮಾನ್ಯೇನ ॥**

ಸಂಸ್ಕಾರವಿಲ್ಲದಿರುವುದು ಸಾಮಾನ್ಯವಾಗಿ ವೇದ ವಿದ್ಯಾಧಿಕಾರಕ್ಕೆ ಅನಾನುಕೂಲವು.

12 **ಅಸ್ತಿ ಚ ತಾಂಸಾಂ ಸಂಸ್ಕಾರಂ। ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥೇತಿ ಸ್ಮೃತೇಃ ॥**

ಸ್ತ್ರೀಯರಿಗೆ ಸಂಸ್ಕಾರ ವಿಧಿ ಉಪನಯನವಿಲ್ಲವೆಂದು ಹೇಳಕೂಡದು. ಅವರಿಗೆ ಕನ್ಯಾದಾನ ಕರ್ಮದಲ್ಲಿಯೇ ಸಂಸ್ಕಾರವನ್ನು ಸ್ಮೃತಿಯಲ್ಲಿ ಹೇಳಿದೆ.

## ಸೂ॥ ಓಂ॥ ತದಭಾವನಿರ್ಧಾರಣೇ ಚ ಪ್ರವೃತ್ತೇಃ ಓಂ॥ 37

ಗೌತಮ ಋಷಿಗಳು ಸತ್ಯಕಾಮ್ಯಾಖ್ಯ ಪುರುಷನು ತಮ್ಮನ್ನು ಉಪನಯನ

ಸಂಸ್ಕಾರಕ್ಕಾಗಿ ಪ್ರಾರ್ಥಿಸಲು ಆತನನ್ನು ಗೋತ್ರವೇನೆಂದು ವಿಚಾರಿಸಲು ಅದನ್ನು ಹೇಳಲಸಮರ್ಥನಾಗಿ ಅದು ನನಗೆ ತಿಳಿಯದು ನಮ್ಮ ತಾಯಿಯೂ ಅರಿಯಳು" ಎಂದು ನಿಜ ವಚನವನ್ನು ಹೇಳಲು, ಆಗ ಗೌತಮಋಷಿಗಳು ಹೀಗ ಯಥಾರ್ಥ ವಾಕ್ಯವನ್ನು ಬ್ರಾಹ್ಮಣನಲ್ಲದಿದ್ದರೆ ಹೇಳಲಸಾಧ್ಯವೆಂದು ಭಾವಿಸಿ ಆತನು ಬ್ರಾಹ್ಮಣ ಜಾತಿಯವನೇ ಎಂದು ನಿಶ್ಚಯಿಸಿ ಉಪನಯನ ಸಂಸ್ಕಾರ ಪೂರ್ವಕ ಅಧ್ಯಯನವನ್ನು ಮಾಡಿಸಿದರು ಈ ನಿರ್ಧಾರದಿಂದಲೂ ಶೂದ್ರನಿಗೆ ಸಂಸ್ಕಾರಗಳಿಲ್ಲವೆಂದು ತಿಳಿಯು ವುದು

"ನಾಹಮೇತದ್ವೇದ ಭೋ ಯದ್ಗೋತ್ರೋಹಮಸ್ಮಿ (ಷಾ-4-4)ಇತಿಸತ್ಯವಚನೇ ನ ಸತ್ಯಕಾಮಸ್ಯ ಶೂದ್ರತ್ವಾ ಭಾವನಿರ್ಧಾರಣೆ ಹಾರಿದ್ರುಮತಸ್ಯ "ನೈತದ ಬ್ರಾಹ್ಮಣೋ ವಕ್ತುಮರ್ಹತಿ (4-5) ಇತಿ ತತ್ಸಂಸ್ಕಾರೆ ಪ್ರವೃತ್ತೇಶ್ಚ ॥

ಬ್ರಾಹ್ಮಣನೆಂದು ನಿರ್ಧಾರದಿಂದ ಸಂಸ್ಕಾರ ಪೂರ್ವಕ ಅಧ್ಯಯನದಲ್ಲಿ ಪ್ರವೃತ್ತಿ ಹೇಳಿರುವುದರಿಂದ ಶೂದ್ರನಿಗೆ ಸಂಸ್ಕಾರವಿಲ್ಲವೆಂದು ತಿಳಿಯುವುದು

## ಸೂ॥ ಓಂ॥ ಶ್ರವಣಾಧ್ಯಯನಾರ್ಥಪ್ರತಿಷೇಧಾತ್ಸ್ಮೃತೇಶ್ಚ ಓಂ॥ 38

ಶ್ರವಣಾಧ್ಯಯನಾದಿಗಳನ್ನು ಶೂದ್ರನಿಗೆ ನಿಷೇಧಿಸಿರುವುದರಿಂದಲೂ ಕೂಡ ಅವನು ವೇದ ಶ್ರವಣ ಅಧ್ಯಯನ ಮತ್ತು ಅರ್ಥಾವ ಧಾರಣಮಾಡಿದರೆ ಅದಕ್ಕೆ ಪ್ರತಿಶಿಕ್ಷೆಯು ಹೇಳಲ್ಪಟ್ಟಿರುವುದರಿಂದ ಶೂದ್ರನಿಗೆ ವೇದವಿದ್ಯಾಧಿಕಾರವಿಲ್ಲ

ಶ್ರವಣೇ ತ್ರಿಪುಜತುಭ್ಯಾಂಶ್ರೋತ್ರಪರಿ ಪೂರಣಂ । ಅಧ್ಯಯನೇ ಜಿಹ್ವಾಚ್ಛೇದನಂ ಅರ್ಥಾವ ಧಾರಣೆ ಹೃದಯವಿದಾರಣಂ (ಗೌತಮ ಧರ್ಮ 12-4... ಅ॥ ಇತಿ ಪ್ರತಿಷೇಧಾತ್ ।

ವೇದವನ್ನು ಕೇಳಿದರೆ ಕಿವಿಯನ್ನು ಅರಗಿನಿಂದ ಮುಚ್ಚುವುದು. ಅಧ್ಯಯನಕ್ಕೆ ನಾಲಿಗೆ ನಾಶ ಮತ್ತು ಅವಧಾರಣೆಯಿಂದ ಹೃದಯ ವಲ್ಲಟವು ಶಿಕ್ಷೆಯೆಂದು ಹೇಳಿ ರುವುದರಿಂದ ಶೂದ್ರನಿಗೆ ವೇದ ವಿದ್ಯಾಧಿಕಾರವಿಲ್ಲ.

15. **ನಾಗ್ನಿರ್ನಯಜ್ಞಃ ಶೂದ್ರಸ್ಯ ತಥೈವಾಧ್ಯಯನಂ ಕುತಃ ।**

ಕೇವಲ್ಯೈವ ತು ಶುಶ್ರೂಷಾ ತ್ರಿವರ್ಣಾನಾಂ ವಿದೀಯತ ಇತಿ
ಸ್ಮೃತೇಶ್ಚ ||

ಶೂದ್ರ ಜಾತಿಗೆ ಅಗ್ನಿ ಪ್ರತಿಷ್ಠಾಪನೆಯಿಲ್ಲ ಯಜ್ಞಕರ್ಮವಿಲ್ಲ ಹಾಗೆಯೇ ಅರ್ಥ ಯನವೂ ಇಲ್ಲ. ಆತನಿಗೆ ತ್ರೈವರ್ಣಿಕರ ಶುಶ್ರೂಷೆಯೇ ಧರ್ಮವಾಗಿ ವಿಧಿಸಲ್ಪಟ್ಟಿದೆ.

6. ವಿದುರಾದೀನಾಂತೂತ್ಪನ್ನಜ್ಞಾನತ್ವಾತ್ಕಶ್ಚಿದ್ವಿಶೇಷಃ ||

ವಿದುರಾದಿ ಜ್ಞಾನಿಗಳ ವಿಷಯದಲ್ಲಿ ಪೂರ್ವ ಜನ್ಮ ಫಲವಾದ ಶ್ರೇಷ್ಠ ಜ್ಞಾನಾರ್ಜನೆಯಿಂದ ಇತರರಿಗಿಂತ ವಿಶೇಷವು.

– ಇತಿ ಅಪಶೂದ್ರಾಧಿಕರಣವು –

– ಕಂಪನಾಧಿಕರಣವು –

ಈ ಅಧಿಕರಣದಲ್ಲಿ "ವಜ್ರ" ನಾಮವು ಸಮನ್ವಯ ಮಾಡಲ್ಪಟ್ಟಿದೆ.

1. ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಂ ।
ಮಹದ್ಭಯ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ
ಭವಂತೀತ್ಯುದ್ಯತವಜ್ರ ಜ್ಞಾನಾನ್ಮೋಕ್ಷಃ ಶ್ರೂಯತ
ಇತ್ಯತೋಽಬ್ರವೀತ್ ||

ವೇದದಲ್ಲಿ ತ್ರೈವರ್ಣಿಕರಿಗೆ ಬ್ರಹ್ಮ ಜ್ಞಾನವು ಮೋಕ್ಷದವುವೆಂದು ಯಾವುದು ಹೇಳಿದೆಯೋ ಅದು ಅಯುಕ್ತವು "ಯದಿದಂ" ಎಂಬ ಶೃತಿಯಲ್ಲಿ "ಉದ್ಯತವಜ್ರ" ಜ್ಞಾನದಿಂದ ಮೋಕ್ಷವೆಂದು ಹೇಳಿದೆ. ಆದ್ದರಿಂದ ಆನಂದಮಯಾಧಿಕರಣದಲ್ಲಿ ಹೇಳಿ

ಕುವ "ನೇತರಃ"ಎಂಬವಾಕ್ಯದಿಂದ ವಿಷ್ಣುವಿಗಿಂತ ಅನ್ಯರ ಜ್ಞಾನವನ್ನು ಮೋಕ್ಷಕ್ಕೆ ನಿಷೇಧಿಸಿರುವುದರಿಂದ ಆಕ್ಷೇಪವು. "ತೇನೇಂದ್ರೋ ವಜ್ರಮುದಯಚ್ಛತಿ" ಎಂಬ ಶೃತಿಯಲ್ಲಿ ಇಂದ್ರಾಯುಧಕ್ಕೆ ಪಜ್ರವೆಂದು ಸೂಚಿಸಿದೆ ಶ್ರುತ್ಯರ್ಥವು ಸರ್ವಜಗತ್ತೂ ಪ್ರಾಣನ ನಿಮಿತ್ತದಿಂದ ಪ್ರಾಣ ಶಬ್ದ ವಾಚ್ಯ ಶ್ರೀ ಹರಿಯಲ್ಲಿ ಸ್ಥಿತವು ಜನನವು ಆತ ನಿಂದಲೆ ಮತ್ತು ಪ್ರೇರಣೆಯೂ ಶ್ರೇಷ್ಠತ್ವ ಮತ್ತು ಪೂಜ್ಯತ್ವದಿಂದ ಹೇಳಲ್ಪಟ್ಟಿದೆ ದುಷ್ಟರಿಗೆ ಭಯಂಕರವು ಸರ್ವ ಪ್ರಯತ್ನವಂತನು (ವಜ್ರಂ) ದೋಷದಿಂದ ಬಿಡ ಲ್ಪಟ್ಟವನೋ ಅಂತಹ ಪುರುಷನನ್ನು ತಿಳಿದು ಮುಕ್ತರಾಗುವರು ಶ್ರೀಮುಖ್ಯ ಪ್ರಾಣನಿಗೆ ಸಾಕ್ಷಾತ್ ಭಗವಂತನ ಪ್ರೇರಣವು ಮತ್ತು ಸರ್ವ ಜಗತ್ತಿಗೆ ಮುಖ್ಯ ಪ್ರಾಣನ ದ್ವಾರ ಪ್ರೇರ್ಯತ್ವವು ಎಂದು ಸಿದ್ಧಾಂತವು.

2 ಅತೋ ಬ್ರವೀತ್

## ಸೂ॥ ಓಂ॥ ಕಂಪನಾತ್ ಓಂ॥ 39

"ಏಜತಿ" ಇತಿ ಕಂಪನ ವಚನಾದುದ್ಯತ ವಜ್ರೋ ಭಗವಾನೇವ ॥

"ಮಹದ್ಭಯಂ ವಜ್ರಂ" ಎಂಬ ವಾಕ್ಯದಲ್ಲಿ ಹೇಳುವ ವಸ್ತುವು ಶ್ರೀವಿಷ್ಣುವೇ ವಜ್ರ ಶಬ್ದ ವಾಚ್ಯನು ಇಂದ್ರಾಯುಧವಲ್ಲ. "ಸರ್ವಮೇಜತಿ" ಎಂಬ ಕಂಪನ ಶಬ್ದ ಸೂಚಿತ ಸರ್ವಚೇಷ್ಟಕತ್ವವು ಶ್ರೀ ವಿಷ್ಣುವಿನ ಮುಖ್ಯ ಧರ್ಮವೇ ಆಗಿದೆ.

3. **ಕೋ ಹ್ಯೇವಾನ್ಯಾತ್ಕಃ ಪ್ರಾಣ್ಯಾದ್ಯದೇಷ ಆಕಾಶ ಆನಂದೋ ನ ಸ್ಯಾತ್ (ತೈ 2-7) ಇತಿ ಹಿ ಶ್ರುತಿಃ ।**

ವಜ್ರ ಶೃತಿಯಲ್ಲಿ "ಪ್ರಾಣ" ಮತ್ತಿತರ ವಸ್ತುವಿನಲ್ಲಿ ಸಾಮಾನ್ಯವಾಗಿ ಜಗಚ್ಚೇ ಷ್ಟಕತ್ವ ಅಂಗವು ವಿಷ್ಣುವಿಗಿಂತ ಅನ್ಯರಲ್ಲಿ ನಿರವಕಾಶತ್ವ ತೋರುತ್ತದೆ. ಅಂದರೆ

4 ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುಃ (ಬೃ-6-4-18) ಇತಿ ಶೃತಿ ಯ ಅರ್ಥವು ಸರ್ವಚೇಷ್ಟಕ ಮುಖ್ಯ ಪ್ರಾಣನ ಪ್ರಕೃಷ್ಟ ಚೇಷ್ಟಕತ್ವ ರೂಪ ಪ್ರಾಣತ್ವವು ಹಾಗೆಯೇ ದರ್ಶನ ಕರಣತ್ವ ರೂಪ ದೃಷ್ಟಿಪ್ರದತ್ವವೂ ಯಾವ ಪರ ಮಾತ್ಮನಿಂದಲೋ ಅವನನ್ನು ತಿಳಿಯುವವರು ಬ್ರಹ್ಮನನ್ನು ಹೊಂದುವರು.

5. ನಭಸ್ವತೋಽಪಿ ಸರ್ವಾಃ ಸ್ಯುಶ್ಚೇಷ್ಟಾ ಭಗವತೋ ಹರೇಃ ।
ಕಿಮುತಾನಸ್ಯ ಜಗತೋ ಯಸ್ಯ ಚೇಷ್ಟಾ ನಭಸ್ವತಃ ಇತಿಸ್ಕಾಂದೇ

ಜಗತ್ತಿಗೆ ಪ್ರೇರಕ ಶಕ್ತಿಯುಳ್ಳ ಮುಖ್ಯ ಪ್ರಾಣ ವಾಯುವಿಗೆ ಎಲ್ಲಾ ಚೇಷ್ಟಾ ಶಕ್ತಿ ಶಕ್ತಿಗಳೂ ಜ್ಞಾನಾನಂದಾದಿ ಗುಣಪೂರ್ಣ ಶ್ರೀಹರಿಯಿಂದ ಆಗುತ್ತದೊ ಆಗ ವಾಯುನ್ಯ ಜಗತ್ತಿಗೆ ಎಲ್ಲ ಚೇಷ್ಠೆಗಳೂ ಹರಿಯಿಂದಲೇ ಮುಖ್ಯ ಪ್ರಾಣದ್ವಾರ ಆಗುವುದು ಎಂದು ಬೇರೆ ಹೇಳಬೇಕಾಗಿಲ್ಲ. ಸರ್ವಚೇಷ್ಟೆಯು ಆತನದೆ

6 ಚಕ್ರಂ ಚಂಕ್ರಮಣಾದೇಷ ವರ್ಜನಾದ್ವರ್ಜಮುಚ್ಯತೇ ।
ಖಂಡನಾತ್ಖಡ್ಗ ಏವೈಷ ಹೇತಿನಾಮಾ ಸ್ವಯಂಹರಿರಿತಿ
ಬ್ರಹ್ಮವೈವರ್ತೇ ॥

ಈ ಭಗವಂತನು ಜೀವರುಗಳನ್ನು ಸಂಸಾರದಲ್ಲಿ ಪರಿಭ್ರಮಣ ಮಾಡಿಸುವುದರಿಂದ "ಚಕ್ರ"ನೆಂದೂ ದೈತ್ಯರನ್ನು ದೂರದಲ್ಲಿಯೇ ಬಿಡುವುದರಿಂದ ಅವರಿಗೆ ವಿಮುಖನಾಗ ದಿರುವುದರಿಂದ ಮತ್ತು ಸರ್ವ ದೋಷಗಳನ್ನು ದೂರ ಮಾಡಿಕೊಂಡಿರುವುದರಿಂದ "ವಜ್ರ" ನೆಂದೂ, ದುಷ್ಟಾಂಗನನ್ನು ನಾಶಮಾಡುವುದರಿಂದಲೂ ನಮನ ಮಾಡುವುದ ರಿಂದಲೂ "ಖಡ್ಗ"ನೆಂದೂ ಶ್ರೀಹರಿಯು ಅನ್ಯ ಸಂಬಂಧವಿಲ್ಲದೆಯೇ ಸರ್ವಾಯುಧ ಗಳ ಹೆಸರಿನಿಂದ ವಾಚ್ಯನು.

ಆದ್ದರಿಂದ "ವಜ್ರ" ಮುಖ್ಯ ವಾಚ್ಯನು ಶ್ರೀ ವಿಷ್ಣುವೇ.

– ಇತಿ ಕಂಪನಾಧಿಕರಣಂ –

## – ಜ್ಯೋತಿರಧಿಕರಣಂ –

ಈ ಅಧಿಕರಣದಲ್ಲಿ ಹೃದಯದಲ್ಲಿ ಪ್ರತಿಷ್ಠಿತವಾದ "ಜ್ಯೋತಿ"ಯು ಶ್ರೀ ಪರಮಾತ್ಮನೆ ಎಂದು ಸಮನ್ವಯವು.

**1. ಹೃದಯ ಆಹಿತಂ ಜ್ಯೋತಿಃ ಪರಮಾತ್ಮೇತ್ಯುಕ್ತಂ । ತತ್ರಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ ಜ್ಯೋತಿಃ ಪುರುಷಃ (ಬೃ 6-3-7) ಇತ್ಯತ್ರೋಭೌ ಲೋಕಾವನು ಸಂಚರತಿ ಇತಿ ವಚನಾತ್ ಜೀವ ಇತಿ ಪ್ರತೀಯತ ಇತಿ॥**

ಹೃದಯದಲ್ಲಿ ಪ್ರತಿಷ್ಠಿತವಾದ ಜ್ಯೋತಿಯು ಶ್ರೀ ಪರಮಾತ್ಮನೆಂದು ಹಿಂದೆ ಜ್ಯೋತಿರಧಿಕರಣದಲ್ಲಿ ಹೇಳಿದೆ. ಆದರೆ ಬೃಹದಾರಣ್ಯಕದಲ್ಲಿ ದ್ವಿಲೋಕ ಸಂಚಾರವನ್ನು ಹೇಳಿರುವುದರಿಂದ ಆ ಜ್ಯೋತಿಯು ಜೀವನೇ ಎಂದು ಸಂಶಯವು. ಶೃತಿಯಲ್ಲಿ "ಸ ಸಮಾನಃಸನ್ ನ್ನೊಭೌಲೋಕಾವನು ಸಂಚರತಿ" ಎಂಬ ಜೀವ ಧರ್ಮವನ್ನು ಹೇಳಿದೆ ಆದ್ದರಿಂದ ವಾಜಸನೇಯೋಕ್ತ ಹೃದ್ಯಂತ ಜ್ಯೋತಿಯು ಜೀವನೇ. ಅಂದರೆ ಹಾಗಲ್ಲ ಜನಕರಾಜನಿಂದ ಕೇಳಲ್ಪಟ್ಟ ಯಾಜ್ಞವಲ್ಕ್ಯರು "ಜ್ಯೋತಿ"ಯು ಯಾವುದು ಎಂಬ ಪ್ರಶ್ನೆಗೆ ಉತ್ತರವಾಗಿ ಕ್ರಮವಾಗಿ ಸೂರ್ಯ ಚಂದ್ರರನ್ನು ಹೇಳಿ ಮುಂದೆ ಸುಪ್ತಿ ಸ್ವಪ್ನ ಸ್ಥಿತಿಗಳಲ್ಲಿ ಯಾರು ಜ್ಯೋತಿಯು ಎಂಬ ಪ್ರಶ್ನೆಗೆ ಜೀವದೇಹೇಂದ್ರಿಯ ಪ್ರೇರಕ ಪರಮಾತ್ಮನೆ ಎಂದು (ಸೂರ್ಯ ಚಂದ್ರರು ಅಸ್ತವಾಗಿರುವಾಗ) ಹೇಳಿದರು ಯಾವಾತನು ವಿಜ್ಞಾನ ಪೂರ್ಣನು ಇಂದ್ರಿಯಗಳ ಮತ್ತು ಹೃದಯಗಳ ಒಳಗೆ ನಿಯಂತ್ರಕ ವಾಗಿರುವ "ಜ್ಯೋತಿಯು" ಜೀವನ ಬುಧ್ಯಾದಿಗಳ ಪ್ರಕಾಶಕ ಪೂರ್ಣ ಷಾಡ್ಗುಣ ವಿಗ್ರಹ "ಆತ್ಮಾ" ಎಂದು ಉಪದೇಶಿಸಿ ಆ ಪರಮಾತ್ಮನು ಅವಿಕಾರನು ಏಕ ರೂಪನು ಆಗಿ ಭೂದ್ಯುಲೋಕಗಳಲ್ಲಿ (ಜಾಗ್ರತ್ ಸುಷುಪ್ತಿಗಳಲ್ಲಿ) ಪ್ರತಿ ಜೀವ ರನ್ನು ಅನುಸರಿಸಿ ಅವರ ಜತೆಯಲ್ಲಿಯೇ ಸಂಚರಿಸುವವನು.

2. ಆತ ಉಚ್ಯತೇ ಅದಕ್ಕಾಗಿ ಹೇಳಲ್ಪಡುವುದು

## ಸೂ॥ ಓಂ॥ ಜ್ಯೋತಿರ್ದರ್ಶನಾತ್ ಓಂ ॥ 40

ವಿಷ್ಣುರೇವ ಜ್ಯೋತಿರ್ವಿಷ್ಣುರೇವಾತ್ಮಾ ವಿಷ್ಣುರೇವ ಬ್ರಹ್ಮಾ ವಿಷ್ಣುರೇವ ಬಲಂ ವಿಷ್ಣುರೇವಯಶಃ ವಿಷ್ಣುರೇವಾನಂದ" ಇತಿ ದರ್ಶನಾಚ್ಚತುರ್ವೇದ ಶಿಖಾಯಾಂ । ಜ್ಯೋತಿರ್ವಿಷ್ಣುರೇವ

ಯಾವನು ಈಹೃದಯದೊಳಗಿರುವ ಜ್ಯೋತಿಯೋ ಆತನು ವಿಷ್ಣುವೇ ಮೇಲಿನ ಚತುರ್ವೇದ ಶಿಖೆಯಲ್ಲಿ ವಿಷ್ಣುವೇ ಜ್ಯೋತಿಯೆಂದು ಹೇಳಿ ಜತೆಗೆ ಶ್ರೀ ವಿಷ್ಣುವಿನ ಇತರ ವಿಶೇಷ ಧರ್ಮಗಳಾದ ಆತ್ಮಾ, ಬ್ರಹ್ಮ, ಸರ್ವತ್ರ ಬಲ ಸರ್ವ ಯಶಸ್ಸುಳ್ಳವನು ಆನಂದನು ಎಂದು ಹೇಳಿರುವುದರಿಂದ ಶ್ರೀ ವಿಷ್ಣುವೇ ಜ್ಯೋತಿಯು

3. ಪ್ರಾಜ್ಞೇನಾತ್ಮನಾನ್ವಾರೂಢ ಉತ್ಸರ್ಜದ್ಯಾತೀತಿ
ವಚನಾತ್ತಸ್ಯಾಪಿ ಲೋಕ ಸಂಚರಣಮುಸ್ತ್ಯೇವ ॥

ಶರೀರದಲ್ಲಿರುವ ಜೀವನು ಮರಣ ಕಾಲದಲ್ಲಿ ಶ್ರೇಷ್ಠ ಜ್ಞಾನಿಯಾದ ಪರಮಾತ್ಮನಿಂದ ಅಧಿಷ್ಠಿತನಾಗಿಯೇ ಹೋಗುತ್ತಾನೆ ಅಂದರೆ ಅವನ ವಾಹನವುಳ್ಳವನಾಗಿ ಹಳೆಯ ದೇಹವನ್ನು ಬಿಟ್ಟು ದೇಹಾಂತರ ಲೋಕಾಂತರವನ್ನು ಹೊಂದುವನು

– ಇತಿ ಜ್ಯೋತಿರಧಿಕರಣವು –

## – ಆಕಾಶಾಧಿಕರಣವು –

ಈ ಅಧಿಕರಣದಲ್ಲಿ "ಆಕಾಶ" ನಾಮವು ವಿಷ್ಣುವಿನಲ್ಲಿ ಸಮನ್ವಯ ಮಾಡಲ್ಪಡುವುದು

1 ಸರ್ವಾಧಾರತ್ವಂ ವಿಷ್ಣೋರುಕ್ತಂ। ತಚ್ಛಾಕಾಶೋ ವೈನಾಮ ನಾಮರೂಪಯೋರ್ನಿರ್ವಹಿತೇ(ಛಾ 8-14-1)ಇತ್ಯತ್ರಾಕಾಶಸ್ಯ ಪ್ರತೀಯತೆ॥ ವೈನಾಮೇತಿ ಪ್ರಸಿದ್ಧೋಪದೇಶಾತ್ ಪ್ರಸಿದ್ಧಾಕಾಶಶ್ಚಾಂಗೀ ಕರ್ತವ್ಯ ಇತಿ॥

ದುಭ್ವಾದ್ಯಧಿಕರಣದಲ್ಲಿ ಸರ್ವಾಧಾರಕರ್ತನು ಶ್ರೀಪರಮಾತ್ಮನು ಎಂದುಹೇಳಿದೆ. ಆದರೆ ಮೇಲಿನ ಛಾಂದೋಗ್ಯದಲ್ಲಿ ಆಕಾಶಕ್ಕೆ (ಪ್ರಾಕೃತ) ಸರ್ವಾಧಾರತ್ವವನ್ನು ಹೇಳುತ್ತದೆ ಆದ್ದರಿಂದ ಸಂಶಯವು. ರೂಪನಾಮಗಳ ಶಬ್ದಾರ್ಥ ಬೇಧದಿಂದ ಹೇಳಲ್ಪಡುವ ಪ್ರಪಂಚದ ಅಂತರ್ಭೂತ ನೀಲಾದಿ ರೂಪಕ್ಕೆ ಆಶ್ರಯವು ಆಕಾಶವು ಎಂದು ಹೇಳಿದೆ.

2. ಅತ ಉಚ್ಯತೆ ಅದಕ್ಕಾಗಿ ಹೇಳಿದೆ.

## ಸೂ॥ ಓಂ॥ ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್ ಓಂ ॥ 41

"ಆಕಾಶೋಹವೈನಾಮ"ಎಂದು ಶೃತಿಯಲ್ಲಿ ಹೇಳಿರುವ ಆಕಾಶವು ಶ್ರೀವಿಷ್ಣುವೇ ಅವ್ಯಾಕೃತಾಕಾಶವಲ್ಲ "ತೇ ಯದಂತರಾ" ಎಂಬ ವಾಕ್ಯದಲ್ಲಿ ಶ್ರೀವಿಷ್ಣುವಿಗೆ ನಾಮವಿಲ್ಲದ ವಿಲಕ್ಷಣಾರ್ಥಕ್ಕೆ ಆದಿಶಬ್ದದಿಂದ ಹೇಳಲ್ಪಡುವ ಬ್ರಹ್ಮತ್ವ ಅಮೃತತ್ವ ಧರ್ಮಗಳನ್ನು ಹೇಳಿರುವುದು.

"ತೇ ಯದಂತರಾತದ್ಬ್ರಹ್ಮ" (ಛಾ-8-14-1) ಇತ್ಯರ್ಥಾಂತರತ್ವಾದಿ ವ್ಯಪದೇಶಾದಾಕಾಶೋ ಹರಿರೇವ॥

ನಾಮ ರೂಪಗಳ ಅರ್ಥಾಂತರವು (ವಿಲಕ್ಷಣವಾದ ಅರ್ಥವು) ನಾಮರೂಪ ಪ್ರಪಂಚದಿಂದ ಭಿನ್ನತ್ವವು ಪ್ರಾಕೃತನಾಮ ರೂಪವಿಲ್ಲದಿರುವುದು ಎಂಬ ಧರ್ಮಗಳು ಬ್ರಹ್ಮ ವಾಚ್ಯ ಆಕಾಶಕ್ಕೆ ಸಲ್ಲುವುದು. ಆದ್ದರಿಂದ ಶ್ರೀ ವಿಷ್ಣುವೇ ವಾಚ್ಯನು

3. "ಅವರ್ಣಂ" ಯತೋ ವಾಚೋ ನಿವರ್ತಂತೆ(2-4)ಇತ್ಯಾದಿಶೃತೇಃ ತಸ್ಯೈವ ಹಿ ತಲ್ಲಕ್ಷಣಂ॥

ಮೇಲಿನ ಶೃತಿಗಳಿಂದ ಶ್ರೀವಿಷ್ಣುವಿಗೆ ಅರೂಪತ್ವಾದಿಲಕ್ಷಣ ಅಸಾಧಾರಣ ಧರ್ಮಗಳು. ಆದ್ದರಿಂದಲೂ "ಆಕಾಶ" ವಾಚ್ಯನು ಶ್ರೀ ವಿಷ್ಣುವೇ ಮುಖ್ಯನು.

4. **ಅನಾಮಾಸೋ ಪ್ರಸಿದ್ಧ ತ್ವಾದರೂಪೋ ಭೂತವರ್ಜನಾದಿತಿ ಬ್ರಾಹ್ಮೇ ॥**

ಶ್ರೀಹರಿಗೆ ನಾಮರೂಪ ಸಾಹಿತ್ಯವು ಕೂಡುವುದಿಲ್ಲ ಆತನು ಸರ್ವ ಶಬ್ದ ವಾಚ್ಯನೆಂದು ಹೇಳಿದೆ ಅಂದರೆ, ಆ ಹರಿಯು ತನಗಿಂತ ಇತರರಿಂದ ಪೂರ್ಣವಾಗಿ ತಿಳಿಯಲಸಾಧ್ಯನಾದ್ದರಿಂದ ಅನಾತ್ಮನೆಂದು ಹೇಳಿದೆ. ಪ್ರಪಂಚ ಧಾರಕತ್ವ (ಏಕೋದಧಾರ) ಎಂಬ ಶೃತಿಯಲ್ಲಿ ಶ್ರೀ ವಿಷ್ಣು ಧರ್ಮವಾಗಿ ಹೇಳಿದ್ದರಿಂದ "ಭೂತವರ್ಜನಾತ್" ಭೌತಿಕ ದೇಹವರ್ಜನದಿಂದಲೂ ಅರೂಪನು ಆದ್ದರಿಂದ ಶ್ರೀ ವಿಷ್ಣುವೇ ಆಕಾಶ ಶಬ್ದ ವಾಚ್ಯನು.

– ಇತಿ ಆಕಾಶಾಧಿಕರಣವು –

## – ಸುಷುಪ್ತ್ಯಧಿಕರಣವು –

ಈ ಅಧಿಕರಣದಲ್ಲಿ ಸ್ವಪ್ನಾದಿ ದ್ರಷ್ಟೃತ್ವವು ಸಮನ್ವಯ ಮಾಡಲ್ಪಡುತ್ತದೆ.

1. **ಅಸಂಗತ್ವಂ ಪರಮಾತ್ಮನ ಉಕ್ತಂ । ತಚ್ಚ ಸ ಯತ್ತತ್ರ ಕಿಂ ಚಿಂತ್ಪಶ್ಯತ್ಯನನ್ವಾಗತಸ್ತೇನ ಭವತಿ ಅಸಂಗೋಹ್ಯಯಂ ಪುರುಷ (ಬೃ. 6-3-15) ಇತಿ ಸ್ವಪ್ನಾದಿದ್ರಷ್ಟುಃ ಪ್ರತೀಯತೇ ॥**

ಅಕ್ಷರಾಧಿಕರಣದಲ್ಲಿ ವಾಜಸನೇಯ ವಾಕ್ಯದಲ್ಲಿ "ಅಗಂಧಂ ಅರಸಂ" ಎಂದು

ಪರಮಾತ್ಮನಿಗೆ ಅಸಂಗತ್ವವನ್ನು ಹೇಳಿದೆ. ಆ ಅಸಂಗತ್ವವು ಸ್ವಪ್ನಾದಿ ದರ್ಶನವುಳ್ಳ ಅನ್ಯನೆಂದು ಆಕ್ಷೇಪವು.

2. **ಸ ಚ ಜೀವಃ ಪ್ರಸಿದ್ಧೇರಿತ್ಯತೋವಕ್ತಿ ॥**

ಈ ಸ್ವಪ್ನ ದ್ರಷ್ಟೃವು ಜೀವನೇ ಆಗಬೇಕು. ಪರಮಾತ್ಮನಲ್ಲ ಏಕೆಂದರೆ ಇದು ಲೋಕಾನುಭವವು ಸಿದ್ಧಾಂತವಾಗಿಯಾದರೋ ಶೃತ್ಯರ್ಥವು ಪರಮಾತ್ಮ ವಿಷಯಕ ಪರಾಮರ್ಶವಾಗಿದೆ. ಸಃ-ಪರಮಾತ್ಮಾ ಸಂಪ್ರಸಾದಾ ಸುಪ್ತ್ವಾರತ್ವಾ-ರಮಣಂಕೃತಾ ಜೀವಂಗಳಂ ಪುಣ್ಯಂ ಚ ಪಾಪಂಚ ದೃಷ್ಟ್ವೈವ ನತು ಅನುಭೂಯ ಸಂಚರಿತ್ವಾ ಪ್ರತಿ ನ್ಯಾಯಂ-ಅವಸ್ಥಾಂತರ ಪ್ರವರ್ತನೀಯ ಮಿತಿ ನ್ಯಾಯಮನುಸೃತ್ಯ ಪ್ರತಿಯೋನಿಂ-ಪ್ರತಿದೇಹಂ ಸರ್ವದೇಹೇಷು ಯದ್ವಾ ಪ್ರತಿಯೋನಿಂ ತತ್ತನ್ಮಾರ್ಗಮನುಸೃತ್ಯ ಪುನಃ ಸ್ವಪ್ನಾಯೈವ ಆದ್ರವತಿ-ಕಂಠದೇಹಮಾಗಚ್ಛತಿ ಸಃ-ಪರಮಾತ್ಮಾ ತತ್ರ ಸ್ವಪ್ನಾವ ಸ್ಥಾಯಾಂ ಯತ್ಕಿಂಚಿದನಿಷ್ಟಂಪಶ್ಯತಿತೇನ ತತ್ಕೃ ಪಾಪ ಫಲೇನ ದುಃಖೇನ ಅನ ನ್ವಾಗತಃ-ಆಸಂಸ್ಪೃಷ್ಟೋಭವತಿ ತತ್ರಹೇತು! ಅಸಂಗ ಃ- ತತ್ಕೃತ ಪಾಪಫಲ ಸಂಸರ್ಗ ಶೂನ್ಯಃ-ಪ್ರಮಿತಃ ನಿಶ್ಚಿತನಾಗಿದ್ದಾನೆ. ಪೂರ್ವ ಪಕ್ಷಿಯಾದರೋ ಈ ಸರ್ವವನ್ನು ಜೀವಪರ ಅರ್ಥ ಮಾಡುವುದು ಯುಕ್ತವಲ್ಲ.

3. ಅತೋವಕ್ತಿ—ಅದಕ್ಕಾಗಿ ಹೇಳಿದೆ

**ಸೂ॥ ಓಂ॥ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ॥ 42**

"ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋನ ಬಾಹ್ಯಂ ಕಿಂಚನವೇದ ನಾಂತರಂ ॥ ಪ್ರಾಜ್ಞೇನಾತ್ಮನಾ ಅನ್ವಾರೂಢ ಉತ್ಸ ರ್ಜದ್ಯಾತಿ । (ಬೃ 6 3-21—ಬೃ-6 -3-35) ಇತಿ ಭೇದ ವ್ಯಪದೇಶಾನ್ನ ಜೀವಃ ಪರ ಏವಾಸಂಗಃ ॥

"ಸಯತ್ತತ್ರಕಿಂಚಿತ್ಪಶ್ಯತಿ" ಎಂಬ ಸ್ವಪ್ನ ದ್ರಷ್ಟೃವು ಶ್ರೀಪರಮಾತ್ಮನೇ ಜೀವ ನಲ್ಲ. "ಅಸಂಗೋಹ್ಯಯಂ ಪುರುಷಃ" ಎಂದು ಅಸಂಗತ್ವ ಧರ್ಮವು ಶ್ರೀ ವಿಷ್ಣು ವಿನ ಅಸಾಧಾರಣ ಧರ್ಮವು. ಜೀವನಿಗೆ ಈಶ್ವರಾಭೇದದಿಂದಲೂ ಅಸಂಗತ್ವ ಧರ್ಮವು ಲಭಿಸುವುದಿಲ್ಲ. ಹಾಗೆ ಸುಷುಪ್ತಿ ಉತ್ಕ್ರಾಂತಿ ಪ್ರಕರಣಗಳಲ್ಲಿ ಜೀವ ಜೀವೇಶ್ವರರಿಗೆ

ಭೇದವನ್ನೇ ಹೇಳಿರುವುದರಿಂದ ಐಕ್ಯವು ಅಸಾಧ್ಯವು.

ಸ್ವಪ್ನಾದಿ ದ್ರಷ್ಟೃವು ಪರಮಾತ್ಮನೇ ಜೀವನಲ್ಲ ಶ್ರೀಪರಮಾತ್ಮನೇ "ಅಸಂಗನು" ಶ್ರೀ ಪರಮಾತ್ಮನು ಕರ್ಮ:ಬಂಧದಿಂದ ಬಿಡಲ್ಪಟ್ಟವನು ಜೀವನಲ್ಲ ಪ್ರಾಜ್ಞೇನ ಮುಂತಾದ ಸುಷುಪ್ತಿ ಉತ್ಕ್ರಮಣ ವಾಕ್ಯದಲ್ಲಿ ಸ್ವಪ್ನಾದಿ ದ್ರಷ್ಟೃವು ಆದ ಈಶ್ವರನಿಂದ ಜೀವನಿಗೆ ಭೇದವು ಬೋಧನೆಯಾಗಿದೆ ಉತ್ಕ್ರಾಂತ ಪದವು ಮರಣ ಹೇಳಿಕೆಯು ಜೀವನಿಗೆ ಪ್ರಾಜ್ಞೇನ-ಸರ್ವಜ್ಞನಾದ ಪರಮಾತ್ಮನಿಂದ ಆಲಂಗಿಸಲ್ಪಟ್ಟ ಸುಪ್ತನು ಮತ್ತು ಮುಕ್ತನು ದೇಹದ ಬಾಹ್ಯಾಂತರ ವಿಷಯವನ್ನು ತಿಳಿಯನು ಎಂದೂ ಹೇಳಿದೆ.

4. **ಸ್ವಪ್ನಾದಿದ್ರಷ್ಟೃತ್ವಂ ಚ ಸರ್ವಜ್ಞತ್ವಾತ್ತಸ್ಯೈವ ಯುಜ್ಯತೇ ॥**

ಅಶರೀರನಿಗೆ ಹೇಗೆ ಸ್ವಪ್ನಾದಿಗಳ ದರ್ಶನವು ಸಾಧ್ಯವು ಎಂದರೆ ಆತನು ಸರ್ವಜ್ಞನಷ್ಟೇ. ಆತನಿಗೆ ಕರ್ಮಬದ್ಧತ್ವವಿಲ್ಲದ ಅಸಂಗತ್ವ ಮಾತ್ರವಲ್ಲ ಸ್ವಪ್ನ ದ್ರಷ್ಟೃತ್ವವು ಮುಖ್ಯತಃ ಅವನಿಗೇ ಹೊಂದುತ್ತದೆ. ಚಿತ್ಶರೀರತ್ವ ಸಂಬಂಧದಿಂದ ಸುಷುಪ್ತಿ ಉತ್ಕ್ರಾಂತಿ ಪ್ರಕರಣದಲ್ಲಿ ಪ್ರಾಜ್ಞೇನ ಸುಷುಪ್ತಿಯು ಜೀವನಿಗೆ(ಉತ್ಕ್ರಾಮಯಿತತ್ವಾತತ) ಉತ್ಕ್ರಾಂತತ್ವವು ಈಶ್ವರನಿಗೆ ಹೀಗೆ ಜೀವೇಶ್ವರನಿಗೆ ಭೇದವೇ ಹೇಳಿದೆ ಸ್ವಪ್ನಾದಿ ದ್ರಷ್ಟೃತ್ವವು ಮುಖ್ಯವಾಗಿ ಬ್ರಹ್ಮ ಧರ್ಮವೇ.

- ಇತಿ ಸುಷುಪ್ತ್ಯಾಧಿಕರಣವು -

## - ಬ್ರಾಹ್ಮಣಾಧಿಕರಣವು -

ಈ ಅಧಿಕರಣದಲ್ಲಿ "ಬ್ರಾಹ್ಮಣ" ನಾಮವು ಸಮನ್ವಯ ಮಾಡಲ್ಪಡುವುದು.

1. **ಏಷನಿತ್ಯೋಮಹಿಮಾ ಬ್ರಾಹ್ಮಣಸ್ಯ(ಬೃ-6-4-2)ಇತಿ ಬ್ರಾಹ್ಮಣಸ್ಯಾಪಿ ನಿತ್ಯ ಮಹಿಮಾ ಪ್ರತೀಯತೇ ಸಚ ಬ್ರಾಹ್ಮಣಃ ಸನಾ**

**ಏಷ ಮಹಾನಜ ಆತ್ಮಾ (ಬೃ-6-4-24) ಇತಿ ಅಜ ಶಬ್ದಾ
ದ್ವಿರಿಂಚ ಇತಿ ಪ್ರಾಪ್ತಮ್। ದೇವಾನಾಂಚ ವಿದ್ಯಾ ಕರ್ಮಣೋಃ
ಪದಪ್ರಾಪ್ತಿಃ ಸೂಚಿತಾ ತದುಪರ್ಯಪೀತಿ ॥**

ಬೃಹದಾರಣ್ಯಕ ವಾಕ್ಯದಲ್ಲಿ ಶ್ರೀವಿಷ್ಣುನ್ಯೊಬ್ಬನಿಗೆ ನಿತ್ಯಮಹಿಮೆಯೆಂದಲ್ಲ ಬ್ರಾಹ್ಮಣನಿಗೂ ಇದೆ ಎಂದು ಸಂಶಯವು ಅಜ ಆತ್ಮಾ ಎಂಬ ಅಜ ಶಬ್ದದಿಂದ "ಚತುರ್ಮುಖ ಬ್ರಹ್ಮನಿಗೂ" "ತದುಪರಿ" ಎಂಬ ಸೂತ್ರದಲ್ಲಿ ದೇವತೆಗಳಿಗೆ ವಿದ್ಯಾ ಕರ್ಮಗಳಿಂದ ಪದ ಪ್ರಾಪ್ತಿಯನ್ನು ಹೇಳಿರುವುದರಿಂದ ಬ್ರಾಹ್ಮಣ ಶಬ್ದದಿಂದ ಹೇಳಿದ ವಿರಿಂಚನಿಗೆ ನಿತ್ಯ ಮಹಿಮೆಯು ಅಸಂಭವವು ವಿರಿಂಚೇತರ ದೇವತೆಗಳಿಗೆ ವಿದ್ಯಾಕರ್ಮದಿಂದ ಪ್ರಾಪ್ತಪದವು ಸೂಚಿಸಿಪೆ. ವಿರಿಂಚನೂ ದೇವಕೋಟಿಯಲ್ಲಿ ಸೇರಿದವನೇ ಆದರೆ "ಸ ಏಷಃ" ಪರಮಾತ್ಮಾ "ಮಹಾನ್" ಅಪರಿಮಿತಃ "ಅಜಃ"ಜನ ರಹಿತಃ ಎಂದು ಸಿದ್ಧಾಂತ ರೀತ್ಯ ಪರಮೇಶ್ವರನೇ ವಿರಂಚನಲ್ಲ

2 ಅತೋಽಬ್ರವೀತಿ—ಅದಕ್ಕಾಗಿ ಹೇಳಿದೆ

## ಸೂ॥ ಓಂ॥ ಪತ್ಯಾದಿಶಬ್ದೇಭ್ಯಃ ಓಂ॥ 43

"ಸರ್ವಸ್ಯಾಧಿಪತಿಃ ಸರ್ವಸ್ಯೇಶಾನ ಸವಾ ಏಷಃ ನೇತಿ ನೇತಿ ॥
(ಬೃ-6-4-21) ಇತ್ಯಾದಿ ಶಬ್ದೇ ಭ್ಯೋ ನಿತ್ಯ ಮಹಿಮಾ ವಿಷ್ಣುರೇವ ॥

"ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ" ಎಂಬ ಶೃತಿಯಲ್ಲಿ ಬ್ರಾಹ್ಮಣ ಶಬ್ದ ವಾಚ್ಯನು ಶ್ರೀವಿಷ್ಣುವೇ ವಿರಿಂಚನಲ್ಲ "ಸರ್ವಸ್ಯಾಧಿಪತಿಃ" ಇತ್ಯಾದಿ ಸರ್ವಾಧಿಪತ್ಯ ವನ್ನು ಹೇಳಿರುವುದು ಶ್ರೀವಿಷ್ಣುವಿನ ಅಸಾಧಾರಣ ಧರ್ಮವೇ

ಸರ್ವಸ್ಯ-ಬ್ರಹ್ಮ ರುದ್ರಾದಿ ದೇವತೆಗಳ ಗುಣಗಳಿಗಿಂತ ಗುಣದಲ್ಲಿ ಅಧಿಕ ನಾದ್ದರಿಂದ ಈತನು ಸರ್ವರನ್ನು ಪಾಲಿಸುವವನು ಸರ್ವಜಗತ್ತಿಗೂ ಅಧಿಪತಿಯು ಬ್ರಹ್ಮಾದಿ ಸರ್ವ ದೇವತೆಗಳಿಗೂ ಅಂತರ್ಯಾಮಿಯಾಗಿ ಪ್ರೇರಕನು ಈಶಾನನು ಎಲ್ಲವೂ ಇವನ ವಶವರ್ತಿಯೇ ಎಂದು ವಾಜಸನೇಯ ಶೃತಿಯು

3 **ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ।**
(ತ್ರೈ ಆ-3-12)

ಸರ್ವಾಧಿಪತ್ಯವು ಶ್ರೀ ವಿಷ್ಣುವಿಗೆ ಮುಖ್ಯ ಧರ್ಮವು ಎಂಬ ಶ್ರುತಿಯು

"ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯ"-ಹಿಂದೆ ಕೇಳದಿರುವುದು ಭವಿಷ್ಯತ್ ಮತ್ತು ವರ್ತಮಾನ ವಸ್ತುಗಳೆಲ್ಲವೂ ಪುರುಷಾಧೀನವೇ ಆತನೇ ಸರ್ವಾಧಿಪತಿಯು ಮುಕ್ತ ಸಮುದಾಯಕ್ಕೂ ಅಧಿಪತಿಯು ಯಾರಿಂದ (ಅನ್ನಂ ಮರ್ತ್ಯಂ) ಸಂಸಾರ ಸಮೂಹವನ್ನು ಅತಿಕ್ರಮಿಸಲು ಸಾಧ್ಯವೋ. ಆತನು ಸರ್ವಾಧಿಪತಿಯು ಶ್ರೀವಿಷ್ಣುವು.

4 **ಸಪ್ತಾರ್ಧಗರ್ಭಾಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿಪ್ರದಿಶಾ ವಿಧರ್ಮಣಿಃ (ಋ-1-164-36) "ಸಂಯೋತೋ (ಐ-ಆ-3-2-4) ಇತ್ಯಾದಿಶ್ರುತಿಭ್ಯಸ್ತ ಸ್ಯೈವಹಿಂತೇಶಬ್ದಾಃ ॥**

ಸರ್ವಶಬ್ದ ಸಂಬಂಧದಿಂದ "ಈಶಾನ" ಪದದಿಂದ ಹೇಳಲ್ಪಡುವ ಸರ್ವ ಪ್ರೇರಕತ್ವಧರ್ಮವನ್ನು ಹೇಳುವ ಶ್ರುತಿಯು ವಿಷ್ಣುವನ್ನೇ ಹೇಳುವುದು "ನೇತಿ ನೇತಿ" ಎಂಬಶ್ರುತಿಯಲ್ಲಿ ದೃಷ್ಟ,ಶ್ರುತ ಸರ್ವಲಕ್ಷಣತ್ವ ಧರ್ಮ ಸಮರ್ಥನವು ಮಾಡಲ್ಪಡುತ್ತದೆ.

ಸರ್ವಾಧಿಪತ್ಯ ಶಬ್ದವು ಶ್ರೀವಿಷ್ಣುವಿನಲ್ಲಿಯೇ ಸಾಧ್ಯಧರ್ಮವು ಅನ್ಯರಲ್ಲಿ ಅಸಾಧ್ಯವು.

– ಇತಿ ಬ್ರಾಹ್ಮಣಾಧಿಕರಣಂ –

ಪ್ರಥಮಾಧ್ಯಾಯದ ತೃತೀಯ ಪಾದದ ಮುಕ್ತಾಯ -

ಶ್ರೀಕೃಷ್ಣಾರ್ಪಣಮಸ್ತು

- ಚತುರ್ಥ ಪಾದ -

- ಅನುಮಾನಿಕಾಧಿಕರಣಂ -

1 ಶ್ರುತಿ ಲಿಂಗಾದಿಭಿರನ್ಯತ್ರೈವ ಪ್ರಸಿದ್ಧಾನಾಮಪಿ ಶಬ್ದಾನಾಂ ಸಾಮಸ್ತ್ಯೇನ ವಿಶೇಷ ಹೇತುಭಿರ್ವಿಷ್ಣಾವೇವ ಪ್ರವೃತ್ತಿಂ ದರ್ಶಯತ್ಯಸ್ಮಿನ್ಪಾದೇ ||

ಈ ಪಾದದಲ್ಲಿ ಪ್ರವೃತ್ತಿಯು ಶೃತಿ ಲಿಂಗಗಳಿಂದಲೇ ಬೇರೆ ವಸ್ತುವಿನಲ್ಲಿಯೇ ಪ್ರಸಿದ್ಧವಾದ ನಾಮ ಲಿಂಗಾತ್ಮಕ ಶಬ್ದಗಳನ್ನು ಶ್ರೀವಿಷ್ಣುವಿನಲ್ಲಿಯೇ ಸಾಧಿಸಲಾಗಿದೆ ಹಿಂದಿನ ಮೂರು ಪಾದಗಳಲ್ಲಿ ಪ್ರಸ್ಟ್ರ್ಯತ್ವಾದಿ ಗುಣವಾಚಕ ಶಬ್ದಗಳು "ಆತ್ಮನಃ ಅಕಾಶಃ ಸಂಭೂತ"ಸೃಷ್ಟ್ಯಾದಿ ಪ್ರಕರಣಗಳ ವಾಖ್ಯೆಯು ಸತ್ಯಜ್ಞಾನಾದಿ ಗುಣವಾಚಕ ಶಬ್ದಗಳು ಹಾಗೆಯೇ ಅವುಗಳ ಸಂಬಂಧದಿಂದ ಅನ್ನಮಯವಾಚಕ ಶಬ್ದಗಳಿಗೆ ಸೃಷ್ಟಿ ಕರ್ತೃತ್ವ ಪ್ರಕರಣಗಳಲ್ಲಿ ಆಕಾಶ, ಇಂದ್ರ, ಅಗ್ನಿ,ವಜ್ರಾದಿ ಶಬ್ದಗಳ "ಸದೇವ ಸೌಮ್ಯೇದಂ ಇತ್ಯಾದಿ ಪ್ರಕರಣ ಶಬ್ದಗಳ ಸಮನ್ವಯವನ್ನು ಮಾಡಿದೆ ಈ ಪಾದದಲ್ಲಿ ಸ್ವರ, ವರ್ಣ, ಪದಾತ್ಮಕ ಶಬ್ದಗಳ ಸಮನ್ವಯವು ಮಾಡಲ್ಪಟ್ಟಿದೆ.

## ಸೂ|| ಓಂ|| ಆನುಮಾನಿಕಮಪ್ಯೇಕೇಷಾಮಿತಿಚೇನ್ನ ಶರೀರ ರೂಪಕವಿನ್ಯಸ್ತಗೃಹೀತೇರ್ದರ್ಶಯತಿಚ ಓಂ|| 1

ಸಾಂಖ್ಯಾನುಮಾನ ಕಲ್ಪಿತ ಪ್ರಧಾನಾದಿ ಪದಗಳು ಕೆಲವು ಶಾಖೆಗಳಲ್ಲಿ "ಅವ್ಯಕ್ತಾತ್ಪುರುಷಃ"ಎಂಬ ವಾಕ್ಯದ ಅವ್ಯಕ್ತಶಬ್ದದಿಂದ ಹೇಳಲ್ಪಡುತ್ತದೆಂದು ಅನುಮಾನ

ದಿಂದ ಶ್ರೀವಿಷ್ಣುವು ಸರ್ವ ಶಬ್ದವಾಚ್ಯನಲ್ಲ ಎಂದರೆ ಹಾಗಲ್ಲ ಶ್ರೀವಿಷ್ಣುವೇ ಸರ್ವಶಬ್ದ ವಾಚ್ಯನು "ಅವ್ಯಕ್ತ _'' ಎಂಬ ಶೃತಿಯು "ಅವ್ಯಕ್ತೋಽಕ್ಷರ'' ಎಂಬ ಶೃತಿಯು ಶ್ರೀ ವಿಷ್ಣುವಿಗೆ ಅವ್ಯಕ್ತ ವಾಚ್ಯತ್ವವನ್ನು ಹೇಳುವುದು. ಅನ್ಯತ್ರ ಅವ್ಯಕ್ತ ಶಬ್ದ ವಾಚ್ಯತ್ವಗಳು ಪ್ರಪಂಚ ವ್ಯವಹಾರ ಪ್ರಯೋಜನಕ್ಕಾಗಿ ಮಾತ್ರವೇ ಉಪಯೋಗ ವನ್ನು ಸರ್ವ ಜೀವರ ಪ್ರಾಕೃತ ಶರೀರಗಳೂ ಪರಮಾತ್ಮ ತಂತ್ರ ನಿಮಿತ್ತದಿಂದ ಆತನಿ ಗಿಂತ ಹೀನವಾಗಿ ಶರೀರದ ಜತೆಯಲ್ಲಿಯೇ ಹೇಳಲ್ಪಟ್ಟಿರುವುದು ಅಂದರೆ ಅಶರೀರ ನಾಗಿ ಪ್ರಧಾನಾದಿಗಳ ಶರೀರಗಳಲ್ಲಿ ಚಿತ್ಸ್ವರೂಪದಿಂದ ವ್ಯಾಪ್ತನಾಗಿ ಸರ್ವಪ್ರೇರ ಕನಾಗಿ ಇರುವ ಶ್ರೀವಿಷ್ಣುವೇ ಅವ್ಯಕ್ತ ಶಬ್ದ ಮುಖ್ಯ ವಾಚ್ಯನು ಈ ಪರಮಾತ್ಮನ ನಿತ್ಯ ಸಂಬಂಧದಿಂದ ಅವನ ಅಧೀನವಾದ ಪ್ರಕೃತ್ಯಾದಿಗಳಲ್ಲಿ ಲೋಕ ವ್ಯವಹಾರ ಕ್ಕಾಗಿ ಅವ್ಯಕ್ತಶಬ್ದವು ಅಮುಖ್ಯ ವಾಚ್ಯವು

**3-4. ತತ್ತು ಸಮನ್ವಯಾದಿತಿ ಸರ್ವ-ಶಬ್ದಾನಾಂ ಪರಮೇಶ್ವರ ಸಮ ನ್ವಯ ಉಕ್ತಃ। ತನ್ನಯುಜ್ಯತೆ। ಯತೋಽವ್ಯಕ್ತಾತ್‌ಪುರುಷಃ ಪರಃ (ಕಠ-1-3-11) ಇತಿ ಸಾಂಖ್ಯಾನುಮಾನಪರಿಕಲ್ಪಿತಂ ಪ್ರಧಾನಮಪ್ಯೇಕೇಷಾಂ ಶಾಖಿನಾಮುಚ್ಯತ ಇತಿ ಚೇನ್ನ। ತಸ್ಯೈವ ಪಾರಂತಂತ್ರಾಚ್ಛರೀರರೂಪಕೇಽವ್ಯಕ್ತೇ ವಿನ್ಯಸ್ತಸ್ಯ ಪರಮಾತ್ಮನ ಏವಾವ್ಯಕ್ತಶಬ್ದೇನ ಗೃಹೀತಿಃ । ಕಪ್ರತ್ಯಯಃ ಕುತ್ಸನೇ ॥**

"ತತ್ತು ಸಮನ್ವಯಾತ್" ಎಂದು ಶ್ರೀಪರಮೇಶ್ವರನಲ್ಲಿ ಸರ್ವಶಬ್ದಗಳ ಸಮ ನ್ವಯ ಮಾಡಿದ್ದರೂ "ಅವ್ಯಕ್ತಾತ್ಪುರುಷಃ ಪರಃ'' ಎಂಬ ಸಾಂಖ್ಯಾನುಮಾನ ಕಲ್ಪಿತ ಪ್ರಧಾನವನ್ನೂ ಕಲವು ಶಾಖೆಯವರು ಅವ್ಯಕ್ತ ಪದವಾಚ್ಯವನ್ನಾಗಿ ಹೇಳುತ್ತಾರೆ. ಇದು ಸರಿಯಲ್ಲ. ಪ್ರಧಾನವು ಪರತಂತ್ರ ವಸ್ತುವಾಗಿ ಆ "ಪ್ರಧಾನ'' ದೇಹದಲ್ಲಿ ತದ್ರೂಪ ಶ್ರೀ ಪರಮಾತ್ಮನ ಚಿತ್ಸ್ವ ರೂಪನ ಸ್ವತಂತ್ರ್ಯ ಪ್ರೇರಕ ಶಕ್ತಿಗೆ ಒಳಪಟ್ಟು ವ್ಯಾಪಾರಗಳು ನಡೆಯುವುದರಿಂದ ಶ್ರೀವಿಷ್ಣುವೇ ಮುಖ್ಯ ಅವ್ಯಕ್ತ ಶಬ್ದವಾಚ್ಯನು. ಇಲ್ಲಿ "ಕ'' ಪ್ರತ್ಯಯವು ಶ್ರೀವಿಷ್ಣುವಿನ ಮುಖ್ಯತ್ವವನ್ನೂ ಆತನಿಗಿಂತ ಜೀವನಿಗೆ ಹೀನತೆಯನ್ನೂ ಹೇಳುವುದು.

"ಯೋನಿ ಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ।
ಸ್ಥಾನು ಮನ್ಯೆನು ಸಂಯಂತಿ ಯಥಾಕರ್ಮಯಥಾಶೃತಂ ॥

5. **ಪರಮಾತ್ಮನ ಏವಾವ್ಯಕ್ತಶಬ್ದಃ ತತ್ತಂತ್ರತ್ವೇನ ತಚ್ಛರೀರರೂಪತ್ವಾದಿತರಸ್ಯಾಪ್ಯವ್ಯಕ್ತಶಬ್ದಃ ॥**

ಗರುಡಪುರಾಣ . ಏವಮೇವ ಹಿ ಶಬ್ದಾನಾಂ ಪ್ರಸಿದ್ಧಿರಪಿಲೌಕಿಕೀ ।
ವಾಚಕತ್ವಂ ಪ್ರಧಾನಸ್ಯ ತ್ವಿತರಸ್ಯತದನ್ವಯಾತ್ ॥

ಪರಮಾತ್ಮನಿಗೆ ಅವ್ಯಕ್ತ ಶಬ್ದದ ಮುಖ್ಯ ವಾಚಕತ್ವವು. ಆದಾಗ್ಯೂ ಆ ಪರಮಾತ್ಮ ತಂತ್ರವಾದ ಆ ಶರೀರ ರೂಪದಿಂದಲೂ ಮತ್ತು ನಿಯಾಮಕ ಧರ್ಮದಿಂದಲೂ ಆ ಶರೀರದಲ್ಲಿ ಜೀವರುಗಳು ಅಸ್ವತಂತ್ರರಾಗಿ ಆಜ್ಞಾಧಾರಕರಾಗಿ ಇರುವುದರಿಂದಲೇ ಅಮುಖ್ಯತಃ ಜೀವರುಗಳಲ್ಲಿ ವಾಚ್ಯತ್ವವು.

6. **ತುಚ್ಛೇನಾಭ್ವಪಿಹಿತಂ ಯದಾಸೀತ್** (ಋ. 10-129-3) **ಇತಿ ದರ್ಶಯತಿಚ ।**

ಅವ್ಯಕ್ತ ,ಶಬ್ದವು ಪರಮಾತ್ಮ ವಾಚಕವು ವಾಜಸನೇಯ ಶೃತಿಯಲ್ಲಿ "ಆತ್ಮನಿ ತಿಷ್ಠನ್ ಆತ್ಮನೋ ಅಂತರಃ" ಎಂದು ಹೇಳುವುದು ಈ ವಾಕ್ಯದಿಂದ ಪ್ರಧಾನಕ್ಕೆ ಅಲ್ಪತ್ವ ಪಾರತಂತ್ರ್ಯ ಪರಮಾತ್ಮನ ನಿಯಂತ್ರತ್ವವನ್ನು ಮತ್ತು ಪರಮಾತ್ಮನು ಸ್ವತಂತ್ರವಾಗಿ ಪ್ರಧಾನದಲ್ಲಿರುವಿಕೆಯನ್ನು ಹೇಳುವುದರಿಂದ ಪರಮಾತ್ಮನೇ ಅವ್ಯಕ್ತ ಶಬ್ದ ಮುಖ್ಯ ವಾಚ್ಯನು

7. **ಅವ್ಯಕ್ತಮಚಲಂ ಶಾಂತಂ ನಿಷ್ಕಲಂ ನಿಷ್ಕ್ರಿಯಂ ಪರಂ । ಯೋವೇದ ಹರಿಮಾತ್ಮಾನಂ ಸ ಭಯಾದನು ಮುಚ್ಯತ ಇತಿ ಪಿಪ್ಪಲಾದ ಶಾಖಾಯಾಂ । ಅಕ್ಷರಂ ಬ್ರಹ್ಮಪರಮಮಿತ್ಯುಕ್ತ್ವಾ ಅವ್ಯಕ್ತೋಽಕ್ಷರ ಉಚ್ಯತ** (ಗೀತಾ 8-3-21) **ಇತಿ ವಚನಾಚ್ಚ ॥**

ಹೀಗೆ ಸ್ಮೃತಿ ಶೃತಿಗಳು ಮೇಲಿನ ಹೇಳಿಕೆಯನ್ನು ಸಮರ್ಥನ ಮಾಡುವುವು ಯಾವ ಅಧಿಕಾರಿಯು ಅನ್ಯರಿಂದ ತಿಳಿಯಲು ಅಶಕ್ಯನಾದ್ದರಿಂದ ಅವ್ಯಕ್ತನಾದ ಈಶ್ವರ

ಧರ್ಮದಿಂದ ಚಲಿಸಲ್ಪಡನೊ (ಯಾವಾಗಲೂ ಈಶ್ವರನೋ) ವಿಕಾರವಿಲ್ಲದಪೂರ್ಣ ಸುಖನೋ ಷೋಡಶಕಲಾರಹಿತ ಪ್ರಾಕೃತ ಕ್ರಿಯಾರಹಿತ ಸಂಕಲ್ಪಮಾತ್ರ ಕ್ರಿಯೆಯು. ಳ್ಳವನೋ) ಪ್ರಲಯ ಕಾಲದಲ್ಲಿ ಸರ್ವ ವ್ಯಾಪಾರ ಶೂನ್ಯೇ ಸರ್ವವನ್ನುನಿಷ್ಕರ್ಷೆ ಮಾಡುವವ, ಸರ್ವೋತ್ತಮನೋ ಆಪಾನಾದಿಕರ್ತನೋ ಆ ಹರಿಯನ್ನು ತಿಳಿಯುವ ಆತನು ಜ್ಞಾನಪ್ರಾಪ್ತ್ಯನಂತರದಲ್ಲಿ ಸಂಸಾರ ಭಯದಿಂದ ಮುಕ್ತನಾಗುವನು ಗೀತೆಯಲ್ಲಿಯಾದರೊ "ಅಕ್ಷರಂ ಬ್ರಹ್ಮ" ಎಂಬ ಪೂರ್ವವಾಕ್ಯದ "ತತ್ಪರಮಂ ಬ್ರಹ್ಮೇತಿ" ಎಂದು ಅಕ್ಷರ ಶಬ್ದ ವಾಚ್ಯವು "ಅವ್ಯಕ್ತೋಽಕ್ಷರ ಉಚ್ಯತೆ" ಎಂಬ ವಾಕ್ಯದಿಂದ ಅವ್ಯಕ್ತ ಶ್ರೀಹರಿಗೆ ಹೇಳುವುದು ಛಾಂದೊಗ್ಯ ವಾಕ್ಯದ "ಅನೇನ ಜೀವೇನ" ಎಂದು ಜೀವೋ ವಿನಯಿತಾ ಸಾಕ್ಷೀ ಎಂದು ಸಹಸ್ರನಾಮದಲ್ಲಿ ಹೇಳಿರುವುದಕ್ಕೆ ಉಸಲಕ್ಷಣವು, ನಾನು ಪ್ರಾಣಾಧಾರಕ ನಿಮಿತ್ತದಿಂದ ಜೀವಾಖ್ಯ ಅನಿರುದ್ಧ ರೂಪದಿಂದ ತೇಜೋಬನ್ನಾಖ್ಯ ದೇವತೆಗಳ ಒಳಗೆ ಪ್ರವೇಶಿಸಿ ನಾಮ ರೂಪ ಶಬ್ದಾರ್ಥ ಪ್ರಪಂಚದಲ್ಲಿ "ಚೆನ್ನಾಗಿ ತೋರ್ಪಡಿಸಿಕೊಳ್ಳುವೆನು ಎಂದು ಶ್ರೀವಿಷ್ಣುವಿನ ವಾಕ್ಯವು

## ಸೂ॥ ಓಂ॥ ಸೂಕ್ಷ್ಮಂತುತದರ್ಹತ್ವಾತ್ ಓಂ॥ 2

ಸೂಕ್ಷ್ಮಮೇವಾವ್ಯಕ್ತ ಶಬ್ದೇನೋಚ್ಯತೆ। ತದ್ಧ್ಯವ್ಯಕ್ತತಾಮರ್ಹತಿ।

ಸೂಕ್ಷ್ಮತ್ವವೇ ಅವ್ಯಕ್ತ ಶಬ್ದ ವಾಚ್ಯವು. ಅದು ಪ್ರಧಾನವಾಗಿ ವಿಷ್ಣು ವಾಚಕವೆ

9. **ಸೂಕ್ಷ್ಮತ್ವಂ ಚ ಮುಖ್ಯಂ ತಸ್ಯೈವ ॥**

ಆತನಿಗೇ ಮುಖ್ಯವಾಗಿ ಸೂಕ್ಷ್ಮತ್ವವು.

10. **ಯೆತ್ತತ್ಸೂಕ್ಷ್ಮಂ ಪರಮಂ ವೇದಿತವ್ಯಂ ನಿತ್ಯಂ ಸದಾ ವೈಷ್ಣವಂ ಧ್ಯಾಮನಂತಿ। ಯೆತ್ತಲ್ಲೋಕಾ ನ ವಿದುಃ ಲೋಕಸಾರಂ ವಿಂದಂತ್ಯೇತತ್ಕವಯೋ ಯೋಗನಿಷ್ಠಾ ಇತಿ ಪಿಪ್ಪಲಾದ ಶಾಖಾಯಾಂ ॥**

ಯಾವ ವಸ್ತುವು ಲೋಕೋತ್ತರವೋ ಶ್ರೀ ವಿಷ್ಣು ಸ್ವರೂಪವೂ ಆ ಪರಮ ಮುಖ್ಯ ಸೂಕ್ಷ್ಮ ವಸ್ತುವಾದ ಶ್ರೀ ವಿಷ್ಣುವು ತಿಳಿಯಲ್ಪಡಬೇಕು. ಅಥರ್ವ ವಾಕ್ಯವು 'ಏಷೋಣು ರಾತ್ಮಾಚೇತಸಾವೇದಿತವ್ಯ ಯಾವ ವಸ್ತುವನ್ನು ಪಾಮರರು ತಿಳಿಯಲಾರರೋ ಆ ವಿಷ್ಣು ಸ್ವರೂಪವನ್ನು ಬ್ರಹ್ಮನಲ್ಲಿ ಯೋಗನಿಷ್ಠೆಯಿಂದ (ಯೋಗ ವೆಂಬ ಉಪಾಯವನ್ನು ಹೊಂದಿರುವ) ಜ್ಞಾನಿಗಳು ಸಾಕ್ಷಾತ್ಕರಿಸಿಕೊಳ್ಳುವರು ಎಂಬುದು ಪ್ರಸಿದ್ಧವು

ನ ಜೀವನಾಮಾ ಭಗವಾನ್ ಪ್ರಾಣಧಾರಣ ಹೇತುತಃ ।
ಉಪಕಾರೇಣ ಜೀವಾಖ್ಯಾ ಸಂಸಾರಿಣ ತಿನಿಗದ್ಯತೆ ॥

11 ಮುಖ್ಯೇ ಚ ವಿದ್ಯಮಾನೇ ನಾಮುಖ್ಯಂ ಯುಕ್ತಂ ॥

ಮುಖ್ಯವಾಚಕನು ಬ್ರಹ್ಮನಾಗಲು ಮಿಕ್ಕ ವಸ್ತುಗಳಿಗೆ ಮುಖ್ಯತ್ವವನ್ನು ಹೇಳುವದು ಸಾಧುವಲ್ಲ.

## ಸೂ॥ ಓಂ॥ ತದಧೀನತ್ವಾದರ್ಥವತ್ ಓಂ॥ 3

ತಧದೀನತಾಚ್ಚಾವ್ಯೆತ್ವಾದೀನಾಂ ತಸ್ಮೈವ ಅವ್ಯಕ್ತತ್ವಂ
ಪರಾವರತ್ವಾಧಿಕಮರ್ಥವತ್ ।

ಪ್ರಧಾನಾದಿಗಳಲ್ಲಿರುವ ಪರಾವರತ್ವಾದಿ ಧರ್ಮಗಳು ಭಗವಂತನ ಅಧೀನಗಳಾದ ರಿಂದ ಆ ಧರ್ಮಗಳ ಪ್ರವೃತ್ತಿ ನಿಮಿತ್ತ ಸ್ವಾಮಿತ್ವದಿಂದ ಆ ಶಬ್ದಗಳಿಗೆ ಪರಮಾತ್ಮ ನಲ್ಲಿಯೆ ಮುಖ್ಯ ಪ್ರಯೋಜನವು ಶ್ರೀವಿಷ್ಣುವಿಗೆ ಅವ್ಯಕ್ತಾದಿ ಧರ್ಮಗಳನ್ನು ಮುಖ್ಯ ವೃತ್ತಿಯಿಂದ ಅಂಗೀಕರಿಸಿದರೂ "ಅವ್ಯಕ್ತಾತ್ಪುರುಷಃ ಪರ "ಮಹತಃ ಪರಮವ್ಯಕ್ತಂ" "ಸೋಪರಃ" "ಜೀವಾ ಏವ ತು ದುಃಖಿನಃ" "ಕಾರ್ಯ ಕಾರಣ ಬಧ್ಧಾ" "ನಿರನಿಷ್ಟೋ ನಿರವದ್ಯಃ" ಮುಂತಾದ ಶೃತಿ ವಾಕ್ಯಗಳ ಪರ್ಯಾಲೋಚನೆ ಯಿಂದ ಪ್ರಧಾನಾದಿಗಳಲ್ಲಿ ಅಮುಖ್ಯವಾಗಿ ಗ್ರಾಹ್ಯವೇ ಸರ್ವ ಪ್ರಪಂಚವು ಪರಮಾ ತ್ಮನ ಅಧೀನವಾದ್ದರಿಂದ ಸ್ವಲ್ಪ ಗುಣವಿದ್ರುಪವನ್ನು ಲೋಕದಲ್ಲಿ ಗುಣವಾಚಕ ಶಬ್ದಗ ಳಿಂದ ಕರೆಯಲ್ಪಡುವಂತೆ ವ್ಯವಹಾರೋಕ್ತಿಯು ಯುಕ್ತವು ಶ್ರೀಪರಮಾತ್ಮನಲ್ಲಿಯೇ

ಸರ್ವವಿಧ ಸರ್ವ ಧರ್ಮಗಳ ಪೂರ್ಣತ್ವವು ಬೇರೆ ವಸ್ತುಗಳಲ್ಲಿರುವ ಆ ಧರ್ಮಗಳು ಪರಮಾತ್ಮ ಸ್ವಾಧೀನ ಪ್ರೇರಕತೆಯಿಂದ ಆ ವಸ್ತುಗಳಲ್ಲಿ ಅಲ್ಪಸಂಖ್ಯಾ ಪ್ರಮಾಣ ಗಳಲ್ಲಿರುವುವು.

**13. ಯದಧೀನೋ ಗುಣೋ ಯಸ್ಯ ತದ್ಗುಣೀ ಸೋಭಿಧೀಯತೇ ।**
**ಯಥಾಜೀವಃ ಪರಾತ್ಮೇತಿ ಯಥಾರಾಜಾ ಜಯಿತ್ಯಪೀತಿ**
**ಸ್ಕಾಂದೇ ॥**

ಯಾವ ಗುಣವು ಯಾವವಸ್ತುವಿನಲ್ಲಿ ವಿಶಿಷ್ಟವೂ ಮತ್ತು ಅಧೀನವೋ ಆವಸ್ತುವು ಆ ಗುಣವುಳ್ಳದ್ದೆಂದು ಕರೆಯಲ್ಪಡುವನು. ಈ ದೇಹಗಳಲ್ಲಿ ಶ್ರೀ ಪರಮಾತ್ಮನನ್ನು ಒಳಗೆ ಆಚ್ಛಾದಿಸಿರುವ ಶರೀರದಲ್ಲಿರುವ ಜೀವಗತ ಪ್ರಾಣಧಾರತ್ವಾಖ್ಯ ಜೀವ ಶಬ್ಧ ಪ್ರವೃತ್ತಿ ನಿಮಿತ್ತ ಸ್ವಾತಂತ್ರ್ಯದಿಂದ ಆ ಅಂತರ್ಯಾಮಿ ಪರಮಾತ್ಮನು ಜೀವ ಪ್ರವೃತ್ತಿ ನಿಮಿತ್ತ ಸ್ವಾತಂತ್ರ್ಯದಿಂದ ಆ ಜೀವ ಶಬ್ದದಿಂದ ಕರೆಯಲ್ಪಡುವನು ಹಾಗೆ ಅವ್ಯಕ್ತಾದಿ ಧರ್ಮಗಳು ಇತರರಲ್ಲಿ ವಾಚಕ ವೃತ್ತಿಯಿಂದಲೇ ಹೊರತು ಹೇಗೆ ಅಮೃತ ಧರ್ಮದಿಂದ ಬ್ರಹ್ಮನನ್ನು ಅಮೃತನೆಂದೂ ಮೃತ್ಯು ಧರ್ಮಕ್ಕೆ ಮುಖ್ಯ ಪ್ರೇರಕನಾದ ಬ್ರಹ್ಮನನ್ನು ಮೃತ್ಯುಎಂದು ಅದು ಮುಖ್ಯ ವೃತ್ತಿಯಲ್ಲಿ ಕರೆಯುವುದೋ (ಲೋಕದಲ್ಲಿ) ಅದರಂತೆ ಅಮರತ್ವಾದಿ ಧರ್ಮಗಳಿಂದಯುಕ್ತ ಮತ್ತು ಪ್ರೇರಕನಾದ ಬ್ರಹ್ಮನೇ ಅವ್ಯಕ್ತಾದಿ ಶಬ್ದವಾಚ್ಯನು. ಸ್ಕಾಂದ

## ಸೂ॥ ಓಂ॥ ಜ್ಞೇಯತ್ವಾವಚನಾಚ್ಚ ಓಂ॥ 4

ಅನ್ಯಸ್ಯ ನವಾಚ್ಯತ್ವಂ ಯುಜ್ಯತೆ ।
ತಮೇವೈಕಂ ಜಾನಥ ಆತ್ಮಾನಂ ಅನ್ಯಾವಾಚೋಮುಂಚಥ ।
ಅಮೃತಸ್ಯೈಷ ಸೇತುಃ ।
ಆದೌ ಅಂತೇ ಚ ಮಧ್ಯೇಚ ವಿಷ್ಣುಸ್ಸರ್ವತ್ರ ಗೀಯತೆ ॥

ಈ ಮೇಲಿನ ವಚನಗಳಿಂದ ಮೋಕ್ಷಾರ್ಥವನ್ನು ಹೊಂದಲು ಶ್ರೀ ವಿಷ್ಣುವನ್ನೇ ತಿಳಿದು ಉಪಾಸಿಸಿರಿ. ಅನ್ಯ ವಿಷಯಕ ವಸ್ತುವನ್ನು ತ್ಯಜಿಸಿರಿ. ಅತನೇ ಮೋಕ್ಷಕ್ಕೆ ದಾತನೂ ಮತ್ತು ಆಧಾರನು ಅನ್ಯರ ವಿಷಯದಲ್ಲಿ ಉದಾಸೀನ ಹೀನತ್ವ ವಚನಗಳು

ದಿಂದಲೂ ಜ್ಞಾನಗಳು ಪ್ರಾರಂಭೆ ಮಧ್ಯ ಕೊನೆಯಲ್ಲಿ ಯಾವಾಗಲೂ ಶ್ರೀವಿಷ್ಣು ವನ್ನೇ ಸ್ತುತಿಸುವರು ಎಂದು ಆತನ ವಿಷಯ ಜ್ಞಾನಕ್ಕೆ ಪ್ರಾಧಾನ್ಯವು ಹೇಳಿರುವುದು.

## ಸೂ॥ ಓಂ॥ ವದತೀತಿಚೇನ್ನ ಪ್ರಾಜ್ಞೋಹಿ ಓಂ॥ 5

ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತೆ (ಕ-ಠ-1-3-15) ಇತಿ ಜ್ಞೇಯತ್ವಂ ವದತೀತಿ ಚೇತ್ ನ ಪ್ರಾಜ್ಞ ಪರಮಾತ್ಮಾ ಹಿ ತತ್ರೋಚ್ಯತೆ । "ಅಣೋರಣೀಯಾನ್ಮಹತೋಮಹೀಯಾನ್ (ಕಠ-1-2-20) ಇತಿ ತಸ್ಯೈವ ಹಿ ಮಹತೋ ಮಹತ್ವಂ । ಸರ್ವಸ್ಮಾತ್ಪರಸ್ಯ ಮಹತೋಽಪಿ ಪರತ್ವಂ ಯುಜ್ಯತೆ ॥

ಮೇಲಿನ ಕಠ ಶೃತಿಯಿಂದ ಪ್ರಧಾನಕ್ಕೂ ಮೋಕ್ಷಕ್ಕಾಗಿ ಜ್ಞೇಯತ್ವದ ಹೇಳಿಕೆ ಯೆಂದರೆ ಹಾಗಲ್ಲ ಇಲ್ಲಿ ಪೂರ್ಣ ಪ್ರಜ್ಞಾವುಳ್ಳವನನ್ನೇ ಪ್ರಾಜ್ಞ ಶಬ್ದದಿಂದ ಹೇಳಿದೆ ಆತನು ಶ್ರೀಪರಮಾತ್ಮನೇ ಅನ್ಯಕಠ ಶೃತಿಯಲ್ಲಿ ಪರಮಾತ್ಮನಿಗೆ (ಮಹತಃ ಮಹತ್ವವೂ) ಎಲ್ಲ ವಸ್ತುವಿಗಿಂತಲೂ ಮಹತ್ವವೂ ಎಲ್ಲಾ ಅಣು ವಸ್ತುಗಳಿಂದಲೂ ಅಣುತ್ವವು ಮಹತ್ವದಿಂದಲೂ ಮಹತ್ವವು ಹೇಳುತ್ತದೆಯಾಗಿ ಆ ಪ್ರಾಜ್ಞನು ಅನಾದ್ಯನಂತನಾಗಿ (ಉತ್ಪತ್ತಿ ಶೂನ್ಯತ್ವ) ಅನಂತ. ದೇಶಕಾಲ ಗುಣಗಳಿಂದ ಅಪರಿಚ್ಛಿನ್ನನು ಆತನು ಮಹತಃ ಪರಂ. ಸರ್ವಸ್ಥೂಲ ವಸ್ತುಗಳಿಗಿಂತಲೂ ಶ್ರೇಷ್ಠನು. ಅವ್ಯಕ್ತನು ಅವ್ಯಕ್ತತ್ವ ಶ್ರೇಷ್ಠತ್ವವುಳ್ಳ ಪುರುಷಾಖ್ಯ ವಿಷ್ಣುವನ್ನು ಪೂಜಿಸಿ ಸಂಸಾರಾಖ್ಯ ಮೃತ್ಯು ಮುಖದಿಂದ ಬಿಡಲ್ಪಡುವನು

## ಸೂ॥ ಓಂ॥ ಪ್ರಕರಣಾತ್ ಓಂ॥ 6

ವೈಷ್ಣವ ರೂಪಗಳ ಪ್ರಕರಣ ಬಲದಿಂದಲೂ ಪ್ರಾಜ್ಞನೇ ಇಲ್ಲಿ ಪ್ರತಿಪಾದ್ಯನು ಪ್ರಧಾನವಲ್ಲ. "ಅನಾದ್ಯನಂತಂ" ಎಂಬ ವಾಕ್ಯವು ಶ್ರೀವಿಷ್ಣು ಪ್ರಕರಣವೆಂದು "ಸೋಽಧ್ವನಃ" ಎಂಬ ಕಠ ಶೃತಿಯಿಂದ ತಿಳಿದುಬರುತ್ತದೆ.

ಸೋಽಧ್ವನಃ ಪರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ": (ಕಠ 1-3-9) ಇತಿ ತಸ್ಯ ಹ್ಯೇತತ್ಪ್ರಕರಣಂ ॥

ಈ ಸಕಲ ಪ್ರಪಂಚದ ಸರ್ವಸ್ವವೂ ನನ್ನ ಅಧಿವತ್ಯದಲ್ಲಿರುವುದೆಂದು ತಿಳಿಯುವವನು. ಈ ಸಂಸಾರಾಖ್ಯ ದೂರದ ದಾರಿಯಿಂಯದ ವಿಶ್ರಾಂತಿನ್ನು ಹೊಂದಿಸಿ ಶ್ರೀ ವಿಷ್ಣುವಿನ ಶ್ರೇಷ್ಠ ಸ್ಥಾನವಾದ ಕ್ಷೀರಾಬ್ಧ್ಯಾದಿ ಮುಕ್ತ ಪ್ರಾಪ್ಯ ಸ್ಥಾನವನು ಹೊಂದುವನು.

## ಸೂ॥ ಓಂ॥ ತ್ರಯಾಣಾಮೇವಚೈವಮುಪನ್ಯಾಸಃ ಪ್ರಶ್ನಶ್ಚ ಓಂ॥ 7

ತ್ರಯಣಾಮೇವ ಪಿತೃ ಸೌಮನಸ್ಯ ಸ್ವಗಾರ್ಗ್ಯಗ್ನಿ (ಪರಮಾತ್ಮನಾಂ) ಪ್ರಶ್ನ ಉಪನ್ಯಾಸಶ್ಚ ।

ನಚಿಕೇತ ಋಷಿಯು ಯಮದೇವರನ್ನು ಕುರಿತು ಮೂರು ವಿಷಯಗಳಿಗಾಗಿ ಪ್ರಶ್ನೆಯನ್ನು ಕೇಳಿದನು 1) ಪಿತೃಸೌಮನಸ್ಯ 2) ಸ್ವರ್ಗ್ಯಗ್ನಿ ಮತ್ತು 3) ಶ್ರೀಪ್ರಮಾತ್ಮನು. ಶ್ರೀ ಯಮದೇವರ ಉತ್ತರವೂ ಈ ಮೂರು ಪ್ರಶ್ನೆಗಳ ವಿಷಯವೇ ಆಗಬೇಕೇ ಹೊರ್ತು ಅನ್ಯ ವಿಷಯಗಳ ವಿಷಯ ಹೇಳಲು ಅವಕಾಶವೆ ಇಲ್ಲ. ಆದ್ದರಿಂದ ಇಲ್ಲಿ ಪ್ರಧಾನ ವಿಷಯ ಹೇಳಿದೆಯೆಂಬ ಚೋದ್ಯಕ್ಕೆ ಆಸ್ಪದವಿಲ್ಲ.

19. ಅವಿಜ್ಞಾತ ಪ್ರಾರ್ಥನಂ ಚ ಪ್ರಶ್ನೆ ಇತ್ಯಭಿಧೀಯತ ಇತಿ ವಚನಾನ್ನ ವಿರೋಧಃ ॥

ಈ ವಿಷಯದಲ್ಲಿ ಆಖ್ಯೆಯು-ಗೌತಮ ಕುಲೋತ್ಪನ್ನ ಉದ್ದಾಲಕ ಋಷಿಗೆ ನಚೀಕೇತನೆಂಬ ಸತ್ಪುತ್ರನಿದ್ದನು. ಉದ್ದಾಲಕನು ಪ್ರಯೋಜನಕ್ಕೆ ಬಾರದ ಹಸುಗಳ ದಾನದಲ್ಲಿಯೇ ಉದ್ಯುಕ್ತನಾಗಿರಲು ಈ ಅನುಪಯುಕ್ತ ದಾನವನ್ನು ನಿಲ್ಲಿಸುವ ಸಲುವಾಗಿ ನಚೀಕೇತನು ತನ್ನ ತಂದೆಯನ್ನು ಕುರಿತು ತನ್ನನ್ನಾದರೂ ಸತ್ಪಾತ್ರದಲ್ಲಿ ದಾನ ಮಾಡಿ ಪುಣ್ಯವನ್ನು ಹೊಂದಲು ವಿಜ್ಞಾಪಿಸಿಕೊಂಡನು. ಆಗ ತಂದೆಯು ಕುಪಿತನಾಗಿ ನಿನ್ನನ್ನು ಯಮದೇವರಿಗೆ ದಾನ ಮಾಡಿದೆನು ಎಂದು ಹೇಳಲು ಮಗನು ಮೃತನಾಗಿ ಯಮಪುರಿಗೆ ಯಮದೇವರ ಪ್ರವಾಸ ಕಾಲದಲ್ಲಿ ಹೋದನು ಯಮನ ಪತ್ನಿಯು ಈತನನ್ನು ಬಹುವಿಧವಾಗಿ ಸತ್ಕರಿಸಿದರೂ ಆಕೆಯ ಆತಿಥ್ಯವನ್ನು ಸ್ವೀಕರಿಸದೆ ಮೂರು ದಿನಗಳು ಉಪವಾಸ ವ್ರತದಲ್ಲಿದ್ದನು. ಯಮನು ಹಿಂತಿರುಗಿ ಬಂದು ಇವ

ನಿಗೆ ತನ್ನ ಪಾಪಪರಿಹಾರಕ್ಕಾಗಿ ಮೂರು ವರಗಳನ್ನು ಕೇಳಲು ಹೇಳಿದನು. ಆಗ ಆ ಅತಿಥಿಯು ಕೇಳಿದ ಪ್ರಶ್ನೆಗಳು -(1) ನನ್ನ ತಂದೆಯು ನನ್ನ ವಿಷಯದಲ್ಲಿ ವ್ಯಗ್ರಮನಸ್ಸಿನಿಂದ ಇರುವುದು ತಪ್ಪಿ ಆತನು ಶಾಂತ ಮನಸ್ಸಿನಿಂದ ಇಲ್ಲಿಂದ ಹಿಂತಿರುಗುವ ನನ್ನನ್ನು ಸ್ವೀಕರಿಸಲು ಬೇಡಿಕೆ (2) ಸ್ವರ್ಗಸಾಧನ ಭೂತವಾದ ಅಗ್ನಿಷ್ಟೋಮಾದಿ ಕರ್ಮಾಂಗ ಭೂತ ಇಷ್ಟಿ ಕಾಸಂಸ್ಥಸ್ಥಿತಿಸ್ಥ ಶ್ರೀವಿಷ್ಣುವನ್ನು ಉಪದೇಶಿಸು(3)ಮೋಕ್ಷಸಾಧನ ವಿಷಯ ಭೂತ ಮೃತ್ಯು ನಂತರ ಮುಕ್ತ ಪುರುಷರ ನಿಯಾಮಕ ಪರಮಾತ್ಮನ ಸ್ವರೂಪವನ್ನು ಉಪದೇಶಿಸು -ಎಂದು ಈ ಪ್ರಶ್ನೆಗಳ ಉತ್ತರವಾಗಿ ಮೂರನೆಯ ಪ್ರಶ್ನೆಗೆ ದೇವತೆಗಳಿಂದಲೂ ಉಪಾಸಿಸಲು ಯೋಗ್ಯನಾದ ಪರಮ ಪುರುಷಾರ್ಥ ಮೋಕ್ಷಪ್ರದನಾದ ಶ್ರೀ ಪರಮಾತ್ಮನ ಸ್ವರೂಪವನ್ನು ಉಪದೇಶಿಸಿದನು.

ಈ ಪ್ರಸಂಗದಿಂದಲೂ ಉಪದೇಶಿಸಲ್ಪಟ್ಟ ಅವ್ಯಕ್ತ ಶಬ್ದ ವಾಚ್ಯನು ಶ್ರೀ ವಿಷ್ಣುವೆ

## ಸೂ।। ಓಂ।। ಮಹದ್ವಚ್ಚ ಓಂ।। 8

"ಮಹಾಂತಂ ವಿಭುಮಾತ್ಮಾನಂ"ಇತ್ಯಾದಿಗತ ಮಹಚ್ಛಬ್ದವು ಶ್ರೀವಿಷ್ಣು ಪರವೇ ಮಹತ್ತತ್ವವಲ್ಲವಷ್ಟೆ.

ಯಥಾಮಹಚ್ಛಬ್ದೋ ಮಹತ್ತತ್ವೇಪಿ ಪ್ರಸಿದ್ಧೋಪಿ ಪರಮಹತ್ವಾತ್ಪರಮಾತ್ಮನ ಏವ ಮುಖ್ಯಃ ಏವ ಮಿಶರೇಪಿ ॥

"ಮಹತ್" ಶಬ್ದವು ಲೋಕ ವ್ಯವಹಾರದಲ್ಲಿ ಪ್ರಸಿದ್ಧ ಮಹತ್ತತ್ವವಾಚಕವಾದರೂ ಈ ಮಹತ್ತತ್ವಕಿಂತ ಶ್ರೇಷ್ಠನಾದ ಶ್ರೀಪರಮಾತ್ಮನಿಗೆ ಮುಖ್ಯ ವಾಚ್ಯವು. (ಪರಮ ಮಹತ್ವದಿಂದ)

## ಸೂ।। ಓಂ।। ಚಮಸವಸವದವಿಶೇಷಾತ್ ಓಂ।। 9

ಯಜ್ಞಪಾತ್ರೆಯಲ್ಲಿ ಪ್ರಸಿದ್ಧವಾದ "ಚಮಸ" ಶಬ್ದಕ್ಕೆ ಶೃತಿ ಬಲದಿಂದ "ಶಿರೋ' ವಾಚಕವಾಗಿ ಹೇಗೆಪ್ರಯೋಗವಿದೆಯೋ ಹಾಗೆಯೇ ಅವ್ಯಕ್ತಾದಿಶಬ್ದಗಳು ಪ್ರಧಾನ

ಗಳಲ್ಲಿ ಪ್ರಸಿದ್ಧವಾದರೂ "ನಾಮಾನಿ ಸರ್ವಾಣಿ" ಎಂಬ ಶ್ರುತಿಬಲದಿಂದ ಶ್ರೀವಿಷ್ಣು ವಾಚಕವೇ ಮುಖ್ಯವು

ಯಥಾ ಚಮಸಶಬ್ದೋಽನ್ಯತ್ರ ಪ್ರಸಿದ್ಧೋಽಪಿ ಇದಂ ತಚ್ಛಿರ ಏಷ ಹ್ಯರ್ವಾಗ್ಬಿಲಶ್ಚಮಸ ಊರ್ಧ್ವಬುಧ್ನಃ (ಬೃ 4–2–3) ಇತಿಶ್ರುತೇಃ ಶಿರೋವಾಚಕಃ ಏವ ಮವ್ಯಕ್ತಾದಿ ಶಬ್ದಾಃ ಸರ್ವೆಽನ್ಯತ್ರ ಪ್ರಸಿದ್ಧಾ ಅಪಿ "ನಾಮಾನಿ ಸರ್ವಾಣಿಯ ಮಾವಿಶಂತಿ ತಂ ವೈವಿಷ್ಣುಂ ಪರಮಮುದಾಹರಂತಿ। ಇತ್ಯಾದಿ ಶ್ರುತೇಃ ಪರ ಮಾತ್ಮಾಭಿದಾಯಕಾ ಏವ। ಅವಿಶೇಷಾಚ್ಛ್ರುತೇಃ ॥

ಚಮಸ ಶಬ್ದವು ಅನ್ಯತ್ರ ಪ್ರಸಿದ್ಧವಿದ್ದರೂ ಮೇಲಿನ ಶ್ರುತಿಯಿಂದ ಶಿರೋ ವಾಚಕ ಹಾಗೆಯೇ ಅನ್ಯತ್ರ ಪ್ರಸಿದ್ಧಗಳಾದ ಅವ್ಯಕ್ತಾದಿ ಶಬ್ದಗಳು ಅನ್ಯತ್ರ ಪ್ರಸಿದ್ಧ ಇದ್ದರೂ "ನಾಮಾನಿ" ಇತ್ಯಾದಿ ಶ್ರುತಿಯಿಂದ ಶ್ರೀ ವಿಷ್ಣುವಿನಲ್ಲಿಯೇ ಪರಮ ಮುಖ್ಯವಾಗಿ ವಾಚಕಗಳು.

– ಇತಿ ಆನುಮಾನಿಕಾಧಿಕರಣಂ –

## – ಜ್ಯೋತಿರುಪಕ್ರಮಾಧಿಕರಣಂ –

ಈ ಅಧಿಕರಣದಲ್ಲಿ ಕರ್ಮಗಳು ಮತ್ತು ಅದರ ಅಂಗಗಳಲ್ಲಿಯೂ ಪ್ರಸಿದ್ಧವಾದ ಜ್ಯೋತಿಷ್ಟೋಮಾದಿ ಶಬ್ದಗಳ ಸಮನ್ವಯವು ಭಗವಂತನಲ್ಲಿ ಹೇಳಲ್ಪಡುತ್ತದೆ.

**1. ವಸಂತೇ ವಸಂತೇ ಜ್ಯೋತಿಷಾ ಯಜೇತೇತ್ಯಾದಿ ಕರ್ಮಾಭಿ ಧಾಯಕಸ್ಯ ಕರ್ಮಕ್ರಮಾದಿವಿರೋಧಾನ್ನಯುಜ್ಯತ ಇತಿ ॥**

"ತತ್ತು ಸಮನ್ವಯಾತ್"ಎಂಬಲ್ಲಿ ಸರ್ವಶಬ್ದಗಳಿಗೂ ಪರಮಾತ್ಮನಲ್ಲಿಸಮನ್ವಯು ವೆಂದು ಹೇಳಿದೆ. ಇದು ಸಾಧುವಲ್ಲ. ಕರ್ಮಗಳನ್ನು ವಿಧಾಯಕ ಮಾಡುವ ಶಬ್ದ ಗಳ ಸಮನ್ವಯವು ಯುಕ್ತವಲ್ಲ ಕರ್ಮ ಕ್ರಮವನ್ನು ಹೇಳುವ ವಾಕ್ಯಗಳೂ ಕಾಲ

ವಿಶೇಷನನ್ನು ಹೇಳುವ ವಾಕ್ಯಗಳೂ, ಇತ್ಯಾದಿಗಳೂ ಪರಮಾತ್ಮ ವಾ ಚ್ಯ ಕ ಗಳಾಗಲಾರವು. ಎಂದರೆ

2. ಅತ ಆಹ—ಆದಕ್ಕಾಗಿ ಹೇಳಿದೆ

**ಸೂ|| ಓಂ|| ಜ್ಯೋತಿರುಪಕ್ರಮಾತ್ತು ತಥಾಹ್ಯಧೀಯತ ಏಕೇ ಓಂ|| 10**

"ಜ್ಯೋತಿಷಾಯಜೇತ" ಇತ್ಯಾದಿ ವಾಕ್ಯದಲ್ಲಿ "ಜ್ಯೋತಿರಾದಿ ಬ್ರಹ್ಮಶಬ್ದ ವಾಚ್ಯವು ಬ್ರಹ್ಮವೇ ಜ್ಯೋತಿಷ್ಟೋಮಾದಿಗಳಲ್ಲ. ಒಂದು ಶಾಖೆಯಲ್ಲಿ ಪ್ರಾರಂಭದಲ್ಲಿ "ಏಷ ಇಮಂ" ಎಂದು ಪ್ರಾರಂಭಿಸಿ ಹಾಗೆಯೇ ಸರ್ವ ಶಬ್ದಗಳ ಉಕ್ತಿಯಿಂದ ಶ್ರೀ ಹರಿಯನ್ನು "ತಾವಾ ಏತಾಃ" ಎಂದುಚ್ಚರಿಸುವರು. ಆದ್ದರಿಂದ ಶ್ರೀಹರಿಯೇ ಸರ್ವ ಸರ್ವಶಬ್ದ ವಾಚ್ಯ ಮುಖ್ಯನು

ಜ್ಯೋತಿರಾದಿಕರ್ಮವಾಚಕತ್ವೇನ ಪ್ರಸಿದ್ಧಾ ಭಿಧೇಯೋಪಿ ಸ ಏವ ।
"ಏಷ ಇಮಂಲೋಕಮಭ್ಯಾರ್ಚತ್" ಇತ್ಯುಪಕ್ರಮ್ಯ "ತಾವಾ ಏತಾಃ ಸರ್ವಾ ಋಚಃ ಸರ್ವೇವೇದಾಃ ಸರ್ವೇಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣಋಚ ಇತ್ಯೇವ ವಿದ್ಯಾತ್ (ಐ ಆ 2-2-2) ಇತಿಹ್ಯಧೀಯತ ಏಕೆ ||

ಏಷಃ ನಾರಾಯಣ ದೇವನು "ಇಮಂ ಲೋಕಂ" ಬ್ರಹ್ಮಾದಿ ಶರೀರವನ್ನು ಪುರುಷ ರೂಪದಿಂದ ಅಂತರ್ಯಾಮಿಯಾಗಿ ಪ್ರವೇಶಿಸಿದನು ಏಕೇಶಾಖಿನಃ ತಾವಾ ಏತಾಃ ಇತಿ ತಥಾ ಸರ್ವ ಶಬ್ದ ವಾಚ್ಯತ್ವೇನ ತತ್ತು. ಬ್ರಹ್ಮೈವ ಅಧೀಯಂತೆ- ವದಂತಿ ಹೀಗೆ ಹೇಳಿರುವುದರಿಂದ ಬ್ರಹ್ಮನಲ್ಲಿ ವೃತ್ತ್ಯಭಾವವೆಂದು ಹೇಳಲಾಗದು-ಹಿ- "ಯಸ್ಮಾತ್ ಉಪಕ್ರಮಾತ್ ಏಷ ಇಮಂ ಇತ್ಯುಪಕ್ರಮ್ಯ ತಂ ಯಚ್ಛತಂ, ಇತ್ಯಾದಿನಾ ನಾಮಾನಿನಿರುಚ್ಯ ಪುನಃಸರ್ವೇವೇದ ಪ್ರಭೃತಯಃ ಸಮುದ್ರ ಘೋಷಾಂತಾಃ ನಾರಾಯಣ ಏವವಿದ್ಯಾತ್ ಇತಿ ಸ ತಾತ್ಪರ್ಯಂ" ಐತರೇಯೋಪಾಸಕರು ಹೇಳುವರು ಹಾಗೆಯೇ ಪರಬ್ರಹ್ಮನ ಸರ್ವ ಶಬ್ದಾನಾಂಚ ವಿದ್ವದ್ರೂಢಿ ಸಹಿತ ಮಹಾಯೋಗಸ್ಯ ಉಕ್ತತ್ವಾತ್ ವಿದ್ವದ್ರೂಢಿ ಸಹಿತ ಮಹಾಯೋಗದಿಂದ ಹೇಳಿರುವುದರಿಂದ ದೋಷವಿಲ್ಲ.

## ಸೂ|| ಓಂ|| ಕಲ್ಪನೋಪದೇಶಾಚ್ಚ ಮಧ್ವಾದಿವದವಿರೋಧಃ ಓಂ|| 11

ಮಧುವಿಧ್ಯಾಧಿವತ್ಸರ್ವ ಶಬ್ದಾರ್ಥತ್ವೇನ ಪರಸ್ಯ ಕಲ್ಪನೋಪದೇಶಾಚ್ಚನ ಕರ್ಮಕ್ರಮಾದಿವಿರೋಧಃ ||

ಶ್ರೀ ಪರಮಾತ್ಮನಲ್ಲಿಯೇ ಜ್ಯೋತಿಷ್ಟೋಮಾದಿ ಪದಗಳ ಸಮನ್ವಯವಾದರೆ ಕರ್ಮ, ಕ್ರಮ, ಕಾಲಾದಿಗಳ ವಾಚ್ಯತ್ವವು ಅಸಾಧ್ಯವಲ್ಲವೇ ಎಂಬ ಪ್ರಶ್ನೆಗೆ ಹಾಗಲ್ಲ. ಮಧುವಿದ್ಯಾಗತ ಮಧ್ವಾದಿ ಶಬ್ದದಂತೆ ಹೇಗೆ ವಾಚ್ಯತ್ವ ವಿರೋಧವಿಲ್ಲವೋ (ಲೌಕಿಕ ಕ್ಷುದ್ರಾದಿ ವಾಚಕವಿಲ್ಲದ್ದರಿಂದ ಅಭಾವಾಖ್ಯ ವಿರೋಧವಿಲ್ಲವೋ) ಹಾಗೆಯೇ ಪರಮಾತ್ಮನಿಗೆ ಸರ್ವ ಶಬ್ದ ವಾಚ್ಯತ್ವ ಸಿದ್ಧಿಸಿದರೂ ಕರ್ಮಾದಿಗಳು ಇಲ್ಲದಿರುವುದರಿಂದಲೇ ವಿರೋಧವಿಲ್ಲ. ಶಬ್ದಗಳು ಅನ್ಯತ್ರ ಯೋಗ ರೂಢಿ ವೃತ್ತಿಯಿಂದಲೇ ಈಶ್ವರನಲ್ಲಿರುವ ಮಹಾಯೋಗ ವಿದ್ವದ್ರೂಢಿ ವೃತ್ತಿಯು ಅಂಗೀಕರಿಸಲ್ಪಡುವುದು. ಏಕೆಂದರೆ "ಕಲ್ಪನೋಪದೇಶಾತ್" "ಪ್ರಾಣಖುಚ" ಎಂಬ ವಚನಗಳ ರೀತ್ಯಾ ಸರ್ವ ಶಬ್ದವಾಚ್ಯತ್ವಕ್ಕೆ ವಿಷ್ಣುವಿನ ಕಲ್ಪನಾ ಶಬ್ದದಿಂದ ಹೇಳುವ ಉಪಾಸನಾರ್ಥವಾಗಿದೆ ಆದ್ದರಿಂದ ಆತನಿಗೆ ಮುಖ್ಯ ಗುಣತ್ವ ರೂಪ ಮಹಾ ಯೋಗ ವೃತ್ತಿಯಿಂದ ಸರ್ವಶಬ್ದ ವಾಚ್ಯತ್ವವು ಸಾಧ್ಯವು.

-ಇತಿ ಜ್ಯೋತಿರುಪಕ್ರಮಾಧಿಕರಣಂ -

### - ನ ಸಂಖ್ಯೋಪಸಂಗ್ರಹಾಧಿಕರಣಂ -

ಈ ಅಧಿಕರಣದಲ್ಲಿ ಪ್ರತ್ಯಯದಿಂದ ಪ್ರತಿಪಾದಿಸಲ್ಪಡುವ ಬಹುತ್ವ ಸಂಖ್ಯಾ ವಿಶಿಷ್ಟ ವಸ್ತುವಾಚಕಗಳಿಗೂ ಆಧಾರಾಧೇಯ ವಾಚಕ ಶಬ್ದಗಳಿಗೂ ಶ್ರೀವಿಷ್ಣುವಿನಲ್ಲಿ ಸಮನ್ವಯವು.

ಬಹು ಸಂಖ್ಯಾಕವಾದ ವಸ್ತುಗಳನ್ನು "ಪಂಚ" ಎಂಬ ಒಂದೇ ದಿಂದಾಗಲೀ ಪಂಚಜನಾಃ ಎಂಬ ಬಹುವಚನ ಹೇಳುವ ವಚನಗಳಿಗಾಗಲೀ ಒಬ್ಬನಲ್ಲಿಸಮನ್ವಯವು ಕೂಡದು ಹಾಗೆಯೇ ಆಧಾರಾಧೇಯ ವಸ್ತುಗಳಿಗೆ ಒಂದುವಸ್ತುವಿನಲ್ಲಿ ಸಮನ್ವಯವು ಕೂಡುವುದಿಲ್ಲ ಎಂದರೆ

## ಸೂ॥ ಓಂ॥ ನ ಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿ ರೇಕಾಚ್ಚ ಓಂ॥ 12

ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ (ಬೃ-6-4-17)
ಇತ್ಯಾದಿಷು ಬಹು ಸಂಖ್ಯೋಪ ಸಂಗ್ರಹೇಪಿ ನವಿರೋಧಃ ।

"ಯಸ್ಮಿನ್ ಪಂಚ ಪಂಚಜನಾ ಎಂಬ ಬಹು ಸಂಖ್ಯಾಕ ವಚನದಿಂದಲೂ ಹೀಗೆ ವಸ್ತುವಿನಲ್ಲಿ ಅಧಾರಾಧೇಯ ನಿರ್ದೇಶವೂ ಶ್ರೀವಿಷ್ಣುವಿನಲ್ಲಿ ವಿರೋಧವಲ್ಲ. ನಾನಾ ಭಾವಗಳಿಂದ ಬ್ರಹ್ಮ ರೂಪವನ್ನು ಧರಿಸುವ ಸ್ವಶಕ್ತಿಯಿಂದಲೂ "ಯಸ್ಮಿನ್" ಎಂಬ ಎಂಬ ಆಧಾರ ರೂಪ "ಪಂಚ ಪಂಚಜನಾ" ಎಂದು ಹೇಳುವ ಆಧೇಯ ರೂಪದ ವಿಶೇಷ ಭಿನ್ನತ್ವವಿಲ್ಲದ್ದರಿಂದ ಸರ್ವರೂಪಗಳೂ ಪೂರ್ಣರೂಪಗಳೂ ಪೂರ್ಣಸ್ವರೂಪ ಗಳಾದ್ದರಿಂದ ವಿರೋಧವಿಲ್ಲ ಶ್ರೀಪರಮಾತ್ಮನಲ್ಲಿ ಸ್ವಗತ ಭೇದ ಶೂನ್ಯತ್ವ ಧರ್ಮ ದಿಂದ ಪ್ರತಿ ಶರೀರ ಅಂತರ್ಗತ ನಾನಾ ರೂಪಗಳಿಂದ ನಿಯಾಮಕನಾಗಿ ಒಳಗೆ ಪ್ರತಿ ಷ್ಠಿತನಾಗಿರುವುದರಿಂದ ಬಹುರೂಪತ್ವ ಬಹು ವಚನವು ಸೂಕ್ತವು. ಮತ್ತು ತತ್ತಚ್ಛ- ರೀರಗಳಲ್ಲಿ ಅಂತರ್ಗತ ಆಕಾಶ ಪ್ರಾಣಾದಿ ಪಂಚಜನಗಳ ನಿಯಮ್ಯತೆಯಿಂದ ಬಹು ತ್ವ ಸಂಖ್ಯೆಯು ಸಿದ್ಧಿಸುವುದು. ಆಧಾರ ಭೂತನಾದ ಶರೀರ ನಿಯಾಮಕ ಭಗವಂತನ ರೂಪದ "ತೇಭ್ಯಃ" ಎಂಬ ಆಧೇಯ ಭೂತಾಕಾಶ ಷಡ್ರೂಪಗಳ ಅಧಿಕತ್ವದಿಂದ ಪೃಥಗುಕ್ತಿಯು ಶ್ರೀ ವಿಷ್ಣುವು ಒಬ್ಬನೇ ಆದರೂ ಆಧೇಯ ಅಧಿಕ ಸಂಖ್ಯಾಶರೀರ ನಿಯಾಮಕ ಈಶ್ವರನಲ್ಲಿ ಆಶ್ರಿತವಾದ ಆಕಾಶ ಪ್ರಾಣಾದಿಗಳಲ್ಲಿ ಭಗವಂತನ ಇರುವಿಕೆ ಯಿಂದಲೇ ಆಧಾರ ಆಧೇಯ ಭಾವವು ಸಮಂಜಸವು.

2. **ತಸ್ಯೈವಾಕಾಶಾದಿಷು ನಾನಾಭಾವಾತ್ತದತಿರಿಕ್ತ ಸ್ವರೂಪತ್ವಾಚ್ಚ॥**
**ಯಸ್ಮಿನ್ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ॥**
**ತಮೇವ ಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಮೃತಂ**

ಪ್ರತಿ ಪುರುಷರಲ್ಲಿರುವ ಪ್ರಾಣಾದಿ ಜೀವಗಳಿಗೆ ಜನ್ಮಕೊಡುವುದರಿಂದಲೂ ತತ್ತ್ಚಬ್ದ ವಾಚ್ಯಗಳಾದ ಆತನನ್ನೇ ಆಧಾರವಾಗಿವುಳ್ಳ ಐದು ಭಗವದ್ರೂಪ ವಿಶೇಷಗಳು ಮತ್ತು ಆಕಾಶನಾಮ ಭಗವಂತನೂ ಅಶಬ್ದವಾಚ್ಯಳಾದ ಪ್ರಕೃತಿಯೂ ಯಾವ ಪುರುಷನಲ್ಲಿ ಆಶ್ರಯ ಹೊಂದಿದೆಯೋ ಅಂತಹ ಸರ್ವಶಬ್ದ ವಾಚ್ಯ ಪರಬ್ರಹ್ಮನನ್ನು ತತ್ವದಿಂದ ಉಪಾಸಿಸುವವನು ತಾನು ಇತರರಿಂದ ಕೂಡಿ ಮುಕ್ತನಾಗುವನು.

ಪ್ರಾಣಶ್ಚಕ್ಷುಸ್ತಥೈವಾನ್ನಂ ಮನಶ್ಶ್ರೋತ್ರಂ ಚ ಪಂಚಮಂ ।

ಮೂಲ ಪ್ರಕೃತಿ ಸಂಯುಕ್ತಂ ತದ್ಗತಂ ಪ್ರತಿ ಪೂರುಷಂ" ಹೀಗೆ ನಿಯಮನ ಪ್ರಾಣಾದಿಗಳಿಗೇ ಪಂಚಜನ ಶಬ್ದವಾಚ್ಯತ್ವವು.

ಪಂಚಜನಾನಾಹ ಪಂಚ ಜನ ಶಬ್ದ ವಿವರಿಸುತ್ತಾರೆ

## ಸೂ|| ಓಂ|| ಪ್ರಾಣಾದಯೋ ವಾಕ್ಯಶೇಷಾತ್ ಓಂ|| 13

"ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುಃ ಶ್ರೋತ್ರಸ್ಯ ಶ್ರೋತ್ರಮನ್ನಸ್ಯಾನ್ನಂ ಮನಸೋ ಮನಃ" ಇತಿ ವಾಕ್ಯ ಶೇಷಾತ್

ಈ ಮೇಲಿನ ಪಂಚಜನಗಳು ಪಂಚ ಪ್ರಾಣಾದಿಗಳ ಪ್ರಾಣದಲ್ಲಿದ್ದು ಪ್ರಾಣಾದಿಗಳ ಪ್ರಾಣತ್ವಾದಿಗಳನ್ನುಂಟು ಮಾಡಿ ಅವರುಗಳ ಪ್ರೇರಣೆ ಮಾಡುವ ನಿಯಮನ ಧರ್ಮವುಳ್ಳ (ಪ್ರಾಣಾದೀನಾಂ ಪ್ರಾಣಾದಯಃ) ವಸ್ತುವು ಪ್ರಾಣನ ಭಗವದ್ರೂಪಿ ವಿಶೇಷವೇ "ಸ ಉಪಪ್ರಾಣಸ್ಯ ಪ್ರಾಣಃ" ಎಂದು

"ಏ ಕೇ ಪಂಚಜನ ಶಬ್ದ ವಾಚ್ಯಾ ಭಗವದ್ರೂಪ ವಿಶೇಷಾಸ್ತು ಪ್ರಾಣಾದೀನಾಂ ಪ್ರಾಣಾದಯಃ । ದ್ವಿತೀಯಾಂತ ನಿರ್ದಿಷ್ಟ ಪ್ರಾಣಾದಿ ಪ್ರಾಣತ್ವಾದಿಪ್ರದಾಃ ಪ್ರಾಣ, ಚಕ್ಷುಃ, ಶ್ರೋತ್ರ, ಅನ್ನ, ಮನೋಭಿದಾ ಏವ" ಎಂದು ತಿಳಿಯಬೇಕು.

## ಸೂ|| ಓಂ|| ಜ್ಯೋತಿಷೈಕೇಷಾಮಸತ್ಯನ್ನೇ ಓಂ|| 14

ತದ್ದೇವಾ ಜ್ಯೋತಿಷಾಂ ಜ್ಯೋತಿ: (ಬೃ 6-4-16) ಇತ್ಯನೇನ ಕಾಣ್ವಾನಾಂ ಪಂಚಕಂ ||

ಕಾಣ್ವಾದಿ ಶಾಖೆಯಲ್ಲಿ ಅನ್ನಾಖ್ಯ ಭಗವದ್ರೂಪವು ಹೇಳಲ್ಪಡದಿದ್ದರೂ ಜ್ಯೋತಿಶ್ಯಬ್ದ ವಾಚ್ಯ ಭಗವದ್ರೂಪದಿಂದ ಪಂಚತ್ವ ಸಂಖ್ಯೆಯು ಪೂರ್ಣವಾಗುವುದ ರಿಂದಲೂ ವ್ಯತ್ಯಾಸವಿಲ್ಲ

ಯಸ್ಮಾದರ್ವಾಕ್ಸಂವತ್ಸರೋಹೋಭಿಃ ಪರಿವರ್ತತೆ ।
ತದ್ದೇವಾ ಜ್ಯೋತಿಷಾಂ ಜ್ಯೋತಿರಾಯು ಹೋಪಾಸತೆಮೃತಂ ||

ಅಹೋರಾತ್ರಿಯುಕ್ತ ಸಂವತ್ಸರವು ಬಿಡುವಿಲ್ಲದ ಪರಿವರ್ತನ ಮಾಡುತ್ತಾ ಯಾವಾತನಲ್ಲಿ ತಮ್ಮ ವ್ಯಾಪಾರವಾದ ಆಯುಹ್ರಾಸವನ್ನು ಮಾಡಲು ಅಸಮರ್ಥ ವೋ, ಯಾವಾತನು ಆದಿತ್ಯಾದಿಗಳಿಗೆ ಪ್ರಕಾಶಸಾಮರ್ಥ್ಯ ಕೊಟ್ಟು ಆಯುಸ್ತ್ರಾಣ ಕೊಡುವನೋ, ಆ ಜನನವಿಲ್ಲದ ನಿತ್ಯಯುಕ್ತ ಬ್ರಹ್ಮ ಸ್ವರೂಪವನ್ನು ದೇವತೆಗಳೆಲ್ಲರೂ ಉಪಾಸನೆ ಮಾಡುವರು ಇಲ್ಲಿ ದೇವತೆಗೆ ಜ್ಯೋತಿ ಪ್ರದತ್ವವನ್ನು ಹೇಳಿ ಜ್ಯೋತಿ ರೂಪಾಖ್ಯವನ್ನು ಹೇಳಿರುವುದರಿಂದ ಪಂಚತ್ವವನ್ನು ಹೇಳಿದಂತೆಯೇ.

– ಇತಿ ಸಂಖ್ಯೋಪಸಂಗ್ರಹಣಾಧಿಕರಣಂ –

## – ಆಕಾಶಾಧಿಕರಣಂ –

ಈ ಅಧಿಕರಣದಲ್ಲಿ ಅವಾಂತರ ಕಾರಣ ವಾಚ್ಯ ಆಕಾಶಾದಿ ಶಬ್ದಗಳ ಸಮನ್ವಯ ಮಾಡಲ್ಪಡುವುದು (ಭೂತಗಳು)

1 ಅವಾಂತರ ಕಾರಣತ್ವೇನಾಪಿ ಸ ಏವೋಚ್ಯತೆ ಇತಿ ವಕ್ತಿ

ಕಾರ್ಯತ್ವವಿದ್ದಲ್ಲಿ ಕಾರಣತ್ವವು ಅವಾಂತರ ಕಾರಣವೆಂದು ಕರೆಯಲ್ಪಡುವುದು ಶ್ರೀ ವಿಷ್ಣುವು ಭೂತಾದಿಶಬ್ದವಾಚ್ಯಗಳಿಂದ ಮುಖ್ಯವಾಗಿ ಹೇಳಲ್ಪಡುವುದಿಲ್ಲವಾದರೂ ಹಾಗೆಯೇ ಮೂಲ ಶಬ್ದವಾಚ್ಯ ಆತ್ಮ ಶಬ್ದದಿಂದ ಹೇಳಲ್ಪಡುವ ಶ್ರೀವಿಷ್ಣುವು ಅವಾಂತರ ಕಾರಣತ್ವವಾಚಿತ್ವದಿಂದಲೂ ಹೇಳಲ್ಪಡುತ್ತಾನೆ ಅಂದರೆ ಅವಾಂತರ ಕಾರಣದಿಂದ ಆ ಕಾರ್ಯದಲ್ಲಿ ನಿಯಾಮಕತೆಯಿಂದ ಇರುವುದರಿಂದ ಈತನೇ ಅವಾಂತರ ಕಾರಣ ಭೂತನಾಗಿ ಆ ಶಬ್ದಗಳಿಂದ ಹೇಳಲ್ಪಡುತ್ತಾನೆ.

## ಸೂ|| ಓಂ|| ಕಾರಣತ್ವೇನಚಾಕಾಶಾದಿಷುಯಥಾವ್ಯಪದಿಷ್ಟೋಕ್ತೇಃ || ಓಂ|| 15

ಆಕಾಶಃ ಸಂಭೂತಃ" "ಅಕಾಶಾದ್ವಾಯುಃ,"ಇತ್ಯಾದಿಗಳಲ್ಲಿ ಕಾರ್ಯತ್ವವಿದ್ದಲ್ಲಿ ಕಾರಣತ್ವರೂಪ ಅವಾಂತರ ಕಾರಣ ವಾಚಕ ಶಬ್ದಗಳಿಂದ ಆ ಆಕಾಶಾದಿ ಶಬ್ದಗಳಿಂದ ಆ ಆಕಾಶಾದಿಗಳಲ್ಲಿ ಅಂತರ್ಯಾಮಿಯಾಗಿರುವ ಶ್ರೀವಿಷ್ಣುವೇ ಹೇಳಲ್ಪಡುವನು. "ಚ" ಶಬ್ದದಿಂದ ಕಾರಣತ್ವದಿಂದ ಕಾರ್ಯದಲ್ಲಿ ಹೇಳಲ್ಪಡುವನು. ಭೂತಮಾತ್ರವಲ್ಲ ಹೀಗೆ ಮುಂದಿನ ಶೃತಿಗಳು ತಿಳಿಸುತ್ತವೆ

2. ಆಕಾಶಾದಿಷ್ವವಾಂತರ ಕಾರಣತ್ವೇನ ಸ ಏವ ಸ್ಥಿತಃ ||

ಸ ಯೋ "ತೊ ಶೃತ" ಎಂಬಲ್ಲಿ ವಿಷ್ಣುವನ್ನು ಯಾರಿಂದಲೂ ಸಾಕಲ್ಯೇನ ತಿಳಿಯಲ್ಪಡದಿರುವ ಧರ್ಮವನ್ನು ಹೇಳಿದೆ. ಹಾಗೆಯೇ "ಯಮಾಕಾಶೋ ನ ವೇದ" ಎಂಬ ವಾಕ್ಯದಲ್ಲಿ ಆಕಾಶವು ಯಾರನ್ನು ತಿಳಿಯದೋ ಎಂದು ಹೇಳಿರುವುದಕ್ಕೆ ಅನ್ವಯವು ಸಂಭೂತ ಶಬ್ದದಿಂದ ಆಕಾಶ ಸ್ಥರೂಪ ವಿಶೇಷದಿಂದ ವಾಯುಸ್ವರೂಪ ವಿಶೇಷವು ಅವಾಂತರ ಕಾರಣವಾಗಿಯೇ ಹೇಳಲ್ಪಡುವುದು. ಶ್ರೀ ವಿಷ್ಣುವೇ ಸರ್ವಸ್ವಾಮಿಯಾದ್ದರಿಂದ "ಯ ಅಕಾಶೇ ತಿಷ್ಠನ್" ಎಂದು ಹೇಳಲ್ಪಡುವನು.

– ಇತಿ ಆಕಾಶಾಧಿಕರಣವು –

ಈ ಅಧಿಕರಣದಲ್ಲಿ ಶ್ರೀ ವಿಷ್ಣುವಿನಲ್ಲಿ ಪ್ರಕಾರಾಂತರದಿಂದ ಸರ್ವಶಬ್ದಗಳ ಸಮನ್ವಯದ ಅಸಂಭವವನ್ನು ಶಂಕಿಸಿ ಅದನ್ನು ಪರಿಹರಿಸುತ್ತಾರೆ.

1. **ಸರ್ವಶಬ್ದಾನಾಂ ಪರಮಾತ್ಮ ವಾಚಕತ್ವೇ ಕಥಮನ್ಯತ್ರ ವ್ಯವಹಾರ ಇತ್ಯತೋಽಬ್ರವೀತ್ ॥**

"ತತ್ತು ಸಮನ್ವಯಾತ್" ಎಂಬಲ್ಲಿ ಹೇಳಿರುವ ಸರ್ವಸಬ್ದಗಳನ್ನು ಶ್ರೀಪರಮಾತ್ಮನಲ್ಲಿಯೇ ಮುಖ್ಯವಾಗಿ ಸಮನ್ವಯ ಮಾಡಿದಲ್ಲಿ ಆ ಶಬ್ದಗಳಿಂದ ಅನ್ಯವಸ್ತುಗಳಲ್ಲಿ ಪ್ರಯೋಗ ವ್ಯವಹಾರವು ಹೇಗೆ ಕೂಡುವುದು ? ಎಂದು ಪ್ರಶ್ನೆಯು

2. ಅತೋಽಬ್ರವೀತ್—ಅದಕ್ಕಾಗಿ ಹೇಳುತ್ತಾರೆ

**ಸೂ॥ ಓಂ॥ ಸಮಾಕರ್ಷಾತ್ ಓಂ॥ 16**

ಸ್ವಾಭಾವಿಕವಾಗಿ ಮುಖ್ಯ ವೃತ್ತಿಯಿಂದ ಎಲ್ಲ ಶಬ್ದಗಳೂ ಶ್ರೀ ಪರಮಾತ್ಮ ವಾಚಕಗಳೇ ಆದಾಗ್ಯೂ ಬೇರೆ ಕಡೆಗಳಲ್ಲಿ ಪ್ರಪಂಚ ವ್ಯವಹಾರ ದೃಷ್ಟಿಯಿಂದ ಸೂಕ್ತ ರೀತಿಯಲ್ಲಿ ಆಕರ್ಷಿಸಲ್ಪಟ್ಟು ಪ್ರಪಂಚದಲ್ಲಿ ವ್ಯವಹಾರೋಪಯುಕ್ತವಾಗುತ್ತವೆ ಇಲ್ಲದಿದ್ದಲ್ಲಿ ವ್ಯವಹಾರ ಪ್ರಪಂಚವೇ ಸಾಧ್ಯವಾಗಲಾರದು

2 **ಪರಮಾತ್ಮವಾಚಿನಃ ಶಬ್ದಾ ಅನ್ಯತ್ರ ಸಮಾಕೃಷ್ಯೇತರೇಷ್ವಪಿ ।**
**ವ್ಯವಹ್ರಿಯಂತೇ ಸತತಂ ಲೋಕವೇದಾನುಸಾರತಃ ॥**

ಅನಾದಿ ಕಾಲದಿಂದಲೂ ಪದಗಳಿಗೆ ವಿಚ್ಛೇದವಿಲ್ಲದೆ ಪರಮಾತ್ಮ ವಾಚಿಕತ್ವವು ಆದಾಗ್ಯೂ ಆ ಸಂಬಂಧದಿಂದ ಬೇರೆಯಾಗಿ ಸಂಗ್ರಹಿಸಿ ಲೌಕಿಕ ವೈದಿಕ ವ್ಯವಹಾರ

ಸಿದ್ಧಿಯನ್ನಪೇಕ್ಷಿಸಿ ಅನ್ಯ ವಸ್ತುಗಳಲ್ಲಿಯೂ ಕೇವಲ ರೂಢಿಯಿಂದ ವ್ಯವಹಾರವಿದೆ.

4. ತರ್ಹಿ ಕಥಂ ತೇಷಾಂ ಶಬ್ದಾನಾಂ ಜಗತಿ ಪ್ರಸಿದ್ಧಿಃ ॥

ಹಾಗಾದರೆ ಈ ಶಬ್ದಗಳಿಗೆ ಜಗತ್ತಿನಲ್ಲಿ ಪ್ರಸಿದ್ಧಿಯು ಹೇಗಾಗುವುದು ಎಂದರೆ

## ಸೂ॥ ಓಂ॥ ಜಗದ್ವಾಚಿತ್ವಾತ್ ಓಂ॥ 17

ಜಗತ್ಪ್ರತಿ ವ್ಯವಹಾರೋ ಲೋಕಸ್ಯ ನತು ಪರಮಾತ್ಮನಿ ತಥಾ ಅತೋ ಜಗತಿ ಪ್ರಸಿದ್ಧಿಃ ಶಬ್ದಾನಾಂ.

ಈ ಲೋಕ ವ್ಯವಹಾರದಲ್ಲಿ ಶಬ್ದಗಳಿಗೆ ವಾಚ್ಯತ್ವ ಜ್ಞಾನದಿಂದ ಪ್ರಸಿದ್ಧಿಯು ಯುಕ್ತವೇ ಜಗತ್ತಿನಲ್ಲಿ ವ್ಯವಹಾರವು ಪ್ರಾಪಂಚಿಕ ಮಾತ್ರವೇ ಶ್ರೀ ಪರಮಾತ್ಮನಲ್ಲಿ ಹಾಗಲ್ಲ ಆದ್ದರಿಂದ ಶಬ್ದಗಳ ಪ್ರಸಿದ್ಧಿಯು ಯುಕ್ತವೇ.

## ಸೂ॥ ಓಂ॥ ಜೀವಮುಖ್ಯ ಪ್ರಾಣಲಿಂಗಾದಿತಿ ಚೇತ್ತ ದ್ವ್ಯಾಖ್ಯಾತಂ ಓಂ॥ 18

"ಅಸ್ಯಯದ್ಯೈಕಾಂ ಶಾಖಾಂಜೀವೋ ಜಹಾತಿ" ಎಂದು ಹೇಳಿ ವಾಯುನಾ ಹಿ ಲೋಕಾ ನೇನೀಯಂತೆ ' ಎಂದು ಹೇಳುವವಾಕ್ಯದಲ್ಲಿ ಜೀವಮುಖ್ಯ ಪ್ರಾಣದ ಧರ್ಮ ವು ಹೇಳಿದೆಯಾಗಿ ಅವರುಗಳಿಗೆ ತಚ್ಛಬ್ದ ವಾಚ್ಯತ್ವದಿಂದ ಮುಖ್ಯ ವಾಚ್ಯತ್ವವು ಎಂದರೆ ಅಲ್ಲ ಈ ವಾಕ್ಯದಲ್ಲಿ "ತಚ್ಛಬ್ದ ಪರ ವಾಕ್ಯವು ಅವರ ಅಂತರ್ಯಾಮಿ ಪರವಾಗಿಯೇ ಜೀವಪರವಾಗಿಯಲ್ಲ.

ತದಧೀನತ್ವಾಚ್ಛಬ್ದ ವಾಚ್ಯತ್ವಮಿತ್ಯುಕ್ತಂ ತಜ್ಜೀವ ಮುಖ್ಯ ಪ್ರಾಣಯೋ ರ್ಲಿಂಗಂ "ಅಸ್ಯಯದ್ಯೈಕಾಂ ಶಾಖಾಂ ಜೀವೋ ಜಹಾತ್ಯಥ ಸಾಶುಷ್ಯತಿ' (ಛಾ-6-11-2) ವಾಯುನಾಹಿ ಸರ್ವೇಲೋಕಾ ನೇನೀಯಂತೆ ಇತ್ಯಾದಿ ಶೃತಿಭ್ಯ ಇತಿ ಚೇತ್ ॥

ಈ ದೇಹಾಖ್ಯ ವೃಕ್ಷದ ಒಂದು ಶಾಖೆಯನ್ನು ಜೀವನು ತೊರೆದರೆ ಆಶಾಖೆಯು

ಒಣವಾಗುತ್ತದೆ ಮತ್ತು ವಾಯುವಿನಿಂದ ಎಲ್ಲಾ ಪ್ರಾಣಿಗಳೂ ಒಯ್ಯಲ್ಪಡುತ್ತವೆ ಎಂಬ ಮೇಲಿನ ಶೃತಿಗಳಾಧಾರದಿಂದ ತದಧೀನ ತಚ್ಛಬ್ದೇ ವಾಚ್ಯತ್ವವು ಜೀವಮುಖ ಪ್ರಾಣದ ಧರ್ಮವೇ ಎಂದರೆ

7. ನ ಉಪಾಸಾತ್ರೈವಿಧ್ಯಾದಿತಿ ವ್ಯಾಖ್ಯಾತತ್ವಾತ್ ॥

ಹಾಗಲ್ಲ ಸೂತ್ರಖಂಡದಲ್ಲಿ ಬೇರೆ ಲಿಂಗದಿಂದ ವಿಧಿಸಲ್ಪಡುವುದೆಂದು ತೋರುವ ಶೃತಿಗಳು ಅಜೀವರುಗಳ ಅಂತರ್ಯಾಮಿ ಭಗವಂತನ ಸಂಬಂಧದಿಂದ ವ್ಯಾಖ್ಯಾನ ಮಾಡಲ್ಪಡತಕ್ಕದ್ದು

"ಯ ದ್ಯದ್ವಿಭೂತಿ ಮತ್ಸತ್ವಂ ಶ್ರೀಮದೂರ್ಜಿತಮೇವವಾ ।
ತತ್ರದೇವಾಗಚ್ಛತ್ವಂ ಮಮತೇ ಜೋಂಶಸಂಭವಂ ॥

ಯಾವ ಯಾವ ಪದಾರ್ಥಗಳು ಆ ಆ ಜಾತಿಯ ಪದಾರ್ಥಗಳಲ್ಲಿ ಶ್ರೇಷ್ಠವೂ ಅಧಿಕ ಸಂಪತ್ತುಳ್ಳದ್ದೊ, ಅಭಿವೃದ್ಧಿವುಳ್ಳದ್ದೊ ಆ ಆ ಪದಾರ್ಥಗಳನ್ನು ನನ್ನ ವಿಶೇಷ ಪ್ರಕಾಶ ರೂಪ ಅಂಶ ಸಹಿತವೆಂದು ತಿಳಿ

## ಸೂ॥ ಓಂ॥ ಅನ್ಯಾರ್ಥಂತು ಜೈಮಿನಿಃ ಪ್ರಶ್ನ ವ್ಯಾಖ್ಯಾನಾ ಭ್ಯಾಮಪಿಚೈವ ಮೇಕೇ ಓಂ॥ 18

ಪರಮಾತ್ಮ ಜ್ಞಾನಾರ್ಥಕರ್ಮಾದಿಕಮಪಿ ವದತೀತಿ ಜೈಮಿನಿಃ ।

9 ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ತಸ್ಮೈಸಹೋವಾಚ ದ್ವೇವಿದ್ಯೇ ವೇದಿತವ್ಯೇ ॥ (ಮು-1-13-4)

10 ಕಥಂ ನು ಭಗವಃ ಸ ಆದೇಶೋ ಭವತೀತಿ ।
ಯಥಾ ಸೋಮ್ಯೈಕೇನ ಮೃತ್ಪಿಂಡೇನ (ಛಾ-6-1-3 4)
ಇತ್ಯಾದಿ ಪ್ರಶ್ನೆ ವ್ಯಾಖ್ಯಾನಾಭ್ಯಾಂ ॥

ಶ್ರೀ ವಿಷ್ಣುವಿನಿಂದ ಅನ್ಯತ್ರ ಶಬ್ದಗಳನ್ನು ಆಕರ್ಷಣದಿಂದ' ಕರ್ಮಾದಿಗಳಲ್ಲಿ

ಪ್ರಯೋಗವು ಯುಕ್ತವೇ. ಈ ಅನ್ವಾರ್ಥವೂ ಕೂಡ ಪರಮಾತ್ಮನ ಜ್ಞಾನ ಸಂಪಾದನೆ ಗೋಸ್ಕರವಾಗಿಯೇ. ಈ ಋಷಯವು ಪ್ರಶ್ನ ವ್ಯಾಖ್ಯಾನಗಳಿಂದ ವ್ಯಕ್ತವು.

ಶೌನಕಾದಿ ಋಷಿಗಳು ಆಂಗೀರಸ ಋಷಿಗಳನ್ನು ಪ್ರಶ್ನೆ ಮಾಡುವರು ಎಲೈ ಪೂಜ್ಯರೆ-ಕರ್ಮಾದಿಗಳೆಲ್ಲವೂ ಯಾವ ವಸ್ತುವನ್ನು ತಿಳಿದರೆ ಸರ್ವಸ್ವವೂ ತಿಳಿದಂತೆ ಆಗುವುದೋ ಅದನ್ನು ತಿಳಿಯ ಹೇಳಿ ಕರ್ಮಾದಿಗಳ ಜ್ಞಾನ ಮಾತ್ರದಿಂದ ಪುರುಷಾರ್ಥ ಸಾಧನವಲ್ಲವು ಈ ಮಾಡಲ್ಪಡುವ ಸರ್ವಕರ್ಮಗಳ ಪೂರ್ಣಫಲವು ಯಾವ ಪುರುಷನ ಜ್ಞಾನ ಮಾತ್ರದಿಂದ ಪೂರ್ಣ ಪುರುಷಾರ್ಥಪ್ರದವು ಇದನ್ನು ತಿಳಿಸಿ· ಉತ್ತರವು-ಎಲೈ ಭಕ್ತಜ್ಞಾನಾದಿ ಲಕ್ಷಣವಂತ ಮೋಕ್ಷಾರ್ಥನೇ ಜ್ಞಾನದಿಂದ ಪರಮಾತ್ಮನನ್ನು ತಿಳಿದರೆ ಸರ್ವಕರ್ಮ ಜ್ಞಾನದಿಂದ ಉಂಟಾಗುವ ಫಲವು ಸಫಲವು. ಇದೇ ನನ್ನ ಉಪದೇಶವೆಂದು ತಿಳಿದುಕೋ ಪ್ರಶ್ನೆ-ಈ ಪ್ರಕಾರವನ್ನು ನಾನು ಹೇಗೆ ಸರಿಯಾಗಿ ತಿಳಿಯುವೆನೋ ಹಾಗೆ ತಿಳಿ ಹೇಳಿ ಉತ್ತರ-ಒಂದು ಮೃತ್ತಿಕೆ ಉಂಡೆಯ ಧರ್ಮದ ತಿಳಿವಳಿಕೆಯಿಂದ ಅದರ ಸಾದೃಶ್ಯ ಜ್ಞಾನ ಹೊಂದಿ ಸರ್ವ ಮೃಣ್ಮಯ ನಿರ್ಮಿತ ವಸ್ತುಗಳ ಜ್ಞಾನವು ಬರುವುದು (ಗಂಧ ದ್ರವ್ಯಾದಿ ಸಾದೃಶ್ಯ ವಿಶೇಷ ಜ್ಞಾನದಿಂದ ಆ ಪದಾರ್ಥದ ವಿಕಾರಗಳ ಜ್ಞಾನವು ಸಾದೃಶ್ಯ ಪ್ರಕರಣದಿಂದ ಉಂಟಾಗುತ್ತದೆ. ಹೀಗೆ ಒಂದು ಪದಾರ್ಥದ ವಿಶೇಷ ಜ್ಞಾನದಿಂದ ಆ ಪದಾರ್ಥದ ವಿಕಾರಗಳ ಜ್ಞಾನವು ಸಾದೃಶ್ಯ ಪ್ರಕರಣದಿಂದ ಉಂಟಾಗುತ್ತದೆ ' ಹಾಗೆಯೇ ಶ್ರೀ ಪರಮಾತ್ಮನ ಜ್ಞಾನದಿಂದ ಅವನ ವಿಷಯಕ ಕರ್ಮಗಳ ಜ್ಞಾನವು ಸಾದೃಶ್ಯದಿಂದ ತಿಳಿಯುವುದು

"ಯಥಾ ಮೃತ್ಪಿಂಡ ವಿಜ್ಞಾನಾತ್ಸಾದೃಶ್ಯಾದೇವ ಮೃಣ್ಮಯಾಃ
ವಿಜ್ಞಾಯಂತ ತಥಾವಿಷ್ಣೋಃ ಸಾದೃಶ್ಯಾಜ್ಜಗದೇವಚ ।
ಅತ್ಯಲ್ಪೇಪಿ ಹಿ ವಿಜ್ಞಾತೆ ಸದೃಶೇ ತಾದೃಶಂ ಬಹು । ವಿಜ್ಞಾಯತೆ ...||

ಒಂದು ಹಸುವನ್ನು ನೋಡಿ ಅದರ ಜ್ಞಾನದಿಂದ ಗೋವಿನ ಜಾತಿಯ ಜ್ಞಾನವಾಗಿ ಎಲ್ಲಾ ಗೋವುಗಳನ್ನು ತಿಳಿಯಲು ಸಾಧ್ಯವು ಮತ್ತು ಒಬ್ಬ ಸ್ತ್ರೀಯನ್ನು ವ್ಯಕ್ತಿಯ ಜ್ಞಾನದಿಂದ ತಿಳಿದು ಎಲ್ಲಾ ಸ್ತ್ರೀ ವ್ಯಕ್ತಿಗಳನ್ನು ಗುರ್ತಿಸಲು ಹೇಗೆ ಸಾಧ್ಯವೋ ಹಾಗೆಯೇ ಮೃಣ್ಮಯ ಜ್ಞಾನವು ಮತ್ತು ಕರ್ಮ ದೇವತಾದಿ ವಿಜ್ಞಾನವೂ ಶ್ರೀ ಪರಮಾತ್ಮನ ಆಶ್ರಯತ್ವ, ಕಾರಣತ್ವ ಮತ್ತು ನಿಯಂತ್ರತ್ವ ಕಾರಣದಿಂದ ಭಗವ ಧ್ಯಾನ

ಕ್ಕೆ ಕಾರಣವಾದರೆ ಸಫಲವು ನೀನು ಸರ್ವವೇದವನ್ನು ಅಧ್ಯಯನ ಮಾತ್ರ ಮಾಡಿ ಶುತ್ತೀ ಎದರೆ ಆ ವೇದಾರ್ಥಗಳ ಮುಖ್ಯ ಪ್ರತಿಪಾದ್ಯವಾದ ಸಕಲ ಕಲ್ಯಾಣ ಗುಣ ವಂತ ಪರಮಾತ್ಮನನ್ನು ಉಪದೇಶ ರೀತಿಯಲ್ಲಿ ಕೇಳಿ ತಿಳಿದಿಲ್ಲವಾದ್ದರಿಂದ ಸ್ತಬ್ಧನಂತಾ ಗಿದ್ದೀಯೇ ಆತನ ವಿಷಯಗಳನ್ನು ಕೇಳಿ ತಿಳಿದು ಜ್ಞಾನ ವಿಜ್ಞಾನ ಹೊಂದಿ ದಲ್ಲಿ ಮಿಕ್ಕ ವಸ್ತುಗಳನ್ನು ಕೇಳಿ ತಿಳಿಯದಿದ್ದರೂ ಅವುಗಳ ಜ್ಞಾನವು ಆ ಪರಮ ಪುರುಷನ ಅಧೀನವಾದ್ದರಿಂದಲೆ ಕೇಳಿ ತಿಳಿದು ಜ್ಞಾನ ಹೊಂದಿದಂತೆಯೇ ಆಗುತ್ತದೆ

"ಪ್ರಾಯೋ ನಾರಾಯಣಂ ದೇವಂ ನೈವತ್ವಂ ಪ್ರಷ್ಟವಾನಸಿ" ಎಂದು

11. ಏವಮುಪಿಚ್ಛೈಕೇ ಪಠಂತಿ । ಯಸ್ತನ್ನ ವೇದ ಕಿಮೃಚಾ ಕರಿಷ್ಯತೀತಿ ॥ ಇತಿ (ಋ-1-164-39)

ಹೀಗೆ ಊಹೆಯ ಮಾತ್ರದಿಂದಲೇ ಅಲ್ಲ ಸ್ಪಷ್ಟವಾಗಿಯೂ ಕೆಲವು ಶಾಖೆಗಳಲ್ಲಿ ಪಾಠವಿದೆ ಯಾವಾತನು ಆ ಪರಮಾತ್ಮನನ್ನು ತಿಳಿಯಲಿಲ್ಲವೋ ಆತನು ಸರ್ವವೇದಾ ಧ್ಯಯನದಿಂದಲೂ ಏನು ಪ್ರಯೋಜನ ಹೊಂದಲಾರನು ಎಂದು ಯಾವ ಪ್ರಯೋ ಜನವೂ ಇಲ್ಲ ಬರಿ ಕಂಠಶೋಷಣಶ್ರಮವೇ.

"ಋಚೂ ಅಕ್ಷರೆ ಪರಮೇವ್ಯೋಮನ್ ಯಸ್ಮಿನ್‌ದೇವಾ ಅಧಿವಿಶ್ವೇನಿಷೇದುಃ ।
ಯಸ್ತಂ ನ ವೇದ ಕಿಂ ಋಚಾ ಕರಿಷ್ಯತಿ ಯತ್ತದ್ವಿದುಸ್ತ ಇಮೇ ಸಮಾಸತೆ ॥

ಯಾವಾತನು ಅಕ್ಷರ ಶಬ್ದ ವಾಚ್ಯ ಪರಬ್ರಹ್ಮನನ್ನು ಸರ್ವ ವೇದ ಮುಖ್ಯಾರ್ಥ ವನ್ನಾಗಿ ತಿಳಿಯುವನೋ ಆ ಪುರುಷನು ಕರ್ಮಾದಿ ಪರಗಳಾದ ವೇದವನ್ನು ಬ್ರಹ್ಮ ಯಜ್ಞಾದಿ ರೂಪದಿಂದ ಗ್ರಹಿಸುವನು. ಇದರಿಂದ ಪೂರ್ಣಫಲವು ಲಭ್ಯವಲ್ಲವಾಗಿ ಏನುಪ್ರಯೋಜನ ಜಗನ್ನಾತತ್ವವೂ ಲೋಕಾರೂಢವು ಮತ್ತು ಆದರಿಂದ ಮುಮುಕ್ಷು ವಿಗೆ ಪ್ರಯೋಜನವಾಗದು ಕರ್ಮಾದಿ ಜಗದ್ಯಾಚಿತ್ವವು ಜ್ಞಾನದ್ವಾರ ಶ್ರೀ ಪರ ಮಾತ್ಮನ ಜ್ಞಾನಾರ್ಥವಾಗಿ ಪೂರ್ಣ ಫಲದಾಯಕವು ಎಂದು ಜೈಮಿನ್ಯಾಚಾರ್ಯರ ಮತವು.

## ಸೂ॥ ಓಂ॥ ವಾಕ್ಯಾನ್ವಯಾತ್ ಓಂ॥ 19

ವಾಕ್ಯಸ್ಯಾ ವ್ಯೇಪ ಮನ್ವಯೋ ಯುಜ್ಯತೆ ಪೃಥಕ್ ಪೃಥಕ್ ಸ್ಥಿತಸ್ಯಾಪಿ ಪರಮಾತ್ಮನಾ ||

ಪರಬ್ರಹ್ಮನಲ್ಲಿ ವಾಕ್ಯ ಸಮನ್ವಯುವನ್ನು ಆಕ್ಷೇಪಿಸಿಯೇ ವೇದದಿಂದ ಕರ್ಮಾದಿಗಳೂ ಪ್ರತಿಪಾದಿಸಲ್ಪಡುತ್ತವೆ ವಾಕ್ಯಾನ್ವಯದಿಂದ ಅವನನ್ನು ತಿಳಿಯಲಪೇಕ್ಷಿಸಿ ಆತನನ್ನು ಹೊಂದಲು ಶಬ್ದಗಳ ಅನ್ಯವಾಚಿತ್ವವು ಯುಕ್ತವೇ ವಿಸ್ತಾರವಾಗಿಯೂ ಸೂಕ್ಷ್ಮವಾಗಿಯೂ ಇರತಕ್ಕ ವೇದ ವಾಕ್ಯಗಳ ಪರಮಾತ್ಮ್ಯಾನ್ವಯ ಪ್ರಕಾರವು ಹೀಗೆ ಸಾಕ್ಷಿಕಸ್ವಭಾವದ ಜೀವನು ಲೋಕಾರೂಢಿಯಿಂದ ಕಾರ್ಯಾದಿ ಧರ್ಮವನ್ನು ಅನಸಂಧಾನ ಮಾಡಿ ತನ್ನ ಶರೀರಕತ್ವ ಮತ್ತು ಪ್ರೇರಕನಾದ ಈಶ್ವರನನ್ನು ಸಮನ್ವಯ ಪೂರ್ವಕವಾಗಿ ಮಹಾತ್ಮ ಜ್ಞಾನದಿಂದ ಅವನ ವಿಶೇಷ ಜ್ಞಾನಾರ್ಜನೆಗೆ ಉತ್ಸುಕತೆಯಿಂದ ಮಿಕ್ಕ ಎಲ್ಲಾ ವಿಷಯಗಳನ್ನು ತೊರೆದು ಚಿಂತನೆ ಮಾಡುವನೋ ಅಂಥಹ ಜ್ಞಾನಿಗೆ ವೇದವು ಸದ್ಬಂಧುವಂತೆ ಪರಮಾತ್ಮನನ್ನು ಸ್ವರೂಪವನ್ನು ತನ್ನ ಎಲ್ಲಾ ವಾಕ್ಯಗಳ ಪ್ರಧಾನ ವಸ್ತುವನ್ನಾಗಿ ವಿಜ್ಞಾನಮಾನಂದಂ ಬ್ರಹ್ಮ ಇತ್ಯಾದಿ ತಿಳಿಸಿ ಸರ್ವಾಂತಃಕರವು ಮಲವರ್ಜಿತನಾಗಿ ಪೂರ್ಣ ಭಕ್ತನನ್ನಾಗಿ ಮಾಡುತ್ತದೆ. ಹೀಗೆ ಸರ್ವ ವೇದ ವಾಕ್ಯಗಳಿಗೂ ಶ್ರೀಪರಮಾತ್ಮನ ಸ್ವರೂಪ ಜ್ಞಾನವನವೇ ಮುಖ್ಯ ಸಾಧನವು

ಶರೀರ ಇಂದ್ರಿಯ ಅಂತಃಕರಣಗಳಿಂದ ವಿವಿಧ ದುಃಖಾನುಭವವುಳ್ಳ ಜೀವನು ದುಃಖ ಮಿಶ್ರವಿಲ್ಲದ ಸುಖವನ್ನು ಹೊಂದದವನಾಗಿ ಯೋಚನಾ ಪರನಾಗುವನು ಈ ಶರೀರ ನಿಮಿತ್ತದಿಂದ ದುಃಖಿವೂ ಅಥವಾ ಸ್ವಾಭಾವಿಕವೋ, ಅನಿವಾರ್ಯವೋ, ಎಂದು ಇಂತಹ ಪುರುಷನಿಗೆ ವೇದವು "ಅತತ್ವಮಸಿ" ಎಂದು ಬೋಧಿಸುತ್ತದೆ ನಿರ್ದುಖಾನಂದಾನುಭವ ಸ್ವಭಾವದವನು ಶ್ರೀಪರಮಾತ್ಮನೇ ನೀನಲ್ಲ ಈಶ್ವರಾಧೀನ ಅವಿದ್ಯಾಕೃತ ಪ್ರಾಕೃತ ಶರೀರದಿಂದ ಅನ್ಯಥಾ ರೂಪದಿಂದಲೇ ನಿನ್ನ ಇರುವು ಆದರೆ ಸ್ವರೂಪತಃ ನಿರ್ದಃಖಾನಂದ ಸ್ವರೂಪನೇ ನೀನು ಆದರೂ ಈ ಪ್ರಾಕೃತ ಶರೀರದಿಂದ ಅನ್ಯಥಾ ರೂಪದಿಂದಲೆಇದ್ದೀಯೋ. ಈಅಸ್ವಭಾವ ಜಡಶರೀರವು ಪರಮಾತ್ಮನ ಪ್ರಸಾದದಿಂದಲೇ ಪೂರ್ಣವಾಗಿ ಈ ನಾಶಪಡಿಸಲು ಸಾಧ್ಯವು ಈ ಪರಮಾತ್ಮ ಪ್ರಸಾದವು ವೇದಾರ್ಥಗಳ ಸೂಕ್ತ ಜಿಜ್ಞಾಸೆಯಿಂದ ಪರಮಾತ್ಮನ ಜ್ಞಾನ ಹೊಂದುವುದೇ ದಾರಿಯು. ಆಪೂರ್ಣ ಪುರುಷಾರ್ಥ ಸಾಧಕಸಾರವನ್ನು ವೇದವು ಉಪದೇಶಿಸುತ್ತದೆ ಶ್ರವಣಮನನ ನಿಧಿ ಧ್ಯಾನನ ಪೂರ್ವಕ ಜ್ಞಾನ ಸಂಪಾದನೆಗೆ ಅಂಗಗಳಾಗಿ ಕರ್ಮಾದಿಗಳು ವಿಧಿಸಲ್ಪಟ್ಟಿವೆ ಎಂಬ ಜ್ಞಾನ ಸಮನ್ವಯದಿಂದ ವೇದವು ಶ್ರೀಪರಮೇಶ್ವರ ಸ್ವರೂಪನೆಂಬಲ್ಲಿ ಪರ್ಯವಸಾನವು.

## ಸೂ॥ ಓಂ॥ ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ ಓಂ॥ 21

ಜ್ಞಾನ ಸಂಪಾದನೆಯೇ ಮೋಕ್ಷ ಹೇತು ಧರ್ಮವಾದ್ದರಿಂದ "ನಾನ್ಯಃ ಪಂಥಾ" ಎಂಬ ಪ್ರತಿಜ್ಞೆಯು ಸಾಧಕವಾಗಿ ಕರ್ಮ ಪ್ರತಿಪಾದನವು ಯುಕ್ತವು ಎಂದು ಆಶ್ಮರಥ್ಯಾಚಾರ್ಯರ ಮತವು.

ನಾನ್ಯಃ ಪಂಥಾಃ ಅಯನಾಯ ವಿದ್ಯತೆ (ತೈ-ಅ-3-12-7) ಇತಿ ಪ್ರತಿಜ್ಞಾ ಸಿದ್ಧೇರ್ಲಿಂಗತ್ವೇನ ಕರ್ಮಾದಿಕ ಮುಚ್ಯತೆ ಇತ್ಯಾಶ್ಮರಥ್ಯಃ। ಯಸ್ಮಾದೇವಮ ನಿತ್ಯಫಲ ಮನ್ಯತ್ರ ನ್ಮಾನ್ನಾನ್ಯ ಪಂಥಾ ಇತಿ ॥

ವೇದದಲ್ಲಿ ಹೇಳುವ ಕರ್ಮಗಳು ಸಾಧಾರಣವಾಗಿ ಅಲ್ಪ ಸ್ವರ್ಗಸುಖಾದಿಗಳ ಅನುಭವಕ್ಕಾಗಿ ಆಚರಿಸಲ್ಪಡಲು ಹೇಳಿದ್ದರೂ ಮುಮುಕ್ಷು ಯೋಗ್ಯ ಜೀವನಿಗೆ ವೈರಾಗ್ಯ ಜನಕವಾಗಿ ಕ್ಷುದ್ರಫಲಾಪೇಕ್ಷೆಯನ್ನು ತೊರೆದು ಮೋಕ್ಷ ಪ್ರಾಪ್ತಿಗೆ ಸಾಧನವಾಗಿ "ನಾನ್ಯಃ ಪಂಥಾ" ಎಂದು ಜ್ಞಾನಾರ್ಜನಕ್ಕೋಸ್ಕರ ಹೇಳಿದೆ.

## ಸೂ॥ ಓಂ॥ ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡುಲೋಮಿಃ ಓಂ॥ 22

ಉತ್ಕ್ರಮಿಷ್ಯತೋ ಮುಮುಕ್ಷೋಃ ಕರ್ಮಾದಿನಾ ಭಾವ್ಯಂ ಸಾಧನತ್ವೇನ ಅತಸ್ತದ್ವಕ್ತಿರಿತ್ಯೌಡುಲೋಮಿರ್ಮನ್ಯತೆ ।

ದೇಹದಿಂದ ಹೊರಡುವ ಕಾಲದಲ್ಲಿ ಜ್ಞಾನದಿಂದ ಮೋಕ್ಷವನ್ನು ಹೊಂದುವ ಅಧಿಕಾರಿಗಳು ಜ್ಞಾನಸಾಧನೆಗೋಸ್ಕರ ಕರ್ಮಾದಿಗಳನ್ನು ಅನುಷ್ಠಾನ ಮಾಡಬೇಕೆಂಬ ವಿಧಿಯನ್ನು ವೇದವು ಕರ್ಮಾದಿ ಪ್ರತಿಪಾದನೆಯಿಂದ ತಿಳಿಸುವುದು ಎಂದು ಔಡಲೋಮಿ ಆಚಾರ್ಯರು ತಿಳಿಯುವರು.

## ಸೂ॥ ಓಂ॥ ಅವಸ್ಥಿತೇರಿತಿಕಾಶಕೃತ್ಸ್ನಃ ಓಂ॥ 23

ಸರ್ವ ಪರಮಾತ್ಮನ್ಯವಸ್ಥಿಕಮಿತಿ ವಕ್ತುಶ ತದ್ವಚನಂ ಇತಿ ಕಾಶಕೃತ್ಸ್ನಃ
ಕೃಷ್ಣದ್ವೈಪಾಯನಮತಾದೇತು ದೇಶವಿಡಃ ಪರೆ ।
ವಿದಂತಿ ಶೇಯಥಾಪ್ರಜ್ಞಂ ನ ವಿರೋಧಃ ಕಥಂಚನ ॥ ಇತಿ ಪಾದ್ಮೆ ॥

ಈ ಮೇಲೆ ಹೇಳಿದ ವಿವಿಧ ಮತಗಳಲ್ಲಿ ಮುಖ್ಯವಾಗಿ ಯಾವ ಬೇಧವಿಲ್ಲ. ಸರ್ವ ಜ್ಞಾಚಾರ್ಯರಾದ ಶ್ರೀ ವೇದವ್ಯಾಸರ ಜ್ಞಾನ ಸಾಗರದಲ್ಲಿ ಮಿಕ್ಕ ಜ್ಞಾನಿಗಳು ಏಕ ದೇಶ ಪ್ರಜ್ಞಾವಂತರು ಮಾತ್ರ. ಪೂರ್ತ ಜ್ಞಾನ ಭಾಗಿಗಳಾಗಲು ಅಸಮರ್ಥರು. ತಮ್ಮ ತಮ್ಮ ಜ್ಞಾನಸ್ವರೂಪಯೋಗ್ಯತೆ ತಕ್ಕಂತೆ ತಮ್ಮ ಅಭಿಪ್ರಾಯವನ್ನು ಹೇಳಿರು ವರು.

ಜೈಮಿನ್ಯಾಚಾರ್ಯರ ಮತವು ವಾಕ್ಯ ಸಮನ್ವಯ ಮಾತ್ರ ಯೋಗ್ಯತೆವುಳ್ಳ ಮತ್ತು ಪದ ಸಮನ್ವಯಕ್ಕೆ ಯೋಗ್ಯರಲ್ಲದ ಮಂದಾಧಿಕಾರಿಗಳ ಪರವು

ಆಶ್ಮರಥ್ಯಾಚಾರ್ಯರ ಮತವು ವೈರಾಗ್ಯ ಸಂಪತ್ತನ್ನು ಹೊಂದುವ ಮುನ್ನ ಸ್ವರ್ಗಾದಿ ಬೇಡಿಕೆಯುಳ್ಳ ಅಧಿಕಾರಿಪರವು

ಔಡಲೋಮ್ಯಾಚಾರ್ಯರ ಮತವು-ಜ್ಞಾನ ಸಂಪತ್ತನ್ನು ಹೊಂದುವ ಮುನ್ನ ಜಿಜ್ಞಾಸತ್ವಾವಸ್ಥಾ ವಿಶಿಷ್ಟಾಧಿಕಾರಿಯ ವಿಷಯವು.

ಕಾಶಕೃತ್ಸ್ನಾಚಾರ್ಯರ ಮತವು ಜ್ಞಾನ ಸಂಪನ್ನ ಅವಸ್ಥಾ ವಿಶಿಷ್ಟಾಧಿಕಾರಿ ವಿಷಯವು.

ಹೀಗೆ ಸರ್ವ ಮತವೂ ಶ್ರೀ ಪರಮಾತ್ಮ ಪರವೇ ಅನ್ಯವಲ್ಲ.

– ಇತಿ ಸಮಾಕರ್ಷಾಧಿಕರಣವು –

## – ಪ್ರಕೃತ್ಯಧಿಕರಣವು –

ಈ ಅಧಿಕರಣದಲ್ಲಿ "ಪ್ರಕೃತಿ" ಮೊದಲಾದ ಸ್ತ್ರೀಲಿಂಗ ಶಬ್ದಗಳನ್ನು ಶ್ರೀ ಪರ ಮಾತ್ಮನಲ್ಲಿ ಸಮನ್ವಯ ಮಾಡಿರುತ್ತದೆ.

1 "ತತ್ತು ಸಮನ್ವಯಾತ್" ಎಂಬ ವಾಕ್ಯದಿಂದ ಸರ್ವ ಶಬ್ದಗಳ ಸಮನ್ವಯವನ್ನು ಪರಮಾತ್ಮನಲ್ಲಿ ಹೇಳಿದೆ ಅದರಂತೆ ಆನಂದಮಯ, ಇಂದ್ರ, ವರುಣ, ಸೂರ್ಯ ಅಗ್ನಿ ಆಕಾಶ ಪ್ರಾಣಾದಿ ಪುಲ್ಲಿಂಗ ಶಬ್ದಗಳು, ಬ್ರಹ್ಮ ಅಕ್ಷರ, ಜ್ಯೋತಿ, ಆದಿ ನಪುಂಸಕ ಶಬ್ದಗಳನ್ನೂ ಸಹ ಪರಮಾತ್ಮನಲ್ಲಿಯೇ ಮುಖ್ಯ ವೃತ್ತಿಯಿಂದ ಸ್ಮಿರಾಸ್ವಯ ಮಾಡಿದೆ. ಈ ಅಧಿಕರಣದಲ್ಲಿ ಸ್ತ್ರೀಲಿಂಗ ವಾಚ್ಯ ಪ್ರಕೃತ್ಯಾದಿ ಶಬ್ದಗಳ ಸಮನ್ವಯವನ್ನು ಮಾಡಲು ಉಪಕ್ರಮವು. ಸ್ತ್ರೀಲಿಂಗಾದಿ ಶಬ್ದಗಳು ಸಮನ್ವಯ ಪರಮಾತ್ಮನಲ್ಲಿ ಸಾಧ್ಯವಲ್ಲ. ಸ್ತ್ರೀಲಿಂಗ ವಾಚಕಶಬ್ದಗಳು ಪ್ರಕೃತಿ ಪರವೇ ಎಂದು ಸಂಶಯವು ವತ್ಸ ಶೃತಿಯ "ಏಷಾ ಹ್ಯೇವ ಪ್ರಕೃತಿಃ" ಎಂಬ ವಾಕ್ಯವು ಇದಕ್ಕೆ ಸಮರ್ಥನವು ನಚಿಕೇತರನ್ನು ಕುರಿತು ಯಮ ದೇವರ ವಾಕ್ಯವು ಯಾ ದೇವತಾಮಯೀ-ದೇವತಾಸ್ತ್ರಮಾ ಅದಿತಿಃ ಶಬ್ದವಾಚ್ಯ ಭಗವಂತನು ಪ್ರಾಣೇನ ಮುಖ್ಯ ವಾಯುನಾ ಸಹ ತಿಷ್ಠತಿ "ಏತದ್ವೈತತ್" ಯತ್ವಯಾ ಪೃಷ್ಟಂತತ್ ನೀನು ಕೇಳಿದ್ದು ಎಂದುಸಿದ್ಧಾಂತ

1 ಸ್ತ್ರೀ ಶಬ್ದಾ ಅಪಿ ತಸ್ಮಿನ್ನೇವೇತ್ಯಾಹ—

ಸ್ತ್ರೀಲಿಂಗ ಶಬ್ದಗಳೂ ಕೂಡ ಆವನಲ್ಲಿಯೇ ಎಂದು ಹೇಳುತ್ತಾರೆ

## ಸೂ|| ಓಂ|| ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್ ಓಂ|| 24

ಈಶ್ವರನು ಪುಲ್ಲಿಂಗ ಶಬ್ದ ವಾಚ್ಯ ಮಾತ್ರನೇ ಅಲ್ಲ ಸ್ತ್ರೀಲಿಂಗ ಶಬ್ದ ವಾಚ ಪ್ರಕೃತ್ಯಾದಿ ಶಬ್ದಗಳೂ ಆತನನ್ನೇ ಹೇಳುವುವು. "ನೈಷಾ ಪ್ರಕೃತಿಃ'' ಎಂಬ ವಾಕ್ಯಗಳಿಂದ ಹೇಳಲ್ಪಡುವವನು ಆತನೇ ಇಲ್ಲದಿದ್ದಲ್ಲಿ ನದೀ ಸಮುದ್ರ ಪ್ರತಿಜ್ಞಾ ದೃಷ್ಟಾಂತ ಪ್ರತಿಜ್ಞೆಗೆ ವಿರೋಧವಾಗುವುದರಿಂದ ಪ್ರಕೃತಿ ಶಬ್ದವಾಚ್ಯನು ಶ್ರೀಪರಮಾತ್ಮನೇ

2. **ಹಂತೈತಮೇವ ಪುರುಷಂ ಸರ್ವಾಣಿ ನಾಮಾನ್ಯಭಿವದಂತಿ |**
**ಯಥಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ |**
**ಸಮುದ್ರಮಭಿಸಂವಿಶಂತ್ಯೇವಮೇವೈತಾನಿನಾಮಾನಿ |**
**ಸರ್ವಾಣಿ ಪರಮಭಿಸಂವಿಶಂತೀತಿ ಪ್ರತಿಜ್ಞಾ ದೃಷ್ಟಾಂತಾ |**
**ಅನುಪರೋಧಾತ್ಪ್ರಕೃತಿ ಶಬ್ದವಾಚ್ಯೋಽಪಿ ಸಏವ ||**

ಮೇಲಿನ ಶೃತ್ಯರ್ಥವು-ಪೂರ್ಣ ಪ್ರವೃತ್ತಿ ನಿಮಿತ್ತನಾದ ಇಲ್ಲಿ ಹೇಳಲ್ಪಡುವ



25

ಪರಮಾತ್ಮನನ್ನು ಎಲ್ಲಾ ಶಬ್ದಗಳೂ ಪರಮ ಮುಖ್ಯವಾಗಿ ಹೇಳುತ್ತವೆ. ದೃಷ್ಟಾಂತವು ಹರಿಯುವ ಪ್ರವೃತ್ತಿಯುಳ್ಳ ಸಮುದ್ರವನ್ನೇ ಆಶ್ರಯವಾಗಿವುಳ್ಳ ನದಿಗಳು ಸಮುದ್ರಾಭಿಮುಖವಾಗಿಯೇ ಹರಿದು ಸಮುದ್ರವನ್ನೇ ನೇರಿ ನಿಲ್ಲುತ್ತವೆ ಹಾಗೆಯೇ ಪ್ರವೃತ್ತವಾದ ಸರ್ವನಾಮಗಳೂ ನದೀ ರೀತಿಯಲ್ಲಿ ಸರಿಯುತ್ತಾ ಮಧ್ಯದಲ್ಲಿ ಸ್ಥಿರ ಚರ ವ್ಯವಹಾರವನ್ನುಹೊಂದಿ ಮಹಾಪುರುಷನನ್ನು ಆಶ್ರಯ ಪ್ರವೃತ್ತಿ ನಿಮಿತ್ತಧರ್ಮಗಳಿಂದ ಕೊನೆಯಲ್ಲಿ ಶ್ರೀಪರಮಾತ್ಮನನ್ನು ಸರ್ವಾಭಿಮುಖವಾಗಿ ವಾಚಕತ್ವದಿಂದ ಹೊಂದುವುವು. ಈ ಪ್ರತಿಜ್ಞಾ ದೃಷ್ಟಾಂತಗಳನ್ನು ಅನುಸರಿಸಿ ಸರ್ವಲಿಂಗ ಶಬ್ದಗಳೂ ಪರಮಾತ್ಮನನ್ನೇ ಕೊನೆಯಲ್ಲಿ ಅಂದರೆ ಮುಖ್ಯವಾಗಿ ಅಶ್ರಯ ನನ್ನಾಗಿ ಹೊಂದುವುವು

## ಸೂ॥ ಓಂ॥ ಅಭಿದ್ಯೋಪದೇಶಾಚ್ಚ ಓಂ ॥ 25

ಮಾಯಾಂತು ಪ್ರಕೃತಿಂ ವಿದ್ಯಾತ್ ಮಾಯಿನಂ ತು ಮಹೇಶ್ವರಂ ।
ಮಹಾಮಯೇತ್ಯ ವಿದ್ಯೇತಿ ನಿಯತಿರ್ಮೋಹಿ ನೀತಿ ಚ ।
ಪ್ರಕೃತಿರ್ವಾಸನೇತ್ಯೇವ ತವೇಚ್ಛಾನಂತಕಥ್ಯತೆ ।
ಇತಿ ವಚನಾತ್ತದಭಿ ಧ್ಯೈವ ಪ್ರಕೃತಿ ಶಬ್ದೇನೋಚ್ಯತೆ ॥

"ಮಾಯಾಂತು" ಎಂಬ ಶೃತಿಯಲ್ಲಿ ಪ್ರಕೃತಿ ಶಬ್ದ ವಾಚ್ಯವು ಪರಮಾತ್ಮನ ಇಚ್ಛೆಯೆಂದು ಹೇಳಿರುವುದರಿಂದ ಪರಮಾತ್ಮನ ಇಚ್ಛೆಯಿಂದ ಭಿನ್ನನಲ್ಲದ ಈಶ್ವರನಿಗೆ ಪ್ರಕೃತಿ ಶಬ್ದ ವಾಚ್ಯತ್ವವು ಆಯುಕ್ತವೇ.

ಸರ್ವ ಸ್ತ್ರೀಲಿಂಗ ಶಬ್ದ ವಾಚ್ಯ ಪ್ರತೀಕವಾದ ಪ್ರಕೃತಿ ಶಬ್ದವಾಚ್ಯತ್ವವು ಪರಮಾತ್ಮನೆಂದೇ ಹೇಲಿದೆ ಈಶ್ವರನ ಇಚ್ಛೆಯೇ ಪ್ರಕೃತಿ ಪದದಿಂದ ಹೇಳಲ್ಪಡುತ್ತದೆ ಅನ್ಯವಸ್ತುವಲ್ಲ. ಪ್ರಕೃತಿ 'ಶಬ್ದ ವಾಚ್ಯವು "ಮಾಯೆ" ಎಂದೂ ಮಾಯಾವಿಯುನ್ನು ಮಹೇಶ್ವರನೆಂದೂ ತಿಳಿ ಎಂದು ಶೃತಿಯು. ಮಹಾಮಾಯೆ ಅವಿದ್ಯೆ ನಿಯತಿ, ಮೋಹಿನಿ, ಪ್ರಕೃತಿ, ವಾಸನಾ ಈ ಪ್ರಕೃತಿ ಪದಗಳಿಂದ ಅನಂತನೇ ನಿನ್ನ ಇಚ್ಛಾಶಕ್ತಿಗೂ ಹೇಳಲ್ಪಟ್ಟಿದೆ.

4 "ಸೋ ಭಿಧ್ಯಾ ಸಜೂತಿಃ ಸಪ್ರಜ್ಞಾ ಸ ಆನಂದ ಇತಿಶ್ರುತೇ
ರಭಿಧ್ಯಾಚ ಸ್ವರೂಪಮೇವ ॥

ಆದರೂ ಪ್ರತಿಪದದಿಂದಲೂ ಅನಂತನೇ ವಾಚ್ಯನು ಹೇಗೆಂದರೆ—ಅಭಿಧ್ಯಯು

ಶ್ರೀಪರಮಾತ್ಮ ಸ್ವರೂಪವೇ ಭಿನ್ನವಲ್ಲ ಎಂದು ಶೃತಿಯು ಶ್ರೀ ಪರಮಾತ್ಮನು ಸರ್ವಪ್ರೇರಕತ್ವ "ಜ್ಯೋತಿ", ಶಬ್ದ ವಾಚ್ಯನು ಆತನೇ ಆನಂದನು

5. **ಧ್ಯಾಯತಿ ಧ್ಯಾನರೂಪೋಸೌ ಸುಖೀ ಸುಖಮತೀವಚ | ಪರಮೈಶ್ವರ್ಯಯೋಗೇನ ವಿರುದ್ಧಾರ್ಥತಯೋಚ್ಯತ ಇತಿ ಬ್ರಹ್ಮಾಂಡೇ ||**

ಧ್ಯಾನ ರೂಪ ಭಗವಂತನು ಧ್ಯಾನ ಮಾಡುವನೆಂಧು ಕರ್ತೃತ್ವದಿಂದಲೂ ಹೇಳಲ್ಪಡುವನು ಹಾಗೆಯೇ ಶ್ರೀಹರಿಯು ಅತ್ಯಂತ ಸುಖ ರೂಪನಾಗಿ ಆನಂದನು ಎಂದು ಸುಖಸುಖಿತ್ವತ್ರರೂಪದಿಂದಲೂ ಹೇಳಲ್ಪಟ್ಟ ಆತನೇ ಪೂರ್ಣ ಸುಖಿನು ಹಾಗೆಯೇ ಈತನ ಇಚ್ಛೆಯೇ "ಮಾಯಾ" ರೂಪದಿಂದ ಮಾಯಾವಿಯೆಂದು ಪ್ರಾಕೃತದಲ್ಲಿ ಹೇಳಿದೆ. ವಿರುದ್ಧ ಧರ್ಮಗಳಿಂದ ಒಂದೇ ವಸ್ತುವಾದ ಬ್ರಹ್ಮನಲ್ಲಿ ಸುಖಿ ಸುಖಿತ್ವವು "ಐಶ್ವರ್ಯ" ವೆಂಬ ವಿಶೇಷ ಉಪಾಯದಿಂದ ಸಿದ್ಧವು

## ಸೂ|| ಓಂ|| ಸಾಕ್ಷಾಚ್ಚೋಭಯಾಮ್ನಾನಾತ್ ಓಂ|| 26

ಯಾವ ಅಂತರವೂ ಇಲ್ಲದೆ ಸಾಕ್ಷಾತ್ತಾಗಿಯೇ ಪೈಂಗೀ ಶೃತಿಯಲ್ಲಿ "ಏಷ ಸ್ತ್ರೀ ಷ ಪುರುಷ ಎಂಬ ಎರಡು ಶಬ್ದಗಳಿಂದಲೂ ಈಶ್ವರನನ್ನು ಹೇಳುವುದು ಆದ್ದರಿಂದ ಸಾಕ್ಷಾತ್ತಾಗಿಯೂ ಪ್ರಕೃತಿ ಶಬ್ದಗಳೆಲ್ಲವೂ ಈಶ್ವರ ವಾಚಕವೇ

> "ಏಷಃ ಸ್ತ್ರ್ಯೇಷ ಪುರುಷ ಏಷ ಪ್ರಕೃತಿರೇಷ ಆತ್ಮೈಷ ಬ್ರಹ್ಮೈಷ ಲೋಕ ಏಷ ಅಲೋಕೊ ಯೋಸೌ ಹರಿರಾದಿರನಾದಿರನಂತೋಂತಃ ಪರಮಃ ಪರಾದ್ವಿಶ್ವ ರೂಪಃ" ಇತಿ ಪೈಂಗಿಶ್ರುತೌಸಾಕ್ಷಾದೇವ ಪ್ರಕೃತಿ ಪುರುಷತತ್ವಮ್ನಾನಾತ" ||

ಪರಮಾತ್ಮನು ಸತತ ರಮಣತ್ವದಿಂದ ಸ್ತ್ರೀಶಬ್ದ ವಾಚ್ಯನು ಹಾಗೆಯೇ ಪುರುಷ "ಆತ್ಮಾ" ಶಬ್ದವಾಚ್ಯನು. ಪ್ರಕೃತಿ ಶಬ್ದವಾಚ್ಯ (ಬ್ರಹ್ಮ) ಸ್ತ್ರೀಪುಂದೋಷವಿಲ್ಲದ್ದರಿಂದ ಉಪ ಲಕ್ಷಿತ ನಪುಂಸಕ ಬಹುಶಬ್ದವಾಚ್ಯ. ಪ್ರತ್ಯಕ್ಷಾದಿಗಳಿಗೆ ಆಧಾರ ಪ್ರಕಾಶರೂಪ ಹೀಗೆ ಧರ್ಮತ್ವದಿಂದ ಶ್ರೇಷ್ಠನು, ಅಂತಕನು, ಪ್ರಕೃತ್ಯಾದಿಗಳಿಲ್ಲಿರುವವನು. ಅಂದರೆ ಸ್ತ್ರೀಪುರುಷ ಪದಗಳಲ್ಲಿ "ಪ್ರಕೃತಿ ಆತ್ಮ ಪದಗಳಲ್ಲಿ ಅನಾದ್ಯನಂತ ಪದಗಳಲ್ಲಿ ಸ್ತ್ರೀ ಪುರುಷ ಜಡಚೇತನ ಜ್ಞಾನಾಜ್ಞಾನರೂಪ ಅನುತ್ಪತ್ತಿ ನಾಶ ರೂಪ ವಿರುದ್ಧಾರ್ಥಕ್ತ

ಗಳಲ್ಲಿ ಶ್ರೀಹರಿಯೇ ಹೇಳಲ್ಪಡುವನು. ಆದ್ದರಿಂದ ಯಾವ ದೋಷವೂ ಇಲ್ಲ

## ಸೂ॥ ಓಂ॥ ಆತ್ಮಕೃತೇಃಪರಿಣಾಮಾತ್ ಓಂ॥ 27

ಪ್ರಕರ್ಷೇಣಕರೋತೀಪ್ರಕೃತಿ-ರಿತಿ ಯೋಗಾಚ್ಚ ।

ಪ್ರಕೃತಿಗೆ ಪರಿಣಾಮವನ್ನುಂಟುಮಾಡಿ ಅದನ್ನು ಪ್ರೇರಣೆ ಮಾಡುವುದರಿಂದ ಅದರ ಅಂತರ್ಯಾಮಿಯಾಗಿ ಬಹುರೂಪಗಳಾಗಿ ತನ್ನನ್ನು ಮಾಡಿಕೊಳ್ಳುವುದರಿಂದ ಪ್ರಕೃತಿ ಶಬ್ದವಾಚ್ಯನು ಪರಮೇಶ್ವರನೇ ಮಹಾಯೋಗದಿಂದ ನಿರತಿಶಯ ಪ್ರವೃತ್ತಿ ನಿಮಿತ್ತದಿಂದ ಅವನೇ ಪ್ರಕೃತಿ ಶಬ್ದವಾಚ್ಯನು "ಪ್ರಕೃಷ್ಟಾ ಕೃತಿಃ ಯಸ್ಯ" ಎಂದು ವಿಗ್ರಹವು

**8. ಪ್ರಕೃತಾವನುಪ್ರವಿಶ್ಯ ತಾಂ ಪರಿಣಾಮ್ಯ ತತ್ಪರಿಣಾಮನಿಯಾಮ ಕತ್ವೇನ ತತ್ರಸ್ಥಿತ್ವಾ ಆತ್ಮನೋ ಬಹುಧಾಕರಣಾತ್ ।**

ಪ್ರಕೃತಿಯನ್ನು ಅನುಕೂಲ ರೀತಿಯಲ್ಲಿ ಪ್ರವೇಶಿಸಿ ಪರಿಣಾಮವನ್ನು ಹೊಂದಿಸಿ ತಾನು ಅವಿಕಾರನಾಗಿಯೇ ಮಹದಾದಿ ರೂಪದಿಂದ ವಿಕಾರವನ್ನು ಹೊಂದಿಸಿ ಅವುಗಳಲ್ಲಿ ಪ್ರವೇಶಿಸಿ ತನ್ನ ಸ್ವಂತ ರೂಪವನ್ನು ಬ್ರಹ್ಮರೂಪವಾಗಿ ವ್ಯಕ್ತಪಡಿಸುವುದರಿಂದ ಪ್ರಕೃಷ್ಟ ಕರಣತ್ವರೂಪ ನಿಮಿತ್ತದಿಂದ ಪ್ರಕೃತಿ ಶಬ್ದವಾಚ್ಯನು

**9. ಅಥಹೈಷ ಆತ್ಮಾ ಪ್ರಕೃತಿಮನುಪ್ರವಿಶ್ಯಾತ್ಮಾನಂ ಬಹುಧಾಚಕಾರ ತಸ್ಮಾತ್ಪ್ರಕೃತಿಸ್ತಸ್ಮಾತ್ಪ್ರಕೃತಿರಿತ್ಯಾಚಕ್ಷತ ಇತಿ ಭಾಲ್ಲವೇಯ ಶ್ರುತಿಃ**

ಶ್ರೀಪರಮಾತ್ಮನು ಸ್ವತಃ ಪರಿಣಾಮ ಸಾಮರ್ಥ್ಯವಿಲ್ಲದ ಪ್ರಕೃತಿಯನ್ನು ಪರಿಣಾಮಾನುಕೂಲಕ್ಕಾಗಿ ಪ್ರವೇಶಿಸಿ ಅದನ್ನು ಪರಿಣಮಿಸಿ ಆ ಪರಿಣಾಮದಲ್ಲಿ ಪ್ರೇರಕತೆಯಿಂದಯಿದ್ದು ತನ್ನನ್ನು ಬಹುರೂಪಗಳಿಂದ ವ್ಯಕ್ತಗೊಳಿಸಿದನು. ಆದ್ದರಿಂದಲೇ ಪ್ರಕೃತಿ ಶಬ್ದವಾಚ್ಯನು

**10. ಅವಿಕಾರೋಽಪಿ ಪರಮಃ ಪ್ರಕೃತಿಂ ತು ವಿಕಾರಿಣೀಂ ।
ಅನುಪ್ರವಿಶ್ಯ ಗೋವಿಂದಃ ಪ್ರಕೃತಿಶ್ಚಾಭಿಧೀಯತ ಇತಿ
ನಾರದೀಯೇ ॥**

ಶ್ರೀ ಪರಮಾತ್ಮನು ತಾನು ಸ್ವತಃ ವಿಕಾರ ಶೂನ್ಯನಾದರೂ ವಿಕಾರಹೊಂದುವ ಸ್ವಭಾವವುಳ್ಳ ಪ್ರಕೃತಿಯನ್ನು ಪ್ರವೇಶಿಸಿ ಸ್ಥಿತನಾದ್ದರಿಂದ ಗೋವಿಂದನು ಪ್ರಕೃತಿ ಶಬ್ದವಾಚ್ಯನೇ ಇಲ್ಲಿ ಗೋವಿಂದ ಶಬ್ದದಿಂದ ವೇದ ಪ್ರತಿಪಾದ್ಯತ್ವವೂ ಹೇಳಿದೆ

**11 ನ ಚಾನ್ಯತ್ಕಲ್ಪ್ಯಮ್ ಅಪ್ರಾಮಾಣಿಕತ್ವಾತ್ ।**

ಬ್ರಹ್ಮನಿಗೆ ಉಪಾದಾನ ಕಾರಣತ್ವವನ್ನು ಹೇಳುವ ಇತರ ತತ್ವವು ಅಪ್ರಾಮಾಣಿಕವು

## ಸೂ॥ ಓಂ॥ ಯೋನಿಶ್ಚಹಿ ಗೀಯತೇ ಓಂ॥ 28

"ಯದ್ಭೂತಯೋನಿಂ" ಎಂಬ ಶೃತಿಯಲ್ಲಿ ಈಶ್ವರನಿಗೆ "ಯೋನಿ"ಯೆಂದು (ಅಂದರೆ ತನ್ನ ದೇಹದಿಂದಲೇ ಪುತ್ರೋತ್ಪಾದನ ಶಕ್ತಿ ಪ್ರದರ್ಶಕನಾದ) ನೇರವಾಗಿಯೇ ಹೇಳಿರುವುದರಿಂದ ಪ್ರಕೃತಿ ಶಬ್ದ ಸ್ತ್ರೀಲಿಂಗ-ಶಬ್ದವಾಚ್ಯತ್ವವನ್ನೂ ಹೇಳಿದಂತೆಯೇ.

ಅವ್ಯವಧಾನೇನೋತ್ಪತ್ತಿದ್ವಾರತ್ವಂ ಚ ಪ್ರಕೃತಿತ್ವಂ । ತಚ್ಚಾಸ್ಯೈವ ಹಿ ಗೀಯತೆ "ಯ ದ್ಭೂತಯೋ ನಿಂಪರಿಪಶ್ಯಂತಿ ಧೀರಾಃ (ಮು -1–1–6) ಇತಿ

ಯೋನಿ ಶಬ್ದದಿಂದ ಭಾರ್ಯೆಯಲ್ಲಿರುವ ಉತ್ಪತ್ತಿ ಸ್ಥಾನವು ವಾಚಕವಾದರೂ "ಯೋನೇಶ್ಶರೀರಂ" ಎಂಬ ಶಬ್ದ ವಿವರಣೆಯಿಂದ ಶ್ರೀ ಪರಮಾತ್ಮನನ್ನು ಭೂತಯೋನಿಂ ಪ್ರಲಯ ಕಾಲದಲ್ಲಿ ತನ್ನ ಉದರದಲ್ಲಿ ಪ್ರವೇಶಿಸಿಕೊಂಡು ಬ್ರಹ್ಮಾದಿ ಪ್ರಾಣಿಸಮುದಾಯಕ್ಕೆ ಪುನಃ ಸೃಷ್ಟಿ ಕಾಲದಲ್ಲಿ ತನ್ನ ದೇಹದಿಂದಲೇ ಸಾಕ್ಷಾತ್ತಾಗಿ ಉತ್ಪಾದಕತ್ವವನ್ನು ಹೇಳಿರುವುದರಿಂದಿ ಭೂತಯೋನಿಯೆಂದು ಪರಮಾತ್ಮನನ್ನು ಹೇಳಿದೆ ಹೀಗೆ ಸೃಷ್ಟಿ ಕಾಲದಲ್ಲಿ ಸೂಕ್ಷ್ಮದೇಹವನ್ನು ಕಲ್ಪಿಸುವ(ಅನ್ಯಾಶ್ರಯವಿಲ್ಲದೆ) ಶ್ರೀಪರಮಾತ್ಮನನ್ನು ಜ್ಞಾನಿಗಳು ಪ್ರತ್ಯಕ್ಷದಿಂದ ನೋಡುವರು. ಆತನೇ ಪ್ರಕೃತಿ ಶಬ್ದ ವಾಚ್ಯನು ಆಕಾಶಾದಿ ಭೂತಗಳನ್ನೂ ಬ್ರಹ್ಮಾದಿ ಜೀವರುಗಳನ್ನೂ ಸ್ತ್ರೀ ನಿಮಿತ್ತವಿಲ್ಲದಂತೆಯೇ ಸೃಷ್ಟಿ ಮಾಡಲು ಸಮರ್ಥನು.

**13. ವ್ಯವಧಾನೇನ ಸೂತಿಸ್ತು ಪುಂಸ್ತ್ವಂ ವಿದ್ವದ್ಭಿರುಚ್ಯತೇ ।**
**ಸೂತಿರವ್ಯವಧಾನೇನ ಪ್ರಕೃತಿತ್ವಮಿತಿಸ್ಥಿತಿಃ ॥**

ಉಭಯಾತ್ಮಕಸೂತಿತ್ವಾದ್ವಾಸುದೇವಃ ಪರಃ ಪುಮಾನ್ ।
ಪ್ರಕೃತಿಃಪುರುಷಶ್ಚೇತಿಶಬ್ದೈರೇಕೋಽಭಿಧೀಯತ ಇತಿಬ್ರಹ್ಮಾಂಡೇ

ಪುಂಸ್ತ್ವವು, ಅನ್ಯಾಶ್ರಯದ್ವಾರಾ ಅಪತ್ಯೋತ್ಪತ್ತಿಯು ॥

ಸ್ತ್ರೀತ್ವವು ತನ್ನ ದ್ವಾರದಿಂದಲೇ ಅಪತ್ಯೋತ್ಪತ್ತಿಯು ಶ್ರೀಪರಮಾತ್ಮನಲ್ಲಿ ಸ್ವದೇಹದಿಂದಲೇ ಸಾಕ್ಷಾದಪತ್ಯೋತ್ಪತ್ತಿಶಕ್ತಿಯೂ ಅನ್ಯ ದೇಹ ದ್ವಾರದಿಂದ ಉತ್ಪತ್ತಿಶಕ್ತಿಯೂ ಇರುವುದರಿಂದ ಆ ಶ್ರೇಷ್ಠ ಪುರುಷನು ಪ್ರಕೃತಿಪುರುಷ ಶಬ್ದ ವಾಚ್ಯ ಸ್ತ್ರೀಪುಂದ್ವಯದಿಂದಲೂ ಒಬ್ಬನೇ ಕರೆಯಲ್ಪಡುವನು

– ಇತಿ ಪ್ರಕೃತ್ಯಧಿಕರಣವು –

– ಏತೇನ ಸರ್ವೇವ್ಯಾಖ್ಯಾತಾಧಿಕರಣವು –

## ಸೂ॥ ಓಂ॥ ಏತೇನ ಸರ್ವೇವ್ಯಾಖ್ಯಾತಾವ್ಯಾಖ್ಯಾತಾಃ ॥ ಓಂ॥ 29

ಈ ಅಧಿಕರಣದಲ್ಲಿ ಪರಮಾತ್ಮನಲ್ಲಿ ನಿಷೇಧ, ಅನಿಷೇಧಾರ್ಥ ಶಬ್ದಗಳ ಸಮನ್ವಯ ಮಾಡಲ್ಪಡುವುದು. ಹಿಂದೆ ಹೇಳಿರುವ ಕಾರಣದಿಂದಲೇ ಶೂನ್ಯಾದಿ ಸರ್ವ ಶಬ್ದಗಳೂ ಮುಖ್ಯತಃ ಭಗವದ್ವಾಚಕಗಳೇ ಈ ಅಧ್ಯಾಯಾರಂಭತಃ ಅಂತ್ಯದವರಿವಿಗೆ ಹೇಳಿರುವ ಅರ್ಥಗಳಿಗೆ ನಿರ್ಧಾರಣಾ ರೂಪವಾಗಿ ಅಧ್ಯಾಯಾಂತ್ಯದಲ್ಲ ದ್ವಿರುಕ್ತಿಯು.

ಏತೇನ ಸರ್ವೇಶೂನ್ಯಾದಿ ಶಬ್ದಾಃ ಅಪಿ ವ್ಯಾಖ್ಯಾತಾಃ "ಏಷ ಹ್ಯೇವ ಶೂನ್ಯ ಏಷ ಹ್ಯೇವ ತುಚ್ಛ ಏಷ ಹ್ಯೇವಾಭಾವ ಏಷ ಹ್ಯೇವಾ ವ್ಯಕ್ತೋಽ ದೃಶ್ಯೋಽ ಚಿಂತ್ಯೋನಿರ್ಗುಣಶ್ಚ" ಇತಿ ಮಹೋಪ ನಿಷದಿ.

ಶೂನ್ಯಾದಿ ಶಬ್ದಗಳನ್ನು ಸಾಕ್ಷಾತ್ತಾಗಿಯೇ ಪರಮಾತ್ಮನಲ್ಲಿ ಹೇಳಿದೆ. ಶ್ರೀ ಪರಮಾ ತ್ಮನೇ ಶೂನ್ಯ ಶಬ್ದವಾಚ್ಯನು, ತುಚ್ಛ, ಅಭಾವ, ಅವ್ಯಕ್ತ, ಅದೃಶ್ಯ ಅಚಿಂತ್ಯ ನಿರ್ಗುಣ ಶಬ್ದವಾಚ್ಯನು ಆತನೇ ಇದು ಮಹೋಪನಿಷದ್ವಾಕ್ಯವು.

2. ಶಮೂನಂ ಕುರುತೇ ವಿಷ್ಣುರದೃಶ್ಯಃ ಸನ್ಪರಃಸ್ವಯಂ ।
ತಸ್ಮಾಚ್ಛೂನ್ಯ ಇತಿಪ್ರೋಕ್ತಸ್ತೋದನಾತ್ತುಚ್ಛ ಉಚ್ಯತೆ ।
ನೈಷಭಾವಯಿತುಂ ಯೋಗ್ಯಃ ಕೇನಚಿತ್ಪುರುಷೋತ್ತಮಃ ।
ಅತೋಽಭಾವಂ ವದಂತ್ಯೇನಂ ನಾಶ್ಯತ್ವಾನ್ನಾಶ ಇತ್ಯಪಿ ॥

ಪರಮಾತ್ಮನು ಸರ್ವೋತ್ತಮತ್ವ ಪೂರ್ಣ ಸುಖತ್ವದಿಂದ ಅನ್ಯರ ಸುಖವನ್ನು ತನ್ನ ಸುಖಕ್ಕಿಂತಲೂ ಕಮ್ಮಿ ಪ್ರಮಾಣದ್ದನ್ನಾಗಿ ಮಾಡುವನು ಶೂನ್ಯ ಶಬ್ದ ವಾಚ್ಯವು ತೋದನಾತ್ ದುಃಖಕರ್ತೃತ್ವಾತ್-ತದ್ ಶಬ್ದ ವಾಚ್ಯ ದುರ್ಜನರಿಂದ ಕಾಣಲ್ಪಡದವನಾದರೂ ಸ್ಥಿತಿ ಇಲ್ಲದವನಲ್ಲ. ಆದ್ದರಿಂದ "ತುಚ್ಛ" ಶಬ್ದವಾಚ್ಯನು. ಶ್ರೀವಿಷ್ಣುವು ಕಾರಣದಿಂದಲೂ ಅನಂತ್ಯದಿಂದಲೂ ಪುರುಷೋತ್ತಮನು ಸಾಕಲ್ಯೇನ ಯಾರಿಂದಲೂ ಭಾವಿಸಲಸಾಧ್ಯನಾದ್ದರಿಂದ ಅಭಾವ್ಯನು.

3. ಸರ್ವಸ್ಯ ತದಧೀನತ್ವಾತ್ತತ್ತಚ್ಛಬ್ದಾಭಿಧೇಯತಾ ।
ಅನ್ಯೇಷಾಂ ವ್ಯವಹಾರಾರ್ಥಮಿಷ್ಯತೇ ವ್ಯವಹರ್ತೃಭಿಃ
ಇತಿ ಮಹಾಕೌರ್ಮೇ ॥

ಅಸತ್ಶೂನ್ಯಾದಿ ಶಬ್ದ ಪ್ರವೃತ್ತಿ ನಿಮಿತ್ತದಿಂದ ತನ್ನ ಮತ್ತು ಅನ್ಯ ವಸ್ತುಗಳ ವಾಚ್ಯ ಸರ್ವಶಬ್ದಆತನ ಅಧೀನವಾದ್ದರಿಂದ ಆತನೆಂಬೇ ಹೇಳಲ್ಪಡುವುವು ಮಿಕ್ಕ ವಸ್ತುಗಳಲ್ಲಿ ವ್ಯವಹಾರಾರ್ಥಕ್ಕಾಗಿ ಉಪಯೋಗ ಮಾತ್ರ.

4. ಏತೇನ ತದಧೀನತ್ವಾದುಕ್ತಯುಕ್ತಿ ಸಮುದಾಯೇನ ॥

ಸರ್ವ ಶಬ್ದಗಳೂ ಆತನ ಅಧೀನವಾಗಿ ಸ್ವಾಧೀನವಾಗಿರುವುದರಿಂದ ಅವನಂತೆ

ಯೋ ವಾಚ್ಯವು ಎಂದು ವಾಕ್ಯವ್ರ

**5. ಅವಧಾರಣಾರ್ಥಂ ಸರ್ವಸ್ಯಾಪ್ಯುಕ್ತಸ್ಯಾಧ್ಯಾಯ ಮೂಲತಃ ॥**

ಅಧ್ಯಾಯ ಪ್ರಾರಂಭದಿಂದ ಈ ಮುಕ್ತಾಯದವರೆವಿಗೂ ಹೇಳಿರುವ ವಾಕ್ಯಗಳು ನಿರ್ಣಯಕ್ಕೆ ಸಂಬಂಧವುಳ್ಳವುಗಳೆಂದು ಹೇಳಲು ಅಧ್ಯಾಯಕೊನೆಯಲ್ಲಿದ್ವಿರುಕ್ತಿಯು

**6. ದ್ವಿರುಕ್ತಿಂ ಕುರ್ವತೇ ಪ್ರಾಜ್ಞಾ ಅಧ್ಯಾಯಾಂತೇ ವಿನಿರ್ಣಯೇ**

ಪ್ರಾಜ್ಞರು ಈ ಅಧ್ಯಾಯೋಕ್ತ ಸರ್ವ ವಿಷಯಗಳೂ ನಿರ್ಣಯ ಮಾಡಲ್ಪಟ್ಟವುಗಳು ಎಂದು ತಿಳಿಸಲು ಕೊನೆಯಲ್ಲಿ ದ್ವಿರುಕ್ತಿ ಪ್ರಯೋಗವನ್ನು ಮಾಡುವರು.

– ಇತಿ ಏತೇನ ಸರ್ವೇವ್ಯಾಖ್ಯಾತಾಧಿಕರಣವು –

**ಪ್ರಥಮಾಧ್ಯಾಯಸ್ಯ ಚತುರ್ಥಪಾದಃ ಸಂಪೂರ್ಣಃ**

**– ಪ್ರಥಮೋಧ್ಯಾಯಸ್ಸಮಾಪ್ತಃ –**

॥ ಶ್ರೀ ಕೃಷ್ಣಾರ್ಪಣಮಸ್ತು ॥

ಶ್ರೀ ಗುರುಭ್ಯೋ ನಮಃ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ ।

# ಶ್ರೀಮದ್ ಬ್ರಹ್ಮಸೂತ್ರಾಣಿ

## ಶ್ರೀ ಜಗನ್ನಾಥಯತಿ ಕೃತ ದೀಪಿಕಾನುಸಾರಿಣೀ

### ಶ್ರೀಮನ್ಮಧ್ವಭಾಷ್ಯಸ್ಯ ಕರ್ನಾಟ ಭಾಷಾ–ವಿವೃತಿಃ

## ದ್ವಿತೀಯಃ ಅವಿರೋಧಾಧ್ಯಾಯಃ

॥ ಶ್ರೀ ಗುರುಭ್ಯೋನಮಃ ಹರಿಃ ಓಂ ॥

# ಬ್ರಹ್ಮ ಸೂತ್ರ ಭಾಷ್ಯ – ದ್ವಿತೀಯಾಧ್ಯಾಯಃ

ಹಿಂದಿನ ಪ್ರಥಮಾಧ್ಯಾಯದಲ್ಲಿ ಶ್ರೀಮನ್ನಾರಾಯಣನಿಗೆ ಸಮಸ್ತ ವೇದ ವಾಕ್ಯಗಳ ಸಮನ್ವಯದಿಂದ ಜಗತ್ಕಾರಣತ್ವವು ಸಮರ್ಥನ ಮಾಡಲ್ಪಟ್ಟಿತು. ಈ ನಿರೂಪಣೆಗೆ ಯುಕ್ತ್ಯಾದಿಗಳಿಂದ ವಿರೋಧವಿಲ್ಲದಿರುವುದನ್ನು ಸೂತ್ರಕಾರರು ಈ ಎರಡನೇ ಅಧ್ಯಾಯದಲ್ಲಿ ಸಮರ್ಥನ ಮಾಡುವರು. ಪ್ರಥಮ ಪಾದದಲ್ಲಿ ಸ್ಮೃತಿ ವಿರೋಧದ ಪರಿಹಾರವು.

## – ಸ್ಮೃತ್ಯಧಿಕರಣಂ –

ಸ್ಮೃತಿಗಳೆಂದರೆ ಅಲೌಕಿಕಾರ್ಥ ವಿಷಯಗಳಲ್ಲಿ ಆಪ್ತವಾಕ್ಯಗಳಾದ ಪಾಶುಪತಾದಿ ಸ್ಮೃತಿಗಳು.

**1. ಉಕ್ತೇಽರ್ಥೇಽವಿರೋಧಂ ದರ್ಶಯತ್ಯನೇನಾಧ್ಯಾಯೇನ ।
ಪ್ರಥಮಪಾದೇ ಯುಕ್ತ್ಯ ವಿರೋಧಂ । ಪ್ರಥಮತಃ ಸ್ಮೃತ್ಯ
ವಿರೋಧಂ ದರ್ಶಯತಿ ॥**

ಪಾಶುಪತಾದಿ ಸ್ಮೃತಿಗಳಲ್ಲಿ ಜಗತ್ಕರ್ತೃತ್ವ ವಿಷಯದಲ್ಲಿ ಸ್ವಲ್ಪವೂ ಅವಕಾಶವಿಲ್ಲದ ರೀತಿಯಲ್ಲಿ ರುದ್ರಾದಿಗಳಲ್ಲಿ ಜಗತ್ಕರ್ತೃತ್ವವು ಹೇಳಲ್ಪಡುವುದರಿಂದ ಶ್ರೀವಿಷ್ಣುವಿಗೆ ಜಗ

ತ್ಕಾರಣತ್ವ ವಿಷಯದಲ್ಲಿ ಸಂದೇಹವು ಪ್ರಸಂಗವು ಆದರೆ ಶೃತಿಗಗಳಿಂದಲೂ ಶ್ರೇಷ್ಠ ರಾದ ಅನ್ಯ ಜ್ಞಾನಿಗಳಿಂದ ಪ್ರಣೀತವಾದ ಸ್ಮೃತಿಗಳಿಂದಲೂ ಮತ್ತು ಪ್ರಬಲ ಪ್ರಮಾಣವಾದ ಪಂಚರಾತ್ರಾದಿ ಸ್ಮೃತಿಗಳಿಂದಲೂ ರುದ್ರಾದಿಗಳಲ್ಲಿ ಲೋಕ ಕರ್ತೃತ್ವ ವಿಷಯದಲ್ಲಿ ಸ್ವಲ್ಪವೂ ಅವಕಾಶವಿಲ್ಲದೆ ಶೃವಾಗಮಗಳಿಗೆ ಪ್ರಬಲ ದೋಷ ಉಂಟಾಗುವ ಪ್ರಸಂಗದಿಂದ ಶ್ರೀವಿಷ್ಣುವೇ ಜಗತ್ಕರ್ತೃವೆಂದು ಸಿದ್ಧಿಸುತ್ತದೆ.

## ಸೂ|| ಓಂ|| ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷಪ್ರಸಂಗಾತ್ ಓಂ|| 1

ಸರ್ವಜ್ಞಾ ಹಿ ರುದ್ರಾದಯಃ|ಅತಸ್ತೇಷಾಂ ವಚನವಿರೋಧೇಽಪ್ರಾಮಾಣ್ಯಮೇವ ಸ್ಯಾದಿತಿ ಚೇತ್ । ನ. ಅನ್ಯ ಸ್ಮೃತೀನಾಂ ವಿಷ್ವಾವಾದಿ ಭಿರ್ನಿತರಾಂ ಸರ್ವಜ್ಞೈರೇವ ಕೃತತ್ವಾಚ್ಛೃತೇರಾಧಿಕ್ಯಂಚ ಸಿಧ್ಯತಿ ।

ಅನವಕಾಶ ಪದದಿಂದ ಸರ್ವಜ್ಞರಾದ ಜಗತ್ತಿಗೆ ಹಿತೋಪದೇಶಕರಾದ ರುದ್ರ, ಕಪಿಲ, ಕಮಲಾಸನಾದಿಗಳಿಂದ ಪ್ರಣೀತವಾದ ಸ್ಮೃತಿಗಳು ಆಪ್ತಿಮೂಲಕ ಪ್ರಮಾಣಗಳಾಗಿ ಈ ಸ್ಮೃತಿಗಳಿಗೆ ವಿರೋಧವನ್ನು ಹೇಳುವ ಶ್ರೀವಿಷ್ಣು ಪ್ರತಿಪಾದಕ ಶೃತಿಗಳು ಅಪ್ರಮಾಣಗಳೆಂದು ಶ್ರೀವಿಷ್ಣು ವಿಷಯಕವಾಗಿ ಜಿಜ್ಞಾಸೆಯು ಯುಕ್ತವಲ್ಲವೆಂದು ಪೂರ್ವ ಪಕ್ಷವು. ಹಾಗಲ್ಲ ಶ್ರೀವಿಷ್ಣುವೇ ಜಗತ್ಕರ್ತೃತ್ವ ಧರ್ಮವುಳ್ಳವನು. ರುದ್ರಾದಿಗಳಿಗಿಂತಲೂ ಶ್ರೇಷ್ಠ ಸರ್ವಜ್ಞರಾದ ಜ್ಞಾನಿಗಳಿಂದ ಮಾಡಲ್ಪಟ್ಟ ಸ್ಮೃತಿಗಳು ಶ್ರೀವಿಷ್ಣುವನ್ನೇ ಜಗತ್ಕಾರಣವನ್ನಾಗಿ ಹೇಳುವುದರಿಂದಲೂ, ಶೃತಿಗಳಿಗೆ ಅನುಸಾರವಾಗಿ ಅರ್ಥ ಮಾಡಲು ಸಾಧ್ಯವಾದ್ದರಿಂದ ಶ್ರೇಷ್ಠ ಪ್ರಮಾಣಗಳಾಗಿ ಶ್ರೀವಿಷ್ಣುವೇ ಜಗತ್ಕಾರಣನೆಂದು ಸಿದ್ಧಪಡಿಸುತ್ತವೆ.

## ಸೂ|| ಓಂ|| ಇತರೇಷಾಂ ಚಾನುಪಲಬ್ಧೇಃ ಓಂ || 2

5. **ಇತರೇಷಾಂ ತಾಸು ಸ್ಮೃತಿಷೂಕ್ತಾನಾಂ ಫಲಾದೀನಾಂ ಪ್ರತ್ಯಕ್ಷತೋಽನುಪಲಬ್ಧೇರಪ್ರಾಮಾಣ್ಯಂ ತಾಸಾಂಯುಕ್ತಂ । ಚಶಬ್ದೇನ ಭಾಗೋಪಲಬ್ಧಿರಂಗೀಕೃತಾ ||**

ಶ್ರೀವಿಷ್ಣುವಿನ ಸರ್ವೋತ್ತಮತ್ವ ಶೃತಿಗಳು ಮತ್ತು ಸ್ಮೃತಿಗಳಲ್ಲಿ ಹೇಳಲ್ಪಡುವ ಶ್ರೀವಿಷ್ಣು ಜಗತ್ಕರ್ತೃತ್ವವು ಯುಕ್ತವಲ್ಲ. ಸರ್ವಜ್ಞರಾದಿ ರುದ್ರಾದಿಗಳಿಂದ ಪ್ರಣೀತ ವಾದ ಪಾಶುಪತಾದಿ ಸ್ಮೃತಿಗಳಿಗೆ ವಿರೋಧ ಬರುತ್ತದೆ ಹಾಗೆ ಹೇಳಲಾಗದು ಎಂದರೆ ಪಾಶುಪತಾದಿ ಶೃತಿಯಲ್ಲಿ ಹೇಳಿದಂತೆ ಅನುಷ್ಠಾನದಿಂದಲೂ ಪ್ರತ್ಯಕ್ಷವಾದ ಶುಭಾ ಶುಭಫಲಗಳು ಪ್ರಾಪ್ತಿಯು ಕ್ಲಿಷ್ಟವಾಗಿ ಕಾಣದಿರುವುದರಿಂದಲೇ ಅವುಗಳಲ್ಲಿ ಹೇಳಿರುವುದು ಅಪ್ರಮಾಣವು ಅಲ್ಪ ಸ್ವಲ್ಪ ಫಲ ದರ್ಶನವಾದರೂ ಪೂರ್ಣಫಲ ಪ್ರಾಪ್ತಿಯಿಲ್ಲದ್ದರಿಂದ ಅಪ್ರಾಮಾಣ್ಯವೇ.

## ಸೂ|| ಓಂ ಏತೇನ ಯೋಗಃ ಪ್ರತ್ಯುಕ್ತಃ ಓಂ|| 3

ಯೋಗಫಲಂ ಪ್ರತ್ಯಕ್ಷೋಪ ಭ್ಯಮಿತಿನ ಮಂತವ್ಯಂ ।
ಉಕ್ತಾಭ್ಯಾಸೇತತ್ಕಾಲ ಏವ ಫಲಾದೃಷ್ಟೇಃ ॥

ಹಿಂದಿನ ಸೂತ್ರದಲ್ಲಿ ಹೇಳಿದ ಅಲ್ಪ ಫಲದರ್ಶನವು ಪ್ರಮಾಣವಲ್ಲದ್ದರಿಂದ ಅದಕ್ಕಾಗಿ ಯೋಗ ಶಾಸ್ತ್ರವೂ ನಿಷೇಧಿಸಲ್ಪಡುತ್ತದೆ.

ಯೋಗ ಶಾಸ್ತ್ರಾನುಷ್ಠಾನದಿಂದ ಅತ್ಯಲ್ಪ ಫಲವಾದ ಸ್ವೇದಾದಿ ಫಲಗಳು ದೃಷ್ಟವಾದರೂ ಆದರಲ್ಲಿ ಹೇಳಿರುವ ಅತೀಂದ್ರಿಯ ವಿಷಯಕ ವಿಶಿಷ್ಟ ಫಲ ದರ್ಶನಾ ಭಾವದಿಂದ ಆಪ್ತಪ್ರಣೀತವಾ ದಾಗ್ಯೋ ಸೂಕ್ತವಲ್ಲವು (ನಿರಸ್ತವು)

– ಇತಿ ಸ್ಮೃತ್ಯಧಿಕರಣಂ –

### – ನವಿಲಕ್ಷಣತ್ವಾಧಿಕರಣಂ –

ಈ ಅಧಿಕರಣದಲ್ಲಿ ಶ್ರೀವಿಷ್ಣುವಿನ ಜಗತ್ಕಾರಣತ್ವಕ್ಕೆ ಪ್ರಮಾಣತ್ವೇನ ಹೇಳಿರುವ ವೇದ ವಾಕ್ಯಾದಿ ಪ್ರಮಾಣಗಳಿಗೆ ಯುಕ್ತಿ ವಿರೋಧವು ಪರಿಹರಿಸಲ್ಪಡುತ್ತದೆ.

## ಸೂ|| ಓಂ|| ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ || 4

ಶೃತಿ ಮತ್ತು ತದನಾಸಾರಿ ಸ್ಮೃತಿಗಳಲ್ಲಿ ಹೇಳಿರುವ ವಿಷಯಗಳು ಶೈವಾದಿ ಸ್ಮೃತಿಗಳಲ್ಲಿ ಹೇಳಿರುವ ವಿಷಯಗಳಂತೆ ಅಪ್ರಾಮಾಣಿಕವಲ್ಲ ವಿಲಕ್ಷಣತ್ವದಿಂದ ಸ್ವತಃ ಪ್ರಮಾಣವಾದ ವೇದ ಶೃತಿಗಳ ಸಮರ್ಥನವು "ವಾಚಾ ವಿರೂಪ ನಿತ್ಯಯಾ" ಎಂಬ ಶೃತಿಯಿಂದ ಸಿದ್ಧಿಸಿರುವುದರಿಂದ ಮತ್ತು ವಿಷ್ಣು ಸರ್ವೋತ್ತಮತ್ವವನ್ನು ಸಮರ್ಥನ ಮಾಡುವ ಸ್ಮೃತಿ ವಾಕ್ಯಗಳು ಶೃತಿ ವಾಕ್ಯಗಳಿಗೆ ಅನುಸಾರವಾಗಿರುವುದರಿಂದಲೂ ಪ್ರಮಾಣಗಳೇ.

ಶೃತಿಯಲ್ಲಿ ಮತ್ತು ತದನುಸಾರಿ ಸ್ಮೃತಿಯಲ್ಲಿ ಹೇಳಿರುವ ಕಾರೀರ್ಯಾದಿ ಯಜ್ಞಗಳು ವಿಧಿವತ್ತಾಗಿ ಆಚರಿಸಲ್ಪಟ್ಟರೂ ವೃಷ್ಟ್ಯಾದಿ ಫಲಗಳು ನಿಯತವಾಗಿ ದೃಶ್ಯವಲ್ಲದ್ದರಿಂದ ಪ್ರಾಮಾಣ್ಯವು ಹೇಗೆ ಎಂಬ ಪ್ರಶ್ನೆಗೆ ಅವುಗಳ ವಿಲಕ್ಷಣ ಸ್ವಭಾವ ದಿಂದ ಎಂದು ಉತ್ತರವು ನಿತ್ಯಗಳಾದ ವೇದ ಶೃತಿಗಳಿಗೆ ಅನುಸಾರಿತ್ವ ಲಕ್ಷಣ ದಿಂದಲೇ ಪ್ರಮಾಣವು ಶೈವಾದಿ ಶೃತಿಗಳು ಹಾಗಲ್ಲ.

2. **ನೈವ ಶೃತೇಸ್ತದನುಸಾರಿಸ್ಮೃತೇಶ್ಚತದುಕ್ತಾನುಪಲಬ್ಧೇರ ಪ್ರಾಮಾಣ್ಯಂ । ವಿಲಕ್ಷಣತ್ವಾತ್ । ನಿತ್ಯತ್ವಾತ್ತದನುಸಾರಿತ್ವಾಚ ನ ಹಿ ನಿತ್ಯೇ ದೋಷಾಃ ಕಲ್ಪ್ಯಾಃ । ಸ್ವತಶ್ಚ ಪ್ರಾಮಾಣ್ಯಂ । ಅನ್ಯಥಾऽನವಸ್ಥಿತೇಃ ||**

ಶೃತಿ ಮತ್ತು ತದನುಸಾರಿ ಸ್ಮೃತಿ ವಿಷಯಗಳು ಸ್ವತಃ ಪ್ರಮಾಣಗಳು ಅಂದರೆ ಯಥಾರ್ಥ ಜ್ಞಾನ ಜನಕವಾದವುಗಳು. ಅವುಗಳಲ್ಲಿ ಹೇಳಿದ್ದ ಫಲಗಳ ದರ್ಶನವಿಲ್ಲದಿದ್ದರೂಬಾಧಕವಿಲ್ಲ, ಶೃತಿಗಳಿಗೆ ಸ್ವತಃ ಪ್ರಾಮಾಣ್ಯವನ್ನು ಅಂಗೀಕರಿಸದಿದ್ದಲ್ಲಿ ಅದೃಶ್ಯ ವಿಷಯಗಳಲ್ಲಿ ಬೇರೆ ಪ್ರಮಾಣಗಳು ಇಲ್ಲವಾದ್ದರಿಂದ ಸಂವಾದ ರೂಪಕ ಜಿಜ್ಞಾಸ್ಯವು ಅನ್ಯತ್ರ ಲಭ್ಯವಾಗುವುದಿಲ್ಲ. ಆದ್ದರಿಂದ ವೇದಕ್ಕೆ ಪ್ರಾಮಾಣ್ಯವು ಸರ್ವ ಜಿಜ್ಞಾಸುಗಳಿಂದಲೂ ಅಂಗೀಕಾರ್ಯವು ಹಾಗೂ ಅನಿವಾರ್ಯವು.

3. **ನ ಚಕ್ಷುರ್ನ ಶ್ರೋತ್ರಂ ನ ತರ್ಕೋ ನ ಸ್ಮೃತಿರ್ವೇದಾಹ್ಯೇವೈನಂ ವೇದಯಂತೀತಿ ಭಾಲ್ಲವೇಯಶ್ರುತೇಶ್ಚ ||**

ವೇದ ವಾಕ್ಯಗಳಿಗೆ ಪ್ರಾಮಾಣ್ಯವು ಸ್ವತಃ ವೇದದಿಂದಲೇ. ಶುಷ್ಕಾನುಮಾನ ಮತ್ತು ವೇದಕ್ಕೆ ವ್ಯತಿರಿಕ್ತವಾದ ಸ್ಮೃತಿಗಳು ಶ್ರೀಪರಮಾತ್ಮನನ್ನು ಪ್ರಾಮಾಣ್ಯದಿಂದ ತಿಳಿಸಲಾರವು. ಚತುರ್ವೇದಗಳಲ್ಲಿ ಹೇಳಿರುವ ಶೃತಿಗಳು ಪರಮಾತ್ಮನನ್ನು ಸ್ವತಃ ತಿಳಿಸುವುವು ಸ್ವತಃ ತಿಳಿವಳಿಕೆಯನ್ನು ಕೊಡುವುದರಿಂದಲೇ ವೇದ ಎಂಬ ಹೆಸರನ್ನು ಹೊಂದಿರುವ ವಾಕ್ಯಗಳು ಇತರ ಸಂವಾದಾಪೇಕ್ಷೆಯಿಲ್ಲದೆಯೇ ಪ್ರಮಾಣಸಾಧಕಗಳು.

**4. ನಿತ್ಯತ್ವಂ ಚ ಶಬ್ದಾದೇವ ಪ್ರತೀಯತೆ ವಾಚಾ ವಿರೂಪನಿತ್ಯ ಯೇತ್ಯಾದೇಃ ಅನಾದಿನಿಧನಾನಿತ್ಯೇತಿ ಚ ಸ್ಮೃತಿಃ ||**

ಇತರ ಜಿಜ್ಞಾಸುಗಳಿಂದಲೂ ವೇದಕ್ಕೆ ಪ್ರಾಮಾಣ್ಯವು ಅಂಗೀಕೃತವಾದ್ದರಿಂದ ಸಂವಾದ ರೂಪ ಇತರಪ್ರಾಮಾಣ್ಯವನ್ನು ಹುಡುಕಬೇಕಾಗಿಲ್ಲ ಋಚಸ್ಸಾಮಾನಿ ಜಿಜ್ಞಾರೆ" ಯೆಂಬ ವಾಕ್ಯದಲ್ಲಿ ಶೃತಿಗೆ ಉತ್ಪತ್ತಿಯು ಗೋಚರಿಸಿದರೂ "ಅನಾದಿನಿಧನಾ ನಿತ್ಯಾ" ಇತ್ಯಾದಿ ಸ್ಮೃತಿಯಿಂದ ಸಮರ್ಥಿತವಾದ "ವಾಚಾ ವಿರೂಪ ನಿತ್ಯಯಾ" "ನಚಕ್ಷು" ಇತ್ಯಾದಿ ಶೃತಿಗಳು ಪ್ರಮಾಣ ಸಿದ್ಧಿಯನ್ನು ಹೊಂದಿಸಿಕೊಡುವುವು. ಪಾಶುಪತಾದಿ ಸ್ಮೃತಿಗಳು ಹಾಗಲ್ಲವಾದ್ದರಿಂದ ಅಪ್ರಾಮಾಣ್ಯವುಳ್ಳವುಗಳು.

## ಸೂ|| ಓಂ|| ದೃಶ್ಯತೇ ತು ಓಂ|| 5

ಶೃತಿಗಳಲ್ಲಿ ಹೇಳಲ್ಪಟ್ಟ ಯಜ್ಞಾದಿ ಕರ್ಮಗಳ ಸೂಕ್ತ ಆಚರಣೆಯಿಂದ ಯೋಗ್ಯ ಅಧಿಕಾರಿಗಳಿಗೆ ಅವುಗಳಲ್ಲಿ ಹೇಳಿರುವ ಫಲಗಳು ಲಭ್ಯವಾಗಿರುವುದರಿಂದಲೂ ಶೃತಿಗಳು ಪ್ರಮಾಣಗಳೇ.

ಅಧಿಕಾರಿಣಾಂ ಫಲಂ | ಭವಿಷ್ಯತ್ಪುರಾಣೇಚ-
ಋಗ್ಯಜುಸ್ಸಾಮಾಥರ್ವಾಖ್ಯಾ ಮೂಲ ರಾಮಾಯಣಂತಥಾ |
ಭಾರತಂ ಪಂಚರಾತ್ರಂಚ ವೇದಾ ಇತ್ಯೇವ ಶಬ್ದಿತಾಃ ||
ಪುರಾಣಾನಿಚ ಯಾ ನೀಹ ವೈಷ್ಣವಾನಿ ವಿದೋವಿದುಃ |
ಸ್ವತಃ ಪ್ರಾಮಾಣ್ಯಮೇತೇಷಾಂ ನಾತ್ರ ಕಿಂಚಿದ್ವಿಚಾರ್ಯತೆ ||

ಭವಿಷ್ಯತ್ಪುರಾಣದಲ್ಲಿ ಹೇಗೆ ಹೇಳಿದೆ. ಋಕ್, ಯಜುಸ್, ಸಾಮ, ಅಥರ್ವ ವೇದಭಾಗಗಳಲ್ಲಿ ಹೇಳಿರುವ ವೇದ ವಾಕ್ಯಗಳು, ಮೂಲ ರಾಮಾಯಣ ಗ್ರಂಥವು,

ಭಾರತ, ಪುರಾಣವೂ, ಪಂಚರಾತ್ರಾಗಮವೂ ವೇದವೆಂದೇ ಹೇಳಲ್ಪಡುವುದು. ಜ್ಞಾನಿಗಳು ಯಾವ ಪುರಾಣಗಳನ್ನು ಸರ್ವೋತ್ತಮತ್ವ ಬೋಧಕವಾಗಿ ತಿಳಿದಿರುವರೊ ಆ ಗ್ರಂಥಗಳಲ್ಲಿ ಹೇಳಿದ ವಿಷಯಗಳು ಸ್ವತಃ ಪ್ರಮಾಣ ರೂಪಗಳಾಗಿ ಬೇರೆ ವಿಚಾರ ಮಾಡಬೇಕಾಗಿಲ್ಲ.

6. **ಯದ್ಯೇಷೂಕ್ತಂ ನ ದೃಶ್ಯೇತಪೂರ್ವತರಾತ್ಮ ಕಾರಣಂ**
**ನಾಪ್ರಾಮಾಣ್ಯಂ ಭವೇದೇಷಾಂ ದೃಶ್ಯತೇ ಹ್ಯಧಿಕಾರಃ ||**

ಈಗ್ರಂಥಗಳಲ್ಲಿ ಹೇಳಿದ ಫಲಾದಿಗಳು ಕಾಣದಿದ್ದಲ್ಲಿ ಅದಕ್ಕೆ ಕಾರಣವು ಕರ್ತೃಗಳ ಪೂರ್ವಜನ್ಮದ ಕರ್ಮಗಳ ದೋಷ ಕರ್ತೃಗಳ ಪೂರ್ವಜನ್ಮ ಕರ್ಮಫಲಗಳ ಅನಧಿಕಾರತ್ವದಿಂದ ಫಲಗಳ ದರ್ಶನವಿಲ್ಲವಾಗುತ್ತದೆ ಫಲಶೃತಿಗಳ ಅಪ್ರಮಾಣದಿಂದಲ್ಲ. ಯುಕ್ತ ಅಧಿಕಾರಿಯು ಸೂಕ್ತ ರೀತಿಯಲ್ಲಿ ಕರ್ಮಾಚರಣವನ್ನು ಮಾಡಿದಲ್ಲಿ ಉಕ್ತ ಫಲವನ್ನು ಹೊಂದಿಯೇ ಹೊಂದುವನು.

7. **ಇತಃ ಪ್ರಾಮಾಣ್ಯಮನ್ಯೇಷಾಂ ನ ಸ್ವತಸ್ತು ಕಥಂಚನ |**
**ಅದೃಶ್ಯೋಕ್ತೌ ತತಸ್ತೇಷಾಮಪ್ರಾಮಾಣ್ಯಂ ನ ಸಂಶಯ**
**ಇತಿ ||**

ಪಾಶುಪತಾದಿ ಸ್ಮೃತಿಗಳಲ್ಲಿ ಹೇಳಿದ ಫಲ ಶೃತಿಗಳಲ್ಲಿ ಹೇಳಿದ ಫಲಗಳು ಅದೃಶ್ಯತ್ವ ರೂಪವಾಗಿ ಅನುಪಲಬ್ಧಿ ಕಾರಣದಿಂದ ಅವುಗಳು ಅಪ್ರಾಮಾಣ್ಯಗಳೇ ಸಂಶಯವಿಲ್ಲ.

– ಇತಿ ನವಿಲಕ್ಷಣತ್ವಾಧಿಕರಣವು –

## – ಅಭಿಮಾನ್ಯಧಿಕರಣವು –

ಈ ಅಧಿಕರಣದಲ್ಲಿ ಶ್ರೀವಿಷ್ಣುವಿಗೆ ಜಗತ್ಕರ್ತೃತ್ವ ಪ್ರತಿಪಾದಕವಾದ ವಾಕ್ಯಗಳನ್ನು ದೃಢೀಕರಿಸಲಾಗುತ್ತದೆ.

1 ಮೃದಬ್ರವೀತ್ 2 ತಾ ಆಪೋಽಬ್ರುವನ್ 3 ತಾ ಆಪ ಐಕ್ಷಂತ 4. ತತ್ತೇಜೋ ಐಕ್ಷರ ಇತ್ಯಾದಿ ಛಾಂದೋಗ್ಯ ವಾಕ್ಯಗಳು 5. ಓಷಧಯಃ ಸಂವದಂತೆ ಸೋಮೇನ ಸಹರಾಜ್ಞಾ (ಋ 10-97-22) 6 ಪ್ರಯೋಗ್ರಾವಾಣಃ ಸವಿತಾ ದೇವಸ್ತುವತು ಧರ್ಮಣ (ಋ 10-176-1)

ಇತ್ಯಾದಿ ವೇದ ವಾಕ್ಯಗಳಲ್ಲಿ "ಕರ್ತೃತ್ವ" ವಚನದಿಂದ ಮೃದಾದಿ ಜಡಪದಾರ್ಥಗಳು ಕರ್ತೃಗಳಾಗಿ ಹೇಳಲ್ಪಟ್ಟಿವೆ. ಆದರೆ ಅವುಗಳು ಜಡ ಪದಾರ್ಥಗಳಾದ್ದರಿಂದ ಕರ್ತೃತ್ವ ಧರ್ಮವಿಲ್ಲದ್ದರಿಂದ ಈವಾಕ್ಯಗಳು ಪ್ರಮಾಣಗಳಾಗಲಾರವು ಮತ್ತು ಈವೇದ ವಾಕ್ಯಗಳ ಅನೃತತ್ವದಿಂದ ಸರ್ವವೇದ ವಾಕ್ಯಗಳು ಅನೃತವಾದವುಗಳು ಎಂಬ ನ್ಯಾಯಾನುಮಾನದಿಂದ ವೇದಗಳು ಹೇಳುವ ಶ್ರೀವಿಷ್ಣು ಕರ್ತೃತ್ವವು ಅಪ್ರಮಾಣವು ಎಂದರೆ

ಅತೋ ಬ್ರವೀತ್— ಅದಕ್ಕಾಗಿ ಹೇಳಿದೆ.

## ಸೂ|| ಓಂ|| ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಓಂ|| 6

ಮೃದಾದ್ಯಭಿಮಾನಿ ದೇವತಾ ತತ್ರ ವ್ಯಪದಿಶ್ಯತೆ।

"ಮೃದಬ್ರವೀತ್" ಇತ್ಯಾದಿ ವಾಕ್ಯಗಳಲ್ಲಿ ಈಜಡ ಪದಾರ್ಥಾಭಿಮಾನಿದೇವತೆಯೇಕರ್ತೃತ್ವದಿಂದ ಹೇಳಲ್ಪಡುವುದು. ಜಡಪದಾರ್ಥಗಳಲ್ಲ. ಮೃತ್ತಿಕೆಯುಜಡವಾದ್ದರಿಂದ ಮಾತನಾಡಲು ಸಮರ್ಥವಲ್ಲ ಎಂಬ ನ್ಯಾಯದಿಂದ ವೇದ ವಾಕ್ಯಗಳಿಗೆ ಅಪ್ರಾಮಾಣ್ಯವನ್ನು ಹೇಳುವುದು ಸರಿಯಲ್ಲ ಜಡವಸ್ತುಗಳು ಅಭಿಮಾನಿ ದೇವತೆಗಳಿ ಅನ್ಯವಸ್ತ್ವಧಿಷ್ಠಾನವೂ ವ್ಯಕ್ತಿತ್ವವೂ ಅನೇಕ ಅಭಿಮಾನ ವಸ್ತುಗಳಲ್ಲಿರುವಿಕೆಯೇ ಮುಂತಾದ ಧರ್ಮಗಳಿಂದ ವಿಶೇಷ ಸಾಮರ್ಥ್ಯದಿಂದ ಯುಕ್ತವು. ಜಡ ಪದಾರ್ಥವನ್ನನುಸರಿಸಿ ಗಮನಾದಿಗಳೂ ಗಮ್ಯ ವಸ್ತುಗಳಲ್ಲಿ ಅಭಿಮಾನ ವ್ಯಾಪ್ತಿಯಿಂದ ಅಧಿದೇವತೆಗಳಿಗೆ ಕೂಡುವುದರಿಂದ ವೇದ ವಾಕ್ಯಗಳು ಪ್ರಮಾಣವೇ.

3. **ತಾಸಾಂ ಚೇತರೇಭ್ಯೋ ವಿಶಿಷ್ಟಂ ಸಾಮರ್ಥ್ಯಮನುಗತಿಶ್ಚ**
**ಸರ್ವತ್ರ। ಅತಸ್ತಾಸಾಂ ಸರ್ವಮುಕ್ತಂ ಯುಜ್ಯತೇ ||**

ಅಭಿಮಾನಿ ದೇವತೆಗಳಿಗೆ ತಮ್ಮ ತಮ್ಮ ಅಭಿಮಾನ್ಯ ಜಡ ವಸ್ತುಗಳಲ್ಲಿ ವ್ಯಾಪ್ತಿಯೂ ಮತ್ತು ದೇಹತ್ವವೂ ಇವೆ. ಆ ಅಭಿಮಾನಿ ದೇವತೆಗಳಿಗೆ ಅದರ್ಶನತ್ವಾನುಕೂಲ ಅಂತರ್ಧಾನ ಶಕ್ತಿಯೂ ವಿಶೇಷವಾದ್ದರಿಂದ ದೋಷವಿಲ್ಲ. ಆದ್ದರಿಂದ ಜಡಗಳನ್ನು ಚೇತನಗಳಂತೆ ಹೇಳಿದ್ದರೂ ಅಭಿಮಾನಿ ದೇವತೆಗಳ ಪರವಾಗಿ ಸಾಧುವೆ.

## ಸೂ॥ ಓಂ॥ ದೃಶ್ಯತೇಚ ಓಂ॥ 7

ತಾಸಾಂ ಸಾಮರ್ಥ್ಯಂ ಮಹದ್ಭಿಃ ।

ಈ ಅಭಿಮಾನಿ ದೇವತೆಗಳ ಸಾಮರ್ಥ್ಯವನ್ನು ಯೋಗಿಗಳು ಕಂಡಿರುವುದರಿಂದಲೂ ಅವುಗಳ ಸಾಮರ್ಥ್ಯ ಸಿದ್ಧವು.

5. ಭವಿಷ್ಯತ್ಪುರಾಣದಲ್ಲಿ

ಪೃಥಿವ್ಯಾದ್ಯಭಿಮಾನಿನ್ಯೋ ದೇವತಾಃ ಪ್ರಥಿತೌಜಸಃ ।
ಅಚಿಂತ್ಯಾಶ್ಯಕ್ತಯಸ್ತಾಸಾಂ ದೃಶ್ಯಂತೇ ಮುನಿಭಿಶ್ಚ ತಾಃ ।
ತಾಶ್ಚಸರ್ವ ಗತಾ ನಿತ್ಯಂ ವಾಸುದೇವೈಕ ಸಂಶ್ರಯಾಃ ॥ ಇತಿ

ಪೃಥಿವ್ಯಾದ್ಯಭಿಮಾನಿ ದೇವತೆಗಳನ್ನು ಪ್ರಸಿದ್ಧ ಸಾಮರ್ಥ್ಯವುಳ್ಳವುಗಳನ್ನಾಗಿ ಜ್ಞಾನಿಗಳು ಪ್ರತ್ಯಕ್ಷದಿಂದಲೂ ಸಾಮರ್ಥ್ಯ ದರ್ಶನಗಳಿಂದಲೂ ತಿಳಿದಿದ್ದಾರೆ. ಈ ಅಭಿಮಾನಿ ದೇವತೆಗಳು ಅಚಿಂತ್ಯ ಶಕ್ತಿಯುಳ್ಳವರು ಮತ್ತು ವಾಸುದೇವನನ್ನೇ ಆಶ್ರಯವಾಗಿವುಳ್ಳವರು.

– ಇತಿ ಅಭಿಮಾನ್ಯಧಿಕರಣವು –

## - ಅಸದಧಿಕರಣವು -

ಈ ಅಧಿಕರಣದಲ್ಲಿ ಹಿಂದಿನ ಕಲ್ಪವು ಮುಗಿದ ನಂತರ ಮುಂದಿನ ಕಲ್ಪದ ಸೃಷ್ಟಿ ಪೂರ್ವದಲ್ಲಿ ಅಭಾವಾಖ್ಯ "ಅಸತ್" ನಿಂದ ಕರ್ತೃತ್ವ ರೂಪ ಸೃಷ್ಟಿಯು ನಿರಾಕರಿಸಲ್ಪಡುವುದು.

1 **ಅಸದೇವೇದಮಗ್ರ ಆಸೀತ್**(ಛಾ 6-2-1) **ಅಸತಃ ಸದಜಾಯತೇ ತ್ಯಾದಿನಾಽಸತಃ ಕಾರಣತ್ವೋಕ್ತೇರ್ವಿರೋಧ ಇತಿ ॥**

**ಅತೋವಕ್ತಿ**—ಆದಕ್ಕಾಗಿ ಹೇಳಿದೆ

ಈ ಮೇಲಿನ ವಾಕ್ಯಗಳಲ್ಲಿ ವಿಶ್ವ ಪ್ರಾಗಭಾವಕ್ಕೆ (ಅಸತಃ) ವಿಶ್ವ ಕರ್ತೃತ್ವವು ಹೇಳಲ್ಪಡುವುದರಿಂದ "ಯತೋವಾ" ವಾಕ್ಯದಲ್ಲಿ ಹೇಳಲ್ಪಟ್ಟ ವಿಷ್ಣು ಕರ್ತೃತ್ವವು ಯುಕ್ತವಲ್ಲ "ಅಸತ್" ವಿಶ್ವಕ್ಕೆ ಕಾರಣವೆಂದು ಹೇಳಿದೆ ಎಂದು ಅನುಮಾನವು. ಸಿದ್ಧಾಂತ ರೀತ್ಯ ಶೃತ್ಯರ್ಥವು ಹೀಗೆ -

ಜಗತ್ಸೃಷ್ಟಿಯ ಪೂರ್ವದಲ್ಲಿ ಶ್ರೀ ಪರಮಾತ್ಮನ ಹೊರ್ತು ಉತ್ತಮವಾದ ಬೇರೆ ಯಾವ ವಸ್ತುವೂ ಇಲ್ಲದ್ದರಿಂದ "ಅಸತ್" ಶಬ್ದೋಕ್ತ ಸರ್ವೋತ್ತಮ ಬ್ರಹ್ಮಮಾತ್ರವಿತ್ತು ಈ ಬ್ರಹ್ಮನಿಂದ "ಸನ್ನಾಮಕ ಮುಖ್ಯ ವಾಯುವು ಹುಟ್ಟಿತು. ಅದಿ ಸೃಷ್ಟಿಯಲ್ಲಿ ಬ್ರಹ್ಮನಿಂದ ದೇವತೆಗಳಲ್ಲಿ ಪ್ರಥಮನಾದ ಸನ್ನಾಮಕ ವಾಯು ದೇವರು ಹುಟ್ಟಿದರು.

### ಸೂ॥ ಓಂ॥ ಆಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ॥ ಓಂ॥ 8

ಪ್ರತಿಷೇಧ ಮಾತ್ರತ್ವಾನ್ನಾಸತಃ ಕಾರಣತ್ವಂ ಯುಕ್ತಂ ।

ಅಭಾವ ರೂಪ ಧರ್ಮದ್ವಾರಾ ಧರ್ಮ ಸ್ವರೂಪವೇ ನಿಷೇಧಿಸಲ್ಪಡುವುದರಿಂದ ಅಸತಃ "ಅಭಾವವು" ಕಾರಣತ್ವವಾಗಿ ಸಿದ್ಧಿಸುವುದಿಲ್ಲ. ಜಗತ್ಕರ್ತೃತ್ವ ವಿಷಯದಲ್ಲಿ ಈ ಯುಕ್ತಿಯು ಸಾಧುವಲ್ಲವಾಗಿ ಈಶ್ವರನೇ ಜಗತ್ಕರ್ತೃವು.

3 **ಅಸತಃ ಕಾರಣತ್ವಾದ್ಯುಕ್ತಿವಿರುದ್ಧಂ ವೇದವಾಕ್ಯಮಿತ್ಯೇತದತ್ರ ನಿಷಿಧ್ಯತೇ ॥**

"ಯತೋವಾ" ಇತ್ಯಾದಿ ವೇದ ವಾಕ್ಯಕ್ಕೆ ವಿಶ್ವ ಪ್ರಾಗಭಾವ ಕಾರಣ "ಅಸದೇವ ಎಂಬ ಯುಕ್ತಿಯಿಂದ "ಅಸನ್ಮತದ" ನಿಷೇಧವು ಅಲ್ಲದ ಶೂನ್ಯ ಮತದ್ದಲ್ಲ

4. **ಸರ್ವ ಶಬ್ದಾನಾಂ ಬ್ರಹ್ಮಣಿ ಸಮನ್ವಯೇಪಿ ತದಧೀನತ್ವಾದರ್ಥವದಿತ್ಯಾದಿನಾಽ ಮುಖ್ಯತ್ವೇನಾಂಗೀಕಾರಾದಸತಃ ಪ್ರಾಪ್ತಿಃ ॥ ತಥಾ ಶೃತಿ ಪ್ರಾಪ್ತ ಮೇವಾಸನ್ಮತಮತ್ರ ನಿಷಿಧ್ಯತೇ ॥**

ಸರ್ವಸಬ್ದಗಳ ಸಮನ್ವಯವನ್ನು ಬ್ರಹ್ಮನಲ್ಲಿ ಹೇಳಿದಾಗ್ಯೂ ಆ ಪರಮಾತ ಧರ್ಮದಿಂದ ಆ ಶಬ್ದಗಳು ಇತರರಲ್ಲಿ ಅಮುಖ್ಯವಾಗಿ ಹೇಳಲ್ಪಡುವವೆಂಬ ಅಂಗೀಕಾರದಿಂದ "ಅಸತಃ" ಎಂಬ ಧರ್ಮ ಪ್ರಾಪ್ತಿಯು. ಈ ಶೃತಿ ಪ್ರಾಪ್ತ ಅಸತ್ಕರ್ತೃತ್ವವು ಮಾತ್ರ ನಿಷೇಧಿಸಲ್ಪಡುವುದು. ಶೂನ್ಯ ಮತವು (ಅಭಾವಕರ್ತೃತ್ವ ದರ್ಶನದ ನಿಷೇಧವು) ಅನ್ಯತ್ರ ನಿಷೇಧಿಸಲ್ಪಟ್ಟಿದೆ.

5. **ಅರ್ಥಾದ್ಯುಕ್ತಿ ವಿರೋಧೋ ನಿರಾಕ್ರಿಯತೇ ॥**

ಜಗತ್ಕಾರಣತ್ವ ಶೃತಿಗೆ ಯುಕ್ತಿ ವಿರೋಧವು ಮಾತ್ರ ಇಲ್ಲಿ ನಿರಾಕೃತ.

## ಸೂ॥ ಓಂ॥ಅಸೀತ್ತೌತದ್ವತ್ಪ್ರಸಂಗಾದಸಮಂಜಸಂ ಓಂ॥ 10

ಪ್ರತಿ ಷೇಧ ಮಾತ್ರದಿಂದ ನಿಷೇಧವು ಯುಕ್ತಿಗೆ ವಿರೋಧವಾಗಿ ಅಸತ್ತಿಗೆ ಕರ್ತೃತ್ವವನ್ನು ಹೇಳಿರುವುದು ಯುಕ್ತವಲ್ಲ. ಶೃತಿಬಲದಿಂದ "ಅಭಾವಕ್ಕೆ" ಕರ್ತೃತ್ವವು ಸಾಧ್ಯವಾಗಬಹುದು ಎಂಬ ಅನುಮಾನವು ಸಾಧುವಲ್ಲ. ವಿಶ್ವ ಸೃಷ್ಟಿಯು ಪೂರ್ವದಲ್ಲಿ

ಅಭಾವದಿಂದ ಸರ್ವಕಾರ್ಯೋತ್ಪತ್ತಿಯು ಆಗುವುದಾದರೆ ಅಂತಹ ಪ್ರಸಂಗದಿಂದಲೇ ಕಾರ್ಯನಾಶವೂ ಆದಲ್ಲಿ ಕಾರಣ ಮಾತ್ರ ಉಳಿಯುವುದರಿಂದ "ಅಸತ್" ಭಾವದಿಂದ ಜಗದುತ್ಪತ್ತಿಯು ಉಂಟಾಗಬೇಕಾಗಿ ಸಮಂಜಸವಾಗದು.

ಅಸತ ಉತ್ಪತ್ತೌ ಪ್ರಳಯೇ ಸರ್ವಾಸತ್ವಮೇವಸ್ಯಾತ್ ॥

"ಅಸತ್" ನಿಂದ ಉತ್ಪತ್ತಿಯೆಂದಲ್ಲಿ ಪ್ರಳಯ ಕಾಲದಲ್ಲಿ ಎಲ್ಲವೂ "ಅಸತ್"ವೇ ಆಗಬೇಕಾಗುವುದು ಹಾಗಲ್ಲವಷ್ಟೆ

## ಸೂ॥ ಓಂ॥ ನ ತು ದೃಷ್ಟಾಂತಾಭಾವಾತ್ ಓಂ॥ 10।

ಪ್ರಳಯ ಕಾಲದಲ್ಲಿ ಸರ್ವಾಸತ್ವವು ಸಾಧುವಲ್ಲ. ಆಗ ಭಾವ ಪದಾರ್ಥಗಳಿಗೆ ಸಶೇಷ ಸ್ಥಿತಿಯು. ಲೋಕದಲ್ಲಿ ಅದರ ಶೇಷ ಪದಾರ್ಥವು ಕಂಡಿದೆ. ಪಟನಾಶ ವಾದರೂ ಅದರ ಪರಿಕರ ತಂತ್ವಾದಿಗಳು ಅವಶೇಷಗಳಾಗಿ ಕಾಣಲ್ಪಡುವುವು-

## ಸೂ॥ ಓಂ॥ ಸ್ವಪಕ್ಷದೋಷಾಚ್ಚ ಓಂ॥ 11

**8. ಪ್ರಲಯೇ ಸರ್ವಾಸತ್ವಭಾವೇ ದೃಷ್ಟಾಂತಾಭಾವಾದೇವ ನಯುಜ್ಯತೆ**
**ಸತ ಉತ್ಪತ್ತಿಃ ಸಶೇಷ ವಿನಾಶಶ್ಚ ಹಿ ಲೋಕೇದೃಷ್ಟಃ ॥**
ದೃಷ್ಟಾಂತಾಭಾವಾದೇವ

ಪ್ರಳಯದಲ್ಲಿ ಸರ್ವಾಸತ್ವವಾದಲ್ಲಿ ಅಂತಹದಕ್ಕೆ ದೃಷ್ಟಾಂತವೇ ಇಲ್ಲದ್ದರಿಂದ ದೋಷವಾಗಿ ಆ ಪಕ್ಷವು ಸೂಕ್ತವಲ್ಲ ಪ್ರತ್ಯಕ್ಷ ಮತ್ತು ಆಗಮ ವಾಕ್ಯಗಳ ಸಮರ್ಥನವಿಲ್ಲದ ಅನುಮಾನವು ಸಾಧುವಲ್ಲ.

## ಸೂ॥ ಓಂ॥ ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷ ಪ್ರಸಂಗಃ ಓಂ॥ 12

ಏತಾವಾನೇವತರ್ಕ ಇತಿ ಪ್ರತಿಷ್ಠಾಪಕ ಪ್ರಮಾಣಾಭವಾತ್ ಉಕ್ತಾ
ದನ್ಯಥಾಪ್ಯನುಮೇಯಂ ಇತಿ ಚೇತ್- ನ ಏವಂ ಸತಿ ಪ್ರಮಾಣ ಸಿದ್ಧೇಪಿ
ಮೋಕ್ಷೇನ್ಯ ಥಾನುಮೇಯತ್ವಾದ ನಿರ್ಮೋಕ್ಷ ಪ್ರಸಂಗಃ ।

ದೃಷ್ಟಾಂತವಿಲ್ಲದ ತರ್ಕವು ವಿಷಯವನ್ನು ಸ್ಥಾಪಿಸಲು ಸಮರ್ಥವಲ್ಲವಾಗಿ ಕೇವಲ ಯುಕ್ತಿಯಿಂದಲೆ ಅನ್ಯರೂಪದಲ್ಲಿಪ್ರತಿ ತರ್ಕವನ್ನು ಅನುಮಾನಿಸಲು ಸಾಧ್ಯವೆಂದರೆ, ಈ ತರ್ಕಗಳಿಗೆ ಯಾವ ಮಿತಿಯೂ ಇಲ್ಲದ್ದರಿಂದ ಸಾಧುವಲ್ಲ ಮಿತಿಯಿಲ್ಲದ ತರ್ಕವು ಮಾತ್ರ ಅಪ್ರಮಾಣವೆಂದು ತಿಳಿಯಬೇಕು. ಸರ್ವಸಿದ್ಧಾಂತಿಗಳಿಂದಲೂ ತಮ್ಮ ತಮ್ಮ ಶಾಸ್ತ್ರಗಳಿಂದ ಅಂಗೀಕೃತವಾದ ಪರಮ ಪುರುಷಾರ್ಥ ಮೋಕ್ಷವು ಪ್ರಮಾಣವಲ್ಲ ಎಂಬಂತೆ ಪ್ರತಿತರ್ಕವು ಸಾಧ್ಯವಾಗಿ ಮೋಕ್ಷವೇ ಇಲ್ಲವಂದಾಗುವುದು.

11 ಅತೋ ಯಾವತ್ಪ್ರಮಾಣಸಿದ್ಧಂ ತಾವದೇವಾಂಗೀಕರ್ತ್ತವ್ಯಂ ।
ನಾತೋನ್ಯಚ್ಛಂಕ್ಯಂ ।

ಪ್ರಮಾಣ ಸಿದ್ಧ ತರ್ಕಕ್ಕೆ ಅಪ್ರಾಮಾಣಿಕ ತರ್ಕಗಳಿಂದ ಭಾಧವನ್ನುಂಟು ಮಾಡಲು ಸಾಧ್ಯವಾದ್ದರಿಂದ, ಯಾವ ವಸ್ತುವು ಪ್ರಮಾಣಸಿದ್ಧವೊ ಅದನ್ನೇ ತರ್ಕ ಪಕ್ಷದಲ್ಲಿ ಸಾಧ್ಯವೆಂದು ಅಂಗೀಕರಿಸಬೇಕು.

12. ಯಾವದೇವ ಪ್ರಮಾಣೇನಸಿದ್ಧಂ ತಾವದಹಾಪಯನ್ ॥
ಸ್ವೀಕುರ್ಯಾನ್ನೈವಚಾನ್ಯತ್ರ ಶಂಕ್ಯಂಮಾನಮೃತೇ ಕ್ವಚಿದಿತಿ
ವಾಮನೇ ॥

ವಾಮನ ಪುರಾಣದಲ್ಲಿಯೂ ಕೂಡ ಈ ತರ್ಕ ಪ್ರತಿತರ್ಕಗಳಿಗೆ ನಿಯಮಹೇಳಿದೆ. ಯಾವುದು ಪ್ರಮಾಣದಿಂದಸಿದ್ಧವೋ ಅದನ್ನು ಮಾತ್ರ ಬಿಟ್ಟುಕೊಡದೇ ಅಂಗೀಕರಿಸಬೇಕು. ಬೇರೆಯದನ್ನಲ್ಲ-ಪ್ರಮಾಣವಿಲ್ಲದೆ ಏನನ್ನೂ ಅಂಗೀಕರಿಸಲೇಬಾರದು

## ಸೂ॥ ಓಂ॥ ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ ಓಂ॥ 13

ಏತೇನ ದೃಷ್ಟಾಂತ ಭಾವೇನಾಭಾವೇನ ಚಾವಿಶಿಷ್ಟಾ ಅಪ್ಯಪರಿಗ್ರಹಾ ವಿರುದ್ಧ
ಸಿದ್ಧಾಂತ ಅಕರ್ತೃಕ ತ್ವಾಚೇತನ ಕರ್ತೃಕತ್ವ ಜೀವ ಕರ್ತೃಕತ್ವಾದಯೋಪಿ ॥

ಈ ಹಿಂದಿನ ಕಾರಣಗಳಿಂದಲೇ ಅಂದರೆ ಸ್ವಪರಪಕ್ಷಗಳಿಗೆ ದೃಷ್ಟಾಂತ ಭಾವ ಹಾಗು ಆಭಾವಸಾಧನದಿಂದ ಅನಾಧನವೂ ಆದ ತರ್ಕವು ವೇದದಿಂದ ಪರಿಗ್ರಹಸಲ್ಪಡ ಮಿಕ್ಕ ವೇದ ವಿರುದ್ಧವಾದ ಜೀವ, ಭಾವ ಕಾಲ ಮುಂತಾದುವುಗಳಿಗೆ ಕರ್ತೃತ್ವ ಹೇಳುವ ಪಕ್ಷಗಳು ಅಪಸಿದ್ಧಾಂತವೆಂದು ಸಿದ್ಧವು

14 **ಅಕಸ್ಮಾದ್ಧಿದಮಾವಿರಾಸೀದಕಸ್ಮಾಲ್ಲಯಮಭ್ಯುಪೈತಿ ।**

15. **ಪ್ರಧಾನಾದಿದಮುತ್ಪನ್ನಂ ಪ್ರಧಾನಮಧಿತಿಷ್ಠತಿ**
**ಪ್ರಧಾನೇ ಲಯಮಭ್ಯೇತಿ ನ ಹ್ಯನ್ಯತ್ಕಾರಣಂ ಮತಂ ॥**

16 **ಜೀವಾದ್ಭವಂತಿ ಭೂತಾನಿ ಜೀವೇ ತಿಷ್ಠಂತ್ಯಚಂಚಲಾಃ ।**
**ಜೀವೇತು ಲಯಮೃಚ್ಛಂತಿ ನ ಜೀವಾತ್ಕಾರಣಂ ಪರಮಿತ್ಯಾದಿ**
**ಶ್ರುತಿ ಪ್ರಾಪ್ತಾ ನಿರಾಕೃತಾಃ ॥**

17. **ಯಥಾ ದುಃಖಾದಿಷು ಜೀವಸ್ಯಾಸ್ವಾತಂತ್ರಮೇವಮನ್ಯೇಷ್ವ**
**ಪೀತಿ ದೃಷ್ಟಾಂತಃ ॥**

18 **ಶೃತಿಗತಿಸ್ತು ಬ್ರಹ್ಮವಾಚಕತ್ವೇನ ಪ್ರದರ್ಶಿತಾ ॥**

ಶೃತಿಗಳಲ್ಲಿ ಹೇಳಲ್ಪಟ್ಟಿರುವ ರೀತಿಯಲ್ಲಿ ಶ್ರೀವಿಷ್ಣುವಿನಿಂದ ಇತರರಲ್ಲಿ ಕರ್ತೃತ್ವ ವನ್ನು ಹೇಳುವ ವಾಕ್ಯಗಳು ಸರ್ವ ಶಬ್ದವಾಚ್ಯತ್ವ ಪ್ರಮಾಣದಿಂದ ಅವುಗಳು ಬ್ರಹ್ಮನನ್ನು ಮುಖ್ಯ ವೃತ್ತಿಯಿಂದಲೂ ಅನ್ಯವನ್ನೂ ಅಮುಖ್ಯ ವೃತ್ತಿಯಿಂ-ದಲೂ ವ್ಯವಸ್ಥೆ ಮಾಡಿ ಪರಬ್ರಹ್ಮನೇ ಮುಖ್ಯತಃ ಜಗತ್ಕರ್ತೃತ್ವ ಲಕ್ಷಣವುಳ್ಳವನೆಂದು ಸಿದ್ಧಾಂತಿಸುತ್ತವೆ ಅಕಸ್ಮಾತ್ ಅಸತ್, ಪ್ರಧಾನ, ಜೀವ ಮುಂತಾದುವುಗಳನ್ನು ಜಗತ್ಕರ್ತೃಗಳೆಂದು ಹೇಳುವ ವಾಕ್ಯಗಳು ಪರಮಾತ್ಮನನ್ನು ಸ್ವಾತಂತ್ರ್ಯದಿಂದಲೂ ಮಿಕ್ಕ ವಸ್ತುಗಳನ್ನೂ ಅಸ್ವಾತಂತ್ರ್ಯ ದಿಂದಲೂ ಕಾರಣಗಳೆಂದು ಹೇಳುವುದೇ ವ್ಯವಸ್ಥೆಯು ಹೇಗೆ ದುಃಖಾದಿಗಳ ಪ್ರಾಪ್ತಿಯು ಜೀವ ಮುಂತಾದವುಗಳಲ್ಲಿ ಅಸ್ವಾತಂತ್ರ್ಯದಿಂದ ಶ್ರೀಪರಮಾತ್ಮನೇ ಸ್ವತಂತ್ರನೋ ಹೀಗೆ ಎಲ್ಲ ವಸ್ತುಗಳ ನಿರ್ಮಾಣ ಶಕ್ತಿಯು ಶ್ರೀಪರಮಾತ್ಮಾಧೀನವಾಗಿ ಪರಮಾತ್ಮ ಕರ್ತೃತವೆಂದೇ ನಿರ್ಧಾರವು. ಮಿಕ್ಕವು ದ್ವಾರ ಮಾತ್ರದಿಂದ ಕಾರಣಗಳು ಎಂದು ತಿಳಿಯುವುದು.

19. ಯತ್ರಾನ್ಯವಾಚಕತ್ವೇಽಸ್ಯ ವಿರೋಧಸ್ತತ್ರಾನ್ಯದೆಸ್ಯ ಮುಖ್ಯ ತಯೋಚ್ಯತೇ । ಯತ್ರ ವಿರೋಧಸ್ತತ್ರಬ್ರಹ್ಮೈವೋಚ್ಯತ ಇತಿ ನಿಯಮಃ ॥

ಅನ್ಯವಾಚಕತ್ವದಲ್ಲಿ ವಿರೋಧವಿದ್ದಲ್ಲಿ ಅಲ್ಲಿ ಅಮುಖ್ಯ ಕರ್ತೃತ್ವವು ವಿರೋಧ ವಿಲ್ಲದಿದ್ದಲ್ಲಿ ಮುಖ್ಯ ಬ್ರಹ್ಮ ಕರ್ತೃತ್ವವನ್ನು ತಿಳಿಯಬೇಕು ಎಂದು ನಿಯಮವನ್ನು ಹೇಳಿದೆ.

– ಇತಿ ಅಸದಧಿಕರಣಂ –

- ಭೋಕ್ತ್ರಾಧಿಕರಣಂ -

## ಸೂ॥ ಓಂ॥ ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್ ಓಂ॥ 14

1. ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ (ಮು-3-2-7) ಇತಿ ಮುಕ್ತ ಜೀವಸ್ಯ ಪರಾಪತ್ತಿರುಚ್ಯತೆ । ಅತ ಸ್ತಯೋರ ವಿಭಾಗಃ । ಅತಃ ಪೂರ್ವ ಮಪಿ ಸ ಏವ । ನಹ್ಯನ್ಯ ಸ್ಯಾನ್ಯತ್ವಂಯುಜ್ಯತೆ ಇತಿ ಚೇತ್

ಮುಂಡೂಕ ಶೃತಿಯಲ್ಲಿ ಮುಕ್ತಿ ಸಂಪನ್ನ ಜೀವರಿಗೆ (ಮುಕ್ತ ಜೀವರಿಗೆ) ಬ್ರಹ್ಮ ಭಾವ ಪ್ರಾಪ್ತಿಯನ್ನು ಹೇಳಿರುವುದರಿಂದ ಜೀವಪರಮಾತ್ಮರಿಗೆ ಭೇದವಿಲ್ಲ. ಜೀವ

ತಾದೃಗೇವ ಭವತಿ ನ ತು ತದೇವ ಏವಂ ಬ್ರಹ್ಮ ವಿಜಾನತೋ
ಮುನೇಃ ಮುನಿವರ್ಗಸ್ಯ ಆತ್ಮಾ-ಸ್ವಾಮೀ ಮುಖ್ಯವಾಯುರಪಿ ಮುಕ್ತಃ||
ಪರಮಾತ್ಮೈವ ಸದೃಶ್ಯ ಭವತಿ ನತು ಸ ಏವ''

ಒಂದು ಪಾತ್ರೆಯನ್ನಾಶ್ರಯಿಸಿರುವ ನೀರಿನಲ್ಲಿ ಬೇರೆ ನೀರನ್ನು ಸೇರಿಸಿದರೆ ಅದು ಹಿಂದಿನ ನೀರಿನಂತೆ ಆಗುವುದೇ ಹೊರತು ಆ ನೀರೇ ಆಗುವುದಲ್ಲ. ಅದರಂತೆ ಬ್ರಹ್ಮ ವಿಜ್ಞಾನ ಮುಕ್ತ ಜೀವನ ಸ್ವಾಮಿಯಾದ ಶ್ರೀಮುಖ್ಯ ಪ್ರಾಣನೂ ಕೂಡ ಜೀವಸಹಿತ ಮುಕ್ತನಾಗಿ ಶ್ರೀಪರಮಾತ್ಮನನ್ನು ಹೊಂದಿ ಏಕ ಸ್ಥಾನೀಯನಾಗುವನೇ ಹೊರತು ಪರಮಾತ್ಮನೇ ಆಗುವುದಿಲ್ಲ ಜೀವಿಗೂ ಸ್ಥಾನೈಕ್ಯವೇ.

ಸ್ಕಾಂದ ಪುರಾಣದಲ್ಲಿ

**4. ಉದಕಂ ತೂದಕೇ ಸಿಕ್ತಂ ಮಿಶ್ರಮೇವ ಯಥಾ ಭವೇತ್**
**ನ ಚೈತದೇವ ಭವತಿ ಯತೋ ವೃದ್ಧಿಃ ಪ್ರದೃಶ್ಯತೇ ।**
**ಏವಮೇವ ಹಿ ಜೀವೋಽಪಿ ತಾದಾತ್ಮ್ಯಂ ಪರಮಾತ್ಮನಾ ।**
**ಪ್ರಾಪ್ತೋಽಪಿ ನಾಸೌ ಭವತಿ ಸ್ವಾತಂತ್ರ್ಯಾದಿ ವಿಶೇಷಣಾದಿತಿ ॥**

ನೀರಿನಲ್ಲಿ ಬೇರೆ ನೀರನ್ನು ಬೆರೆಸಿ ಮಿಶ್ರ ಮಾಡಿದರೆ ಒಟ್ಟು ನೀರಿನ ರಾಶಿಯಲ್ಲಿ ವೃದ್ಧಿ ಕಾಣುವುದರಿಂದ ನೀರುಗಳಲ್ಲಿ ಸ್ಥಾನೈಕ್ಯ ಮಾತ್ರವೇ ಹಾಗೆಯೇ ಮುಕ್ತ ಜೀವರೂ ಕೂಡ ಶ್ರೀಪರಮಾತ್ಮ ಸ್ಥಾನವನ್ನು ಹೊಂದಿ ಪರಮಾತ್ಮನಿಂದ ನಿಯಮನ ಮಾಡಲ್ಪಡುವರು ಸ್ವರೂಪ ಮೋಕ್ಷವನ್ನು ಹೊಂದಿ ಆತನ ಪ್ರಸಾದ ದಿಂದಲೇ ಸುಖವನ್ನು ಹೊಂದುವನು.

ಹತೌ ನಿಯತ ಚಿತ್ತತ್ವಾದ್ಗ್ರಹವತ್ತತ್ಪ್ರವೇಶನಾತ್ ।
ಮೋಕ್ಷಂ ತಾದಾತ್ಮ್ಯಮಿತ್ಯಾಹುಃ ನತು ತದ್ರೂಪತಃ ಕ್ವಚಿತ್ ॥

ಜೀವರಿಗೆ ನಿಸ್ವತಂತ್ರ ಧರ್ಮವೂ ಪರಮಾತ್ಮನಲ್ಲಿ ಆಶ್ರಯತ್ವವೂ ಪರಮಾತ್ಮನಿಗೆ ಸ್ವಾತಂತ್ರ್ಯವೂ ಸ್ವಾಶ್ರಯವೂ ಸ್ವರೂಪ ಭೇದ ಧರ್ಮಗಳಾದ್ದರಿಂದ ವಿರುದ್ಧ ಧರ್ಮತ್ವದಿಂದ ಇವುಗಳ ಸ್ವರೂಪ ಸಿದ್ಧಿಯು (ಐಕ್ಯವು) ಸಾಧ್ಯವಲ್ಲ.

**5. ಬ್ರಹ್ಮೇಶಾನಾದಿಭಿರ್ದೇವೈರ್ಯತ್ಪ್ರಾಪ್ತುಂನೈವ ಶಕ್ಯತೇ ।**
**ತದ್ಯತ್ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರ ಇತಿ ಚ ॥**

ಬ್ರಹ್ಮ ರುದ್ರಾದಿ ದೇವತೆಗಳಿಂದಲೂ ನಿನ್ನ ಸ್ವಭಾವ ಸಿದ್ಧ ಸ್ವರೂಪವನ್ನ ಧರಿಯಲು ಶಕ್ಯವಲ್ಲ. ಅಂತಹ ಮಹಾಮಹಿಮ ಮಂಗಳ ಸ್ವರೂಪ ಸರ್ವೋತ್ತಮ ಧರ್ಮವುಳ್ಳವನು ನೀನೊಬ್ಬನೇ.

**6. ನ ತೇ ಮಹಿತ್ವಮನ್ವಶ್ನುವಂತಿ । ಋ(7-99-1) ನ ತೇ ವಿಷ್ಣೋ ಜಾಯಮಾನೋ ನಜಾತಃ (7-99-2) ಇತ್ಯಾದಿಚ ॥**

ನಿನ್ನ ಮಹಿಮೆಯನ್ನು ಪೂರ್ಣವಾಗಿ ಹೊಂದಿದವರು ಈಗಲೂ ಮುಂದೆಯೂ ಹಿಂದಿನ ಕಾಲದಲ್ಲಿಯೂ ಕೂಡ ಯಾರೂ ಇಲ್ಲ ನೀನೇ ಸರ್ವಕಾಲ ದೇಶಗಳಲ್ಲಿಯೂ ಕೈವಲ್ಯ ಪತಿಯು.

**7. ಫಲತ್ವೇಪಿ ಯುಕ್ತಿ ವಿರೋಧೇಂ ತರ್ಭಾವಾದತ್ರೋಕ್ತಂ ।**

ಇಲ್ಲಿ ಹೇಳಿದ ವಿಷಯವು ಫಲಾಂತರಾಧ್ಯಾಯದಲ್ಲಿ ಸಮಂಜಸವಾದರೂ ಯುಕ್ತಿ ನಿದರ್ಶನದಿಂದ ಇಲ್ಲಿಯೂ ಹೇಳಲಾದದ್ದು ಯುಕ್ತವು.

– ಇತಿ ಭೋಕ್ತ್ರೈಧಿಕರಣವು –

## – ಆರಂಭಾಧಿಕರಣಂ –

ಈ ಅಧಿಕರಣದಲ್ಲಿ ಶ್ರೀವಿಷ್ಣುವಿಗೆ ಜಗತ್ಕರ್ತೃತ್ವ ವಿಷಯದಲ್ಲಿ ಬಹು ಯುಕ್ತಿ ವಿರೋಧಗಳು ಪರಿಹರಿಸಲ್ಪಡುತ್ತವೆ.

**ಸೂ॥ ಓಂ॥ ತದನನ್ಯತ್ವಮಾರಂಭಣಶಬ್ದಾದಿಭ್ಯಃ ಓಂ॥ 15**

ಈ ಲೋಕದಲ್ಲಿ ವಸ್ತು ಸೃಷ್ಟಿಯು ಸ್ವತಂತ್ರ ಬಹು ಸಾಧನೆಗಳಿಂದ ಸಾಧ್ಯವಾಗಿ ಕಂಡಿದೆ. ಕರ್ತೃ ಒಬ್ಬನೇ ಅಲ್ಲ. ಹೇಗೆ ಘಟಾದಿಗಳ ಸೃಷ್ಟಿಯು ಸ್ವತಂತ್ರ ಬಹು ಸಾಧನೆಗಳ ಮೇಳದಿಂದ ಸಾಧ್ಯವೊ (ಮಣ್ಣು, ನೀರು, ಚಕ್ರಕೋಲು ಇತ್ಯಾದಿ) ಹಾಗೆಯೇ ಜಗತ್‌ಸೃಷ್ಟಿಯೂ ಕೂಡ ಕರ್ತೃವಾದ ಬ್ರಹ್ಮನಿಂದಲೂ ಇತರ ಅವಶ್ಯಕ ಸ್ವತಂತ್ರ ಸಾಧನಗಳಿಂದ ಸಾಧ್ಯವು. ಹಾಗೆಯೇ ಸ್ಥಿತಿಯೂ ಸಂಹರ್ತೃತ್ವವೂ. ಇವುಗಳಿಗೆಕಾರಣ ಶ್ರೀಪರಮಾತ್ಮನೊಬ್ಬನೇ. ಇತರರಿಗೆ ಸ್ವತಂತ್ರವಾದವಸ್ತು ಸಹಕಾರ ವಿಲ್ಲದೆ ಸೃಷ್ಟ್ಯಾದಿಗಳನ್ನು ಮಾಡಲು ಸಾಧ್ಯವಲ್ಲ ಆದರೆ ಸರ್ವ ಸ್ವತಂತ್ರ ನಾದ ಪರಬ್ರಹ್ಮನು ತನ್ನಸ್ವರೂಪ ಸಾಮರ್ಥ್ಯದಿಂದಲೇ ಯಾವ ಪ್ರಯತ್ನವೂ ಇಲ್ಲದೆ ಇಚ್ಛಾ ಮಾತ್ರದಿಂದಲೆ ಜಗತ್ಸೃಷ್ಟ್ಯಾದಿಗಳನ್ನು ಮಾಡುವನು. ಅನ್ಯಸ್ವತಂತ್ರ ಸಾಧನಗಳಿಂದಲ್ಲ.

5. ಸ್ವತಂತ್ರ ಬಹು ಸಾಧನಾ ಸೃಷ್ಟಿರ್ಲೋಕೇ ದೃಷ್ಟಾ ।
ನೈವಂ ಬ್ರಹ್ಮಣಃ । ಕಿಂತು ಸ್ವರೂಪಸಾಮರ್ಥ್ಯಾದೇವ
ತಸ್ಯ ಸೃಷ್ಟಿಃ ॥

ಈ ಪ್ರಪಂಚ ಸೃಷ್ಟಿ ಮುಂತಾದವುಗಳನ್ನು ಸ್ವತಂತ್ರಕಾರಣನಾದ ಪರಬ್ರಹ್ಮ ನೊಬ್ಬನೇ ಮಾಡುವನು. ಏಕೆಂದರೆ ಈ ಕಾರ್ಯದಲ್ಲಿ ಫಲೋಪಲಕ್ಷಿತ "ಕಿಂಸ್ವಿದಾ ಸೀತ್" ಎಂಬ ವಾಕ್ಯದಲ್ಲಿ ಅಧಿಷ್ಠಾನಾದಿಗಳನ್ನು ಅಕ್ಷೇಪಣ ವಾಕ್ಯದಿಂದ ಅಲ್ಲಗಳೆ ದಿರುವುದರಿಂದಲೂ ಮತ್ತು ಸರ್ವ ಸ್ವತಂತ್ರ "ವಿಶೇಷ" ಶಕ್ತಿಯಿಂದಲೂ ಶ್ರೀಪರ ಮಾತ್ಮನೊಬ್ಬನೇ ಅಸಾಮಾನ್ಯ ಸೃಷ್ಟ್ಯಾದಿಕರ್ತನು.

2. ಕಿಂಸ್ವಿದಾಸೀದಧಿಷ್ಠಾನಮಾರಂಭಣಂ ಕತಮತ್ಸ್ವಿತ್ಕಥಾಸೀದಿತಿ
ಹ್ಯಾಕ್ಷೇಪಃ ॥ (ಋ-10-81-2)

ಜಗತ್ಕರ್ತನಾದ ಹರಿಯು ಸೃಷ್ಟಿಕಾಲ ಬಂದಾಗ ಸರ್ವಜ್ಞಾತ್ವಾದಿ ತನ್ನ ಸ್ವರೂ ಪ ಸಾಮರ್ಥ್ಯದಿಂದಲೇ ಸ್ವರ್ಗಭೂಮ್ಯಾದಿ ಲೋಕಗಳನ್ನು ಸೃಷ್ಟಿ ಮಾಡಿದನು. ಆ ಕಾಲದಲ್ಲಿ ಪಂಚಭೂತಾದಿ ವಸ್ತುಗಳು ಸಾಧನಗಳಾಗಿ ಎಲ್ಲಿದ್ದವು

ಯತೋ ಭೂಮಿಂ ಜನಯನ್ ವಿಶ್ವಕರ್ಮಾ ವಿದ್ಯಾಮೌರ್ಣೋನ್ಮಹಿನಾ
ವಿಶ ಚಕ್ಷಾಃ" ಎಂದು ವಾಕ್ಯ ಶೇಷವು.

3. ಅಧಿಷ್ಠಾನಾದ್ಯನುಕ್ತೇಃ । ಆದಿಶಬ್ದಾದ್ಯುಕ್ತಿಭಿಶ್ಚ ॥

ಮುಂದೆ ಸ್ವತಂತ್ರಾ ಧಿಷ್ಠಾನಾದಿಗಳನ್ನು ಹೇಳದಿರುವುದರಿಂದಲೂ ಈ ವಾಕ್ಯವು ಪ್ರಶ್ನರೂಪವಲ್ಲ. ಕೇವಲ ಯುಕ್ತಿಯಿಂದಲೇ ಪರಮಾತ್ಮನ ಸಾಮರ್ಥ್ಯದ ದ್ಯೋತಕವು.

4. ಪರತಂತ್ರೋಹ್ಯಪೇಕ್ಷೇತ ಸ್ವತಂತ್ರಃ ಕಿಮಪೇಕ್ಷತೇ ।
ಸಾಧನಾನಾಂ ಸಾಧನತ್ವಂ ಯತಃ ಕಿಂತಸ್ಯ ಸಾಧನೈರಿತ್ಯಾದಿಭಿಃ ॥

ಪರತಂತ್ರನಾದಲ್ಲಿ ಮಾತ್ರ ಕರ್ತೃವು ಅನ್ಯ ಅಧಿಷ್ಠಾನಗಳನ್ನು ಆಶ್ರಯಿಸುವನು ಸರ್ವ ಸ್ವತಂತ್ರ ಸರ್ವಶಕ್ತಿ ಸ್ವರೂಪವುಳ್ಳ ಶ್ರೀಪರಮಾತ್ಮನು ಅಧಿಷ್ಠಾನಾದಿ ಸ್ವತಂತ್ರ ಸಾಧನಗಳನ್ನು ಅಪೇಕ್ಷಿಸುವುದಿಲ್ಲ ಮತ್ತು ಆತನಿಗೆ ಪ್ರಯೋಜನಾಪೇಕ್ಷಯು ಇಲ್ಲ.

## ಸೂ॥ ಓಂ॥ ಭಾವೇಚೋಪಲಬ್ಧೇಃ ಓಂ॥ 16

ಸ್ವತಂತ್ರ ಸಾಧನಭಾವೆ ಪ್ರಮಾಣೈರುಪುಲಭ್ಯೇತ ॥

ಈಶ್ವರನಿಗಿಂತಲೂ ಹೊರತಾಗಿ ಬೇರೆ ಸಾಧನಗಳು ಸ್ವತಂತ್ರವಾಗಿದ್ದಲ್ಲಿ ಆಗಮ ಗಳಲ್ಲಿ ಹೇಳಲ್ಪಡಬೇಕು ಹಾಗೆ ಹೇಳಿಲ್ಲವಾದುದರಿಂದ ಅನ್ಯ ಸ್ವತಂತ್ರ ವಸ್ತುವು ಇಲ್ಲವೆಂದು ಸಿದ್ಧವಾಗುವುದು. ಆದ್ದರಿಂದ ಈಶ್ವರನೇ ಸರ್ವತಂತ್ರ ಸ್ವತಂತ್ರನು.

6. ಅನುಕ್ತಂ ಪಂಚಭಿರ್ವೇದೈ ರ್ನವಸ್ತ್ವಸ್ತಿಕುತಶ್ಚನ ।
ಅತೋ ವೇದತ್ವಮೇತೇಷಾಂ ಯತಸ್ತೇ ಸರ್ವವೇದಕಾ
ಇತಿಸ್ಕಾಂದೇ ॥

ಆಗಮಗಳಲ್ಲಿ ಹೇಳಿಲ್ಲದಿದ್ದರೂ ಅನ್ಯ ಗ್ರಂಥಗಳಲ್ಲಿ ಹೇಳಿರಬಹುದೆಂಬ ಅನು ಮಾನಕ್ಕೆ ಸ್ಕಾಂದ ಪುರಾಣ ವಾಕ್ಯವು ಪಂಚವೇದಗಳಲ್ಲಿ ಹೇಳಲ್ಪಡದಿರುವ ವಸ್ತುವು ಯಾವುದೂ ಈ ಪ್ರಪಂಚದಲ್ಲಿಲ್ಲ. ವೇದವು ಸರ್ವವನ್ನು ತಿಳಿಸುತ್ತದೆಯಾಗಿ ವೇದಕ್ಕೆ ವೇದತ್ವವು ಜ್ಞಾನಪ್ರದತ್ವವು.

7, ಅಪ್ಭ್ಯ ಸಂಭೂತಃ ಪೃಥಿವ್ಯೈ ರಸಾಚ್ಚ (ತೈ ಆ-3-13)
ಇತ್ಯಾದಿನಾ ಸಾಧನಾಂತರ ಪ್ರತೀತೇಃ ಕಥಮನುಪಲಬ್ಧಿರಿತ್ಯತ
ಅಹ

ಅದ್ಭಿಃ ಸಂಭೂತಃ ಪೃಥಿವ್ಯೈರಸಾಚ್ಚ . ..ಅದ್ಭ್ಯಃ ಸಂಭೂತೋ ಹಿರಣ್ಯ
ಗರ್ಭಃ ಪ್ರಕೃತಿಂಸ್ವಾಂ ಇತಿಸ್ಮೃತಿಃ

ಪುರುಷ ಶಬ್ದ ವಾಚ್ಯನಾದ ಹಿರಣ್ಯ ಗರ್ಭನು ವಿಶ್ವ ಕರ್ತೃವಾದ ಹರಿಯಿಂದ ಅಬಾದ್ಯುಪಲಕ್ಷಿತ ಪಂಚ ಮಹಾಭೂತಗಳಿಂದ "ರಸ" ಮಾತ್ರದಿಂದಲೂ ಹುಟ್ಟಿ ಸರ್ವ ಪುರುಷರಿಗಿಂತಲೂ ಉತ್ತಮನು. ಆಪುರುಷೋತ್ಪತ್ತಿಗಿಂತ ಮೊದಲೇಬ್ರಂಹ್ಮಾಂಡಾಖ್ಯ ಚತುರ್ಮುಖ ರೂಪವು ಮಹತ್ಪ್ರಕಾಶಮಾನವಾದ ಭಗವಂತನಿಂದ ಧರಿಸಲ್ಪಟ್ಟಿತ್ತು. ಎಂದು ತತ್ವಪ್ರದೀಪದಲ್ಲಿ ಆಪೀಯಂತೆ ಅನುಭೂಯಂತ ಇತಿ ಅಪಃ ಕರ್ಮಾಣಿ ಪೃಥುತ್ವಾತ್ ಪೃಥಿವೀಪ್ರಕೃತಿಃ ರಸೋರಕ್ತಿಃ ।। ಸ್ವಾಧೀನಾಂ ಪ್ರಕೃತಿಂ ಅವಷ್ಟಭ್ಯ ಅವಲಂಭ್ಯ ಉಪಾದಾನೀ ಕೃತ್ಯ ವಿವಿಧಂ ಜಗತ್ಸೃಜಾಮಿ ಇತಿ ಸ್ಮೃತಿಃ ।।

ಅಪಃ ಎಂದರೆ ಅನುಭವಿಸಲ್ಪಡುತ್ತಿವೆಯಾಗಿ ಕರ್ಮಗಳು ಪೃಥುರೂಪವಾಗಿರುವುದರಿಂದ ಪೃಥಿವೀ ಎಂದರೆ ಪ್ರಕೃತಿ ರಸ ಎಂದರೆ ರಕ್ತಿ ಅದರಲ್ಲಿ ಅರ್ಥ ಅಡಗಿದೆ ಎಂದು ಬೇರೆ ಹೇಳಿದೆ.

## ಸೂ।। ಓಂ।। ಸತ್ವಾಚ್ಚಾವರಸ್ಯ ಓಂ।। 17

ಅವರಸ್ಯ ತನಧೀನಸಾಧನಸ್ಯ ಸತ್ವಾತ್ ।।

ಇಲ್ಲಿ ಅಧಿಷ್ಠಾನಾದಿಗಳು ಆತನ ಅಧೀನಗಳೇ ಆದ್ದರಿಂದ ಆತನ ಸ್ವತಂತ್ರ ಕರ್ತೃತ್ವದಿಂದ ಮುಖ್ಯ ಕರ್ತನು

8. **ಕಾಲ ಆಸೀತ್ಪುರುಷ ಆಸೀತ್ ಪರಮ ಆಸೀತ್ತದ್ಯದಾಸೀತ್ ತದಾವೃತಮಾಸೀತ್ತದಧೀನಮಾಸೀದಥಹ್ಯೇಕ್ತ ಏವ ಪರಮ ಆಸೀದ್ಯಸ್ಯೈತಿಹ ದಾಸೀನ್ನ ಹ್ಯೇತದಾಸೀತ್ ಇತಿ ಹಿಂಕಾ ಷಾಯಣ ಶೃತಿಃ ।**

ಮೇಲಿನ ಶೃತಿಯು ಭಗವಂತನ ಸ್ವಾತಂತ್ರ್ಯವನ್ನು ಮತ್ತು ಸರ್ವವಸ್ತುಗಳ ಆತನ ಅಧೀನತ್ವವನ್ನು ತಿಳಿಸುವುದು. ಜಗತ್ತಿನ ಮೊದಲು ಅಂದರೆ ಪ್ರಳಯ ಕಾಲದಲ್ಲಿ ಜೀವವೂ ಮತ್ತು ಶ್ರೀ ಪರಮಾತ್ಮನೂ ಇದ್ದರು. ಹೀಗಿದ್ದರೂ ಪ್ರಲಯ ಕಾಲದಲ್ಲಿ ಯಾವ ವಸ್ತುಗಳಿದ್ದವೊ ಅವು ಭಗವಂತನಿಂದ ಆವೃತವಾಗಿದ್ದವು. ಆದ್ದರಿಂದ

ಶ್ರೀಪರಮಾತ್ಮನೊಬ್ಬನೇ ಇದ್ದನೆಂದು ಹೇಳಿದೆ. ಅಭಾವ ವಸ್ತುವು ಅಸ್ವತಂತ್ರ ವನ್ನು ಹೇಳುವುದು ಈ ಪರಮಾತ್ಮನ ಧರ್ಮಗಳನ್ನು ಹೇಳುವರು ಈ ಪರಮ ವಸ್ತುವಿನಿಂದ ಜಗತ್ತು ಸೃಷ್ಟವಾಯಿತು ಜಗತ್ಸೃಷ್ಟಿಯ ಪೂರ್ವ ಕಾಲದಲ್ಲಿ ಪೂರ್ವದಲ್ಲಿ ಹಿಂದಿನ ಕಾಲದ "ಅಭಾವದಿಂದ" ಉತ್ಪತ್ತಿಯುಂಟಾಗಲು ಶ್ರೀಹರಿಯೇ ಸ್ವತಂತ್ರ ಕರ್ತೃವು. ತತ್ವ ದೀಪದಲ್ಲಿ—ಏಕೋಹಿಗವಾನೇವ ಪರಮಃ ಪ್ರಧಾನ ಆಸೀತ್ ನಹಿ ಅನ್ಯತ್ರ ಪರಮಾಸೀತ್ ಕಿಂತುತಧದೀನಮೇವೇತ್ಯರ್ಥಃ ಉಕ್ತಃ ||

## ಸೂ|| ಓಂ|| ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್ ಓಂ ||| 18

"ನಾಸದಾಸೀತ್" (ಋ-10-129-1) ಇತಿ ಸರ್ವಸ್ಯಾಸತ್ವವ್ಯಪದೇಶಾ ನ್ನೇತಿ ಚೇತ್ –

ಅಸತ್ತಿಗೆ ಕರ್ತತ್ವವನ್ನು ಹೇಳಿರುವುದರಿಂದ ಬೇರೆ ಸತ್ವ ವಸ್ತುವನ್ನು ಹೇಳಲು ಸಾಧ್ಯವಲ್ಲವೆಂದರೆ ಆ "ಅಸತ್" ಶಬ್ದದಿಂದ ಬೇರೆ ಶಬ್ದಗಳ ಧರ್ಮವಾಚಕ ಸ್ವಾತಂತ್ರ್ಯವನ್ನು ಮಾತ್ರ ನಿಷೇಧಿಸಿದೆ. ವಸ್ತು ಸತ್ವಗಳನ್ನಲ್ಲ

ನಾಸದಾಸೀನ್ನೊ ಸದಾಸೀತದಾನೀಂ ನಾಸೀ ದ್ರಜೊನೋ ವ್ಯೋ ಮಾಪರೋ ಯತ್ । ಕಿಮಾವ ರೀವಃ ಕುಹಕಸ್ಯ ಶರ್ಮನ್ನಂಭಃ ಕಿಮಾಸೀದ್ಗಹನಂ ಗಭೀರಂ|| ನಮೃತ್ಯು ರಾಸೀದಮೃತಂನ ತರ್ಹಿನ ರಾತ್ರ್ಯಾ ಅನ್ಹಆಸೀತ್ಪ್ರಕೇತಃ ಆನೀದ ವಾತಂ ಸ್ವಧಯಾ ತದೇಕಂ ತಸ್ಮಾದ್ಧಾನ್ಯನ್ನಪರಃ ಕಿಂಚನಾಸ ||

(ಋ-10-129-1)

ಅರ್ಥವು ತದಾನೀಂ-ಪ್ರಲಯೇ ಅಸತ್-ವಾಯ್ವಂತರಿಕ್ಷ ರೂಪಂಭೂತಂ ನಾಸೀತ್ । ಸತ್-ಪೃಥಿವ್ಯಪ್ತೇಜೊರೂಪಂ ಭೂತಂನೋ ಆಸೀತ್ । ಕಾರ್ಯಂ ಸರ್ವಾತ್ಮನಾ ನಾಸೀತ್ ಕರಣಂ-ಚೇಷ್ಟಮಾನಂ ನಾಸೀತ್ । ಏವಂ ತದಾ ರಜಃ ತದುಪಲಕ್ಷಿತ ಗುಣತ್ರಯಂನೋ ಆಸೀತ್। ಯಚ್ಚಪರಃ ಪರಂ ಸರ್ವಗತಂವ್ಯೋಮ ಜಡ ಪ್ರಕೃತಿಸ್ತದಪಿ ಮೂರ್ತಾಸಂಬಂಧಾಭಾವಾನ್ನಾಸೀತ್ । ಪರಂವ್ಯೋಮ ಅವ್ಯಾಕೃತಾಕಾಶಮಿತ್ಯನ್ಯತ್ರ ಸಾಧನ ಸತ್ವಾಕ್ಷೇಪ ಪ್ರಕರಣಾದೇವಂ ವ್ಯಾಖ್ಯಾತಂ

ಏವಂ ಮೃತ್ಯುಃ ಮರಣ ತತ್ಸಾಧ ನಂವಾನಾಸೀತ್ । ಅಮೃತಂ-ಗೌಣಮೋಕ್ಷಃ ಸ್ವರ್ಗಾದಿಃ ನಾಸೀತ್ । ಪ್ರಲಯೇ ಅಹ್ನೋರಾತ್ರಾಶ್ಚ ಪ್ರಕೇತಃ ಸಾಮರ್ಥ್ಯಂ ನಾಸೀತ್ । ಏತೇಷಾಮಭಾವಾತ್ ಕುಹ ಕುತ್ರಕಸ್ಯ ಶರ್ಮನ್-ಶರ್ಮಣಿ-ಸುಖಾರ್ಥಂ ಕಿ ಮಾವರೀವಂ-ಕಿಂ ಅವರ್ತತ ನಕಿಮಪಿ ಯದ್ವಾ ಕಿಮಾವೃಣೋತ್-ನಕಿಮಪಿ । ನನ್ವಸ್ತು ಜಡ ರೂಪಾಣಾ ಮೇತೇಷಾಂ ಅಭಾವಃ ಕಥಮಪಿ ಚೇತನ ರೂಪಂ ಅಂಭ ಇತಿ॥ ಯತ ಗಹನಂ ಅತಿ ಗಂಭೀರಂ ಚೇತನ ಪ್ರಕೃತಿ ರೂಪಂ ಅಂಭೋ-ಜಲಂ ತದಪ್ಯಾಸೀತ್ಕಿಂ ನೈವಾಸೀತ್ । ತರ್ಹಿ ತತಾಬ್ರಹ್ಮೈಕ ಮೇವ "ಅವಾತಂ" ವಾಯು ಪ್ರೇರಣಾರಹಿತಂ ಯಥಾಭವತಿ ತಥಾ ಸ್ವಧಯಾ-ಸ್ವಸಾಮರ್ಥ್ಯೇನೈವ ಆಸೀತ್ ಅಚೇಷ್ಠತ್ ಕಾಲಾದಿಕಂ ಪ್ರೇರಯತಿ ಸ್ಮೇತಿ । ತಸ್ಮಾತ್ ಪರಬ್ರಹ್ಮಣ ಅನ್ಯತ್ ಪರಃ ಪರಮುತ್ತಮವಸ್ತು "ಕಿಂಚನ" ಸ್ವಾತಂತ್ರ್ಯಾದಿ ಧರ್ಮೋಪೇತ ಮಿತಿಯಾವಿತ್ । ನಾಸ-ನಬಭೂವಃ ಸ್ವಧಯಾ-ಸುಖೇನೈವ ನತು ಮುಖ ಪ್ರಾಪ್ತ್ಯರ್ಥಮಿತಿಯುತೇ ।

ಆಗ ಆ ಪ್ರಲಯದಲ್ಲಿ ವಾಯು ಅಂತರಿಕ್ಷ ರೂಪವಾದುದು ಏನೂ ಇರಲಿಲ್ಲ. ಪೃಥ್ವಿ ಆಪ್ ತೇಜರೂಪವಾದರೂ ಇರಲಿಲ್ಲ. ಕಾರ್ಯವೆಂಬುದೇ ಇರಲಿಲ್ಲ. ಗುಣ ತ್ರಯಗಳೂ ಇರಲಿಲ್ಲ. ಜಡ ಪ್ರಕೃತಿಯೂ ಮೂರ್ತವಾಗಿ ರಲಿಲ್ಲ. ಅವ್ಯಾಕೃತಾಕಾಶ ಎಂದು ಹೇಳಿ ಸಾಧನ ಮೂಲ ಮಾತ್ರ ಅಲ್ಲಿತ್ತು ಎಂದಿದೆ, ಮರಣ ತತ್ಸಾಧನಗಳೂ ಇರಲಿಲ್ಲ ಗೌಣಮೋಕ್ಷ ಸ್ವರ್ಗ ಹಗಲು ರಾತ್ರಿಗಳ ಸಾಮರ್ಥ್ಯ ಇರಲಿಲ್ಲ ಆಗ ಇದ್ದದಾದರೂ ಏನು? ಜಡವಾದದ್ದು ಹೋಗಲಿ ಕ್ರಿಯಾಶೀಲ ನೀರಾದರೂ ಇತ್ತೋ ಎಂದರೆ ಅದೂ ಇರಲಿಲ್ಲ ಆಗ ಬ್ರಹ್ಮವೊಂದೇ ವಾಯು ಸಹಕಾರವೂ ಇಲ್ಲದೇ ಸ್ವಸಾಮರ್ಥ್ಯದಿಂದ ಇತ್ತು ಮಾತ್ರ ಕಾರಣ ಪರಬ್ರಹ್ಮನನ್ನು ಬಿಟ್ಟು ಬೇರೆ ಸ್ವತಂತ್ರ ಪ್ರೇರಣವಾದುದು ಯಾವುದೂ ಇರಲಿಲ್ಲ. ಅದು ಮಾತ್ರ ತನ್ನ ಆನಂದದಲ್ಲಿ ತಾನಿತ್ತು.

**10. ಅವ್ಯಕ್ತತ್ವಸಾರತಂತ್ರ್ಯಾದಿ ಧರ್ಮಾಂತರೇಣ ಹಿ ತದುಚ್ಯತೇ ॥**

ಇಲ್ಲಿ ಅಸತ್ವೋಕ್ತಿಯು ಸಾಧನೆಗಳಿಗೆ ಸ್ವರೂಪಾಸತ್ವದ ಅಭಿಪ್ರಾಯದಿಂದಲ್ಲ. ಈ ಧರ್ಮಗಳ ಬೇರೆಯಾದ ಸ್ವತಂತ್ರ ಸತ್ವದ ಅಪೇಕ್ಷಯಿಂದ "ಅಸತ್ವ"ವನ್ನುಹೇಳಿದೆ.

**11. "ತಮ ಆಸೀತ್ (ಋ 10-129-3) ಇತ್ಯಾದಿ ವಾಕ್ಯಶೇಷಾತ್ ।**

ಆ ವಾಕ್ಯಗಳ ಉತ್ತರ ವಾಕ್ಯದಲ್ಲಿ "ತಮ ಆಸೀತ್" ಈ ವಾಕ್ಯವು ಹೇಳುವಂತೆ ಪ್ರಲಯದಲ್ಲಿ ಪರ ಶಬ್ದದಿಂದ ಬ್ರಹ್ಮನಿಂದ ಇತರ ಪ್ರಕೃತ್ಯಾದಿ ವಸ್ತುಗಳು ಸ್ವತಂತ್ರವಾಗಿರಲಿಲ್ಲವೆಂದು ಹೇಳಬೇಕು

"ತಮ ಆಸೀತ್'' ತಮಸಾಗೂಳ್ಹಮಗ್ರೆ ಪ್ರಕೇತಂ ಸಲಿಲಂ ಸರ್ವಮಾ ಇದಂ"

ಪ್ರಲಯ ಕಾಲದಲ್ಲಿ ಯಾವ ತಮಸ್ಸು ಚಿತ್ಪ್ರಕೃತ್ಯಾಖ್ಯ ಅಪರತತ್ವವೋ ಆ ಪ್ರಕೃತಿಯು ಜೀವಾನಾಂ ಗ್ಲಪನಾದ್ದುರ್ಗಾತಮ ಇತ್ಯೇವ ತೀರ್ಯ್ಯತೇ ಅಪರ್ಕ್ಷಿಮಿತವಾಗಿ ಯಲ್ಲಾ ದೇಶಗಳಲ್ಲಿಯೂ "ಅವಿಜ್ಞಾತ" ಶಬ್ದ ವಾಚ್ಯ ನೀರಾಗಿ ಇತ್ತು.
ಈ ನೀರಿನಿಂದ ಜಗತ್ತು ಗೂಹಿತವಾಗಿತ್ತು.

12. **ನ ಚಾನ್ಯತ್ರ ಪ್ರಮಾಣಮಸ್ತಿ ॥**

ಇಲ್ಲಿ ಪರರವಾಖ್ಯಾನವಾದ ಚೇತನಾಚೇತನ ಪ್ರಪಂಚಕ್ಕೆ ಬ್ರಹ್ಮನಿಂದ ಅನ್ಯತ ಹೇಳುವುದೆಂಬ ಅರ್ಥವು ಪ್ರಮಾಣ ರಹಿತವಾದ್ದರಿಂದ ದೂಷಿತವು

13. **ಅಜೋಹ್ಯೇಕೋ ಜುಷಮಾಣೋನುಶೇತೇ ।**
**ಜಹಾತ್ಯೇನಾಂ ಭುಕ್ತಭೋಗಾಮಜೋನ್ಯಃ ॥**
(ಮಹಾನಾಮ್ನಿ 10-5)

ರಜಸ್ತಮಸತ್ವಗುಣೋಪೇತ ಪ್ರಕೃತಿಯು ಸದೃಶ ಮಹದಾದಿ ಕಾರ್ಯಗಳನ್ನು ಹುಟ್ಟಿಸುವವಳಾಗಿ ಅಜಶಬ್ದವಾಚ್ಯಳು. ಸಂಸಾರಿ ಜೀವನು ಈ ಪ್ರಕೃತಿಯ ಕಾರ್ಯದಿಂದ ಸಂಸಾರವನ್ನು ಅನುಸರಿಸಿಕೊಂಡಿರುವನು. ಆದರೆ ಮೋಕ್ಷ ಪ್ರಾಪ್ತ ಅನ್ಯ ಜೀವನು ಈ ಪ್ರಪಂಚದಲ್ಲಿ ಪ್ರಕೃತಿ ಸುಖವನ್ನು ಹೊಂದಿ ಪ್ರಳಯ ಕಾಲದಲ್ಲಿ ಅದನ್ನು ತ್ಯಜಿಸಿ ಮೋಕ್ಷ ಹೊಂದುವನು ಎಂದು.

14. **ಅನ್ಯಾದ್ಯನಂತಂ ಜಗದೇತದೀ ದೃಕ್ಪ್ರವರ್ತತೇನಾತ್ರ ವಿಚಾರ್ಯಮಸ್ತಿ । ನ ಚಾನ್ಯಥಾ ಕ್ವಾಪಿ ಚ ಕಸ್ಯಚೇದಮ ಭೂತ್ಪುರಾ ನಾಪಿ ತಥಾ ಭವಿಷ್ಯತ್ ।**

ಪ್ರವಾಹತಃ ಉತ್ಪತ್ತಿ ನಾಶವುಳ್ಳ ಈ ಚರಾಚರ ಪ್ರಪಂಚವು ಈಗಿರುವಂತೆ ಸದಾಕಾಲದಲ್ಲಿಯೂ ಶ್ರೀಪರಬ್ರಹ್ಮನಿಂದ ಸ್ವತಂತ್ರವಾಗಿ ಇರುವುದಿಲ್ಲ ಸರ್ವಕಾಲಗಳಲ್ಲಿಯೂ ಆತನ ಅಧೀನವಾಗಿಯೇ ಇರುವುದು.

15. **ಅಸತ್ಯಮಪ್ರತಿಷ್ಠಂತೇ ಜಗದಾಹುರನೀಶ್ವರಂ ।** ಗೀತಾ

ಜಗತ್ತಿಗೆ ಮಿಥ್ಯಾತ್ವಾದಿಗಳನ್ನು ಹೇಳುವವರು ಆಸುರರೇ ಎಂದು ಗೀತಾ ವಾಕ್ಯವು ಅಂದರೆ ಜಗಜ್ಜನ್ಮಾದಿ ಕಾರಣನನ್ನಾಗಿ ಶ್ರೀಪರಮಾತ್ಮನನ್ನು ಯಾರೂ ತಿಳಿವುದಿಲ್ಲವೋ ಅವಳುಗಳು ಅಸುರರೇ.

16. ಅಸತ್ಯಮಾಹುಃ ಜಗದೇತದಜ್ಞಾಃ ಶಕ್ತಿಂಹರೇರ್ಯೇನವಿದುಃ ಪರಾಂಹಿ ।
ಯಸ್ಸತ್ಯರೂಪಂ ಜಗದೇತ ದೀದೃಕ್ಸೃಷ್ಟ್ವಾತ್ವಭೂತ್ಸತ್ಯ ಕರ್ಮಾ
ಮಹಾತ್ಮಾ ॥

ಯಾರು ಈ ದೃಶ್ಯ ಜಗತ್ತನ್ನು ಅಸತ್ಯವೆಂದು ಕರೆಯುವರೋ ಅವಳು ಅಜ್ಞರು ಶ್ರೀಹರಿಯ ಸರ್ವೋತ್ಕೃಷ್ಟ ಶಕ್ತಿಯನ್ನು ತಿಳಿದವರಲ್ಲ ಯಾವ ಮಹಾಮಹಿಮನಾದ ಶ್ರೀಹರಿಯು ಈ ಸತ್ಯರೂಪವೇ ಆದ ನಾನಾ ವಿಧ ಜಗತ್ತನ್ನು ಸೃಷ್ಟಿಮಾಡಿದುದರಿಂದ ಸತ್ಯಕರ್ಮನೆಂದು ಹೆಸರುಳ್ಳವನೋ ಆತನ ಸತ್ಯತ್ವವು ಪ್ರಸಿದ್ಧವು.

17. ಅಥೈನಮಾಹು ಸ್ಸತ್ಯಕರ್ಮೇತಿಸತ್ಯಂಹ್ಯೇವೇದಂ ವಿಶ್ವಮಸೌಸೃಜತೆ।
ಅಥೈನಮಾಹುರ್ನಿತ್ಯಕರ್ಮೇತಿ ನಿತ್ಯಂಹ್ಯೇವಾಸೌ ಕುರುತೆ ॥

ಶ್ರೀವಿಷ್ಣುವನ್ನು ಸತ್ಯಕರ್ಮನೆಂದು ನಿತ್ಯಕರ್ಮ (ಅಬಾಧಿತಕರ್ಮ)ನೆಂದು ಶೃತಿಯು ಹೇಳುವುದು. ಆದ್ದರಿಂದ ಈ ಮಹಾತ್ಮನ ಕಾರ್ಯವಾದ ಈ ಜಗತ್ತು ಸತ್ಯವೇ ಮತ್ತು ನಿತ್ಯವೇ.

18. **ಯಚ್ಚಿಕೇತ ಸತ್ಯಮಿತ್ತನ್ನ ಮೋಘಂ**(ಋ-10-55-6)
**ಇತ್ಯಾದಿ ಶೃತಿಸ್ಮೃತಿಭ್ಯಃ ।** ವಿಶ್ವಸತ್ಯತ್ವ ಶೃತಿಯಿಂದ ಸಾಧನೆಯು

ಅನಾಪೇಕ್ಷಿತ ಹವಿರಾದಿ ರಸವನ್ನು ಅಪಹರಿಸಿ ಭಕ್ತರಿಗೆ ಅದನ್ನು ಪ್ರಾಪಿಸಿ ಕೊಡುವನೂ ಮತ್ತು ತನ್ನ ಭಕ್ತರಿಗೆ ಯಜ್ಞಾದಿ ಕರ್ಮಗಳ ಫಲಗಳನ್ನು ಕೊಡುವ ಶ್ರೀಪರಮೇಶ್ವರನು ಇಂದ್ರಾದಿ ದೇವತಾನಾಮಗಳಿಂದ ಈ ವಿಶ್ವವನ್ನು ಸೃಷ್ಟಿಸಿದನು. ಆ ಸೃಷ್ಟಿಯು ಸತ್ಯವೇ. ಮಿಥ್ಯಯಲ್ಲ. ಅರ್ಥಕ್ರಿಯಾದಿಗಳಿಗೆ ಉಪಯುಕ್ತವಾದ ಸ್ಪೃಹಣೀಯವಾದ ಸ್ವರ್ಗಭೂಮ್ಯಾದಿ ವಸ್ತುಗಳನ್ನು ಬಲಿ ಚಕ್ರವರ್ತಿಯಿಂದ ಗೆದ್ದು ಇಂದ್ರಾದಿ ದೇವತೆಗಳಿಗೆ ಕೊಟ್ಟನು. ಈಶಾವಾಸ್ಯವಾಕ್ಯವು- "ಕವಿರ್ಮನೀಷೀ

ಪರಿಭೂಸ್ವಯಂಭೂಃರ್ಯಾಥಾ ತಥ್ಯತೋಽರ್ಥಾನ್ ವ್ಯವಧಾಚ್ಛಾಶ್ವತೀಭ್ಯಸ್ಸಮಾಭ್ಯಃ ಸರ್ವಜ್ಞನಾದ ಬ್ರಹ್ಮಾದಿ ಸರ್ವರ ಮನಸ್ಸುಗಳಿಗೆ ಸ್ವಾಮಿಯಾದ (ಸ್ವತಂತ್ರ) ಪ್ರೇರಕ ನಾದ ಅನ್ಯಾಶ್ಚರ್ಯನಾದ ಪರಮೇಶ್ವರನು ಮಹದಾದಿ ವಸ್ತುಗಳನ್ನು ನಿರ್ಮಿಸಿ ದನು. ಹೇ ಮಹಾಮಹಿಮರಾದ ಇಂದ್ರ ಬೃಹಸ್ಪತಿಗಳೇ ಈ ನಿಮ್ಮ ಅಧೀನವಲ್ಲಿ ರುವ ಜಗತ್ತು ನತ್ಯವಾದುದೇ ನಿಮ್ಮ ಸತ್ಯ ನರ್ಜನಾದಿ ರೂಪ ಕರ್ಮಗಳನ್ನು ಸರ್ವ ದೇವತೆಗಳೂ ತಿಳಿಯುವರು.

ವಿಶ್ವಂ ಸತ್ಯಂ ಮಘವಾನಾಯುವೋರಿದಾಪಶ್ಚನ ಪ್ರಮಿನಂತಿವ್ರತಂವಾಂ ।
ಪ್ರಘಾನ್ವಸ್ಯ ಮಹತೋಽಮಹಾನಿ ಸತ್ಯಾಸತ್ಯಸ್ಯ ಕರಣಾನಿವೋಽಚಂ ॥
(ಋ-2-24-12)

19 ಪರಸ್ಪರವಿರೋಧೇ ತು ವಾಕ್ಯಾನಾಂ ಯತ್ರ ಯುಕ್ತತಾ ।
ತಥೈವಾರ್ಥಃ ಪರಿಜ್ಞೇಯೋ ನಾ ವಾಕ್ಯಾಯುಕ್ತಿರಿಷ್ಯತ
ಇತಿ ಬೃಹತ್ಸಂಹಿತಾಯಾಂ ॥

ವಾಕ್ಯಗಳಲ್ಲಿ ಪರಸ್ಪರ ವಿರೋಧವು ಕಂಡಲ್ಲಿಅಲ್ಲಿ ಏಕವಾತ್ಯ ತಾ ಯುಕ್ತಿಬಲದಿಂದ ವಿಷಯವನ್ನು ಗ್ರಹಿಸಬೇಕು. ಪ್ರಾಮಾಣಿಕರು ಕೇವಲ ಯುಕ್ತಿವನ್ನು ಅವಲಂಬಿಸು ವುದಿಲ್ಲ. ಸ್ಮೃತಿ ಶೃತಿಗಳ ಅನುಕೂಲ ಯುಕ್ತಿಯನ್ನು ಮಾತ್ರ ಅಂಗೀಕರಿಸುವರು.

20. ವಿರುದ್ಧವತ್ಪ್ರತೀಯಂತ ಆಗಮಾಯತ್ರ ವೈ ಮಿಥಃ ।

21 ತತ್ರ ದೃಷ್ಟಾನುಸಾರೇಣ ತೇಷಾಮರ್ಥೋನ್ವವೇಕ್ಷ್ಯತ ಇತಿ ಚ ॥

ವೇದ ವೇದಾನು ಸಾರಿ ವಚನಗಳಲ್ಲಿ ಪ್ರಬಲ ಪ್ರಮಾಣ ವಿರೋಧವಿದ್ದಲ್ಲಿ ವಿರು ದ್ಧಾರ್ಥವನ್ನು ತ್ಯಜಿಸಿ ಅವಿರೋಧಥ ರೀತಿಯಿಂದ ಅರ್ಥವನ್ನು ಕಲ್ಪಿಸಬೇಕು ವಿರುದ್ಧ ಪ್ರಮಾಣವಾದಲ್ಲಿ ಬಹು ವಾಕ್ಯಗಳ ತಾತ್ಪರ್ಯವನ್ನು ಗ್ರಹಿಸಬೇಕು

22. ಈಶೋಽನೀಶೋ ಜಗನ್ಮಿಥ್ಯಾ ನ ಪೂಜ್ಯೋ ಗುರುರಿತ್ಯಾಪಿ ।
ಇತ್ಯಾದಿವದ್ವಿರುದ್ಧಾನಿ ವಚನಾನ್ಯಥ ಯುಕ್ತಯಃ ॥

ಈಶ, ಈಸನಲ್ಲ, ಜಗತ್ತು ಅಸತ್ಯ, ಗುರುವು ಪೂಜ್ಯನಲ್ಲ ಇತ್ಯಾದಿ
ವಿರುದ್ಧ ವಚನ ಮತ್ತು ಯುಕ್ತಿಗಳು ಇದ್ದಲ್ಲಿ ಪೂರ್ವಾಪರಗಳ ಯೋಜನೆ ಯಿಂದ ಸರಿಅರ್ಥವು ವಿವೇಚಿಸಲ್ಪಡಬೇಕು.

23. ವೇದ ವೇದಾನುಸಾರೇಷು ವಿರೋಧೇಽನ್ಯಾರ್ಥ ಕಲ್ಪನಾ
ಅನ್ಯೇಷಾಂ ತು ವಿರುದ್ಧಾನಾಂ ವಿಪ್ರಲಂಭೋಽಥವಾಥವಾಭ್ರಮಃ
ಇತಿ ಭಾಗವತ ತಂತ್ರೇ

24. ಶಾಸ್ತ್ರಾರ್ಥಯುಕ್ತ್ಯೋಽನುಭವ, ಪ್ರಮಾಣಂ ತೂತ್ತಮಂ ಮತಂ

25. ಮಧ್ಯಮಂ ತ್ವಾಗಮೋ ಜ್ಞೇಯಃ ಪ್ರತ್ಯಕ್ಷ ಮಧಮಂ ಸ್ಮೃತಂ
ಪ್ರತ್ಯಕ್ಷಯೋ ರಾಗಮಯೋ ರ್ವಿರೋಧೇ ನಿಶ್ಚಯಾಯತು
ಅನುಮಾದ್ಯಾ ನ ಸ್ವತಂತ್ರಾ ಪ್ರಮಾಣಪದವೀಂ ಯಯುರಿತಿ
ಪುರುಷೋತ್ತಮತಂತ್ರೇ ॥

ಶಾಸ್ತ್ರಾರ್ಥ ವಿಷಯಕ್ಕೆ ಅನುಕೂಲವಾದ ಯಥಾರ್ಥ ವಿಷಯಕ್ಕೆ ಅನಾನುಕೂಲವಾದ ಯಥಾರ್ಥಜ್ಞಾನರೂಪವೇ ಕೇವಲ ಉತ್ತಮ ಪ್ರಮಾಣವು ಸಾಕ್ಷಾತ್ ಜ್ಞೇಯ ವಿಷಯಕವಾದ್ದರಿಂದ ಆಗಮದಿಂದ ಲಭ್ಯಜ್ಞಾನವು ಮಧ್ಯಮವು ಪ್ರತ್ಯಕ್ಷ ಪ್ರಮಾಣಕ್ಕೂ ಆಗಮ ಪ್ರಮಾಣಕ್ಕೂ ವಿರೋಧ ಪ್ರಾಪ್ತವಾದಲ್ಲಿ ಆಗ ಅನುಮಾನ ಮೊದಲಾದ ಪ್ರಮಾಣಗಳು ಉಪಯುಕ್ತ ಸ್ವತಂತ್ರವಾಗಲ್ಲ.

## ಸೂ॥ ಓಂ॥ ಯುಕ್ತೇಃ ಶಬ್ದಾಂತರಾಚ್ಚ ಓಂ ॥ 19

ಸೃಷ್ಟಿಯನ್ನು ಪ್ರಲಯ ಕಾಲದ ಅಂತ್ಯದಲ್ಲಿ ಉಪಸಂಹರಿಸುತ್ತಾನೆ ಎಂಬ ಯುಕ್ತಿಯಿಂದಲೂ ಕುಂಟನು ಕೋಲನ್ನು ಆಶ್ರಯಿಸಿ ನಡೆಯುವಂತೆ ಶ್ರೀ ಭಗವಂತನಿಗೆ ಯಾವ ಆಶ್ರಯವುಬೇಡವಾದ್ದರಿಂದ, ಲೀಲೆಯಿಂದ ಸ್ವಸಾಮರ್ಥ್ಯದಿಂದಲೇ ಲೋಕವನ್ನು ಸೃಷ್ಟಿ ಮಾಡುವನು.

ಸಾಧನಾನಾಂ ಸಾಧನತ್ವಂ ಯದಾತ್ಮಾಧೀನ ಮಿಷ್ಯತೆ ।
ತದಾಸಾಧನ ಸಂಪತ್ತಿರೈಶ್ವರ್ಯ ದ್ಯೋತಿಕಾಭವೇತ್ ॥
ಇತ್ಯಾದೇಸ್ಸಾಧನಾಂತರೇಣ ಸೃಷ್ಟಿರ್ಯುಕ್ತಾ। ಅಥ್ಯೈಸ್ಸಂಭೂತೋ ಹಿರಣ್ಯಗರ್ಭ ಇತ್ಯಷ್ಟೌ (ಮಹಾನಾ 1-12) ಇತ್ಯಾದಿ ಶಬ್ದಾಂತರಾಚ್ಚ ॥

ಕರ್ಮ ಜನನ ಸಾಮರ್ಥ್ಯವನ್ನು ಸ್ವಾಧೀನತ್ವದಿಂದ ಅಂಗೀಕರಿಸಿದಲ್ಲಿ ಆತನ ಸಾಧನ ಸಂಪತ್ತಿಯು ಈಶ್ವರತ್ವಸಿದ್ಧಿಯಲ್ಲಿ ಸಾಧನಸಂಪಾದನವು ಯುಕ್ತವು ಅಥ್ಯೈ

ಸಂಭೂತಃಪೃಥಿವ್ಯೈ" ಎಂದು ಇತರ ವಸ್ತುಗಳಿಂದ ಹೇಳಿದ ಸೃಷ್ಟಿಯು ಆ ವಸ್ತುಗಳ ಅಧೀನತ್ವವನ್ನು ಸೂಚಿಸುತ್ತದೆ. ಮುಖ್ಯ ಸೃಷ್ಟಿ ಸ್ವಾತಂತ್ರ್ಯವು ಪರಮಾತ್ಮನದೇ.

## ಸೂ|| ಓಂ|| ಪಟವಚ್ಚ ಓಂ|| 21

ಸಾಧನಾಂತರೇಣಹಿ ಪಟಾದಿಸೃಷ್ಟಿ ರ್ದೃಷ್ಟಾ ||

ಪಟದ ಸೃಷ್ಟಿಯಂತೆ ವಿಶ್ವ ಸೃಷ್ಟಿಯೂ ಕರ್ತೃವಿಗಿಂತ ಬೇರೆ ಸಾಧನಾಂತರ ಗಳಿಲ್ಲದೆ ಸಾಧ್ಯವೆ ಎಂದರೆ ಅವುಗಳೂ ಶ್ರೀಪರಮಾತ್ಮನ ಪ್ರೇರಣಾಶಕ್ತಿಯಿಂದ ಪರಮಾತ್ಮಾಧೀನಗಳೇ ಆಗಿ ಆತನೇ ಸ್ವತಂತ್ರ ಕರ್ತೃವು.

## ಸೂ|| ಓಂ|| ಯಥಾ ಪ್ರಾಣಾದಿಃ ಓಂ|| 21

ತಚ್ಚ ಸಾಧನ ಜಾತಂ ತೇನಾನು ಪ್ರವಿಷ್ಟಮೇವ ಯಥಾ ಶರೀರೇಂದ್ರಿಯಾದಿಃ ಹೇಗೆ ಪ್ರಾಣಾದಿಗಳು ಹಾಗೂ ಇಂದ್ರಿಯುಗಳ ತಾವು ಸ್ವತಂತ್ರವಿಲ್ಲದೆ ಪರ ಮಾತ್ಮ ಪ್ರೇರಕ ಶಕ್ತಿಯಿಂದ ಕಾರ್ಯ ತತ್ಪರವಾಗುವುವೋ ಹಾಗೆಯೇ ಸರ್ವ ಸ್ವತಂತ್ರ ಕರ್ತೃವು ಶ್ರೀಹರಿಯೇ.

28. ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯಪುರುಷೋತ್ತಮಃ |
ಕ್ಷೋಭಯಾಮಾಸ ಭಗವಾನ್ ಸೃಷ್ಟ್ಯರ್ಥಂ ಜಗತಃ
ಪ್ರಭುಃ || ಇತಿ ಕೌರ್ಮೇ

ಈ ಜಗತ್ತಿಗೆ ಒಡೆಯನಾದ ಷಡ್ಗುಣ ಸಂಪನ್ನನಾದ ಶ್ರೀಹರಿಯು ಪ್ರಕೃತ್ಯಭಿ ಮಾನಿ ಸರಸ್ವತಿಯನ್ನೂ ಪುರುಷನಾದ ಚತುರ್ಮುಖನನ್ನೂ ಜಗದಾತ್ಮಕ ಜೀವ ಶರೀರವನ್ನು ಪ್ರವೇಶಿಸಿ ಜಗತ್ತಿನ ಸೃಷ್ಟಿಯನ್ನು ಪ್ರೇರೇಪಿಸಿದನು. ಹೀಗೆ ಸರ್ವ ಸ್ವಾಮಿಸರ್ವಸ್ವತಂತ್ರ ಪರಮಾತ್ಮನೆ ಸರ್ವಸ್ವಸೃಷ್ಟಿ ಕರ್ತನು.

– ಇತಿ ಆರಂಭಣಾಧಿಕರಣಂ –

ಈ ಅಧಿಕರಣದಲ್ಲಿ ಶೃತಿ ಮೂಲ ಯುಕ್ತಿ ಸಿದ್ಧ ಜೀವ ಕರ್ತೃತ್ವ ಪಕ್ಷವು ನಿರಾಕರಿಸಲ್ಪಡುತ್ತದೆ.

1. ಜೀವಕರ್ತೃಪಕ್ಷಃ ಶ್ರುತಿಪ್ರಾಪ್ತೋ ವಿಸ್ತರಾನ್ನಿರಾಕ್ರಿಯತೇ ||

ಹಿಂದೆ ಸಂಕ್ಷೇಪವಾಗಿ ನಿರಾಕರಿಸಿದ್ದರೂ ಈಗ ವಿಸ್ತಾರವಾಗಿ ನಿರಾಕರಿಸಲ್ಪಡುತ್ತದೆ.

## ಸೂ|| ಓಂ|| ಇತರವ್ಯಪದೇಶಾದ್ಧಿತಾಕರಣಾದಿದೋಷ ಪ್ರಸಕ್ತಿಃ ಓಂ|| 22

ಜೀವಾದ್ಭವಂತಿ ಎಂಬ ಶೃತಿಯಂತೆ ಜೀವನೇ ಸ್ವತಂತ್ರ ಕರ್ತನೆಂದರೆ ಹಾಗಲ್ಲ. ಜೀವನಿಗೆ ಸ್ವಹಿತಾಕರಣ ಹಿತಕರಣ ಪ್ರಸಂಗಗಳಲ್ಲಿ ಸ್ವಾತಂತ್ರ್ಯವಿಲ್ಲ ಕರ್ತೃತ್ವ ಪ್ರಸಂಗವು ಶ್ರೀಪರಮಾತ್ಮನ ಸ್ವಾತಂತ್ರವೆ ಹೊರತು ಜೀವನು ಸ್ವತಂತ್ರನಲ್ಲ ।

ಜೀವಕರ್ತೃತ್ವ ಪಕ್ಷೇ ಹಿತಕರಣಂ ಅಹಿತಕರಣಂ ಚ ನಸ್ಯಾತ್ ||

ಜೀವನೇ ಕರ್ತೃತ್ವದಲ್ಲಿ ಸ್ವತಂತ್ರನಾದರೆ ಆಗ ಆ ತನು ಸಂಸಾರದಲ್ಲಿ ಅನುಭವಿಸುವಸುಖ ದುಃಖಗಳೂ ಅವನ ಸ್ವಾಧೀನವಾಗಿರಬೇಕು, ಹಾಗಿಲ್ಲವಾಗ ಜೀವನು ಸ್ವತಂತ್ರ ಕರ್ತೃವಲ್ಲ.

ಲೋಕದಲ್ಲಿ ಘಟಾದಿಗಳ ಕಾರ್ಯಗಳು ಜೀವರಿಂದಲೆ ಕರ್ತೃತ್ವವೆಂಬ ಅನುಭವ ಉಂಟುಮಾಡುತ್ತದೆ. "ಜೀವಾದ್ಭವಂತಿ" ಎಂಬ ಶೃತಿಯಿಂದ ಜೀವರಿಗೆ ಸ್ವಾತಂತ್ರ್ಯ

ದಿಂದ ತಿಳಿಯುತ್ತದೆ ಹೀಗೆ ಈಶ್ವರನ ಅಪೇಕ್ಷೆಯಿಲ್ಲದೆ ಸರ್ವ ಕಾರ್ಯಗಳಿಗೂ ಜೀವನೇ ಕರ್ತೃತ್ವ ಸ್ವಾತಂತ್ರ್ಯವುಳ್ಳವನು (ಮಹದಾದಿ ಕಾರ್ಯಗಳನ್ನು ಬಿಟ್ಟು) ಕಾಣಲಾಗದ ಈಶ್ವರನನ್ನು ಕಲ್ಪನೆ ಮಾಡುವುದು ಯುಕ್ತವಲ್ಲವೆಂದರೆ ಹಾಗಲ್ಲ ಸರ್ವಕರ್ತೃವೂ ಈಶ್ವರನೇ. ಜೀವನಿಗೆ ತನ್ನ ಸುಖ ದುಃಖ ಪ್ರಾಪ್ತಿಗಳು ಮತ್ತು ಮರಣ ಜನನಾದಿಗಳನ್ನು ಹೊಂದದಿರಲು ಸ್ವತಂತ್ರ ಸಾಮರ್ಥ್ಯವಿಲ್ಲವಾಗಿ ಈಶ್ವರನೇ ಸರ್ವ ಸ್ವತಂತ್ರ ಕರ್ತೃವು.

## ಸೂ|| ಓಂ|| ಅಧಿಕಂತು ಭೇದನಿರ್ದೇಶಾತ್ ಓಂ|| 23

ಈಶ್ವರ ಮತ್ತು ಜೀವರುಗಳಿಗೆ ಸಾಮ್ಯವು ಇಲ್ಲ. ಶೃತಿಗಳಲ್ಲಿ ಈಶ್ವರನು ತಿಳಿಯಲ್ಪಡಬೇಕು ಕೇಳಲ್ಪಡಬೇಕು ಎಂಬ ಶ್ರೋತಾ, ಮಂತ್ರಾ ಎಂಬ ವಾಕ್ಯಗಳಿಂದ ಪರಮಾತ್ಮನಿಗೆ ಜೀವರಿಂದ ಅತಿಶಯವು ಹೇಳಿದೆ. ಆದ್ದರಿಂದ ಈಶ್ವರನಿಗೆ ಜೀವರಿಗಿಂತ ಅಧಿಕ ಶಕ್ತಿ ಇದೆ ಎಂದು ತಿಳಿಯುತ್ತದೆ.

ನ ಚ ಬ್ರಹ್ಮಣಃ ಶ್ರಮ ಚಿಂತಾದಿ ದೋಷ ಪ್ರಾಪ್ತಿಃ ಅಧಿಕ ಶಕ್ತಿತ್ವಾತ್ ।

ಶ್ರೋತಾ ಮಂತಾ "ದ್ರಷ್ಟಾ ದೇಷ್ಟಾ" ಘೋಷ್ಟಾ ವಿಜ್ಞಾತಾ ಸರ್ವೇಷಾಂ ॥
ಭೂತಾನಾ ಮಾಂತರ ಪುರುಷಃ (ಐ. ಆ-3-2-4) "ಏಷ ತ ಅತ್ಮಾ
ಸರ್ವಾಂತರಃ" (ಬೃ-5-5-1) "ಯೋ"ऽ ಶನಾಯಾಪಿ ಪಾಸೇ ಶೋಕಂ
ಮೋಹಂ ಜರಾಂ ಮೃತ್ಯು ಮತ್ಯೇತಿ" (ಬೃ-5-5-1) ಇತ್ಯಾದಿ ವಿಶೇಷ
ದರ್ಶನಾತ್

ಈಶ್ವರನಿಗೆ ಅಧಿಕ ಶಕ್ತಿಯಿರುವುದರಿಂದ ಶ್ರಮ ಚಿಂತಾದಿದೋಷ ಪ್ರಾಪ್ತಿಯಿಲ್ಲ ಶೃತಿಯು ಬ್ರಹ್ಮನಿಗೆ ನಿರ್ದೋಷತ್ವ ಗುಣಪೂರ್ಣತ್ವ ಹೇಯೋಪಾದೇಯ ರಹಿತತ್ವಾದಿ ಅತಿಶಯವನ್ನು ಹೇಳುವುದು.

## ಸೂ|| ಓಂ|| ಅಶ್ಮಾದಿವಚ್ಚತದನುಪಪತ್ತಿಃ ಓಂ|| 24

ಚೇತನತ್ವೇಪ್ಯಶ್ಮಾದಿವದ ಸ್ವತಂತ್ರತ್ವಾತ್ ಸ್ವತಃ ಕರ್ತೃತ್ವಾನುಪಪತ್ತಿಃ ಜೀವಸ್ಯ

ಜೀವನಿಗೆ ಚೇತನತ್ವವಿದ್ದರೂ ಸರ್ವಸ್ವತಂತ್ರ ಕರ್ತೃತ್ವವು ಇಲ್ಲವಾಗಿ ಪಾಷಾಣಾದಿ ಜಡವಸ್ತುಗಳಂತೆ ಕರ್ತೃತ್ವವಿಲ್ಲ ಅಸ್ವಾಂತಂತ್ರ್ಯವು.

**5. ಯಥಾದಾರು ಮಯೀ ಯೋಷಾಂ ನರಃ ಸ್ಥಿರ ಸಮಾಹಿತಃ**
**ಇಂಗಯತ್ಯಂಗ ಮಂಗಾನಿ ತಥಾರಾಜನ್ನಿಮಾಃ ಪ್ರಜಾಃ ।**

ಇತಿ ಭಾರತೇ

ಮನಸ್ಥೈರ್ಯವುಳ್ಳ ಚೇತನನು ಮರದ ತುಂಡಿನಿಂದ ಕೆತ್ತಲ್ಪಡುವ ಸ್ತ್ರೀಬೊಂಬೆಯ ಹಸ್ತಾದ್ಯಂಗಾಂಗಳನ್ನು ಹಿಂದಿನಿಂದ ಸೂತ್ರಗಳನ್ನು ಎಳೆದು ಆಡಿಸುವಂತೆ (ರೂಪಿಸುವಂತೆ) ಶ್ರೀಪರಮಾತ್ಮನು ಜೀವರ ಅಂಗಾಗಗಳನ್ನು ಚೇಷ್ಟಿಸುವನು ಜೀವನಿಗೆ ಸ್ವಾತಂತ್ರ್ಯವಿಲ್ಲ ಎಂಬು ಭಾರತ ವಾಕ್ಯವು.

## ಸೂ|| ಓಂ|| ಉಪಸಂಹಾರದರ್ಶನಾನ್ನೇತಿ ಚೇತ್ ಕ್ಷೀರವದ್ಧಿ ಓಂ|| 25

ಜೀವೇನ ಕಾರ್ಯೋಪ ಸಂಹಾರ ದರ್ಶನಾತ್ತಸ್ಯ ಕರ್ತೃತ್ವ ಮಿತಿ ಚೇತ್ ।
ನ ಯಥಾ ಗೋಷು ಕ್ಷೀರಂ ದೃಶ್ಯ ಮಾನಮಪಿ ಪ್ರಾಣಾದೇವ ಜಾಯತೆ ||

ಜೀವನು ಪ್ರಾರಂಭಿಸಿದ ಕಾರ್ಯವನ್ನು ಅವನೇ ಮಾಡಿ ಮುಗಿಸುವುದು ಕಾಣುವುದರಿಂದ ಜೀವನೇ ಕರ್ತೃತ್ವವುಳ್ಳವನು ಪರಮಾತ್ಮನಲ್ಲವೆಂದರೆ ಗೋವಿನಲ್ಲಿರುವ ಕ್ಷೀರದಂತೆ ಪ್ರಾಣನಿಂದಲೇ ಕ್ಷೀರವಾಗಿ ಪರಿಣಮಿಸಲ್ಪಟ್ಟು ದೃಷ್ಟವಾಗುತ್ತದೆಯಷ್ಟೆ.

**7. ಅನ್ನಂರಸಾದಿ ರೂಪೇಣ ಪ್ರಾಣಃ ಪರಿಣಯತ್ಯಸಾವಿತಿ ವಚನಾತ್**
**ಏವಂ ಜೀವೇ ದೃಶ್ಯ ಮಾನೋಽಮಪಿ ಕಾರ್ಯೋಪಸಂಹಾರೋ**
**ಸ್ವಾತಂತ್ರ್ಯತ್ಪರಕೃತ ಏವ ||**

ಶ್ರೀಹರಿಯು ಜೀವನು ಉಪಯೋಗಿಸುವ ಅನ್ನಾದಿಗಳನ್ನು ಮುಖ್ಯ ಪ್ರಾಣದ್ವಾರಾ ರಸಾದಿ ರೂಪಗಳನ್ನಾಗಿ ಪರಿಣಮಿಸುವನು(ಶರೀರ ಪ್ರೇರಕತ್ವದಿಂದ) ಈ ವಚ

ನದಿಂದ ಜೀವನಿಂದ ಮಾಡಲ್ಪಡುವ ಆತನ ಕಾರ್ಯಗಳ ಪೂರ್ತಿಯು ಪರಮಾತ್ಮನ ಸ್ವತಂತ್ರ ಕರ್ತೃತ್ವದಿಂದಲೇ

8. ಯ ಆತ್ಮಾನಮಂತರೋ ಯಮಯತಿ ನಾಹಂ ಕರ್ತಾನ ಕರ್ತಾ ತ್ವಂ ಕರ್ತಾ ಯಸ್ತು ಸದಾ ಪ್ರಭುರಿತ್ಯಾದೇಃ ।

ಯಾವ ಪರಮ ಪುರುಷನು ಜೀವರ ಶರೀರವನ್ನು ಅಂತರ್ಯಾಮಿ ರೂಪದಿಂದ ಪ್ರವೇಶಿಸಿ ಜೀವರನ್ನು ಕಾರ್ಯಗಳಲ್ಲಿ ನಿಯಮಿಸುವನೋ ಆತನೇ ಸರ್ವತಂತ್ರ ಸ್ವತಂತ್ರನು. ಜೀವನು ಆತನನ್ನು ಅನುಸರಿಸಿಯೇ ಕಾರ್ಯ ಮಾಡುವನು ಸ್ವತಂತ್ರ ವಾಗಿ ಅಲ್ಲ. ಸರ್ವ ಕಾರ್ಯಕರ್ತನು ಯಾವಾಗಲೂ ಶ್ರೀಹರಿಯೇ.

## ಸೂ॥ ಓಂ॥ ದೇವಾದಿವದಪಿಲೋಕೇ ಓಂ॥ 26

ನ ಚ ಕರ್ತುರೀಶ್ವರಸ್ಯಾದೃಷ್ಟಿ ವಿರೋಧಃ ।ದೇವಾದಿ ವದದೃಶ್ಯತ್ವಶಕ್ತಿ ಯೋಗಾತ್ ॥ ಲೋಕೆ ಪಿಶಾಚಾದೀನಾಂ ತಾ ದೃಶೀ ಶಕ್ತಿರ್ದೃಷ್ಟಾ, ಕಿಮೀಶ್ವರಸ್ಯ

ಅವನೇ ಸರ್ವ ಕರ್ತೃವಾದಲ್ಲಿ ಯಾಕೆ ಕಾಣುವದಿಲ್ಲ ಎಂದರೆ ದೇವತೆ ಗಳಂತೆ ದೇವಾದಿ ದೇವನಾದ ಈಶ್ವರನಿಗೆ ಅದೃಶ್ಯತ್ವ ಮಹಿಮೆಯುಂಟಷ್ಟೆ ಪಿಶಾಚಾದಿ ಗಳೂ ಅದೃಶ್ಯತ್ವ ಶಕ್ತಿವುಳ್ಳವುಗಳಾಗಿ ತಿಳಿಯುತ್ತಿರಲು ಜಗದೀಶ್ವರನಿಗೆ ಈ ಶಕ್ತಿಯು ಸ್ವತಃ ಸಿದ್ಧವೇ.

10. ನ ಯುಕ್ತಿ ಯೋಗಾದ್ವಾಕ್ಯಾನಿ ನಿರಾಕಾರ್ಯಾಣ್ಯಪಿ ಕ್ವಚಿತ್ ವಿರೋಧ ಏವ ವಾಕ್ಯಾನಾಂ ಯುಕ್ತಿಯೋ ನ ತು ರಿಯುಕ್ತಯ ಇತಿ ಬೃಹತ್ಸಂಹಿತಾಯಾಂ ॥

ವಾಕ್ಯಗಳಲ್ಲಿ ಪರಸ್ಪರ ವಿರೋಧವು ಕಂಡರೆ ಅವಿರೋಧ ಪರಿಹಾರಕ್ಕಾಗಿ ಸಾಧು ಯುಕ್ತಿಗಳ ಪ್ರಯೋಜನಉಂಟು ಶುಷ್ಕ ಯುಕ್ತಿಗಳಿಂದ ಪ್ರಯೋಜನವಿಲ್ಲ.

## ಸೂ॥ ಓಂ॥ ಕೃತ್ಸ್ನಪ್ರಸಕ್ತಿರ್ನಿರವಯವತ್ವ ಶಬ್ದಕೋಪಾವಾ ಓಂ॥ 27

ಅಯಂ ಚ ದೋಷೋ ಜೀವ ಕರ್ತೃತ್ವ ಪಕ್ಷ । ಏಕೇನಾಂಗುಲಿಮಾತ್ರೇಣ ಪ್ರವರ್ತ ಮಾನೋಪಿ ಪೂರ್ಣ ಪ್ರವೃತ್ತಿಸ್ಯಾತ್ । ನ ಚ ತದ್ಯುಜ್ಯತಿ ಸಾಮರ್ಥ್ಯೈಕ ದೇಶ ಪ್ರದರ್ಶನಾತ್ ॥

ಜೀವನಿಗೆ ಸ್ವತಂತ್ರ ಕರ್ತೃತ್ವವನ್ನು ಹೇಳಿದಲ್ಲಿ ಆತನಿಗೆ ತೃಣಾದಿ ಇತರ ಜಡ ಪದಾರ್ಥಗಳ ಪ್ರೇರಕ ಶಕ್ತಿಯೂ ಇರಬೇಕು. ಇದು ಕಂಡಿಲ್ಲ. ಅಥವಾ ಒಂದು ಜಡ ದೇಹದಲ್ಲಿಯೇ ಕರ್ತೃತ್ವವು ಕಂಡಿಲ್ಲ ಅಥವಾ ಒಂದು ಜಡದೇಹದಲ್ಲಿಯೇ ಕರ್ತೃತ್ವವು ಎಂದರೆ ಅಲ್ಲಿಯೂ ಏಕೆ ಅವಯವದಲ್ಲಿ ಪೂರ್ಣ ಶಕ್ತಿಯು ಕಂಡು ಬಂದಿಲ್ಲ ಮತ್ತು "ನಿರವಯವ" ಎಂಬ ಶೃತಿಯಲ್ಲಿ ಹೇಳಲ್ಪಡುವ ಜೀವನಿಗೆ ಅಸ್ವಾಧೀನ ಉಪಾಧಿಯಿಂದ ಅವಯವ ಸಂಬಂಧವೇ ವಿನಃ ಸ್ವರೂಪದಿಂದಲ್ಲ ಆದ್ದರಿಂದ ಸ್ವತಂತ್ರವಾಗಿ ಉಪಾಧಿಗೆ ಸ್ವಾಮಿಯಾದ ಶ್ರೀಪರಮಾತ್ಮನೇ ಮುಖ್ಯ ಕರ್ತ ಜೀವನಿಗೆ ಸ್ವತಂತ್ರವು ಇಲ್ಲ.

12 **ನ ಚೈಕದೇಶೇನ । ನಿರವಯವತ್ವಾತ್ । ಅಥಯಃ ಸ ಜೀವಃ ಸ ನಿತ್ಯೋ ನಿರ್ವ್ಯಯವೋ ಜ್ಞಾತಾಽಜ್ಞಾತಾ ಸುಖೀ ದುಃಖೀ ಶರೀರೇಂದ್ರಿಯಸ್ಥ ಇತಿ ಭಾಲ್ಲವೇಯಶ್ರುತಿಃ ॥**

ಜೀವನಿಗೆ ಏಕ ದೇಶ ಪ್ರವೃತ್ತಿ ಸ್ವಾತಂತ್ರ್ಯವೂ ಕೂಡುವುದಿಲ್ಲ ಏಕೆಂದರೆ ಜೀವನಿಗೆ ಸ್ವರೂಪ ಭೂತಾವಯವಿಲ್ಲ ಎಂದು ಭಾಲ್ಲವೇಯಃ ಶೃತಿಯು.

13. **ನಚೋಪಾಧಿಕೃತೋಂಶಃ । ಸ ಏವ । ಅಂಶ ಉಪಹಿತ ಇತಿ ದ್ವಿತ್ವಾಪೇಕ್ಷತ್ವಾತ್ ॥**

ಜೀವನಿಗೆ ಸ್ವತಃ ಜಡ ಶರೀರದ ಉಪಾಧಿಕೃತಾವಯವಗಳೇ ಹೊರ್ತು ಸ್ವರೂಪಾವಯವಗಳಿಲ್ಲ. ಸರ್ವ ಸ್ವತಂತ್ರನಾದ ಶ್ರೀ ಪರಮಾತ್ಮನ ಅಧೀನವಾದ ಅವಯವಗಳ ಪೂರ್ಣ ಕರ್ತೃತ್ವವು ಶ್ರೀಪರಮಾತ್ಮನದೇ ಜೀವನದಲ್ಲಿ

14. **ನ ಚಾನ್ಯತ್ಕಲ್ಪಂ ಕ್ಯ। ಯದ್ದಿಯುಕ್ತ್ಯಾ ವಿರುಧ್ಯೇತ ತದೀಶ ಕೃತಮೇವಹೀತಿ ಗತ್ಯಂತರೋಕ್ತೇಃ ॥**

ಜೀವ ಕರ್ತೃತ್ವ ಸ್ವಾತಂತ್ರ್ಯವು ಯುಕ್ತಿ ವಿರುದ್ಧವು. ಈಶ್ವರನೇ ಸರ್ವತಂತ್ರ ಸ್ವತಂತ್ರ ಕರ್ತೃವು. ಅನ್ಯತ್ರ ನಿಮಿತ್ತವು ಯುಕ್ತವಲ್ಲ.

– ಇತಿ ಇತರ ವ್ಯಪದೇಶಾಧಿಕರಣಂ –

## – ಶ್ರುತೇಸ್ತು ಶಬ್ದಮೂಲತ್ವಾಧಿಕರಣಂ –

ಈ ಅಧಿಕರಣದಲ್ಲಿ ಶ್ರೀ ವಿಷ್ಣುವಿಗೆ ಸರ್ವ ಕರ್ತೃತ್ವ ವಿಷಯದಲ್ಲಿ ಪ್ರಬಲ ಯುಕ್ತಿ ವಿರೋಧವು ಪರಿಹರಿಸಲ್ಪಡುವುದು. ಜೀವ ಕರ್ತೃತ್ವ ಪಕ್ಷದಲ್ಲಿ ಯಾವ ದೋಷಗಳನ್ನು ಹೇಳಿದೆಯೋ ಅವುಗಳು ವಿಷ್ಣುವಿನ ಪಕ್ಷದಲ್ಲಿಯೂ ಸಮವಾದ್ದರಿಂದ ನಿರ್ಧಾರವು ಹೇಗೆ ಎಂದರೆ

## ಸೂ॥ ಓಂ॥ ಶ್ರುತೇಸ್ತು ಶಬ್ದಮೂಲತ್ವಾತ್ ಓಂ॥ 28

ಈಶ್ವರನ ಪಕ್ಷದಲ್ಲಿ ಜೀವ ಪಕ್ಷದಲ್ಲಿ ಹೇಳಿದ ಕೃತ್ಸ್ನ ಪ್ರಸಕ್ತ್ಯಾದಿ ದೋಷಗಳು ಇರುವುದಿಲ್ಲ. "ಯೋಽಸೌ" ವಿರುದ್ಧಃ ಎಂಬ ಶೃತಿಯಲ್ಲಿ ಶಬ್ದ ಮೂಲತ್ವವನ್ನು ಹೇಳಿದೆ. ಈಶ್ವರ ಮತ್ತು ಅವನ ಧರ್ಮಗಳಿಗೆ ಶಬ್ದ ಪ್ರಮಾಣವಿದ್ದಲ್ಲಿ ಯುಕ್ತಿ ವಿರುದ್ಧ ಎಂದು ಸಾಧಿಸಲಾಗದು ಜೀವರ ವಿಷಯದಲ್ಲಿ ಮಾತ್ರವೆ ಅಡ್ಡಿಯು.

ನ ಚೇಶ್ವರಪಕ್ಷೇಯಂ ವಿರೋಧಃ । "ಯೋಽಸೌ" ವಿರುದ್ಧೋಽವಿರುದ್ಧೋ ಮನುರಮನುರವಾಗ್ವಾಗಿಂದ್ರೋಽನಿಂದ್ರಃ ಪ್ರವೃತ್ತಿರಪ್ರವೃತ್ತಿಃ ಸಪರಃ ಪರಮಾತ್ಮಾ ಇತಿ ಪೈಂಗ್ಯಾದಿಶ್ರುತೇರೇವ ।

ಈ ಪರಮಾತ್ಮನು ವಿರುದ್ಧಃ ಲೌಕಿಕ ಕರ್ತೃತ್ವ ವಿರುದ್ಧ ಲಕ್ಷಣವಂತನು ಅವಿರುದ್ಧಃ ಪ್ರಮಾಣಗಳಿಂದ ವಸ್ತು ವಿರುದ್ಧನಲ್ಲ ಆದ್ದರಿಂದಲೇ ಈತನಿಂದ ಬೇರೆ ಸರ್ವಜ್ಞನಿಲ್ಲ. ಮನುಃ ಸರ್ವವನ್ನು ತಿಳಿದವನು ಯಾರಿಂದಲೂ ತಿಳಿಯದವನು ಅಮನಃ ಅವಾಕ್ ಸ್ವತಂತ್ರ ಅನ್ಯವ್ಯಕ್ತವಲ್ಲದವನು. ವಾಕ್ ಅವ್ಯಕ್ತವು ಇಂದ್ರಃ- ಪರಮೇಶ್ವರನು ಅನಿಂದ್ರಃ ತನಗಿಂತ ಬೇರೆ ಸ್ವಾಮಿಯಿಲ್ಲದವನು ಪರಃ ಸರ್ವ ಶ್ರೇಷ್ಠನು ಸ ಪರಮಾತ್ಮಾ ಶ್ರೀಲಕ್ಷ್ಮೀ ಸಮೇತನು ಇಂಥ ವಿಲಕ್ಷಣನು ಪರ ಮಾತ್ಮನು.

2 ಶಬ್ಧ ಮೂಲಾಚ್ಚ ನ ಯುಕ್ತಿವಿರೋಧಃ ।

ಆಗಮೋಕ್ತ ಪ್ರಮೇಯವು ಶುಷ್ಕಾನುಮಾನದಿಂದ ನಿಂದ್ಯವಲ್ಲ. ಆದರೆ ವಾಕ್ಯಗಳಲ್ಲಿ ಪರಸ್ಪರ ವಿರೋಧವು ಕಂಡಲ್ಲಿ ಪರಿಹಾರಕ್ಕೆ ಮಾತ್ರವೇ ಅನುಮಾನ ಸಾಹಾಯ್ಯವು.

3 ಯದ್ವಾಕ್ಯೋಕ್ತಂ ನ ತದ್ಯುಕ್ತಿರ್ವಿರೋದ್ಧುಂ ಶಕ್ನುಯಾತ್ಕ್ವ
ಚಿತ್ । ವಿರೋಧೇ ವಾಕ್ಯಯೋಃ ಕ್ವಾಪಿ ಕಿಚಿಂತ್ಸಾಹಾಯ್ಯ
ಕಾರಣಮಿತಿ ಪುರುಷೋತ್ತಮತಂತ್ರೇ ॥

ಶ್ರೀಪರಮೇಶ್ವರನು ಶಬ್ದದಿಂದ ಗೋಚರನೇ ಹೊರ್ತು ಜೀವರಂತೆ ಪ್ರತ್ಯಕ್ಷ ದೃಶ್ಯನಲ್ಲವಾದ್ದರಿಂದ "ನಾವೇದವಿನ್ಮನುತೇ ತಂ ಬೃಹಂತಂ" ಎಂಬ ವಾಕ್ಯದಿಂದ ಪರ ಮಾತ್ಮ ಜ್ಞಾನಕ್ಕೆ ಶಬ್ದ ಮೂಲತ್ರವೇ ಮುಖ್ಯ ಪ್ರಮಾಣ್ಯವು. ಈ ಪ್ರಮಾಣವನ್ನು ಅನುಮಾನಗಳು ನಿಷೇಧಿಸಲಾರವು

## ಸೂ॥ ಓಂ॥ ಆತ್ಮನಿ ಚೈವಂ ವಿಚಿತ್ರಾಶ್ಚಹಿ ಓಂ॥ 29

ಪರಮಾತ್ಮನೋ ವಿಚಿತ್ರಾಶ್ಚ ಶಕ್ತಯಸ್ಸಂತಿ ನಾನ್ಯೇಷಾಂ ॥

ಈಶ್ವರನಲ್ಲಿಯೇ ಯೋಚಿಸಲು ಕೂಡ ಅಸಾಧ್ಯವಾದ ಸಕಲ ಯುಕ್ತಿ ವಿರುದ್ಧ ಗಳಾದ ವಿಚಿತ್ರ ಶಕ್ತಿಗಳಿವೆಯೆಂದು ಶೃತಿಗಳಲ್ಲಿ ಪ್ರಸಿದ್ಧವು ಇತರರಿಗೆ ಹಾಗಿಲ್ಲ.

5. ವಿಚಿತ್ರ ಶಕ್ತಿಃ ಪುರುಷಃ ಪುರಾಣೋ ನಚಾನ್ಯೇಷಾಂ ಶಕ್ತ ಯಸ್ತಾದೃಶಾಃ ಸ್ಯುಃ । ಏಕೋ ವಶೀ ಸರ್ವಭೂತಾಂತರಾತ್ಮಾ ಸರ್ವಾನ್ದೇವಾನೇಕ ಏವಾನುವಿಷ್ಟಃ । ಇತಿ ಶ್ವೇತಾಶ್ವತರಶ್ರುತಿಃ ||

ಪುರಾತನನಾದ ಭಗವಂತನು ವಿಚಿತ್ರ ಶಕ್ತಿವಂತನು ಜೀವ ಚೇತನರಿಗೆ ಪರಮಾತ್ಮನ ವಿಚಿತ್ರ ಶಕ್ತಿಗಳ ಸದೃಶ ಶಕ್ತಿಗಳೂ ಕೂಡ ಎಂದೂ ಇಲ್ಲ. ಆತನೇ ಪ್ರಧಾನ ಪುರುಷನು ಸರ್ವವನ್ನು ವಶವಡಿಸಿಕೊಂಡಿರುವವನು ಬ್ರಹ್ಮಾದಿ ಸರ್ವಚೇತನ ಸಮುದಾಯವನ್ನು ಆತನು ನಿಯಾಮಕನಾಗಿ, ಸಮಸ್ತ ದೇವತೆಗಳನ್ನು ಭಿನ್ನವಲ್ಲದ ಬಹು ರೂಪಗಳಿಂದ ಪ್ರವೇಶಿಸಿ ಪ್ರೇರೇಪಿಸುವವನು

## ಸೂ|| ಓಂ|| ಸ್ವಪಕ್ಷದೋಷಾತ್ ಓಂ|| 30

ಯಾವ ಯುಕ್ತಿಗಳು ಜೀವ ಪಕ್ಷದಲ್ಲಿ ವಿರುದ್ಧ ದೋಷಗಳೆಂದು ಶೃತಿಯಲ್ಲಿ ಹೇಳಿದೆಯೋ ಅವುಗಳು ಪರಮಾತ್ಮ ವಿಷಯದಲ್ಲಿ ದೋಷಗಳಲ್ಲ

ಯೇ ದೋಷಾ ಇತರತ್ರಾಪಿ ತೇ ಗುಣಾಃ ಪರಮೇವತಾಃ ।
ನ ದೋಷಾ ಪರಮೇ ಕಶ್ಚಿದ್ಗುಣಾಏವ ನಿರಂತರಾ || ಇತಿ ವಚನಾಜ್ಜೀವ ಪಕ್ಷ ಏವ ದೋಷೋ ನ ಪರಪಕ್ಷೇ ||

ಜೀವರ ಪಕ್ಷದಲ್ಲಿ ಯಾವುದು ದೋಷಗಳೊ ಅದು ಜೀವ ಪಕ್ಷದಲ್ಲಿ ಮಾತ್ರವೇ ಪರ ಪಕ್ಷದಲ್ಲಿ ಅನ್ವಯಿಸುವುದಿಲ್ಲ ಅಚಿಂತ್ಯಾದ್ಭುತ ಶಕ್ತಿಯಿಂದ ಆ ದೋಷಗಳೇ ನಿರಂತರವಾಗಿ ಪರಮಾತ್ಮನ ಮಹಿಮೆಗಳಾಗುತ್ತವೆ.

7. ಅಥ ಯಃ ಸದೋಷಃ ಸಾಂಜನಃ ಸಜೀವೋಽಥ ಯಃ ಸ ನಿರ್ದೋಷೋ ನಿಷ್ಕಲಃ ಸಗುಣಃ ಪರಃ ಪರಮಾತ್ಮೇತಿ ಕಾಷಾಯಣ ಶ್ರುತಿಃ ||

ಯಾವ ಚೇತನವು ದುಃಖ, ಅಲ್ಪಜ್ಞ, ರಾಗಾದಿ ದೋಷ, ಪುಣ್ಯಪಾಪಾದಿ ಸಂಗದಿಂದ ಫಲ ಭೋಕ್ತೃವೋ, ಉತ್ಪತ್ತಿ ಉಳ್ಳವನೋ ಅವನು ಜೀವನು ಯಾವ

ಚೇತನ ವಸ್ತುವು ನಿರ್ದೋಷವೋ ಭಿನ್ನಾಂಶ ಶೂನ್ಯವೋ ಷೋಡಶ ಕಲಾವರ್ಜಿತ ನೋ ಜ್ಞಾನಾನಂದಾದಿ ಗುಣವುಳ್ಳವನೋ ಪರಮಾತ್ಮನೋ (ಉತ್ತಮನೋ) ಶ್ರೀ ಲಕ್ಷ್ಮೀಪತಿಯಲ್ಲಿ ಅವುಗಳು ಅದೋಷಗಳೇ (ಸದೋಷ ನಿರ್ದೋಷ ಭೇದವಿಲ್ಲದೆಯೇ ಎಲ್ಲವೂ ಗುಣಗಳೇ)

## ಸೂ|| ಓಂ|| ಸರ್ವೋಪೇತಾ ಚ ತದ್ದರ್ಶನಾತ್ ಓಂ || 31

ಪರಮಾತ್ಮನಿಗೆ ಸಾಮಾನ್ಯವಾಗಿ ವಿಚಿತ್ರ ಶಕ್ತಿ ಮಾತ್ರವೇ ಅಲ್ಲ. ಸರ್ವ ವಿಷಯಕ ಸರ್ವ ಕಾಲೀನ ಸರ್ವ ಶಕ್ತಿಮಃಯೆಂದು "ಸರ್ವೈಯುಕ್ತಾ" ಎಂದು ಶೃತಿಯು ಹೇಳಿದೆಯಾಗಿ ಆತನ ವಿಷಯದಲ್ಲಿ ಯುಕ್ತಿ ವಿರೋಧ ಶಂಕೆಯನ್ನು ಕೂಡ ಮಾಡಲಾಗದು

ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾಸಾ ಪರೇತಿಯಾಂ ಪ್ರಾಹುರಜಸ್ರಶಕ್ತಿಂ ।
ನಿತ್ಯಾನಂದಾ ನಿತ್ಯ ರೂಪಾ ಽಜರಾಚ ಯಾ ಶಾಶ್ವತಾತ್ಮೇತಿ ಚಯಾಂ ವದಂತಿ ।
ಇತಿ ಚರುರ್ವೇದ ಶಿಖಾಯಾಂ । ಅತೋ ನಕೇವಲಂ ವಿಚಿತ್ರ ಶಕ್ತಿಃ ಕಿಂತು ಸರ್ವಶಕ್ತಿರೇವ

ಜ್ಞಾನಿಗಳು ಯಾವ ಚೇತನವನ್ನೂ ನಿತ್ಯ ಶಕ್ತಿವುಳ್ಳದೆಂದೂ ಹೇಳುವರೋ ಶಾಶ್ವತವು ನಿರ್ವಿಕಾರ ಸ್ವರೂಪ, ನಿತ್ಯಾನಂದ, ನಿತ್ಯಾಶೃತ, ಜರಾರಹಿತವೋ ಅಂದು ಪರಾದೇವತೆಯು ಸರ್ವ ವಿಷಯಕ ಸರ್ವ ಕಾಲೀನ ವಿಚಿತ್ರ ಶಕ್ತಿ ಮತ್ತು ಸರ್ವಶಕ್ತಿವುಳ್ಳವನೇ.

## ಸೂ|| ಓಂ|| ವಿಕರಣತ್ವಾನ್ನೇತಿ ಚೇತ್ತದುಕ್ತಂ ಓಂ|| 32

ನ ಚ ಕರಣಾಭಾವಾದನುಪಪತ್ತಿರಿತಿ ಯುಕ್ತಂ ।

"ಅಪಾಣಿ ಪಾದಃ ಎಂಬ ಶೃತಿಯಲ್ಲಿ ಈಶ್ವರನಿಗೆ ಹಸ್ತಾದಿ ಇಂದ್ರಿಯಗಳು ಇಲ್ಲ ವೆಂದು ಹೇಳಿರುವುದರಿಂದ ಆ ಇಂದ್ರಿಯಗಳಿಂದ ಮಾಡಲ್ಪಡಬೇಕಾದ ಕರ್ಮವು ಸಾಧ್ಯವಿಲ್ಲವಾಗಿ ಆತನಲ್ಲಿ ಕರ್ತೃತ್ವವು ಯುಕ್ತವಲ್ಲವೆಂದರೆ ಹಾಗಲ್ಲ ಆ ವಾಕ್ಯಗಳಲ್ಲಿ ಹೇಳಿರುವ ಇಂದ್ರಿಯಗಳು ಪ್ರಾಕೃತಗಳು ಮಾತ್ರ. ಈ ಪ್ರಾಕೃತ ಇಂದ್ರಿಯಗಳಿಲ್ಲ

ದೆಯೇ ಆತನಲ್ಲಿ ವಿಶೇಷ ಶಕ್ತಿಯಿಂದ ಸರ್ವೇಂದ್ರಿಯ ಕರ್ಮವು ಉಂಟು.

10. **ಅಪಾಣಿಪಾದೋ ಜವನೋ ಗೃಹೀತಾ ಪಶ್ಯಚಕ್ಷುಃ ಸ ಶೃಣೋತ್ಯ ಕರ್ಣಃ ಸ ವೇತ್ತಿ ವೇದ್ಯಂ ನ ಚ ತಸ್ಯಾಸ್ತಿವೇತ್ತಾ ತಮಾಹು ರಗ್ರ್ಯಂಪುರುಷಂ ಮಹಾಂತಂ (ಶೇ-3-197) ನ ತಸ್ಯ ಕಾರ್ಯಂ ಕರಣಂಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೆ । ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲಕ್ರಿಯಾಚ ॥ (ಶೇ. 6-8) ಇತ್ಯಾದಿ ಶೃತಿಭ್ಯಃ ॥**

ಮೇಲಿನ ಶೃತಿಗಳಲ್ಲಿ ಭಗವಂತನು ಪ್ರಾಕೃತ ಪಾಣಿ ಪಾದಗಳಿಲ್ಲದವನಾದರೂ ಅಪ್ರಾಕೃತಾಂಗಗಳಿಂದ ವೇಗಗಮನಾದಿಗಳುಳ್ಳವನು ವೇದ್ಯ-ಭೂತ-ಭವಿಷ್ಯತ್ ವರ್ತಮಾನ ಸರ್ವವನ್ನು ತಿಳಿದವನು. ಈ ಹರಿಯನ್ನು ತಿಳಿದವನು ಸರ್ವಶ್ರೇಷ್ಟ ಮಹಾಪುರುಷನೇ.

ತಸ್ಯಹರೇಃ ಪ್ರಕೃತಿ ಕಾರ್ಯಂ ಪ್ರಾಣಾದಿ ಇಂದ್ರಿಯಂ ನಾಸ್ತಿ ನತತಮಾನು ಭಗವತ್ಸಮಾನ ಏವನದೃಶ್ಯತೆ ಅಧಿಕಸ್ತು ಕುತಃ ಅಸ್ಯಹರೇಃ ಶಕ್ತಿಃ ಪರಾ ಉತ್ಕೃಷ್ಟಾ ವಿಚಿತ್ರಾ ಸ್ವಾಭಾವಿಕೀ ಜ್ಞಾನಂ ಬಲಂ ಕ್ರಿಯಾಚ ಏತದ್ರೂಪಾ ಅಸ್ತಿ ॥

11. **ಸರ್ವೋಪೇತಾ ಚೇತಿ ಸಾಮಾನ್ಯಪರಿಹಾರೇಪಿ ವಿಶೇಷ ಯುಕ್ತ್ಯರ್ಥಂ ಪುನರಾಶಂಕಾ ॥**

ಸಾಧಾರಣವಾಗಿ ಸರ್ವ ವಿರೋಧ ಪರಿಹಾರವಾಗಿದ್ದರೂ ವಿಶೇಷ ಯುಕ್ತಿಯಾಗಿ ಅಪ್ರಾಕೃಶ ಶರೀರ,ಅಪ್ರಾಕೃತ ಚಿದಾನಂದಾದಿ ವಿಗ್ರಹರೂಪ ಉಪಾಯವನ್ನು ಹೇಳಿದೆ.

– ಇತಿ ಶೃತೇಸ್ತು ಶಬ್ದ ಮೂಲತ್ವಾಧಿಕರಣಂ –

1. ಯತ್ಪ್ರಯೋಜನಾರ್ಥಂ ಸೃಷ್ಟ್ಯಾದಿಸ್ತದೂನತ್ವಾದಪೂರ್ಣತೇತ್ಯತ ಇತಿ

ಈ ಅಧಿಕರಣದಲ್ಲಿ ಈಶ್ವರನಿಗೆ ಜಗತ್ಕರ್ತತ್ವದಲ್ಲಿ ನಿಷ್ಫಲತ್ವಾದಿ ಯುಕ್ತಿ ವಿರೋಧವು ಪರಿಹರಿಸಲ್ಪಡುತ್ತದೆ

ಪ್ರಯೋಜನ ಉದ್ದೇಶದಿಂದಲೇ ಜಗತ್ಸರ್ಜನ ವಿಷಯಕ ಪ್ರವೃತ್ತಿಯು ಅಂಗಿಕರಿಸಿದಲ್ಲಿ ಆಗ ಸೃಷ್ಟಿಯು ಪೂರ್ವದಲ್ಲಿ ಇಲ್ಲದ ಪ್ರಯೋಜನಕ್ಕಾಗಿ ಸೃಷ್ಟಿಯು ಎಂಬ ಆತನಲ್ಲಿ ಅಪೂರ್ಣತಾ ಆಪಾದಕತಾ ದೋಷವು ಪ್ರಾಪ್ತವಾಗಿ ವಿಷ್ಣುವಿಗೆ ಜಗತ್ಕರ್ತತ್ವವು ಬಾಧಿತವಾಗಿರುತ್ತದೆ ಎಂದರೆ ಫಲಾಪೇಕ್ಷೆಯಿಲ್ಲದೆ ಪ್ರವೃತ್ತಿ ಎಂದು ಹೇಳಿದೆ.

## ಸೂ|| ಓಂ|| ನ ಪ್ರಯೋಜನವತ್ವಾತ್ ಓಂ|| 33

ಈಶ್ವರನಿಂದ ಮಾಡಲ್ಪಡುವ ಸೃಷ್ಟ್ಯಾದಿಗಳು ಸ್ವಪ್ರಯೋಜನಕ್ಕಾಗಿ ಅಲ್ಲ. ಆತನಿಗೆ ಪೂರ್ಣಾನಂದತ್ವ ಧರ್ಮದಿಂದ ವ್ಯಾಪಕಗಳಾದ ಸರ್ವ ಇಷ್ಟಗಳೂ ಸಿದ್ಧವಾತ ಯಾವ ಇಚ್ಛೆಯೂ ಪ್ರಾಪ್ತವಾಗಬೇಕಾಗಿಲ್ಲ ಸರ್ವೇಚ್ಛೆಯು ಪ್ರಾಪ್ತಿ ಸಿದ್ಧವೇ

"ಅಥೈಷ ಏವ ಪರಮಾನಂದಃ" (ಬೃ-6-3-38) ಇತ್ಯಾದಿನಾ ಕೃತಕೃತ್ಯತಾಗಿನ್ನ ಪ್ರಯೋಜನಾಯ ಸೃಷ್ಟಿಃ ।

"ಅಥೈಷ ಏವ ಪರಮಾನಂದ" ಎಂಬ ವಾಕ್ಯದಲ್ಲಿ ಶ್ರೀಪರಮಾತ್ಮನೇ ಪೂರ್ಣಾನಂದನು ಕೃತಕೃತ್ಯನು. ತನ್ನ ಪ್ರಯೋಜನಕ್ಕಾಗಿ ಆತನು ಜಗತ್ಸೃಷ್ಟಿಯನ್ನು ಮಾಡುವ ಪ್ರವೃತ್ತಿಯು ಕೂಡುವುದಿಲ್ಲ. ಜಗತ್ಸೃಷ್ಟಿಯನ್ನು ಆಶ್ರಯಿಸಬೇಕಾಗಿಲ್ಲ. ಅಪ್ತ ಪೂರ್ಣಕಾಮನು. ಆತನ ಜಗತ್ಸೃಷ್ಟಿಯು ಆತನ ಯಾವ ಪ್ರಯೋ

ಜನಕ್ಕಾಗಿಯೂ ಅಲ್ಲ.

## ಸೂ॥ ಓಂ॥ ಲೋಕವತ್ತು ಲೀಲಾ ಕೈವಲ್ಯಂ ಓಂ॥ 34

ಆದರೂ ಲೋಕದಲ್ಲಿ ಸುಖೋದ್ರೇಕದಿಂದ ಉನ್ಮತ್ತ ವ್ಯಕ್ತಿಯಲ್ಲಿ ಲೀಲಾ ರೂಪ ಪ್ರವೃತ್ತಿಯು ಕಂಡಿರುವಂತೆ ಶ್ರೀ ಪರಮಾತ್ಮನಿಗೆ ಜಗತ್ಸೃಷ್ಟ್ಯಾದಿಗಳು ಕೇವಲ ಲೀಲಾ ರೂಪವೇ ಸ್ವಪ್ರಯೋಜನಕ್ಕಾಗಿಯಲ್ಲ.

ಯಥಾಲೋಕೇ ಮತ್ತಸ್ಯ ಸುಖೋದ್ರೇಕಾದೇವ ನೃತ್ತ ಗಾನಾದಿ ಲೀಲಾ । ನತ
ಪ್ರಯೋಜನಾಪೇಕ್ಷಯಾ, ಏವಮೇವೇಶ್ವರಸ್ಯ ॥

ಲೋಕದಲ್ಲಿ ಉನ್ಮತ್ತ ಜನಗಳು ಅಭಿವ್ಯಕ್ತ ಸುಖಾಧಿಕ್ಯದಿಂದ ನೃತ್ಯ, ನಟನ ಗಾನ ಗತಿಯೇ ಪ್ರವೃತ್ತಿ ಕಂಡುಬರುವ ಹಾಗೆಯೇ ಈ ಈಶ್ವರ ಸೃಷ್ಟಿಯೂ ಕೂಡ ಕೇವಲ ಲೀಲಾಮಾತ್ರತ್ವವೇ ಸ್ವಪ್ರಯೋಜನಕ್ಕಾಗಿಯಲ್ಲ ಲೋಕಕ್ಕೆ ಅನುಗ್ರಹಾರ್ಥವಾಗಿ ಹೀಗೆ ತೋರುವನೆಂದು ಟೀಕಾನುಸಾರ "ಭೂತ್ಯೈನಿಜಾಶ್ರಿತ ಜನಸ್ಯ" ಎಂಬ ಪರಪ್ರಯೋಜನವುಯುಕ್ತವು.

4. ನಾರಾಯಣ ಸಂಹಿತಾ ಯಾಂಚ –

ಸೃಷ್ಟ್ಯಾದಿಕಂ ಹರಿರ್ನೈವ ಪ್ರಯೋಜನಮಪೇಕ್ಷ್ಯತು ।
ಕುರುತೇ ಕೇವಲಾನಂ ದಾದ್ಯಾಥಾಮತ್ತಸ್ಯ ನರ್ತನಂ ॥

ಲೋಕದಲ್ಲಿ ಸುಖೋದ್ರೇಕದಿಂದ ಉನ್ಮತ್ತ ಲೀಲಾ ರೂಪ ಪ್ರವೃತ್ತಿಯು ಕಂಡಿರುವಂತೆ ಈ ಜಗತ್ಸೃಷ್ಟಿಯೂ ಆತನ ಕೇವಲ ಲೀಲಾ ರೂಪವೇ ಪ್ರಯೋಜನಕ್ಕಾಗಿಯಲ್ಲ.

ಪೂರ್ಣಾನಂದಸ್ಯ ತಸ್ಯೇಹ ಪ್ರಯೋಜನಮತಿಃ ಕುತಃ ।
ಮುಕ್ತಾ ಅಪ್ಯಾಪ್ತ ಕಾಮಾಃ ಸ್ಯುಃ ಕಿಮು ತಸ್ಯಾಖಿಲಾತ್ಮನಃ ॥ ಇತಿ

ಪರಮಾತ್ಮನು ಕೇವಲ ಸ್ವರೂಪಾನಂದದಿಂದಲೇ ಸೃಷ್ಟ್ಯಾದಿಗಳನ್ನು ಮಾಡುವನು ಪೂರ್ಣಾನಂದನಾದ ಈಶ್ವರನಿಗೆ ಯಾವ ಪ್ರಯೋಜನಾಪೇಕ್ಷೆಯಾದರೂ

ಇದ್ದೀತು ? ಮುಕ್ತ ಜೀವರೇ ಪರಮಾತ್ಮಾನುಗ್ರಹದಿಂದ ಆಪ್ತ ಕಾಮರಾಗುವಲ್ಲಿ ಸರ್ವತಂತ್ರ ಸ್ವತಂತ್ರ ಸರ್ವಸ್ವಾಮಿ ಸರ್ವ ಸಂಪತ್ತನ್ನೂ ಹೊಂದಿರುವ ಭಗವಂತನಿಗೆ ಬೇರೆ ಹೊಂದಬೇಕಾದುದು ಯಾವುದೂ ಇಲ್ಲವಷ್ಟೆ.

5 **"ದೇವಸ್ಯೈಷ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹಾ (ಮಾ.7-9) ಇತಿ ಚ ಶ್ರುತಿಃ ॥**

ಶ್ರೀಹರಿಗೆ ಸೃಷ್ಟ್ಯಾದಿ ವಿಷಯ ಇಚ್ಛೆಯೂ ಮತ್ತು ಅದರ ಪ್ರವೃತ್ತಿಯೂ ಸ್ವಭಾವ ಮಾತ್ರವೇ ಸ್ವಪ್ರಯೋಜನಕ್ಕಾಗಿಯಲ್ಲ. ಶ್ರೀ ಪರಮಾತ್ಮನ ಸರ್ವ ಜನರ ರಕ್ಷಣ ಶಿಕ್ಷಣ ಅವತಾರ ವಿಶೇಷಗಳು ಲೀಲಾ ರೂಪ ಸ್ವಭಾವ ಮಾತ್ರವೇ

ತಸ್ಯಾಪಿವಿಷ್ಣೋಃ ಸೃಷ್ಟಿಂ ತು ಕೇಚಿದಾಹುರನೈಪುಣಾಃ ।
ಅತೃಪ್ತಸ್ಯೈವ ಭೋಗಾರ್ಥಂ ಕ್ರೀಡಾರ್ಥಂತು ವಿಪಶ್ಚಿತಃ ।
ಸಾ ಚ ಕ್ರೀಡಾಸ್ವಭಾವೋಽಸ್ಯ ಕುತೋ ತೃಪ್ತ್ಯಾಸ್ಪೃಹಾವಿಭೋಃ ॥ ಇತಿ

ಕೆಲವು ಅಜ್ಞರು ಆ ವಿಷ್ಣುವಿನ ಸೃಷ್ಟಿಯನ್ನು ಅತೃಪ್ತನಾದ ಅವನ ಭೋಗಕ್ಕಾಗಿ ಇದೆ ಎನ್ನುತ್ತಾರೆ ಆದರೆ ಬಲ್ಲವರು ಅದು ಆತನ ಕ್ರೀಡಾರ್ಥ ಎಂದು ಹೇಳುತ್ತಾರೆ. ಆ ಕ್ರೀಡೆಯು ಇವನ ಸ್ವಭಾವ. ತೃಪ್ತಿ ತುಂಬಿರುವ ಅವನಿಗೆ ಆಸೆಯಲ್ಲಿಯದು ?

-- ಇತಿ ನ ಪ್ರಯೋಜನಾಧಿಕರಣಂ –

## – ವೈಷಮ್ಯನೈರ್ಘೃಣ್ಯಾಧಿಕರಣಂ –

ಈ ಅಧಿಕರಣದಲ್ಲಿ ಪರಪ್ರಯೋಜನ ರೂಪ ಫಲ ವಿಷಯದಲ್ಲಿ ಯುಕ್ತಿ ವಿರೋಧವು ಪರಿಹೃತವಾಗಿದೆ. ಪರ ಪ್ರಯೋಜನ ಸೃಷ್ಟಿಯು ಯುಕ್ತವಲ್ಲ (1) ಕರ್ಮವನ್ನಾಶ್ರಯಿಸದೆ ಪರ ಪ್ರಯೋಜನಕ್ಕಾಗಿ ಸೃಷ್ಟಿ ಎಂದಲ್ಲಿ ಸರ್ವರೂ ಸರ್ವ ಕಾಲಗಳಲ್ಲಿಯೂ ಪೂರ್ಣ ಸುಖಿಗಳಾಗಿರಬೇಕು ಅಲ್ಲದೆ ಕೆಲವರು ದುಃಖಿಗಳಾಗಿರಲು ನಿಮಿತ್ತವಿಲ್ಲವಾಗಿ ವೈವಿಧ್ಯ ಫಲದಿಂದ ಪರಮಾತ್ಮನಲ್ಲಿ ವಿಷಮತ್ವ ಮತ್ತು ನಿರ್ದಯತ್ವವು

ಆಪಾದನೆಯಾಗುವುದು ಮತ್ತು ಕರ್ಮ ಬೋದಕ ವೇದ ವಾಕ್ಯಗಳು ಅಪ್ರಮಾಣ ಗಳಾಗುವವು) ಕರ್ಮವನ್ನಾಶ್ರಯಿಸಿ ಫಲಪ್ರಾಪ್ತಿಯೆಂದು ಹೇಳಿದಲ್ಲಿ ಶ್ರೀಪರಮಾತ. ನಿಗೆ ಅಸ್ವಾತಂತ್ರ್ಯವನ್ನು ಹೇಳಬೇಕಾಗುವುದು. ಎಂದರೆ

1. ಸರ್ವಕರ್ತೃತ್ವೇ ವೈಷಮ್ಯನೈರ್ಘೃಣ್ಯೇ ತಸ್ಯೇತ್ಯ ತೋ ವ್ಯಕ್ತಿ

## ಸೂ|| ಓಂ|| ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ ಓಂ|| 35

ಕರ್ಮಾಪೇಕ್ಷಯಾ ಫಲದಾತೃತ್ವಾನ್ನ ತಸ್ಯವೈಷಮ್ಯನೈರ್ಘೃಣ್ಯೇ ||
"ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನಪಾಪಂ (ಪ್ರ-3-7)
ಇತಿಹಿ ಶ್ರುತಿಃ

ಪರಮಾತ್ಮನಿಗೆ ಸ್ವಾತಂತ್ರ್ಯಸಮರ್ಥನೆಗಾಗಿ ಜೀವರುಗಳಿಗೆ ಫಲದಾನ ನಿಮಿತ್ತ ಕರ್ಮಗಳ ಅಪೇಕ್ಷೆಯು ಎಂದರೆ ಹಾಗಲ್ಲ. ಕರ್ಮಗಳನ್ನು ಅಪೇಕ್ಷಿಸಿಯೇ ಫಲ ದಾತೃತ್ವವೆಂದು ಮೇಲಿನ ಶೃತಿಯಲ್ಲಿ ಹೇಳಿದೆ. ಕರ್ಮಾನುಸಾರ ಫಲ ಕೊಡುವುದ ರಿಂದ ಈಶ್ವರನಲ್ಲಿ ವೈಷಮ್ಯವು ಇಲ್ಲ ಆದರೆ ಬೇರೆ ಶೃತಿಗಳಿಂದ ಶ್ರೀಪರಮಾತ್ಮನು ಯಾವ ಜೀವನನ್ನು ಭೂ, ಭುವಃ, ಸುವಃ ಎಂಬ ಲೋಕಗಳಿಂದ ಮೇಲೇರಿಸಲು ಇಚ್ಛಿ ಸುವನೋ ಆ ಯೋಗ್ಯ ಜೀವನಿಂದ ಜ್ಞಾನಸಾಧನಕ್ಕಾಗಿ ಕರ್ಮವನ್ನು ಮಾಡಿಸು ವನು ಆದ್ದರಿಂದ ಮೋಕ್ಷಕ್ಕೆ ಪರಮಾತ್ಮನ ಇಚ್ಛಾರೂಪವೇ ಕಾರಣವೆಂದು ತಿಳಿಯು ವುದು ಹಾಗೆಯೇ ಯಾವ ಜೀವರನ್ನು ಈ ಲೋಕದಿಂದ ಕೆಳಗಣ ತಮ್ಮ ಲೋಕಗಳಿಗೆ ಹೊಂದಿಸಲು ಇಚ್ಛೆಯೋ ಅಂಥ ತಮೋ ಯೋಗ್ಯ ಜೀವರನ್ನು ಅಜ್ಞಾನ ಸಾಧನ ಕರ್ಮಗಳಲ್ಲಿ ಪ್ರೇರಿಸುವನು ಎಂದು ಹೇಳಿದೆ. ಈ ನಿಮಿತ್ತದಿಂದ ಪರಮಾತ್ಮನಲ್ಲಿ ದೋಷ ಪ್ರಸಕ್ತಿಯೂ ಬರುವುದಿಲ್ಲ. ಜೀವರುಗಳ ಸ್ವಭಾವಗಳನ್ನು ಅನುಸರಿಸಿ ಇಚ್ಛೆಯೂ ಪ್ರೇರಣೆಯೂ ಕೂಡ.

## ಸೂ|| ಓಂ|| ನ ಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್ ಓಂ|| 36

ಯದಪೇಕ್ಷಯಾಸೌಫಲಂದದಾತಿ ನ ತತ್ಕರ್ಮ "ಏಷ ಹ್ಯೇವ ಸಾಧು ಕರ್ಮಕಾರಯತಿ ತಂ ಯಮುಧ್ಯೋಲೋಕೇಭ್ಯ ಉನ್ನಿನೀಕ್ಷತೆ ಏಷ ಉವ ಸಾಧು ಕರ್ಮಕಾರಯತಿ ತಂ ಯಮುಧೋನಿನೀಷತೆ"(ತಾ॥ 3-8) ಇತಿಶ್ರುತೇಃ ಕರ್ಮಣೋಪಿ ನಿಮಿತ್ತತ್ವಾದಿತಿ ಚೇತ್"

ವೈಷಮ್ಯ ನಿರ್ದಯತ್ವ ದೋಷಗಳ ಪರಿಹಾರಕ್ಕೆ ಈಶ್ವರನಿಂದ ಅಪೇಕ್ಷಿತವಾದ ಬೇರೆಕರ್ಮಗಳು ಯಾವುವೂ ಇಲ್ಲ ಜೀವನು ಕರ್ಮಕರ್ತೃತ್ವ ವಿಷಯದಲ್ಲಿಯೂ ಅಸ್ವತಂತ್ರನಾದ್ದರಿಂದ ಈ ವಿಷಯದಲ್ಲಿ ಯಾವ ವಿಭಾಗವೂ ಸಾಧುವಲ್ಲ ಪುರುಷನ ಕರ್ಮ ಪರಂಪರೆಯು ಅನಾದಿಯಾದ್ದರಿಂದ ಈಶ್ವರನೇ ಪೂರ್ವ ಪೂರ್ವ ಕರ್ಮಗಳ ಅಪೇಕ್ಷೆಯಿಂದ ಮುಂದೆ ಮುಂದಿನ ಕರ್ಮಗಳನ್ನು ಜೀವರಿಂದ ಮಾಡಿಸುವನು ಎಂದು ಮಾತ್ರ ಕರ್ಮಗಳ ಅಪೇಕ್ಷಣೀಯತ್ವವು

4 **ನ ತಸ್ಯಾಪಿ ಪೂರ್ವಕರ್ಮಕಾರಣಮಿತ್ಯನಾದಿತ್ವಾತ್ಕರ್ಮಣಃ ।**

ಕರ್ಮಾಪೇಕ್ಷಿತ ಮಾತ್ರದಿಂದಲೇ ಈಶ್ವರನಿಗೆ ಅಸ್ವಾತಂತ್ರ್ಯವನ್ನು ಹೇಳಲು ಸಾಧುವಲ್ಲ. ಹಿಂದಿನ ಕರ್ಮಗಳಿಗೂ ಅದಕ್ಕಿಂತ ಹಿಂದಿನ ಕರ್ಮ ಪರಂಪರೆಗಳೇ ಕಾರಣವು

5. ಭವಿಷ್ಯತ್ಪುರಾಣೇ

**ಪುಣ್ಯ ಪಾಪಾದಿಕಂ ವಿಷ್ಣುಃ ಕಾರಯೇತ್ಪೂರ್ವಕರ್ಮಣಾ ।**
**ಅನಾದಿತ್ವಾತ್ಕರ್ಮಣಶ್ಚ ನ ವಿರೋಧಃ ಕಥಂಚನ ಇತಿ ॥**

ಶ್ರೀ ವಿಷ್ಣುವು ಪುಣ್ಯ ಪಾಪಾದಿ ಕರ್ಮಗಳನ್ನು ಹಿಂದಿನ ಕರ್ಮಗಳಿಗನುಸಾರವಾಗಿ ಜೀವರುಗಳಿಂದ ಮಾಡಿಸುವನು. ಕರ್ಮಗಳು ಅನಾದಿ ಪರಂಪರೆಗಳಾದ್ದರಿಂದ ಯಾವ ಶಂಕೆಗೂ ಅವಕಾಶವಿಲ್ಲ.

## ಸೂ॥ ಓಂ॥ ಉಪಪದ್ಯತೇ ಚಾಪ್ಯುಪಲಭ್ಯತೇ ಚ ಓಂ॥ 37

ನ ಚ ಕರ್ಮಾಪೇಕ್ಷತ್ವೇನ ಈಶ್ವರಸ್ಯಾಸ್ವಾತಂತ್ರ್ಯಂ ।

ಈಶ್ವರನಿಗೆ ಫಲ ಪ್ರದಾನಕ್ಕೆ ಕರ್ಮಾಪೇಕ್ಷೆಯಿದ್ದರೂ ಆತನಿಗೆ ಸ್ವಾತಂತ್ರ್ಯವು

ಸಿದ್ಧವೆ. ಯಾಕೆಂದರೆ ಸರ್ವ ಕರ್ಮಗಳು ಅವನ ಅಧೀನ ಅಧೀನತೆಯಿಂದ ಸ್ವಾಧೀನ ಕರ್ಮಗಳನ್ನು ಮಾಡಿಸುವುದರಿಂದ ಯಾವ ದೋಷವೂ ಇಲ್ಲ ಎಂದು "ಸಕಾರಯೇತ್" ಎಂಬ ಶೃತಿಯು ಹೇಳುವುದು

7. ದ್ರವ್ಯಂ ಕರ್ಮಂ ಚ ರಾಲಶ್ಚ ಸ್ವಭಾವವ್ರೋ ಜೀವ ಏವ ಚ ।
ಯದನು ಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ॥
ಇತ್ಯಾದಿನಾ ಕರ್ಮಾದೀನಾಂ ಸತ್ವಸ್ಯಾಪಿ ತಥಧೀನತ್ವಾತ್ ॥

8. ನ ಚ ಪುನರ್ವೈಷಮ್ಯಾದ್ಯಾಪಾತೇನ ದೋಷಃ ।
ತಾದೃಶ ವೈಷಮ್ಯಾದೇರುಪಲಭ್ಯಮಾನತ್ವಾತ್ ॥

ಮೇಲಿನ ವಾಕ್ಯದಿಂದ ಕರ್ಮಾದಿಗಳ ಸ್ವರೂಪವೂ ಸತ್ತಾಪ್ರದತ್ವವೂ ಶ್ರೀ ಪರಮಾತ್ಮಾಧೀನವಾಗಿರಲು ಅವನ ಅನುಗ್ರಹವಿಲ್ಲದೆ ಯಾವ ಪ್ರವೃತ್ತಿಯೂ ಸಾಧ್ಯವಿಲ್ಲವಾದ್ದರಿಂದ ಕರ್ಮಗಳ ಸ್ವರೂಪ ಧರ್ಮಗಳೆಲ್ಲವೂ ಆತನ ಅಧೀನವೇ ಆದ್ದರಿಂದ ಆತನಲ್ಲಿ ಯಾವ ದೋಷವನ್ನು ಶಂಕೆ ಪಡಕೂಡದು

ಹಾಗಾದರೆ ಮತ್ತೆ ವಿಷಮತೆ ನಿರ್ದಯತೆಯು ದೋಷ ಆತನಲ್ಲಿ ಉಳಿಯಿತಲ್ಲವೇ ಎಂದರೆ ಹಾಗಲ್ಲ ಆ ಬಗೆಯ ಸ್ವಾಧೀನ ಸತ್ತಾ ಪ್ರದತ್ವದ ಮೂಲಕ ಉಂಟಾಗುವ ಅವುಗಳು ಅವನಲ್ಲಿ ಕಂಡು ಬಂದಿವೆಯಾದರೂ ಅವು ಅವನಲ್ಲಿ ದೋಷಗಳಲ್ಲ ಇದಕ್ಕೆ ಪ್ರಮಾಣ —

9. ಸ ಕಾರಯೇತ್ಪುಣ್ಯಮಥಾಪಿ ಪಾಪಂ ನ ತಾವತಾ ದೋಷ
ನೀಶಿತಾಪಿ । ಈಶೋ ಯತೋ ಗುಣದೋಷಾದಿಸತ್ವೇ ಸ್ವಯಂ
ಪರೋಽನಾದಿರಾದಿಃ ಪ್ರಜಾನಾಂ ॥

ಶ್ರೀ ಪರಮಾತ್ಮನು ಸರ್ವ ವಸ್ತು ಸರ್ವಪ್ರೇರಕನಾಗಿ ಜೀವರುಗಳಿಂದ ಪಾಪ ಪುಣ್ಯಗಳನ್ನು ಮಾಡಿಸುವನು. ಆದಾಗ್ಯೂ ಆತನೇ ಗುಣದೋಷಗಳಿಗೆ ಸತ್ತಾಪ್ರದನಾದ್ದರಿಂದ ಸರ್ವೇಶ್ವರನಾದ ಸರ್ವಪ್ರಜೆಗಳಿಗೆ ಆದಾನಾದಿ ಕರ್ತೃವಾದುದರಿಂದ ಸರ್ವವೂ ಆತನೇ ಆದ್ದರಿಂದ ಯಾವ ದೋಷವೂ ಇಲ್ಲ.

– ಇತಿ ವೈಷಮ್ಯನೈರ್ಘೃಣ್ಯಾಧಿಕರಣಂ –

## - ಸರ್ವಧರ್ಮೋಪಪತ್ಯಧಿಕರಣಂ -

ಈ ಅಧಿಕರಣದಲ್ಲಿ ಶ್ರೀ ವಿಷ್ಣುವಿನಲ್ಲಿ ಸರ್ವಗುಣ ಪೂರ್ತಿ ಮತ್ತು ಸರ್ವದೋಷ ರಾಹಿತ್ಯ ವಿಷಯಗಳಲ್ಲಿ ಯುಕ್ತಿಗೆ ಅವಿರೋಧವನ್ನು ಹೇಳಿದೆ.

1 ಅವಿಶಿಷ್ಟೈರುಪ ಸಂಹರತಿ

### ಸೂ|| ಓಂ|| ಸರ್ವಧರ್ಮೋಪಪತ್ತೇಶ್ಚ ಓಂ|| 37

ಸರ್ವ ಗುಣತ್ವ ಸರ್ವದೋಷಾಭಾವತ್ವ ಸರ್ವಧರ್ಮಗಳೂ ಬ್ರಹ್ಮನಲ್ಲಿ ಸರ್ವಸ್ವತಂತ್ರತ್ವದಿಂದ ಯುಕ್ತವು ಪರಮಾತ್ಮನಲ್ಲಿ ಯಾವ ಸಂದರ್ಭದಲ್ಲಿಯೂ ಯುಕ್ತಿಯಿಂದ ವಿರೋಧ ಕಲ್ಪನವು ಯುಕ್ತವಲ್ಲ.

ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೆ ಸಂತ್ಯಶ್ರುತಾ ಅಪಿನೈವಾತ್ರಶಂಕಾ |
ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ನಾಜ್ಞೈರ್ಹಿತಧಾಪ್ರತೀತಾ
ಇತಿ ಸರ್ವಧರ್ಮೋಪಪತ್ತೇ ರಿತಿ.

ಪೂರ್ವಾಧಿಕರಣಗಳಲ್ಲಿ ಶ್ರೀವಿಷ್ಣುವಿಗೆ ಪ್ರತ್ಯೇಕವಾಗಿ ಒಂದೊಂದು ಗುಣ ವಿಷಯದಲ್ಲಿಯೂ ಪರಿಹಾರ ದ್ವಾರ ಸಮರ್ಥನ ಮಾಡಲ್ಪಟ್ಟಿತು. ಈಗ ಆ ಗುಣಗಳಿಂದ ಪ್ರತ್ಯೇಕ ಗುಣಗಳ ಮತ್ತು ದೋಷಾ ಭಾವಗಳ ಸಾಮಾನ್ಯ ಯುಕ್ತಿ ವಿರೋಧ ಪರಿಹಾರದಿಂದ ಈ ಪ್ರಕರಣವನ್ನು ಈ ಅಧಿಕರಣದಲ್ಲಿ ಸಮಾಪನೆ ಮಾಡಿದೆ.

ವೇದದಲ್ಲಿ ಹೇಳಿರುವ ಅಣುತ್ವ ಮಹತ್ವಾದಿ ಧರ್ಮಗಳು ಲೋಕ ದೃಷ್ಟಿಯಿಂದ ಅತಿ ವಿರುದ್ಧಗಳಾದಾಗ್ಯೂ ಮಿಕ್ಕ ಯಾವ ವಸ್ತುವಿನಲ್ಲಿಯೂ ಕಾಣಲ್ಪಡದಿದ್ದರೂ ವೇದಗಳಲ್ಲಿ ಹೇಳಲ್ಪಟ್ಟು ಕೂಡ ಶ್ರೀ ಪರಮೇಶ್ವರನಲ್ಲಿ ಇದ್ದೇ ಇವೆ.

ಮತ್ತು ಆತನಲ್ಲಿ ಹೇಳಿದ ಕೇಳಿದ ದೋಷಗಳೂ ಕೂಡಇಲ್ಲ ಮತ್ತು ಚಿಂತನೆಗೂ ಸಾಧ್ಯ ವಿಲ್ಲದ ದೋಷ ಪ್ರಸಕ್ತಿಯಿಲ್ಲ. ಸರ್ವಜೀವರೂ ಅವರವರ ಯೋಗ್ಯತೆಗೆ ತಕ್ಕಂತೆ (ಸ್ವಸ್ವರೂಪಸಾಧ್ಯ) ಪರಮ ಪುರುಷನ ಮಹಾತ್ಮ್ಯ ಜ್ಞಾನವನ್ನು ಚಿಂತನೆಯಿಂದ ಹೊಂದುವರು, ಯಾವ ಜೀವರೂ ಪೂರ್ಣ ಜ್ಞಾನವುಳ್ಳವರಾಗಲು ಸಾಧ್ಯವಿಲ್ಲ.

– ಇತಿ ಸರ್ವ ಧರ್ಮೋಪಪತ್ತ್ಯಧಿಕರಣವು –

– ಇತಿ ದ್ವಿತೀಯಾಧ್ಯಾಯಸ್ಯ ಪ್ರಥಮ ಪಾದಃ ಸಂಪೂರ್ಣಃ –

ಶ್ರೀ ಕೃಷ್ಣಾರ್ಪಣಮಸ್ತು

– ದ್ವಿತೀಯ ಪಾದಃ –

– ರಚನಾನುಪಪತ್ತ್ಯಧಿಕರಣಂ –

1. **ಇತರೇಷಾಂಚಾನುಪಲಬ್ಧೇರಿತಿ ಸಾಮಾನ್ಯತೋ ನಿರಾಕರಣಂ ಸಮಯಾನಾಂ ಕೃತಂ। ವಿಶೇಷತೋ ನಿರಾಕರೋತ್ಯಸ್ಮಿನ್ ಪಾದೇ**

"ಇತರೇಷಾಂಚಾನುಪಲಬ್ಧೇಃ" ಎಂಬ ಸೂತ್ರದಲ್ಲಿ ಫಲಾನುಭವವಿಲ್ಲದ್ದರಿಂದ

ಯಾವ ದರ್ಶನವು ನಿರಾಕರಿಸಲ್ಪಟ್ಟಿತೋ ಅದನ್ನೇ ಈ ಪಾದದಲ್ಲಿ ವಿಶೇಷತಃ ನಿರಾಕರಿಸಲ್ಪಡುವುದು ಈಸಮಯಗಳು ಅನಾದಿ ಕಾಲದಿಂದ ಪ್ರವೃತ್ತತ್ವ ಮತ್ತು ಪ್ರತೀತಿ ಸೌಂದರ್ಯದಿಂದ ಮನಮೋಹಕವಾಗಿ ಕಾಣುವುದರಿಂದ ನಿಶ್ಶಂಕೆಗೋಸ್ಕರ ಒಂದೊಂದು ಪಕ್ಷವನ್ನು ಬೇರೆಬೇರೆಯಾಗಿ ನಿರಾಕರಿಸಲ್ಪಡುವುದು.

2 **ಅಚೇತನ ಪ್ರವೃತ್ತಿಮತ್ವಂ ಪ್ರಥಮತೋ ನಿರಾಕರೋತಿ ||**

ಈ ಪ್ರಥಮಾಧಿಕರಣದಲ್ಲಿ ಈಶ್ವರನ ಅಪೇಕ್ಷೆಯಿಲ್ಲದೆಯೇ ಅಚೇತನ ಪ್ರಕೃತಿಗೇ ಮಹದಾದಿಕಾರ್ಯ ಪ್ರಕರಣದಲ್ಲಿ ಪ್ರವೃತ್ತಿಯು ಎಂಬ ನಿರೀಶ್ವರ ಸಾಂಖ್ಯ ಮತದ ತಿರಸ್ಕಾರವು ಈ ಮತವು ಇತರ ಸಮಯಗಳಿಂದ ಅತಿಪ್ರಬಲ, ತುಚ್ಛ ಮತ್ತು ತತ್ವಕ್ಕೆ ಅತಿವಿರೋಧವಾದುದಾದ್ದರಿಂದ ಪ್ರಥಮದಲ್ಲಿಯೇ ನಿರಾಕರಣವು

## ಸೂ|| ಓಂ|| ರಚನಾನುಪಪತ್ತೇಶ್ಚ ನಾನುಮಾನಂ ಓಂ|| 1

ಸಾಂಖ್ಯಮತಾನುಸಾರ ಅನುಮಾನದಿಂದ ಕಲ್ಪಿತವಾದ ಪ್ರಧಾನವೇ ಜಗತ್ಕರ್ತೃವು ಎಂಬುದು ಸಾಧ್ಯವಲ್ಲ ಈ ಪ್ರಧಾನವು ಜಡವಾಗಿ ಸ್ವತಃ ಪ್ರವೃತ್ತಿಯಿಲ್ಲದ್ದರಿಂದ ಸೃಷ್ಟಿ ಅಸಾಧ್ಯವು ಅಪ್ರಮಾಣವು.

4 **ಅಚೇತನಸ್ಯ ಸ್ವತಃ ಪ್ರವೃತ್ತ್ಯನುಪಪತ್ತೇರ್ನಾನುಮಾನಪರಿಕಲ್ಪಿತಂ ಪ್ರಧಾನಂ ಜಗತ್ಕರ್ತೃ | ಚಶಬ್ದೇನ ಪ್ರಮಾಣಾಭಾವಂ ದರ್ಶಯತಿ ||**

ಅನುಮಾನ ಮಾತ್ರದಿಂದಲೇ ಪ್ರವೃತ್ತಿ ವಿಷಯವು ಪ್ರಮಾಣವಲ್ಲದ್ದರಿಂದ ಕೇವಲ ಕಾರಣ ಮಾತ್ರಕ್ಕೆ ಸಾಧಕವೆ ಹೊರ್ತು ಕರ್ತೃತ್ವ ಸಾಧಕವಾಗಲಾರದು. ಇದಕ್ಕೆ ಯಾವ ಪ್ರಮಾಣವೂ ಇರುವುದಿಲ್ಲ.

## ಸೂ|| ಓಂ|| ಪ್ರವೃತ್ತೇಶ್ಚ ಓಂ|| 2

ಚೇತನಸ್ಯ ಸ್ವತಃ ಪ್ರವೃತ್ತಿದರ್ಶನಾತ್ ।

ಚೇತನ ವಸ್ತುವಿಗೆ ಸ್ವಪ್ರವೃತ್ತಿ ವಿಷಯದಲ್ಲಿ ಜ್ಞಾನವಿರುವುದು ಈ ಜ್ಞಾನವಿಲ್ಲದ್ದರಿಂದ ಅಚೇತನ ಪ್ರಕೃತಿಯು ಜಗತ್ಕರ್ತೃವಲ್ಲ. ಕುಲಾಲನಿಂದ ಘಟಾದಿ ಸೃಷ್ಟಿಯು ಚೇತನ ವ್ಯಾಪಾರವು ಮತ್ತು ತಾನೇ ಕರ್ತೃವೆಂಬ ಅನುಭವವು ಅಚೇತನಕ್ಕೆ ಚೇತನಾಧೀನ ಪ್ರವೃತ್ತಿಯು ಕಂಡಿದೆ. ಆದ್ದರಿಂದ ಮಹದಾದಿ ಸೃಷ್ಟಿಯು ಈಶ್ವರೇಚ್ಛಾನುಸಾರಿ ಪ್ರವೃತ್ತಿಯುಳ್ಳದ್ದೆ.

## ಸೂ॥ ಓಂ॥ ಪಯೋಂಬುವಚ್ಚೇತ್ತತ್ರಾಪಿ ಓಂ॥ 3

ಅಚೇತನ ವಸ್ತು ಹಾಲು ಚೇತನ ಸಂಪರ್ಕವಿಲ್ಲದೆ ಮೊಸರಾಗಿ ಪರಿವರ್ತನವಾಗುವುದರಿಂದಲೂ ಅಚೇತನವಾದ ನೀರು ಹರಿಯುವ ಗತಿಯೂ ಚೇತನ ಸಂಪರ್ಕವಿಲ್ಲದೆಯೇ ಆಗುವುದರಿಂದ ಆ ರೀತಿಯಲ್ಲಿಯೇ ಅಚೇತನ ಪ್ರಕೃತಿಯು ಸಾಧ್ಯವಲ್ಲದೆ. ಎಂದರೆ ಹಾಗಲ್ಲ.

ಪಯೋಂಬುವದ ಚೇತನಸ್ಯಾಪಿ ಪ್ರವೃತ್ತಿರ್ಯುಜ್ಯತ್ ಚೇತ್‌ನಯುಕ್ತಂ ।
"ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇಗಾರ್ಗಿ ಪ್ರಾಚ್ಯೋನ್ಯಾನ ದ್ಯಸ್ಯಂದಂತೆಯಾಶ್ವೇತೇನಭ್ಯಃ ಪರ್ವತೇಭ್ಯಃ ಪ್ರಾತೀ ಚ್ಯೋ ನ್ಯಾಯಾಂ ಯಾಂ ಚ ದಿಶಮನು"
(ಬೃ 5-9-9) ಏಷ್ವೇ ವಾವ ಪಯೊಮಂಡಂ ಭವತಿ ಇತ್ಯಾದಿ ತತ್ರಾಪೀಶ್ವರ ಪ್ರವೃತ್ತಿಶೃತೇಃ ।

ಅವುಗಳ ಪಕ್ಷದಲ್ಲಿಯೂ ಚೇತನಾಧೀನ ಪ್ರಕೃತಿಯೇ ಕಾರಣವೆಂದು ಶೃತಿಯಿಂದ ತಿಳಿಯುವುದು. ಶೃತ್ಯರ್ಥವು ಪೂರ್ವ ಪಶ್ಚಿಮ ದಿಕ್ಕಿನಲ್ಲಿರುವ ನದಿಗಳು ತಮ್ಮ ತಮ್ಮ ಶಿಖರಗಳಿಂದ ಯಾವ ಯಾವ ನಿಯತ ದಿಕ್ಕುಗಳಲ್ಲಿ ಮಾತ್ರ ಹರಿಯುವುವೊ ಅವುಗಳೂ ಕೂಡ ಶ್ರೀ ಪರಮಾತ್ಮನಾ ಆಜ್ಞಾ ಮಾತ್ರದಿಂದಲೇ ಸ್ವಶಕ್ತಿಯಿಂದಲ್ಲ. ಹಾಗೆಯೇ ಹಾಲೂ ಕೂಡ ಪ್ರಾಣದ್ವಾರ ಶ್ರೀ ಪರಮಾತ್ಮನ ಆಜ್ಞೆಯಿಂದಲೇ ಪರಿಣಾಮವುಳ್ಳದ್ದು ಸ್ವಶಕ್ತಿಯಿಂದಲ್ಲ

## ಸೂ॥ಓಂ॥ವ್ಯತಿ ರೇಕಾನಾವಸ್ಥಿತೇಶ್ಚಾನಪೇಕ್ಷತ್ವಾತ್ ಓಂ॥4

"ನ ಋತೆ ತ್ವತ್ಕ್ರಿಯತೆ ಕಿಂಚ ನಾರೆ" (ಋ-10-113-9) ಇತಿ ತದ್ವ್ಯತಿರೇಕೇಣಾನ ಸ್ಯಾಪಿ ಕರ್ಮಣೊ ಅನವಸ್ಥಿತೇ ಅನವೇಕ್ಷಿತಮೇವಾ ಚೇತನ ವಾದಿಮತಂ।

"ನರುತೆ" ಎಂಬ ಶೃತಿ ವಾಕ್ಯದಿಂದ ಬೇರೆ ಯಾರಿಗೂ ಕರ್ಮ ಕರ್ತೃತ್ವ ಶಕ್ತಿಯು ಇಲ್ಲವಾದ್ದರಿಂದ ಅಚೇತನ ವಸ್ತುವಿಗೆ ಸ್ವತಃ ಪ್ರವೃತ್ತಿಯು ಎಂಬ ನಿರೀಶ್ವರ ಸಾಂಖ್ಯ ಮತವು ಅಪ್ರಮಾಣವಾದ್ದರಿಂದ ನಿರಾಕೃತವಾಗಿ ಶ್ರೀವಿಷ್ಣುವಿಗೇ ಜಗತ್ಕಾರಣತ್ವವು ಸಿದ್ಧವು ಶೃತಿಯ ವ್ಯತಿರೇಕ ಪ್ರಮಾಣದಿಂದ ಅಯಸ್ಕಾಂತ ಶಿಲೆಯ ಆಕರ್ಷಣ ಶಕ್ತಿಯೂ ಅಚೇತನ ಮಾತ್ರದಿಂದಲೇ ಸಾಧ್ಯವಲ್ಲ. ಶ್ರೀಪರಮಾತ್ಮನ ಪ್ರವೃತ್ತಿಶಕ್ತಿಯೇ ಕಾರಣವು.

"ನಿಷುಸೀದಗಣಪತೆ ಗಣೇಶುತ್ವಾಮಾಹುರ್ವಿಪ್ರತಮಂಕ ವೀನಾಂ।ನಋತೆತ್ವತ್ ಕ್ರಿಯತೆಕಿಂಚನಾರೆ ಮಹಾಮರ್ಕಂ ಮಘವನ್ ಚಿತ್ರಮರ್ಚ (ಇದರ 8-6-13) ಅರ್ಥವು ಹೀಗೆ.

ಹೇ ಇಂದ್ರಿಯಗಳಿಗೆ ಸ್ವಾಮಿಯಾದ ಸಂಪತ್ತುಳ್ಳವನೆ, ಯಶಸ್ಸುಳ್ಳವನೇ,ಯಜ್ಞಪತಿಯೇ ಭಗವಂತನೇ ನೀನು ಅರ್ಚಕರಾದ ಇಂದ್ರಿಯಗಳಲ್ಲಿ ಸುಸ್ಥಿರನಾಗಿದ್ದು ಪರಮ ಪೂಜ್ಯನಾದ ಪರಮಾನಂದ ಸ್ವರೂಪನಾದ ಅದ್ಭುತ ಆಶ್ಚರ್ಯ ತಮನಾದ ನಿನ್ನನ್ನು ಪೂಜಿಸಿಕೊ. ಜ್ಞಾನಿಗಳು ನಿನ್ನನ್ನು ವಿಶೇಷವಾಗಿ ಶ್ರೇಷ್ಠನನ್ನಾಗಿ ತಿಳಿದಿರುವುದರಿಂದ ನೀನೇ ಪೂಜ್ಯನು ಪೂಜಕನು. ನೀನಲ್ಲದೇ ಯಾರೂ ದೂರದಲ್ಲಿಯೂ ಹತ್ತಿರದಲ್ಲಿಯೂ ಅಲ್ಪ ಪ್ರವೃತ್ತಿಯುಳ್ಳವರು ಅಲ್ಲ.

– ಇತಿ ರಚಾನುಪಪತ್ತ್ಯಧಿಕರಣಂ –

## – ಅನ್ಯತ್ರಾಭಾವಾಧಿಕರಣಂ –

ಈ ಅಧಿಕರಣದಲ್ಲಿ ಪತಂಜಲಿ ಋಷಿಗಳ ಸೇಶ್ವರ ಸಾಂಖ್ಯ ಮತವನ್ನು ನಿರಾಕರಿಸುತ್ತದೆ.

1. ಸೇಶ್ವರಸಾಂಖ್ಯಮತಂ ನಿರಾಕರೋತಿ । ಯಥಾ ಪೃಥಿವ್ಯಾ ಏವ ಪರ್ಜನ್ಯಾನುಗೃಹೀತಂ ತೃಣಾದಿಕಮುತ್ಪದ್ಯತೇ । ಏವಂ ಪ್ರಧಾನಾಧೀಶ್ವರಾನುಗೃಹೀತಂ ಜಗದಿತ್ಯತೋಽಬ್ರವೀತಿ ॥

ಪೃಥಿವಿಯು ಮಳೆಯಿಂದ ಅನುಗೃಹೀತವಾಗಿ ಹುಲ್ಲು ಧಾನ್ಯಾದಿ ಸ್ವತಃ ಗಳನ್ನು ಉತ್ಪಾದನೆ ಮಾಡುವುದೋ ಸ್ವಶಕ್ತಿಯಿಂದಲೆಯೊ ಹಾಗೆಯೇ ಪ್ರಧಾನವು ಈಶ್ವರಾನುಗೃಹೀತವಾಗಿ ಸೃಷ್ಟಿ ಮಾಡುತ್ತದೆ.

2. ಅತೋ ಬ್ರವೀತಿ –

## ಸೂ॥ ಓಂ॥ ಅನ್ಯತ್ರಾ ಭಾವಾಚ್ಚ ನ ತೃಣಾದಿವತ್ ಓಂ॥ 5

ಹೇಗೆ ಪೃಥಿವಿ ಜನ್ಯ ತೃಣಾದಿಗಳು ಪರ್ಜನ್ಯ ಸಹಕಾರಿ ರೂಪ ಕಾರಣದಿಂದ ಪ್ರಕೃತಿ ಜನ್ಯವೋ ಹಾಗೆಯೇ ಮಹದಾದಿ ಕಾರ್ಯಗಳೂ ಪ್ರಕೃತಿ ಜನ್ಯವೇ. ಈಶ್ವರನು ಅನುಗ್ರಹ ಕಾರಣನೇ ಹೊರ್ತು ಸ್ವತಂತ್ರ ಕಾರಣನಲ್ಲ ಪ್ರಕೃತಿಯೇ ಸ್ವತಂತ್ರ ಎಂಬ ಸೇಶ್ವರ ಸಾಂಖ್ಯ ಮತವು ಸರಿಯಲ್ಲ. ಈಶ್ವರ ಪ್ರೇರಣೆಯಿಲ್ಲದೆ ಸಾಧ್ಯವಿಲ್ಲ ಆತನ ಸುತ್ತಾ ಪ್ರಧಾನ ಶಕ್ತಿಯೇ ಪ್ರಕೃತಿ ಶಕ್ತಿಯಾದ್ದರಿಂದ ಸ್ವತಂತ್ರ ಕರ್ತೃವು ಪ್ರಧಾನ ವಲ್ಲ ಈಶ್ವರನೇ.

3. ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।
ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥

ಬ್ರಹ್ಮಣ್ಯೇ ವೇದ ಮಾವಿರಾಸೀದ್ಬ್ರಹ್ಮಣಿ ಸ್ಥಿತಂ ಬ್ರಹ್ಮಣ್ಯೆಲಯಮಭ್ಯುಪೈತಿ ಬ್ರಹ್ಮೈವಾಧ ಸ್ತಾದ್ಬ್ರಹ್ಮೈವೊ ಪರಿಷ್ಟಾತ್ಬ್ರಹ್ಮ ಮಧ್ಯತೋ ಬ್ರಹ್ಮ ಸರ್ವತಃ । "ಬ್ರಹ್ಮೈವೇದಂ ಸರ್ವಂ (ಬೃ-4-5-1) ಇತ್ಯಾದಿ ಶೃತಿಭ್ಯೋನ್ಯತ್ರ ಜಗತೋಽಭಾವಾತ್ತೃಣಾದೀನಾಂ ಪರ್ಜನ್ಯವನ್ನಾನುಗ್ರಾಹಕತ್ವ ಮಾತ್ರ ಮೀಶ್ವರಸ್ಯ ॥

ಕಾಣುವ ಕೇಳುವ ಸರ್ವವಸ್ತುಗಳಿಗೂ ಕೂಡ ಸತ್ವವನ್ನು ಕೊಟ್ಟು ವ್ಯಾಪಿಸಿ ಕೊಂಡು ಈ ಜಗತ್ತನ್ನು ಒಳಗೂ ಹೊರಗೂ ದೇಶಕಾಲ ಗುಣಶಕ್ತಿಗಳಿಂದ ವ್ಯಾಪಿ

ನಾಗಿ ಪ್ರೇರಕನಾಗಿರುವ ವಸ್ತುವು ಶ್ರೀಪರಮಾತ್ಮನೇ. ಜಗತ್ತಿನ ಒಳಗೂ ಹೊರಗೂ ಸರ್ವ ಪ್ರದೇಶಕ್ಕೂ ಸರ್ವಕಾಲಕ್ಕೂ ವ್ಯಾಪ್ತನಾಗಿ ಭೂತ ಅಭೂತ ಗುಣಗಳಲ್ಲಿ ಶಕ್ತಿಯಿಂದ ಯುಕ್ತನಾಗಿರುವನು. ಈ ಸರ್ವಜಗತ್ತೂ ಈಶ್ವರಾಧೀನವಾಗಿ ಉತ್ಪತ್ತಿ ಸತ್ತಾದಿಗಳುಳ್ಳದ್ದು ಬ್ರಹ್ಮನಲ್ಲಿ ಸ್ಥಿತಿಯೂ ಬ್ರಹ್ಮನಲ್ಲಿ ಲಯವೂ ಮತ್ತು ಬ್ರಹ್ಮನಲ್ಲಿ ಸೃಷ್ಟಿಯೂ ಕೂಡ, ಈ ಬ್ರಹ್ಮನೇ ಕೆಳಗೂ ಮೇಲೂ ಮಧ್ಯದಲ್ಲಿಯೂ ಸರ್ವ ಕಡೆಗಳಲ್ಲಿಯೂ ಕೂಡ ಆತನೇ. ಸರ್ವ ವಸ್ತುಗಳೂ ಬ್ರಹ್ಮಾಧೀನವೇ ಅವನಿಂದ ಸ್ವತಂತ್ರವಾದ ವಸ್ತುವು ಯಾವುದೂ ಇಲ್ಲ.

4. **ಸ ಏವ ಭೂಯೋನಿಜವೀರ್ಯಚೋದಿತಾಂ ಸ್ವಜೀವಮಾಯಾಂ ಪ್ರಕೃತಿಂ ಸಿಸೃಕ್ಷತೀಂ ॥ ಅನಾಮ ರೂಪಾತ್ಮನಿ ರೂಪನಾಮನೀ ವಿಧಿತ್ಸಮಾನೋಽನುಸಸಾರ ಶಾಸ್ತ್ರಕೃದಿತಿ ಭಾಗವತೇ ದ್ರವ್ಯಂ ಕರ್ಮಚ ಕಾಲಶ್ಚೇತ್ಯಾದಿ ಚ ।**

ಜಗತ್ಸಿಕ್ಷಕನಾದ ಶ್ರೀಹರಿಯು ಪ್ರಾಕೃತ ನಾಮ ರೂಪವಾದ ತನ್ನಲ್ಲಿ ತನ್ನಾಧಾರತ್ವದಿಂದಲಿರುವ ಅರ್ಥಶಬ್ದ ಪ್ರಪಂಚವನ್ನು ಪುನಃ ಸೃಷ್ಟಿ ಮಾಡಲಿಚ್ಛಿಸಿ ತನ್ನ ಸಾಮರ್ಥ್ಯ ಪ್ರೇರಣೆಯಿಂದಲೇ ಸ್ವಾಧೀನಳಾದ ಶ್ರೀಲಕ್ಷ್ಮೀ ದೇವಿಯನ್ನು ಜಗತ್ಸೃಷ್ಟಿ ಕಾರ್ಯದಲ್ಲಿ ಪ್ರೇರಿಸಿದನು ಕೇವಲ ಅನುಗ್ರಹ ಮಾತ್ರವೇ ಅಲ್ಲ. ಉದ್ಬೋಧಕ ಪ್ರವೃತ್ತಿಯೂ ಅವನದೇ ಕಾರ್ಯ ಸ್ವತಂತ್ರವಲ್ಲ.

– ಇತಿ ಅನ್ಯತ್ರಾಭಾವಾಧಿಕರಣಂ –

## – ಅಭ್ಯುಪಗಮಾಧಿಕರಣಂ –

ಈ ಅಧಿಕರಣದಲ್ಲಿ ಲೋಕಾಯುತ ಪಕ್ಷದ (ಚಾರ್ವಾಕಮ) ನಿರಾಕರಣವು.

## ಸೂ॥ ಓಂ॥ ಅಭ್ಯುಪಗಮೇಽಪ್ಯರ್ಥಾಭಾವಾತ್ ಓಂ॥ 6

ಧರ್ಮಾಧರ್ಮ ಮುಂತಾದ ಅತೀಂದ್ರಿಯ ವಸ್ತುಗಳನ್ನು ಸಾಧಿಸುವ ಶ್ರುತಿಗಳು

ಪ್ರಮಾಣಗಳಲ್ಲವಾದ್ದರಿಂದ ಈಶ್ವರನಿಲ್ಲವೆಂಬ ವಾದದಿಂದ ಪೂರ್ವ ಪೂರ್ವ ವಸ್ತುಗಳಿಂದಲೇ ಮುಂದೆ ಮುಂದಿನ ವಸ್ತುಗಳ ಸೃಷ್ಟಿಯೆನ್ನು ಅನುಮೋದಿಸುವುದರಿಂದ ಜಗತ್ಕಾರಣನು ಈಶ್ವರನಲ್ಲ ಎಂದು ಚಾರ್ವಾಕ ಮತವು. ಈ ಮತಕ್ಕೆ ಸಿದ್ಧಾಂತವೇ ಇಲ್ಲವಾದ್ದರಿಂದ ವಿಷಯ ಪ್ರಯೋಜನ ಭಾವವಿಲ್ಲದ್ದರಿಂದ ಈ ಶಾಸ್ತ್ರವು ಅನಾದರಣೀಯವೇ.

ಯಸ್ಯ ಧರ್ಮಾಧರ್ಮೌನಸ್ತ ಸ್ತತ್ಸಿದ್ಧಾಂತಂ ಕಿಂ ಪ್ರಯೋಜನಂ । ಅತಃ ಸ್ವವ್ಯಾಹತೇರೇವೋಪೇಕ್ಷ್ಯಃ ।

3. ಯಾವ ಸಿದ್ಧಾಂತಿಗೆ ಧರ್ಮಾಧರ್ಮಗಳು ಅಂಗೀಕೃತವಲ್ಲವೋ ಆ ಶಾಸ್ತ್ರದಿಂದ ಯಾವ ಪ್ರಯೋಜನವೂ ಇಲ್ಲ ಈ ಶಾಸ್ತ್ರವು ವಂಧ್ಯಾಪುತ್ರನಂತೆ ಸ್ವವಚನವಿರುದ್ಧವಾದದ್ದರಿಂದ ಉಪೇಕ್ಷ್ಯವೇ.

– ಇತಿ ಅಭ್ಯುಪಗಮಾಧಿಕರಣಂ –

– ಪುರುಷಾಶ್ಮಾಧಿಕರಣಂ –

1. ಪುರುಷೋಪಸರ್ಜನಪ್ರಕೃತಿಕರ್ತೃತ್ವವಾದಮುಪಾಕರೋತಿ ॥

ಈ ಅಧಿಕರಣದಲ್ಲಿ ನಿರೀಶ್ವರ ಸಾಂಖ್ಯೈಕ ದೇಶಿಯಾದ ಚೇತನೋಪಸರ್ಜನ ಅಚೇತನ ಪ್ರಕೃತಿ ಕರ್ತೃತ್ವವಾದವು ನಿರಾಕರಿಸಲ್ಪಡುವುದು.

2. ಪ್ರಧಾನವು ಚೇತನ ಸನ್ನಿಧಾನದಿಂದ ಸ್ವತಃ ಪ್ರವೃತ್ತಿವುಳ್ಳದ್ದು. ಅಚೇತನವಾದ್ದರಿಂದ ಪುರುಷ ಶರೀರದಂತೆ ಎಂಬ ಅನುಮಾನವು ಈ ಮತ ಸಿದ್ಧಾಂತವು.

ಅಂದರೆ ಪ್ರಧಾನಾದಿ ಜಗದುತ್ಪತ್ತಿಯು ಈಶ್ವರನ ಅವಶ್ಯಕತೆಯು ಜಗತ್ಕರ್ತೃತ್ವದಲ್ಲಿಲ್ಲ ಎಂದರೆ ಹಾಗಲ್ಲ.

## ಸೂ|| ಓಂ|| ಪುರುಷಾಶ್ಮವದಿತಿಚೇತ್ತಥಾಪಿ ಓಂ|| 7

ಯಥಾಚೇತನ ಸಂಬಂಧಾದಚೇತನಮೇವ ಶರೀರಮಶ್ಮಾದಿಕ ಮಾದಾಯ ಗಚ್ಛತಿ । ಏವ ಮಚೇತನಾಪಿ ಪ್ರಕೃತಿಃ ಪುರುಷ ಸಂಬಂಧಾತ್ಪ್ರವರ್ತತೆ ಇತಿ ಚೇನ್ನ । "ನ ಋತೆ ತತ್ಕ್ರಿಯತೆ" ಇತಿ ತತ್ರಾಪಿ ತಥಾತ್ವೇ ದೃಷ್ಟಾಂತ ಭಾವಾತ್ ।

ಚೇತನ ಸಂಬಂಧದಿಂದ ಅಚೇತನವೇ ಪಾಷಾಣಾದಿಗಳನ್ನು ಒಯ್ಯುವಂತೆ ಪ್ರಕೃತಿಯೇ ಪುರುಷ ಸಂಬಂಧದಿಂದ ಪ್ರವರ್ತನ ಸಾಮರ್ಥ್ಯವು ಎಂದರೆ ಹಾಗಲ್ಲ ಆ ಶರೀರ ಪ್ರವೃತ್ತಿಯಲ್ಲಿಯೂ ಈಶ್ವರನದೇ ಕರ್ತೃತ್ವವು"ನರುತೆತ್ಕ್ರಿಯತೆ"ಯೆಂಬ ಶ್ರುತಿಯಿಂದ ಸರ್ವ ಕರ್ತೃತ್ವವೂ ಈಶ್ವರನದೇ.

## ಸೂ|| ಓಂ|| ಅಂಗಿತ್ವಾನುಪಪತ್ತೇಃ ಓಂ|| 8

ಶರೀರ ಪ್ರವೃತ್ತೌ ಪುರುಷಸ್ಯ ಅಂಗಿತ್ವಾತ್, ಅಂಗಮಂಗೀ ಸಮಾದಾಯಯದಾ ಕಾರ್ಯಂ ಕರೋತ್ಯಸೌ "ಇತ್ಯಂಗಿತ್ವ ವ್ಯವಹಾರೋ" ನುಪಪನ್ನಃ ||
ಅಂಗಿ ಪ್ರಧಾನಃ ಪುರುಷೋಂಗಂ ಗುಣಭೂತಂ ಶರೀರಂ ಸಂಗೃಹ್ಯಯಥಾ ಶ್ಮಾದ್ಯಾನಯನಾದಿ ಕಾರ್ಯಂ ಕರೋತಿ ಕಥಾನೌ ಭಗವಾನಪಿ ಪ್ರಕೃತಿ ಮಾದಾಯ ಮಹದಾದಿ ಕಾರ್ಯಂ ಕರೋತಿ.

ಅಂಗಾಂಗೆ ಸಂಬಂಧದಿಂದ ಕಾರ್ಯವು ಉಂಟಾಗಲು ಈಶ್ವರನೇ ಪ್ರಧಾ ನಕರ್ತೃವು ಪ್ರಕೃತಿಯಲ್ಲ.

– ಇತಿ ಪುರುಷಾಶ್ಮಾಧಿಕರಣಂ –

1. ಪ್ರಕೃತ್ಯುಪಸರ್ಜನ ಪುರುಷ ಕರ್ತೃತ್ವವಾದಮುಪಾಕರೋತಿ ||

ಈ ಅಧಿಕರಣದಲ್ಲಿ ಪ್ರಕೃತ್ಯುಪಸರ್ಜನ ಪುರುಷ ಕರ್ತೃತ್ವವು ನಿರಾಕರಿಸಲ್ಪಟ್ಟಿದೆ.

## ಸೂ|| ಓಂ|| ಅನ್ಯಥಾನುಮಿತೌ ಚ ಜ್ಞ ಶಕ್ತಿವಿಯೋಗಾತ್ ಓಂ|| 9

ಪ್ರಕೃತ್ಯುಪಸರ್ಜನ ಕರ್ತೃವು ಅನುಮಿಸಿದರೂ "ಜ್ಞ" ಶಕ್ತಿಯಿಲ್ಲವಾಗಿ ಜೀವನಿಗೆ ಶರೀರ ಸಂಬಂಧ ಪ್ರಾಪ್ತಿಗಾಗಿ ಪ್ರವೃತ್ತಿ ಶಕ್ತಿಯಿಲ್ಲದ್ದರಿಂದ ಅಂಗಿತ್ವವು ಕೂಡದು ಈ ವಾದವು ಸಾಧುವಲ್ಲ.

2. ಶರೀರ ಸಂಬಂಧಾತ್ಪುರುಷಃ ಪ್ರವರ್ತತೆ ಇತ್ಯಂಗೀಕಾರೇಪಿ ಸ್ವತಸ್ತಸ್ಯಾಸಾಮರ್ಥ್ಯಾಚ್ಛರೀರ ಸಂಬಂಧ ಏವಾಯುಕ್ತಃ ||

ಶರೀರ ಸಂಬಂಧದಿಂದ ಪುರುಷನು ಪ್ರವರ್ತಿಸುವನೆಂದಂಗೀಕರಿಸಿದರೂ ಸ್ವತಃ ಪುರುಷನಿಗೆ ಸಾಮರ್ಥ್ಯವಿಲ್ಲವಾದ್ದರಿಂದ ಶರೀರದೊಡನೆ ಸಂಬಂಧವಾಗುವುದೇ ಅಸಮಂಜಸವು.

## ಸೂ|| ಓಂ|| ವಿಪ್ರತಿಷೇಧಾಚ್ಚಾಸಮಂಜಸಂ ಓಂ|| 10

ಸಕಲ ಶೃತಿ ಸ್ಮೃತಿಯುಕ್ತಿ ವಿರುದ್ಧತ್ವಾಚ್ಚಾನೀಶ್ವರ ಮತಮಂಜಸಂ ||

ಸಕಲ ಶೃತಿ ಸ್ಮೃತಿ ಯುಕ್ತಿಗಳಿಂದ ವಿರುದ್ಧವಾದ ಈ ಅನೀಶ್ವರ ಮತವು ಸಮಂಜಸವಲ್ಲ.

4 ಶ್ರುತಯಃ ಸ್ಮೃತಯಶ್ಚೈವ ಯುಕ್ತಯಶ್ಚೇಶ್ವರಂ ಪರಂ ||
ವದಂತಿ ತದ್ವಿರುದ್ಧಂ ಯೋ ವದೇತ್ತಸ್ಮಾನ್ನಚಾಧಮ ಇತಿಪಾದ್ಮೇ

ಶೃತಿ ಸ್ಮೃತಿ ಯುಕ್ತಿಗಳು ಈಶ್ವರನನ್ನೇ ಸರ್ವೇಶ್ವರನನ್ನಾಗಿ ಹೇಳುತ್ತವೆ ಈ ಉಕ್ತಿಗೆ ವ್ಯತಿರಿಕ್ತವಾಗಿ ಹೇಳುವವರು ಪರಮಾಧಮರುಗಳು (ಪಾದ್ಮ ಪುರಾಣವು)

ಶೃತಿಗಳು : "ದ್ಯಾವಾ ಭೂಮೀ ಜನಯನ್" "ಯತೋವಾ"
"ಯ ಸರ್ವಜ್ಞಃ"
ಸ್ಮೃತಿಗಳು : "ಉತ್ಪತ್ತಿಸ್ಥಿತಿ ಸಂಹಾರಾಃ" ಸ್ರಷ್ಟಾ ಪಾತಾ ತಥೈವೋಕ್ತಾ"
ಇತ್ಯಾದಿಯುಕ್ತಿಗಳು"ವಿಮತಂ ಸತತ್ಕೃತಂ ಕಾರ್ಯತ್ವಾತ್
ಚಿಚ್ಛೇತ್ಯೇ ತೇನಚಿನ್ನಿ ಯಚಿಚೇತ್ಯೇಕೇ ನಚಿನ್ನಿಯತೇ
ಅಸ್ವಾತಂತ್ರ್ಯತ್ವಾತ್" ಇತ್ಯಾದಿ ಮೂಲನೋಡಿ

– ಇತಿ ಅನ್ಯಥಾನುಮಿತ್ಯಧಿಕರಣಂ –

## ವೈಶೇಷಿಕಾಧಿಕರಣಂ

ಈ ಅಧಿಕರಣದಲ್ಲಿ ಪರಮಾಣುಗಳಿಂದಲೇ ಪರಸ್ಪರ ಸಂಬಂಧದಿಂದ ಜಗದ ಉತ್ಪತ್ತಿಯು ಎಂಬ ವೈಶೇಷಿಕವಾದವು ನಿರಾಕರಿಸಲ್ಪಡುತ್ತದೆ.

1. ಪರಮಾಣ್ವಾರಂಭವಾದಮುಪಾಕರೋತಿ ||

**ಸೂ|| ಓಂ|| ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ ಓಂ|| 12**

ವೈಶೇಷಿಕರ ಮತದಂತೆ ತ್ರ್ಯಣುಕತ್ವಗತ ಮಹತ್ವ ದೀರ್ಘತ್ವಗಳ ಸಂಬಂಧದಿಂದ ಚತುರಣುಗತ ಪರಮಾಣುವು ಉತ್ಪತ್ತಿಯಾಗುವುದು, ಹಾಗಾದಲ್ಲಿ ದ್ವ್ಯಣುಕ ಪರಮಾಣುಗಳೆರಡರ ಹ್ರಸ್ವತ್ವ ಪಾರಿಮಾಂಡಲ್ಯ ಸಂಬಂಧಗಳಿಂದಲೂ ತ್ರ್ಯಣುಕಧ್ವಯುಗತ ಪರಿಮಾಣಗಳು ಉತ್ಪತ್ತಿಯಾಗಬೇಕು. ಇಲ್ಲದಿದ್ದಲ್ಲಿ ಎರಡರ ವಿಧದಲ್ಲಿಯೂ ಉತ್ಪತ್ತಿಯಾಗಲಾರದು. ಯಾಕೆಂದರೆ ಈ ಎರಡು ಪಕ್ಷಗಳಲ್ಲಿಯೂ ಯಾವುದೂ ವಿಶೇಷವಿಲ್ಲ.

**2. ಮಹತ್ವಾದೀರ್ಘತ್ವಾಚ್ಚ ಯಥಾಕಾರ್ಯಮುತ್ಪದ್ಯತೇ ॥**
**ಏವಂ ಹ್ರಸ್ವತ್ವಾತ್ಪಾರಿಮಾಂಡಲ್ಯಾಚ್ಯೋತ್ಪದ್ಯೇತ ।**
**ನಾಶಬ್ದಾದನ್ಯಥೈತಯೋರಪಿ ನ ಸ್ಯಾತ್ । ವಿಶೇಷಕಾರಣಾಭಾವಾತ್ ॥**

ಯಾವ ವಿಶೇಷ ಕಾರಣವು ಇಲ್ಲದ್ದರಿಂದ ಒಂದರಲ್ಲಿ ಸಾಧ್ಯವಾದುದು ಮತ್ತೊಂದರಲ್ಲಿ ಸಾಧ್ಯವೇ.

## ಸೂ|| ಓಂ॥ ಉಭಯಥಾಪಿ ನ ಕರ್ಮಾತಸ್ತದಭಾವಃ ಓಂ|| 12

ಈಶ್ವರೇಚ್ಛಾಯಾ ನಿತ್ಯತ್ವೆ ತದ್ಭಾವಾದೇವ ಪರಮಾಣು ಕರ್ಮಾಭಾವನ್ನೇದಾನೀಮಪಿ ತತಾನ್ಸ್ಯಾತ್ । ಅನಿತ್ಯತ್ವೆತತ್ಕಾರಣಾಭಾವಾತ್ । ಅತಃ ಪರಮಾಣು ಚೇಷ್ಟಾಭಾವಾತ್ತ ತ್ಕಾರ್ಯಾ ಭಾವಃ ।

ಈ ಎರಡು ಪ್ರಕಾರಗಳಲ್ಲಿಯೂ ಈಶ್ವರೇಚ್ಛೆಯಿಂದ ಪರಮಾಣುಗಳಲ್ಲಿ ಕಾರ್ಯೋತ್ಪತ್ತಿಯು ಅನನುಭವವು. ಆದ್ದರಿಂದ ದ್ಯಣುಕಗಳ ಸಂಬಂಧದಿಂದ ಕಾರ್ಯಗಳು ಆಗಲಾರವು (ಉತ್ಪತ್ತಿಯು) ಅನಿತ್ಯತ್ವವಿದ್ದಲ್ಲಿ ಕಾರ್ಯಕ್ಕೆ ಕಾರಣಭಾವವೇ ಇಲ್ಲವು.

**5. ವೈದಿಕೇಶ್ವರಸ್ಯ ತು ವೇದೇಸ್ವೈವ ಸರ್ವಶಕ್ತಿತ್ವೋಕ್ತೇಃ ಸರ್ವಮುಪಪದ್ಯತೇ ಸ್ವತ ಏವ ಕಾಲೇ ವಿಶೇಷಾಂಗೀಕೃತೇಶ್ಚ ॥**

ವೈದಿಕೇಶ್ವರನಿಗೆ ವೇದದಲ್ಲಿಯೇ ಸರ್ವಶಕ್ತಿಯನ್ನು ಹೇಳಿರುವುದರಿಂದ ಎಲ್ಲಾ ಭಿನ್ನತ್ವ ಧರ್ಮಗಳೂ ಸಾಧ್ಯ. ಉತ್ಪತ್ತಿ ಕಾಲದಲ್ಲಿ ವಿಶೇಷ ಅಂಗೀಕರಿಸಲ್ಪಟ್ಟಿದೆ ಕಾರ್ಯ ಕಾರಣ ಸಮವಾಯಿ ಸಂಬಂಧಕ್ಕೆ ಭಿನ್ನತ್ವ ಧರ್ಮದಿಂದ ಸಮವಾಯಕ್ಕಿಂ ಬೇರೆ ಅಪೇಕ್ಷೆಯಿಂದ ಸಾಧ್ಯವು.

## ಸೂ|| ಓಂ|| ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ ಓಂ|| 13

ವೈಶೇಷಿಕರು ಅವಯವ ಅವಯವಿಗಳ ಭಿನ್ನತ್ವದಿಂದ ಸಮವಾಯಿಯು ಉತ್ಪನ್ನವೆಂದು ಹೇಳುವರು. ಈ ಸಮವಾಯಿ ಧರ್ಮದಿಂದ ಅಸಮವಾಯಿಗಳು ಭಿನ್ನಗಳಾದ್ದರಿಂದ ಅವುಗಳಲ್ಲಿ ಸಾಮ್ಯತ್ವವು ಇದ್ದಲ್ಲಿ ಅನವಸ್ಥಿತಿಯು. ಆದ್ದರಿಂದ ಸೂಕ್ತವಲ್ಲ.

7. **ಕಾರ್ಯಕಾರಣಾದೀನಾಂ ಸಮವಾಯಸಂಬಂಧಾಂಗೀಕಾರಾತ್ತಸ್ಯ ಚ ಭಿನ್ನತ್ವಸಾಮ್ಯಾತ್ಸಮವಾಯಾಂತರಾಪೇಕ್ಷಾಯಾಮನವಸ್ಥಿತಿಃ ||**

ನ ಚ ತತ್ಪ್ರಮಾಣಂ। ಪ್ರಥಮ ಸಂಬಂಧಾಸಿದ್ಧ್ಯೈವ ಚ ತದಸಿದ್ಧಿಃ। ಸ್ವನಿರ್ವಾಹಕತ್ವೇ ಸಮವಾಯ ಏವ ಸ ಸ್ಯಾತ್ |

ಸರ್ವ ಕಾರಣಗಳಿಗೆ ಸಮವಾಯಿ ಸಂಬಂಧವನ್ನು ಅಂಗೀಕರಿಸಿದಲ್ಲಿ ಅವುಗಳಲ್ಲಿ ಭಿನ್ನತ್ವ ಧರ್ಮಗಳಿಂದ ಅನವಸ್ಥಿತಿಯು ಆದರೆ ಈ ತತ್ವವನ್ನು ಬಳಸಿರುವುದರಿಂದ ವೈಶೇಷಿಕ ಮತದ ಅಯೋಗವು. ಸಮವಾಯ ಸಿದ್ಧಿಯೇ ಅಸಾಧ್ಯವು.

## ಸೂ|| ಓಂ|| ನಿತ್ಯಮೇವ ಚ ಭಾವಾತ್ ಓಂ|| 14

ಆದರೆ ಈಶ್ವರೇಚ್ಛಾ ಮತ್ತು ಪರಿಮಾಣ ಕಾರಣಗಳು ಸದಾ ಇರುವುದರಿಂದ ನಿತ್ಯವಾಗಿ ಕಾರ್ಯವು ಸಂಭವಿಸುವುದು.

ನಿತ್ಯತ್ವಾಚ್ಛ ಪರಮಾಣುನಾಂ ಸಮವಾಯಸ್ಯ ಚ ತಸ್ಯೈವ ಜ ನಿತ್ವಾಂಗೀಕಾರಾ ನ್ನಿತ್ಯಮೇವ ಕಾರ್ಯಂಸ್ಯಾತ್ । ಅನ್ಯಥಾ ನ ಕದಾಚಿತ್ ।

ಪರಮಾಣುಗಳು ನಿತ್ಯವಾಗಿ ಸಮವಾಯವು ಉತ್ಪತ್ತಿ ಕಾರಣವೆಂದು ಅಂಗೀಕರಿಸಿದಲ್ಲಿ ನಿತ್ಯವೂ ಕಾರ್ಯವಾಗಲೇಬೇಕು. ಇಲ್ಲವೇ ಕಾರ್ಯ ಪ್ರವೃತ್ತಿ ಯಾವಾಗಲೂ ಆಗಲಾರದು.

## ಸೂ॥ ಓಂ॥ ರೂಪಾದಿಮತ್ವಾಚ್ಚ ವಿಪರ್ಯಯೋ ದರ್ಶನಾತ್ ಓಂ॥ 15

ವೈಶೆಷಿಕ ಮತದಲ್ಲಿ ಪೃಥಿವೆ ಆಪ, ತೇಜಸ್ಸು ಪರಮಾಣುಗಳಲ್ಲಿ ರೂಪಾದಿಗಳಿರುವುದರಿಂದ ನಿತ್ಯತ್ವ. ಅನಿತ್ಯತ್ವವು ಉಂಟೆಂಬುದು ವಿಪರ್ಯಾಸವು. ರೂಪವುಳ್ಳದ್ದು ಕಾಣಲ್ಪಡುವುದು. ಘಟದಂತಿ ನಿತ್ಯ ದರ್ಶನವಿರಲು ಸಾಧ್ಯವು ಆದ್ದರಿಂದ ಅಸಾಧ್ಯ

ರೂಪಾದಿ ಮತ್ವಾಚ್ಚ ಪರಮಾಣೂನಾಮನತ್ಯತ್ವಂ ತಥಾದೃಷ್ಟತ್ವಾಲ್ಲೋಕೆ।

ರೂಪಾದಿಗಳು ಇರುವುದರಿಂದಲೇ ಪರಮಾಣುಗಳ ಅನಿತ್ಯತ್ವವು. ನಾಶ ಹೊಂದುವ ವಸ್ತುವೆಂದು "ಘಟಾದಿಗಳಂತೆ" ಅನಿತ್ಯವು.

## ಸೂ॥ ಓಂ॥ ಉಭಯಥಾ ಚ ದೋಷಾತ್ ಓಂ॥ 16

ನಿತ್ಯತ್ವೆ ಪರಮಾಣೂನಾಂ ತದ್ವತ್ಸರ್ವ ನಿತ್ಯತ್ವಂ ಸ್ಯಾತ್। ವಿಶೇಷ ಪ್ರಮಾಣಾಭಾವಾತ್ । ಅನಿತ್ಯತ್ವೆ ಕಾರಾಣಾ ಭಾವಾತ್ತದುತ್ಪತ್ಯಭಾವಃ ।

ವೈಶೀಷಿಕ ಮತವು ಪರಮಾಣುಗಳ ನಿತ್ಯತ್ವ ಅನಿತ್ಯತ್ವ ಪಕ್ಷಗಳೆರಡರಲ್ಲಿಯೂ ದೋಷಗಳಿರುವುದರಿಂದ ಗ್ರಾಹ್ಯವಲ್ಲವು.

ಪರಮಾಣುಗಳು ನಿತ್ಯವಾದಲ್ಲಿ ಸರ್ವವು ನಿತ್ಯವು. ಅನ್ಯಥಾ ಪ್ರಮಾಣಾಭಾವವಾದ್ದರಿಂದಲೇ ಅನಿತ್ವತ್ರದಲ್ಲಿಯೂ ಕಾರಣಾಭಾವದಿಂದ ಉತ್ಪತ್ತಿಯಿಲ್ಲದ ಅಸಂಭವವು

## ಸೂ॥ ಓಂ॥ ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ ಓಂ॥ 17

ಶೃತಿ ಸ್ಮೃತ್ಯಪರಿಗೃಹೀತತ್ವಾಚ್ಚಾತಿ ಶಯೇನಾನಪೇಕ್ಷತಾ ।

ವೈಶೇಷಿಕ ಮತವು ಶೃತಿ ಸ್ಮೃತ್ಯಾದಿಗಳಿಂದ ಸಮರ್ಥನವಿಲ್ಲದಿರುವುದರಿಂದಲೂ ಮತ್ತು ಅವುಗಳಿಗೆ ವಿರುದ್ಧವಾದ್ದರಿಂದಲೂ ಅನಾದರಣೀಯವು.

**12. ಅನ್ವೀಕ್ಷಿಕೀಂ ತರ್ಕ ವಿದ್ಯಾಮನುರಕ್ತೋ ನಿರರ್ಥಕಾಮಿತಿ ಮೋಕ್ಷಧರ್ಮೇ ॥**

ಆನ್ವೀಕ್ಷಿತಿ–ಎನಿಸಿಕೊಳ್ಳುವ ವ್ಯರ್ಥವಾದ ತರ್ಕದಲ್ಲಿ ಅನುರಕ್ತನಾದವನು ಸಲ್ಲ.

ಈ ಮೇಲಿನ ಮೋಕ್ಷ ಧರ್ಮ ವಾಕ್ಯದಿಂದಲೂ ಈ ಮತವು ನಿರರ್ಥಕವು ಅನಪೇಕ್ಷಿತವು,

– ಇತಿ ವೈಶೇಷಿಕಾಧಿಕರಣಂ –

### – ಸಮುದಾಯಾಧಿಕರಣಂ –

ಈ ಅಧಿಕರಣದಲ್ಲಿ ಪಾಷಂಡಿ ಪ್ರಭೇದಗಳಾದ ವೈಭಾಷಿಕ, ಸೌತ್ರಾಂತಿಕ ಮತಗಳು ನಿರಾಕರಿಸಲ್ಪಡುತ್ತವೆ. ಪರಮಾಣು ಸಮುದಾಯವೇ ಗೋಘೃತ, ಮುಂತಾದ ಬೋಧಬೋದಕ ವಸ್ತುಗಳೇ ಹೊರತು ತದತಿರಿಕ್ತ ಅವಯವಿಯನ್ನು ನಿರಾಕರಿಸುತ್ತವೆ.

## ಸೂ|| ಓಂ|| ಸಮುದಾಯಉಭಯಹೇತುಕೇಽಪಿ ತದಪ್ರಾಪ್ತಿಃ ಓಂ|| 18

ಅನೇಕತ್ವ ರೂಪ ಸಂಖ್ಯಾ ಸಮುದಾಯವು ಮಿಲಿತಾನೇಕ ಪರಮಾಣುಗಳ ನಿಮಿತ್ತಿಕವೆಂದರೂ ವಿರಲಾನೇಕ ಹೇತುತ್ವವೆಂದು ಅಂಗೀಕರಿಸಲ್ಪಟ್ಟರೂ ಸಮುದಾಯ ವಿರಲಾನೇಕ ಕಾರಣತ್ವವು ಪ್ರಾಪ್ತವಲ್ಲ. ಅನೋನ್ಯಾಶ್ರದೋಷದಿಂದ ಆದ್ದರಿಂದ ಪರಮಾಣು ಪುಂಜವೇ ಘಟಾದಿ ವಸ್ತುಗಳ ಅವಯವಗಳು ಎಂದರೆ ಈ ಬೌದ್ಧಮತವು ಅಸಾಧುವು.

ಏಕ ಹೇತುಕತ್ವ-ಪರಮಾಣು ಸಮುದಾಯದ ಏಕದೇಶ ಸಂಯೋಗ ವಿಶೇಷ ರೂಪ ಪರಮಾಣು ಜನ್ಯತ್ವವು ಅಯುಕ್ತವು. ಏಕೆಂದರೆ ಒಂದು ಸಂಖ್ಯೆಯಿಂದ ಸಮುದಾಯೋತ್ಪತ್ತಿಯು ಸ್ವವ್ಯಾಹತವು. ಒಂದೇ ಪ್ರದೇಶದಲ್ಲಿರುವ ಅನೇಕ ಪರ ಮಾಣುಗಳು ಸೇರಿದ ಸಮುದಾಯಗಳು ಅನುಪಪನ್ನವು, ಏಕೆಂದರೆ ಸೇರಿದ ಅನೇಕ ಸಂಖ್ಯೆಗಳಿಂದ ಸಮುದಾಯ ಸಿದ್ಧಿ ಮತ್ತು ಸಮುದಾಯವಿದ್ದರೆ ಅನೇಕದ ಸಿದ್ಧಿ ಹೀಗೆ ಕಾರ್ಯಕಾರಣಗಳ ಅನ್ಯೋನ್ಯಾಶ್ರಯತ್ವದಿಂದ ಸಮುದಾಯೋತ್ಪತ್ತಿಯು ಆಗ ಲಾರದು, ಈ ಮೇಲಿನ ಎರಡು ವಿಧಿಗಳಲ್ಲದೆ ಬೇರೆಯಾದ ನಾನಾ ದೇಶಸ್ಥ ಅವಿರಳ ಅನೇಕ ಸಮುದಾಯದ ಕಾರಣತ್ವವನ್ನು ಅಂಗೀಕರಿಸಿದಲ್ಲಿ ಆಗ ಸರ್ವದಾ ವಿದ್ಯಮಾನ ಅವಿರಳ ಅನೇಕ ಸಮುದಾಯಗಳ ಸಮುದಾಯವು ಮತ್ತು ಅವುಗಳ ನಿತ್ಯೋತ್ಪಾದ ನದಿಂದ ಪ್ರಲಯಕಾಲ ಜನ್ಯತ್ವವು ಅಸಾಧ್ಯವು. ಆದ್ದರಿಂದ ಈ ಮತವು ಸಾಧುವಲ್ಲ.

> ಸಮುದಾಯಸ್ಯ ಏಕ ಹೇತುಕತ್ವಂ ನಯುಜ್ಯತೆ । ಉಭಯ ಹೇತುಕೇಽಪ್ಯ ನ್ಯೋನ್ಯಾಶ್ರಯತ್ವಾತ್ತದಪ್ರಾಪ್ತಿಃ । ಅನ್ಯಥಾ ಸರ್ವದಾಯಸಮುದಾಯ ಸತ್ವಂಸ್ಯಾತ್

ಹೀಗೆ ಯಾವ ರೀತಿಯ ಸೇರುವಿಕೆಯೂ ಯಾವ ಸಮುದಾಯಿಯಾಗಲು ಸಾಧ್ಯವಿಲ್ಲ.

## ಸೂ|| ಓಂ|| ಇತರೇತರಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿ ಮಾತ್ರ ನಿಮಿತ್ತತ್ವಾತ್ ಓಂ|| 19

ಮೇಲೆ ಹೇಳಿದ ಪರಮಾಣು ಪುಂಜದ ಸದಾ ಇರುವಿಕೆಯು ಪ್ರಲಯೋತ್ಪತ್ತಿ

ಮಾಡಲಾರದೆಂಬ ಹೇತುವು ಸಾಧುವಲ್ಲ ಇದಂ ಇದಂ ಎಂದು ಪರಮಾಣು ಪರಸ್ಪರಾಪೇಕ್ಷ ಬುದ್ಧಿ ನಿಮಿತ್ತ ಇಚ್ಛೆ ಇಲ್ಲದ ಕಾಲದಲ್ಲಿ ಸಮುದಾಯ ವ್ಯವಹಾರದ ಅಭಾವವೂ ಮತ್ತು ಪ್ರಲಯೋತ್ಪತ್ತಿ ಸಂಭವವು ಆಗುವುದೆಂಬ ಆಕ್ಷೇಪಕ್ಕೆ ಉತ್ತರವಾಗಿ ಪರಮಾಣುಗಳ ಸ್ವಸಮುದಾಯೋತ್ಪತ್ತಿ ನಿಮಿತ್ತ ವ್ಯವಹಾರವು ಪೂರ್ಣ ವಿರಾಮವಾಗುವುದು

ಸರ್ವದಾ ವಿದ್ಯಮಾನೋಪಿ ಸಮುದಾಯಃ ಪರಸ್ಪರಾಪೇಕ್ಷಯಾ ವ್ಯವಹ್ರಿಯತ ಇತಿ ಚೇನ್ನ । ಏಕಂ ಕಾರ್ಯ ಮುತ್ಪಾದ್ಯತಸ್ಯವಿನಷ್ಟತ್ವಾತ್ಪರಂ ಪರಸ್ಪರ ಪ್ರತ್ಯಯ ಸ್ತದ ಪೇಕ್ಷಯಾ ವ್ಯವಹಾರ ಇತಿ ನ ಯುಜ್ಯತೆ ॥

ಯದ್ಯಪಿ ವಿರಲಾನೇಕ ಹೇತು ಸಮುದಾಯವು ನಿತ್ಯವಾದರೂ ಅವುಗಳ ಪರಸ್ಪರ ಜನ್ಯ ಅನೇಕತ್ವ ಜ್ಞಾನ ರಹಿತ ಮತ್ತು ಅನ್ಯೋನ್ಯನಾಪೇಕ್ಷ ಸಾಹಿತ್ಯದಿಂದ ವ್ಯವಹಾರ ಶೂನ್ಯವಾಗಿ ಪ್ರಲಯ ಸಂಭವವು ಎಂದಲ್ಲಿ ಪರಮಾಣುಗಳು ಒಂದು ಕಾರ್ಯೋತ್ಪತ್ತಿ ನಿಮಿತ್ತದಿಂದ ವಿರಾಮಹೊಂದಿ ಕಾರ್ಯಾಂಕುರೋತ್ಪತ್ತಿಯು ಅಸಂಭವದಿಂದ ಸಮುದಾಯಾಖ್ಯ ಕಾರ್ಯವು ವಿರಾಮ ಹೊಂದುವುದರಿಂದ ಮುಂದೆ ಕಾರ್ಯೋತ್ಪತ್ತಿಯು ಅಸಂಭವವು.

4. **ಕಾರಣೇ ಸತಿ ಕಾರ್ಯಂ ಭವತ್ಯೇವೇತಿ ಹಿ ತಸ್ಯ ನಿಯಮಃ ॥**

ಆದರೂ ವಿರಲ ಪರಮಾಣುಗಳಿಂದ ಜನ್ಯ ಮಿಲಿತ ಪರಮಾಣುಗಳಿಗೆ ಸ್ಥಾಯಿತ್ವವನ್ನು ಅಂಗೀಕರಿಸಿ ಅವುಗಳ ಕಾರ್ಯವು ದೃಷ್ಟಿ ಗೋಚರವಾಗಿ ಉತ್ಪತ್ತಿ ಪ್ರಸಂಗದಿಂದ ಅತ್ಯಲ್ಪ ಕಾಲದಲ್ಲಿಯೇ ಅನೇಕ ಕಾರ್ಯೋತ್ಪತ್ತಿಗಳಿಂದ ಅಸಂಖ್ಯಾತವಾಗಿ ಕ್ಷಣಿಕತ್ವಕ್ಕೆ ಹಾನಿಯು ಕಾರಣವಿದ್ದರೆ ಕಾರ್ಯವಾಗಲೇಬೇಕೆಂದು ಸೌಗತರ ನಿಯಮವು.

## ಸೂ॥ ಓಂ॥ ಉತ್ತರೋತ್ಪಾದೇ ಚ ಪೂರ್ವನಿರೋಧಾತ್ ಓಂ॥ 20

ಕ್ಷಣಿಕ ಮತದಲ್ಲಿ ಸಮುದಾಯಾನುಪಪತ್ತಿಯೇ ಅನುಪಪತ್ತಿಯಲ್ಲ ವಿಷಯ ಕಾರ್ಯೋತ್ಪತ್ತಿಯೂ ಅಯುಕ್ತ. ಮುಂದಿನ ಉತ್ಪತ್ತಿಯಲ್ಲಿ ಕಾರ್ಯಕ್ಕೆ ಸದೃಶ

ಜನ್ಯತ್ವ ಸಾಮರ್ಥ್ಯವೇ ಹೊರ್ತು ಬೇರೆಯಲ್ಲ. (ವಿಸದೃಶ ಕಾರ್ಯ) ಪ್ರಥಮ ಸದೃಶ ಕಾರ್ಯೋತ್ಪತ್ತ್ಯ ನಂತರದಲ್ಲಿ ಉತ್ತರ ಸದೃಶ ಕಾರ್ಯೋತ್ಪತ್ತಿಪೂರ್ವವೇ ಕಾರಣ ನಾಶವಾದ್ದರಿಂದ ಪೂರ್ವ ಸದೃಶ ಕಾರ್ಯವು ಅಸಂಭವವು.

**6. ಕಾರ್ಯೋತ್ಪತ್ತಾವೇವ ಕಾರಣಸ್ಯ ವಿನಾಶಾಚ್ಚ ನ ವಿಶೇಷ ಕಾರ್ಯೋತ್ಪತ್ತಿಃ ||**

ಕಾರ್ಯೋತ್ಪತ್ತಿಯಲ್ಲಿಯೇ ಕಾರಣವು ನಾಶವಾಗುವುದರಿಂದ ವಿಶೇಷ ಕಾರ್ಯೋತ್ಪತ್ತಿಗೆ ಅವಕಾಶವಿಲ್ಲವಾಗಿ ಕ್ಷಣಿಕತ್ವವು ವಿರೋಧದಿಂದ ಅಸಾಧುವು.

## ಸೂ|| ಓಂ|| ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯ ಮನ್ಯಥಾ ಓಂ|| 21

ಕ್ಷಣಿಕ ಮತದಲ್ಲಿ ಪ್ರತಿ ಕ್ಷಣವೂ ಕಾರ್ಯೋತ್ಪತ್ತಿಯು ಯುಕ್ತವಲ್ಲ. ಕಾರಣ ವಿದ್ದಲ್ಲಿ ಮಾತ್ರ ಕಾರ್ಯವೆಂಬ ಅಂಗೀಕಾರವು. ಇದು ಅವರ ಕಾರ್ಯವೆಂಬ ಪ್ರತ್ಯಭಿಜ್ಞೆಯ ವ್ಯವಹಾರಕ್ಕೆ ಹಾನಿಯು. ಬೇರೆಯಾಗಿ ಕಾರಣವಿದ್ದಲ್ಲಿ ಅಂಗೀಕಾರ್ಯವು. ಸರ್ವ ಕಾರ್ಯಗಳೂ ಒಂದೇ ಕಾಲದಲ್ಲಿರಬೇಕಾಗುವುದು.

ಹೀಗೆ ವಿರಳ ಕಾರ್ಯೋತ್ಪತ್ತಿ ನಿರಾಕರಣದಿಂದ ವ್ಯವಹಾರಗಳನ್ನು ನಿರಾಕರಿಸುವೆವು

**8. ಕಾರಣೇ ವಿನಷ್ಟೇ ಕಾರ್ಯಮುತ್ಪದ್ಯತೇ ಚೇತ್ತತ್ಕಾರ್ಯಮಿತಿ ಪ್ರತಿಜ್ಞಾ ಹಾನಿಃ । ತತ್ಕಾಲೇ ಕಾರಣಮಸ್ತಿ ಚೇದ್ವಿನಾಶಕಾರಣಾ ಭಾವಾದ್ಯೌಗಪದ್ಯಂ ಸರ್ವಕಾರ್ಯಾಣಾಂ ||**

ಕಾರ್ಯವಾಗುವ ಕಾಲದಲ್ಲಿ ಅವಶ್ಯವಾಗಿ ಕಾರಣವು ಇರಬೇಕಾದ್ದರಿಂದ ಅದು ಸಿದ್ಧಿಸದಿದ್ದಲ್ಲಿ ಈ ಕಾರ್ಯವು ಇಂತಹ ಕಾರಣ ಸಿದ್ಧಿಯು ಎಂದು ಹೇಳಲು ಅಸಾಧ್ಯವು. ಆ ಕಾಲದಲ್ಲಿಯೇ ಕಾರಣ ಗಳಿಕೆಯೆಂದು ಹೇಳಿದಲ್ಲಿ ವಿನಾಶ ಕಾರಣವಿಲ್ಲದ್ದರಿಂದ ಒಂದೇ ಕಾಲದಲ್ಲಿ ಸರ್ವ ಕಾರ್ಯಗಳು ಇರಲು ಒಂದೇ ಕ್ಷಣದಲ್ಲಿಯೇ ಅನೇಕ ಕಾರ್ಯಗಳ ಪ್ರಾಪ್ತಿ ವೈಪರೀತ್ಯವು.

## ಸೂ॥ ಓಂ॥ ಪ್ರತಿಸಂಖ್ಯಾಪ್ರತಿಸಂಖ್ಯಾನಿರೋಧಾಪ್ರಾಪ್ತಿರವಿಚ್ಛೇದಾತ್ ಓಂ॥ 22

ಕ್ಷಣಿಕವಾದದಲ್ಲಿ ಪ್ರತಿಸಂಖ್ಯಾ ಅಪ್ರತಿ ಸಂಖ್ಯಾ ಪ್ರತಿಕ್ಷಣ ವಿನಾಶ ಸಂತಾನ ವಿನಾಶಗಳ ವಿಚ್ಛೇದವಿಲ್ಲದೆ ಕಾರ್ಯೋತ್ಪತ್ತಿಯಲ್ಲಿಯೂ ಅಕಾರ್ಯೋತ್ಪತಿಯಲ್ಲಿಯೂ ಬಿಡುವಿಲ್ಲದ್ದರಿಂದ ಸಾಧುವಲ್ಲ,

ಕಾರ್ಯೇ ಸತಿ ಕಾರ್ಯಂಭವತ್ಯೇವೇತಿ ನಿಯಮಾನ್ನಿ ಸ್ಸಂತಾನಃ ಸ ಸಂತಾನಶ್ಚ ವಿನಾಶೋ ನ ಯುಜ್ಯತೆ.

ಹೀಗೆ ಕ್ಷಣ ವಾದದಲ್ಲಿ ಕಾರ್ಯೋತ್ಪತ್ತಿಯನ್ನೇ ವಿನಾಕರಿಸಿ ವಿನಾಶ ಸಾಧ್ಯವನ್ನುನಿರಾಕರಿಸುವರು ಕಾರಣವಿದ್ದರೆ ಕಾರ್ಯವುಕಾರ್ಯವಾದ್ದರಿಂದ ಕಾರಣನಾಶದ ಅನಂತರ ಕಾರಣವಿಲ್ಲದ್ದರಿಂದ ಕಾರ್ಯ ಸಂಭವವೇ ಇಲ್ಲವಾಗಿ ವಿನಾಶವೂ ಅಸಂಭವ ಮತ್ತು ಮೊದಲಿನ ಕಾರ್ಯವೇ ಸಾಧ್ಯವಿಲ್ಲವಾಗಿ ಮುಂದಿನ ವಿನಾಶವೂ ಸಂಭವಿಸುವುದಿಲ್ಲ

## ಸೂ॥ ಓಂ॥ ಉಭಯಥಾ ಚ ದೋಷಾತ್ ಓಂ॥ 23

ಕಾರಣವಿದ್ದಲ್ಲಿ ಕಾರ್ಯವು ನಿಯಮವು ಮತ್ತು ಅನಿಯಮವು ಎಂಬ ಎರಡು ಪಕ್ಷಗಳೂ ಕಾರ್ಯ ಕಾರಣ ವಿಶೇಷ ಕಾರ್ಯವಿಲ್ಲದ್ದರಿಂದ ಬೇರೆ ವಿಧಾವಲಂಬನವು ಅರ್ಥಾಪತ್ತಿದೋಷಪ್ರಯುಕ್ತ ಅಸಾಧುವು.

ಕಾರಣೆಸತಿಕಾರ್ಯಂ ಭವತ್ಯೇವೇತಿನಿಯಮೋ ಸರ್ವದಾ ಕಾರ್ಯಭಾವಾನ್ನ ಕಾರ್ಯ ಕಾರಣ ವಿಶೇಷಃ । ಅನಿಯಮೋ ಕಾರ್ಯಾನುಪಪತ್ತಿಃ ॥

ಕಾರಣವಿದ್ದಲ್ಲಿ ಕಾರ್ಯವೆಂಬ ನಿಯಮದಿಂದ ಸರ್ವ ಕಾಲದಲ್ಲಿಯೂ ಕಾರ್ಯವು ಅವಶ್ಯವಾಗಿ ಆಗಲೇಬೇಕಾಗಿ ಕಾರ್ಯ ಕಾರಣಗಳಿಗೆ ವಿಶೇಷ ಸಂಬಂಧವನ್ನು ಹೇಳಬೇಕಾಗಿಲ್ಲ ನಿಯಮಾನು ಸರಣೆ ಇಲ್ಲದಿದ್ದರೆ ಕಾರ್ಯವಾಗುವ ಸಾಧ್ಯತೆಯಿಲ್ಲ. ಹೀಗೆ ಈ ಮತವು ಅಸಾಧುವು.

ದೀಪ ದೃಷ್ಟಾಂತ ಹೇತುವಿನಿಂದ ಕ್ಷಣಿಕತ್ವವನ್ನು ಸಾಧಿಸಲು ಆಕಾಶ ದೃಷ್ಟಾಂತವಾದರೆ ಈ ಸಾಧನವು ದೋಷವಾಗುವುದು ಹೀಗೆ ಈ ಮತವು ಅಸಮಂಜಸವು.

ದೀಪಾದಿಷು ವಿಶೇಷ ದರ್ಶನಾತ್ ಕ್ಷಣಿಕತ್ವೇನಾನ್ಯತ್ರಾಪಿ ಕ್ಷಣಿಕತ್ವಮನುಮೀಯತೆ ಚೇದಾಕಾಶಾದಪ್ಯ ವಿಶೇಷ ದರ್ಶನಾದನ್ಯತ್ರಾಪಿತದನುಮೀಯತೆ ।

ಪೂರ್ವೋತ್ತರ ಕ್ಷಣಗಳಲ್ಲಿ ಪ್ರದೀಪದಲ್ಲಿ ಪರಿಮಾಣ ವಿಶೇಷ ದರ್ಶನದಿಂದ ವಸ್ತುವಿನಲ್ಲಿ ಭೇದವು ತಿಳಿಯುಲು ಕಾರಣವನ್ನು ಹೇಳಿ ತತ್ವವನ್ನು ಸಾಧಿಸಿದಲ್ಲಿ ಪ್ರತಿ ತರ್ಕ ರೂಪವಾದ ಅವ್ಯಾಕೃತಾಕಾಶದಲ್ಲಿ ಪೂರ್ವ ಪಶ್ಚಿಮ ಇತ್ಯಾದಿ ದಿಕ್ಕುಗಳ ಭೇದವು ತಿಳಿಯುಲು ಕಾರಣವನ್ನು ಹೇಳಿ ಕ್ಷಣಿಕತ್ವವನ್ನು ಸಾಧಿಸಿದಲ್ಲಿ ಪ್ರತಿ ತರ್ಕ ರೂಪವಾದ ಅವ್ಯಾಕೃತಾಕಾಶದಲ್ಲಿ ಪೂರ್ವ ಪಶ್ಚಿಮ ಇತ್ಯಾದಿ ದಿಕ್ಕುಗಳ ಭೇದವು ವ್ಯವಹರಿಸಲ್ಪಡುವಂತೆ ದೀಪದಲ್ಲಿಯೂ ವ್ಯವಹಾರ ಭೇದವೇ ಅವ್ಯಾಕೃತಾಕಾಶ ಸತ್ಯತ್ವ ಹೇತುವಿನಿಂದ ಕ್ಷಣಿಕತ್ವವು ಅಪವಾದವು.

## ಸೂ|| ಓಂ|| ಅನುಸ್ಮೃತೇಶ್ಚ ಓಂ|| 25

ಅದೇ ಇದು ಎಂಬ ಪ್ರತ್ಯಭಿಜ್ಞಾಕಾರಣದಿಂದಲೂ ಈ ಮತವು ಅಸಾಧುವು.

ತದೇವೇದಮಿತಿ ಪ್ರತ್ಯಭಿಜ್ಞಾನಾಚ್ಚ ಪ್ರತ್ಯಭಿಜ್ಞಾಯಾಃ ಬ್ರಾಂತಿತ್ವೇ ವಿಶೇಷ ದರ್ಶನಸ್ಯಾಪಿ ಬ್ರಾಂತಿತ್ವಂ ।

ಅದೇ ಪದಾರ್ಥವೇ ಇದು ಎಂಬ ಪ್ರತ್ಯಭಿಜ್ಞೆಯಿಂದ ಕ್ಷಣಿಕವಾದದ ಸಿದ್ಧಿಯಿಲ್ಲ. ಯಾವ ಪದಾರ್ಥವು ಪೂರ್ವೋತ್ತರ ಕಾಲ ಸಂಬಂಧದಿಂದ ಐಕ್ಯ ವಿಷಯಕ್ಕೆ ಜ್ಞಾಪಕವಾಗುವುದು ಆ ಕಾರಣದಿಂದಲೇ.

– ಇತಿ ಸಮುದಾಯಾಧಿಕರಣಂ –

# ಅಸದಧಿಕರಣವು

ಈ ಅಧಿಕರಣದಲ್ಲಿ "ಶೂನ್ಯ"ವೇ ಜಗತ್ಕಾರಣವೆಂಬ ಮಾಧ್ಯಮಿಕರ ಸಮಯವು ನಿರಾಕರಿಸಲ್ಪಡುವುದು. ಅದೃಷ್ಟಕಾರಣವೆಂಬ ಮಾಧ್ಯಮಿಕ ಸಮಯವು ನಿರಾಕರಿಸಲ್ಪಡದಿರುವುದರಿಂದಲೂ ಸರ್ವಧರ್ಮಗಳ ವ್ಯತ್ಯಸ್ತ ಅಸತ್ತ್ವೋಪೇತ "ಶೂನ್ಯ"ಕ್ಕೆ ಜಗತ್ಕಾರಣತ್ವವು ಯುಕ್ತವು ಎಂಬುದು ಪೂರ್ವ ಪಕ್ಷವು.

1. ಶೂನ್ಯವಾದ ಮಪಾಕರೋತಿ ।

## ಸೂ॥ ಓಂ॥ ನಾಸತೋಽದೃಷ್ಟತ್ವಾತ್ ಓಂ॥ 26

ಅದೃಷ್ಟತ್ವಾನ್ನಾಸತಃ ಕಾರಣತ್ವಂ ಯುಜ್ಯತೆ ।

"ಶೂನ್ಯ"ಕ್ಕೆ ಜಗತ್ಕಾರಣವು ಯುಕ್ತವು ಅಥವಾ ಯುಕ್ತವಲ್ಲ ಈ ವಿಷಯದಲ್ಲಿ ಪ್ರಮಾಣವಿಲ್ಲದ್ದರಿಂದಲೂ ಅಸತ್ವದಿಂದ ಯಾವ ಕಾರ್ಯವು ಕಂಡಿಲ್ಲದ್ದರಿಂದಲೂ ಅನುಮಾನ ಆಗಮಗಳಿಂದಲೂ ತಿಳಿಯಲು ಸಾಧ್ಯವಾದ್ದರಿಂದಲೂ ಇದುಸಾಧುವಲ್ಲ.

## ಸೂ॥ ಓಂ॥ ಉದಾಸೀನ ನಾಮಪಿ ಚೈವಂ ಸಿದ್ಧಿಃ॥ ಓಂ॥ 27

ಅಸತ್ತಿಗೆ ಕಾರ್ಯೋತ್ಪತ್ತಿಯನ್ನು ಅಂಗೀಕರಿಸಿದಲ್ಲಿ ತಿಳುವಳಿಕೆಗೆ ಬಾರದಿರುವುದ ಗಗನಕುಸುಮಗಳ ಸುಗಂಧಾದಿಗಳು ಅನುಭವವಾಗುವ ಪ್ರಸಂಗವು ಬಂದು ಅದು ಅಸಾಧ್ಯವಾದ್ದರಿಂದ "ಅಸತ್"ಗೆ ಜಗತ್ಕಾರಣತ್ವವು ಸಾಧುವಲ್ಲ

ಅಸತಃ ಕಾರಣತ್ವೆ ಉದಾಸೀನಾನಾಂ ಹೇಯೋಪಾದೇಯ ಬುದ್ಧಿವರ್ಜಿತಾನಾಂ ಖಪುಷ್ಪಾದೀನಾಮಪಿ ಸಕಾಶಾತ್ಕಾರ್ಯಸಿದ್ಧಿಃ

ಸರ್ವಧರ್ಮ ವಿಕಲತ್ವದಿಂದ "ಅಸತ್" ಶಬ್ದಕ್ಕೆ "ಶೂನ್ಯ"-... ... ಉದಾಸೀನರಾದ (ಬುದ್ಧಿವಿಪರ್ಯಾಸವುಳ್ಳ) ಯುಕ್ತಾಯುಕ್ತ ಪರಿಜ್ಞಾನವಿಲ್ಲದ ಜನಗಳಿಂದ ಆಕಾಶಪುಷ್ಪ, ನಸ್ತಮರಸ ಇವುಗಳು ಇರೋಣವು ಅನುಮಿತವಾದರೂ ಅನುಭವದಲ್ಲಿ ಅಂಧಪರಿಮಳವಾಗಲೀ, ಅಮೃತರಸವಾಗಲೀ ಅನುಭವಿಸಲು ಸಾಧು ವಿಲ್ಲವಾಗಿ ಈ ಸಾದೃಶ್ಯದಿಂದ ಶೂನ್ಯವು ಜಗತ್ಕಾರಣವಲ್ಲ

3 ನಾಶಬ್ದಾನ್ನ ಚೇದನ್ಯತ್ರಾಪಿನಸ್ಯಾತ್ ಅವಿಶೇಷಾತ್ ।

ಅಜ್ಞಾನ ವಿಶೇಷದಿಂದ ಅಸತ್ತಾದ ರಜತಾಕಾರವು ಕಪ್ಪೆ ಚಿಪ್ಪಿನಲ್ಲಿ ಕಾಣಲ್ಪಡು ವಂತೆ "ಶೂನ್ಯ"ವು ಜಗತ್ಕಾರಣವೇಕಾಗಬಾರದು ಎಂಬ ಪ್ರಶ್ನೆಗೆ ಸಾವಕಾಶ ಪರಾ ಮರ್ಶದಿಂದ ಭ್ರಮನಿರಾಸವಾಗಿ ಇದು ರಜತವಲ್ಲ ಕಪ್ಪೆಚಿಪ್ಪೆ ಎಂಬ ಜ್ಞಾನವಾಗು ವಂತೆ ಶೂನ್ಯವೂ ಜಗತ್ಕಾರಣವಲ್ಲವೆಂಬ ಜ್ಞಾನವಾಗುವುದು

## ಸೂ।। ಓಂ।। ನಾಭಾವ ಉಪಲಬ್ಧೇಃ ಓಂ॥ 28

ನ ಚ ಜಗದೇವ ಶೂನ್ಯಮಿತಿ ವಾಚ್ಯಂ ದೃಷ್ಟತ್ವಾತ್ ।

ಈ ಜಗತ್ತು ಸುಳ್ಳಲ್ಲ ದೃಷ್ಟ ವಸ್ತುವಾದ್ದರಿಂದ ನ್ಯಾಣುವೆ.

## ಸೂ॥ ಓಂ॥ ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ಓಂ॥ 29

ಸ್ವಪ್ನಾವಸ್ಥೆಯಲ್ಲಿ ನೋಡುವ ವಸ್ತುಗಳು ಜಾಗ್ರದವಸ್ಥೆಯಲ್ಲಿ ಸತ್ಯವಲ್ಲದ್ದೆಂದು ತಿಳಿಯುವಂತೆ ವಿಲಕ್ಷಣ ಸ್ವರೂಪಧರ್ಮವಿಲ್ಲದ್ದಾದ್ದರಿಂದ ಶೂನ್ಯವು ಜಗತ್ಕಾರಣ ಎಂಬು ದಕ್ಕೆಅನುಮಾನವು ಸಾಧ್ಯವಲ್ಲ

ನ ಚ ದೃಷ್ಟಸ್ಯಾಪಿಸ್ವಪ್ನಾದಿದದಭಾವಃ । ತಸ್ಯೋತ್ತರ ಕಾಲ್ಕೋಸ್ವಪ್ನೋಯು ನಾಯಂ ಸರ್ಪ ಇತ್ಯಾದ್ಯನುಭವಾತ್ । ನ ಚಾತ್ರತಾದೃಶಂ ಪ್ರಮಾಣ ಮಸ್ತಿ ।

"ನರ್" ಎಂದು ತೋರುವ ಸ್ವಪ್ನ ವಸ್ತುವಿನಂತೆ ಸರ್ಪವು ಹಗ್ಗದಂತೆ ತೋರಿದರೂ ಶೂನ್ಯವೆಂಬುದೂ ಭ್ರಮ ಸಾಧ್ಯವೇ ಸತ್ಯವಲ್ಲ ಹಗ್ಗಕ್ಕೆ ಹಾವಿನ ಧರ್ಮವಿಲ್ಲ ಹಾಗೆಯೇ ಜಾಗ್ರದವಸ್ಥೆಯಲ್ಲಿ ಇದು ಸ್ವಪ್ನದೃಷ್ಟ ನಿಜವಲ್ಲವೆಂಬ ತಿಳಿವಳಿಕೆಯಾಗವುದು

– ಇತಿ ಅಸದಧಿಕರಣವು –

## ಅನುಪಲಬ್ಧ್ಯಧಿಕರಣವು

ವಿಜ್ಞಾನವಾದಮ ಪಾಕರೋತಿ ।

ಈ ಅಧಿಕರಣದಲ್ಲಿ ವಿಜ್ಞಾನವಾದವನ್ನು ನಿರಾಕರಿಸುತ್ತಾರೆ

**ಸೂ॥ ಓಂ॥ ನಾಭಾವೋಽನುಪಲಬ್ಧೇಃ ಓಂ॥ 30**

ಜಗತ್ತು ಜ್ಞಾನಾತ್ಮಕವೆಂಬ ಭಾವವು ಜ್ಞಾನ ಮತ್ತು ಜ್ಞೇಯ ವಸ್ತುಗಳ ಅಭೇದದಿಂದ ಅನುಪಲಬ್ಧವು

ನ ವಿಜ್ಞಾನ ಮಾತ್ರಂ ಜಗತ್ತಥಾನುಭವಾಭಾವಾತ್ ।

ಯೋಗಾಚಾರ ಮತದಲ್ಲಿ ವಿಜ್ಞಾನ ಮಾತ್ರವೇ ಈ ಜಗತ್ತು ಎಂಬ್ಯ ವಾದವು ಅನುಭವ ವಿರುದ್ಧವಾದ್ದರಿಂದ ಯೋಗ್ಯವಲ್ಲ

ಜ್ಞಾನ ಪದಾರ್ಥವು ಕ್ಷಣಿಕವಾದ್ದರಿಂದಲೂ ಈ ಜಗತ್ತು ಸ್ಥಿರವಾದ್ದರಿಂದಲೂ ಅವುಗಳ ಐಕ್ಯವು ಸಾಧುವಲ್ಲ

ಜ್ಞಾನಂ ಕ್ಷಣಿಕಮರ್ಥಾನಾಂಚ ಸ್ಥಾಯಿತ್ವಮುಕ್ತಂ । ಅತಶ್ಚ ನೈಕ್ಯಂ ॥

ಜ್ಞಾನವು ಕ್ಷಣಿಕವಾಗಿ ನಾಶ ಹೊಂದುವುದರಿಂದಲೂ ಅರ್ಥವು ಸ್ಥಿರವಾಗಿರುವದರಿಂದಲೂ ಐಕ್ಯವುಕೂಡದು

ಪ್ರಮಾಣಾ ಭಾವಾತ್ಸರ್ವಶ್ರುತಿಯುಕ್ತಿ ವಿರುದ್ಧತ್ವಾಚ್ಚನೈತಿ ಪಕ್ಷಾಗ್ರಾಹ್ಯಾಃ ।

ಶ್ರುತಿ, ಸ್ಮೃತಿ, ಯುಕ್ತಿಗಳಿಂದಲೂ ಸಾಧಿಸಲಸಾಧ್ಯ ಬೌದ್ಧ ಸಿದ್ಧಾಂತವು ಅಗ್ರಾಹ್ಯವು

– ಇತಿ ಅನುಪಲಬ್ಧ್ಯಧಿಕರಣಂ –

## – ನೈಕಸ್ಮಿಂನ್ನಧಿಕರಣಂ –

**1. ಸ್ಯಾದ್ವಾದಿಮತಂ ದೂಷಯತಿ ॥**

ಸ್ಯಾದ್ವಾದ—ಜಿನಮತವನ್ನು ಸರಿಯಲ್ಲವೆಂದು ತಿಳಿಸುತ್ತಾರೆ.

ಜೈನ ಪ್ರ-ಪ್ರ ಸಪ್ತ ಭಂಗಿತ್ವವು ಜಗತ್ಕಾರಣವೆಂದು ಹೇಳುವುದು ಈ ಸಪ್ತ ಭಂಗಿತ್ವವು ಒಂದು ವಸ್ತುವಿನಲ್ಲಿ ಏಕಕಾಲ ಸ್ಥಾನದಲ್ಲಿ ಅಸಂಭವವು ಅಲ್ಲದೆ ಸದಸತ್ತಿಗಿಂತ ಅನ್ಯ ಅನ್ಯ ಭಂಗಿಯೋ ಅಪ್ರಮಾಣವು ಸಪ್ತಭಂಗಿಗಳು ಜಗತ್ಕಾರಣ ವೆಂಬುದಂತೂ ಸುತರಾಂ ಅಪ್ರಮಾಣವು

ಸಪ್ತ ಭಂಗಿಗಳು : ಸತ್ತ್ವಸ್ಯಾತ್ಸದ ಸತ್ತ್ವಸ್ಯಾದ ಸತ್ತ್ವಸ್ಯಾತ್ತತೋನ್ಯಚ್ಚ ಸ್ಯಾದಿತ್ರೇತತ್ ನೈಕಸ್ಮಿನ್‌ಯುಜ್ಯತೆ । ಅದೃಷ್ಟತ್ವೇನಾಸಂಭವಾತ್ ॥

ಸಪ್ತ ಪಾದಗಳು : ಸತ್ಯಂ, ಅಸತ್ಯಂ, ಸದಸತ್ಯಂ, ಸದ್ವಿಲಕ್ಷಣತ್ವಂ ಸತ್ಯೇಸತಿ ಸದ್ವಿಲಕ್ಷಣತ್ವಂ ಅಸತ್ಯೇಸತಿ ಅಸದ್ವಿಲಕ್ಷಣಂತತಃ ಅನ್ಯಚ್ಚ

ಎಂದು ಒಂದೇ ವಸ್ತುವಿನಲ್ಲಿ ಈ ಭಂಗಿಗಳು ಏಕತ್ರ ಅಸಂಭಾವಿತವು ದೃಷ್ಟ ವಲ್ಲದ್ದರಿಂದಲೂ ಯುಕ್ತವಲ್ಲ

ಇಲ್ಲಿ ಬಂಗಿ ಎಂದರೆ ಒಂದು ವಸ್ತು ಹೀಗಿದೆ ಎಂದು ಅದರ ಸತ್ಯ ಸ್ವರೂಪವನ್ನು ತಿಳಿಸಿ ಹೇಳುವ ನಿರ್ಧಾರ ಎಂದು ಅರ್ಥ.

## ಸೂ॥ ಓಂ॥ ಏವಂಚಾತ್ಮಾಕಾತ್ಸ್ನ್ಯರ್ಂ ಓಂ॥ 34

ಜೀವಸ್ಯ । ಶರೀರ ಪರಿಮಿತತ್ವಾಂಗೀಕಾರೇಣಾಪಿ ಶರೀರಸ್ಯಹಸ್ತ್ಯಾದಿ ಶರೀರೇಽಕಾತ್ಸ್ನ್ಯರ್ಂಸ್ಯಾತ್ ॥

ಜೀವನಿಗೆ ಅಣುತ್ವವನ್ನು ಹೇಳಿದಲ್ಲಿ ಸರ್ವಾಂಗವೇದನವು ತಿಳಿಯಲಸಾಧ್ಯವು ಜಿನನು ಜೀವನನ್ನು ಆ ಆ ಪ್ರಾಪ್ತ ದೇಹ ಪರಿಮಿತನೆಂದು ಹೇಳುವನು ಜೀವನಿಗೆ ಸ್ವತಃ ಪರಿಮಾಣಾಭಾವವು ಎಂದು ತಿಳಿದಲ್ಲಿ ಪಿಪೀಲಿಕ ದೇಹ ಸ್ವಕಾಲದಲ್ಲಿಅತ್ಯಲ್ಪವೂ ಗಜಾದಿ ದೇಹಸ್ಥ ಕಾಲದಲ್ಲಿ ಅತ್ಯಧಿಕವು ಆದ ನಾನಾ ಪ್ರಮಾಣ ದೇಹವು ಸಾಧ್ಯವಲ್ಲ ವಾಗಿ ಈ ಮತವು ಅತಿ ದೂಷ್ಯವು

## ಸೂ॥ ಓಂ॥ ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ ಓಂ॥ 35

[illegible] ತ ಕಾಲೀನ ಪ್ರಮಾಣ ಭೇದದಿಂದಲೇ [illegible] ದೇ ಜೀವಾ[illegible] ಆ[illegible]ನಿಗೆ

ವಿಕಾರ ಪ್ರಾಪ್ತಿಯು ಅನಿತ್ಯತ್ವವು ಅನಿರ್ಮೋಕ್ಷತ್ವವು ಪ್ರಾಪ್ತವಾಗುತ್ತದೆ

ತತ್ತಚ್ಛರೀರಸ್ಯ ತತ್ತತ್ಪರಿಣಾಮತ್ವಮಿತಿ ನ ಮಂತವ್ಯಂ ವಿಕಾರಿತ್ವಾದನಿತ್ಯತ್ವ ಪ್ರಸಕ್ತೇಃ॥

ಈ ನಾನಾ ಪರಿಮಾಣತ್ವವು ಸರಿಯಲ್ಲ ವಸ್ತುವು ಯಾವ ಲಕ್ಷಣವೋ ಅದರ ಅನ್ಯಥಾ ಭಾವವು ವಿಕಾರಿತ್ವವೆನಿಸುವುದು ಜೀವನೂ ವಿಕಾರಿತ್ವವನ್ನು ಹೊಂದುವನು ಇದು ಸರಿಯಲ್ಲ

## ಸೂ॥ ಓಂ। ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದ ವಿಶೇಷಾತ್ ಓಂ॥ 36

ಆತ್ಮನಿಗೆ ನಾನಾ ಕಾಯ ಪರಿಮಿತಿಯನ್ನು ಅಂಗೀಕರಿಸದಿದ್ದಲ್ಲಿ ಮೋಕ್ಷದಲ್ಲಿಯೂ ನಾನಾ ಪರಿಮಿತ ಪ್ರಾಪ್ತ ಶರೀರಗಳ ವಿನಹ ಅವಚ್ಛೇಧ್ಯ ಪರಿಮಾಣ ಸತ್ವವು ಇರಲು ಸಾಧ್ಯವಿಲ್ಲವಾಗಿ ಮುಕ್ತಿಯಲ್ಲಿ ಆ ಎಲ್ಲ ಪರಿಮಾಣದೇಹಗಳು ನಿತ್ಯ ವಸ್ತುಗಳಾಗಿ ರುವುವು ಇದು ಅಸಾಧ್ಯವು.

ಪರಿಮಾಣಾ ಭಾವೇ ಸ್ವರೂಪಾಭಾವಾ ಪ್ರಾಪ್ತ್ಯಾ ಅಂತ್ಯಪರಿಮಾಣಸ್ಥಿತೇ ಸ್ತದರ್ಥತ್ವೇನ ಶರೀರಸ್ಥಿತೇರುಭಯ ನಿತ್ಯತ್ವಾದ ವಿಶೇಷೇಣ ಸರ್ವಶರೀರ ನಿತ್ಯತ್ವಂ ಸ್ಯಾತ್ ।

ಪರಿಮಾಣವಿಲ್ಲದ್ದಲ್ಲಿ ಸ್ವರೂಪಾಭಾವವೇ ಪ್ರಾಪ್ತಿಯಾಗುವುದು. ಸ್ವರೂಪ ಸಿದ್ಧಿಗಾಗಿ ಅನೇಕ ಪರಿಮಾಣ ದೇಹಗಳಲ್ಲಿ ಯಾವ ವಿಶೇಷವೂ ಇಲ್ಲದ್ದರಿಂದ ಆ ಎಲ್ಲಾ ದೇಹಗಳಿಗೂ ಮೋಕ್ಷದಲ್ಲಿ ನಿತ್ಯತ್ವವನ್ನು ಅಂಗೀಕರಸಬೇಕಾಗುವುದು ಆದ್ದ ರಿಂದ ಆತ್ಮನಿಗೆ ಕಾಯ ಪರಿಣಾಮತ್ವವು ಅಂಗೀಕಾರಾರ್ಹವಲ್ಲ ಜೀವನಿಗೆ ಸ್ವರೂಪ ತ್ವವೇ ಇಲ್ಲವಾಗುವುದರಿಂದ ಅಸಾಧುವು.

– ಇತಿ ಸ್ಯೈಕಸ್ಮಿನ್ನಧಿಕರಣಂ –

ಈ ಅಧಿಕರಣದಲ್ಲಿ ಪಾಶುಪತ ಪಕ್ಷವನ್ನು ನಿರಾಕರಿಸುವರು.

ಸರ್ವಜ್ಞಾದಿ ಗುಣಶಾಲಿ ಪಶುಪತಿಯು ಪ್ರಕೃತಿಯನ್ನು ಉಪಾದಾನ ಕಾರಣವನ್ನಾಗಿ ಹರಿ ಹಿರಣ್ಯ ಗರ್ಭಾದಿ ಜಗತ್ತನ್ನು ಸೃಷ್ಟಿಸುವನು ಎಂದು ಇಟ್ಟುಕೊಂಡು ಆದ್ದರಿಂದ ಶ್ರೀಹರಿಗೆ ಜಗತ್ಕರ್ತೃತ್ವವು ಇಲ್ಲ ಎಂಬ ಮತ ಸರಿಯಲ್ಲ ಎಂಬುದನ್ನು ವಿವರಿಸುತ್ತಾರೆ

ಪಾಶುಪತಪಕ್ಷಮಪಾಕರೋತಿ

## ಸೂ|| ಓಂ|| ಪತ್ಯುರಸಾಮಂಜಸ್ಯಾತ್ ಓಂ|| 37

"ಯಂಕಾಮಯೇ ತಂತಮುಗ್ರಂಕೃಣೋಮಿ ತಂ ಬ್ರಹ್ಮಾಣಂ ತಮೃಷಿಂತಂ ಸುಮೇಧಾಂ" (ಋ 10-125-5) ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೆ ಶರವೆ ಹಂತವಾಉ"(ಋ-10-125-6) ಅಸ್ಯದೇವಸ್ಯ ಮೀಳುಷೋ ವಯಾ ವಿಷ್ಣೋ ರೇಷಸ್ಯ ಪ್ರಭೃತೇ ಹವಿರ್ಭಿಃವಿದೇಹಿ ರುದ್ರೋ ರುದ್ರಿಯಂ ಮಹಿತ್ವಂ
ಯಾಸಿಷ್ಟಂವರ್ತಿ ರಶ್ವಿನಾವಿರಾವತ್" (ಋ-7--40-5) ಏಕೋ ನಾರಾಯಣ ಆಸೀನ್ನ ಬ್ರಹ್ಮಾನೇಶಾನೊನಾಗ್ನಿಪೊಮೌ ಮಹೋಪ 1) ಇತ್ಯಾದಿಶ್ರುತೇ ಪಾರತಂತ್ರ್ಯೇಣಾಸಮಂಜಸತ್ವಾನ್ನ ಪಶುಪತಿರೀಶ್ವರೋ ಜಗತ್ಕರ್ತಾಃ |

ಈ ಮೇಲಿನ ಶ್ರುತಿಗಳಿಂದ ಪಶುಪತಿಯು ಪರತಂತ್ರವುಳ್ಳವನಾದ್ದರಿಂದ ಈಶ್ವರನ ಜಗತ್ಕರ್ತೃತ್ವವಿಲ್ಲ (1) ಅಂಭೃಣೀ ಸೂಕ್ತದಲ್ಲಿ ಪಶುಪತಿಗೆ ಪಾರತಂತ್ರ್ಯವನ್ನು ಹೇಳಿದೆ 2) ಈಶ್ವರನಿಗೆ ಮೃತಿಯನ್ನು ಹೇಳಿದೆ. 3) ಭಕ್ತಪ್ರಿಯನಾದ ಪರಮಾತ್ಮನನ್ನು ಕರ್ಮಗಳಿಂದ ಪೂಜಿಸಿ ರುದ್ರನು ರುದ್ರ ಪದವಿಯನ್ನು ಪಡೆದನು. 4) ಪ್ರಲಯ ಕಾಲದಲ್ಲಿ ಒಬ್ಬನೇ ಶ್ರೀಮನ್ನಾರಾಯಣನು ಇದ್ದನು ಬ್ರಹ್ಮನೂ

ಇಲ್ಲ ರುದ್ರನೂ ಇಲ್ಲ ಎಂದು ಶಿವನಿಗೆ ಉಪ್ಪನಾದು ಅಸ್ವಾತಂತ್ರ್ಯವು

## ಸೂ|| ಓಂ ಸಂಬಂಧಾನುಪತ್ತೇಶ್ಚ ಓಂ|| 38

ಈ ಮೇಲಿನ ಶೃತಿಗಳಿಂದ ಪಶುಪತಿಯು ಪರತಂತ್ರವುಳ್ಳವನಾದ್ದರಿಂದ ಈಶ್ವರನು ಜಗತ್ಕರ್ತೃವು ಸಾಧುವಲ್ಲ (ಪ್ರಾಕೃತ ಪುರುಷನ ದೃಶ್ಯ)

ಅಶರೀರತ್ವಾತ್ತಸ್ಯ ಜಗತಾ ಸಂಬಂಧೋ ನಯುಜ್ಯತೆ ಕರ್ತೃತ್ವೇನಪ್ರಾಕೃತ ಪುರುಷ ವತ್ ।

ಅಶರೀರನಾದ್ದರಿಂದ ಕರ್ತೃತ್ವವು ಸಿದ್ಧವಾಗುವುದಿಲ್ಲ ಪ್ರಾಕೃತಪುರುಷನಂತೆ

## ಸೂ|| ಓಂ|| ಅಧಿಷ್ಠಾನಾನುಪತ್ತೇಶ್ಚ ಓಂ|| 39

ಪ್ರಲಯ ಕಾಲದಲ್ಲಿ ಸರ್ವನಾಶವಾಗಿರುವುದರಿಂದ ಸೃಷ್ಟಿ ಕಾರ್ಯದಲ್ಲಿ ಅಧಿಷ್ಠಾನವಿಲ್ಲದ್ದರಿಂದ ಸೃಷ್ಟಿ ಅಸಾಧ್ಯವು.

ಪೃಥಿವ್ಯಾ ದ್ಯಧಿಷ್ಠಾನಸ್ಥಿತೋ ಹಿ ಕುಲಾಲಾದಿಃ ಕಾರ್ಯಂಕರೋತಿ ನ ಚ ತಸ್ಯತದಸ್ತಿ ।

ಪೃಥಿವ್ಯಾದ್ಯಧಿಷ್ಠಾನದಿಂದ ಕುಲಾಲಾದಿಗಳು ಘಟ ಪಟಾದಿಗಳನ್ನು ಮಾಡಲು ಸಮರ್ಥರು ಈ ಅಧಿಷ್ಠಾನವಿಲ್ಲದ್ದರಿಂದ ಶಿವನು ಕರ್ತನಲ್ಲ.

## ಸೂ|| ಓಂ|| ಕರಣವಚ್ಚೇನ್ನ ಭೋಗಾದಿಭ್ಯಃ ಓಂ|| 40

ಇದಮೇವ ಜಗತ್ತಸ್ಯಕರಣವದ ಧಿಷ್ಠಾನಾದಿರೂಪಂ ನಿತ್ಯಸ್ಯಾಪಿ ಕಸ್ಯ ಚಿದ್ಭಾವಾದ್ಯುಜ್ಯತ ಇತಿಚೇತ್–ನ ಭೋಗಾದಿ ರೂಪಂ ಉತ್ಪತ್ತಿ ನಾಶೌ ಸುಖದುಃಖಭೋಗಾಶ್ಚ ಪಾಪ್ಯಂತೆ ತದ್ಗತಾಃ ||

ಪಶುಪತಿಗೆ ಸಾಧನದಿಂದ ಲಭ್ಯವಾದ ಕಾರಣಗಳಿಂದ ಶರೀರ ತುಲ್ಯ ಅಧಿಷ್ಠಾನ

ಪ್ರಾಪ್ತಿಯು ಎಂದರೇ ಸುಖ ದುಃಖ ಉತ್ಪತ್ತಿಯು ಮರಣಾದಿ ಪ್ರಾಪ್ತಿಯಿಂದ ಸಾಧುವಲ್ಲ

## ಸೂ|| ಓಂ|| ಅಂತವತ್ತ್ವಮಸರ್ವಜ್ಞತಾ ವಾ ಓಂ|| 41

ದೇಹವತ್ತ್ವೇಂತವತ್ತ್ವಂ | ಅನ್ಯಥಾ ಜ್ಞಾನಾಭಾವಃ | ಶರೀರಿಣ ಏವ ಹಿ ಜ್ಞಾನೋತ್ಪತ್ತಿಃ ದೃಷ್ಟಾ |

ದೇಹವತ್ತ್ವ ತದಭಾವತ್ವ ಪಕ್ಷಗಳೆರಡರಲ್ಲಿಯೂ ಕ್ರಮವಾಗಿ ಅಂತವತ್ತ್ವ ನಾಶತ್ವ ಅ ಸರ್ವಜ್ಞತಾ ದೋಷಗಳಿಂದ ಜಗತ್ಕರ್ತೃತ್ವವು ಯುಕ್ತವಲ್ಲ

1. **ವಿಷ್ಣೋಸ್ತು ಶ್ರುತ್ಯೈವ ಸರ್ವೇ ವಿರೋಧಾಃ ಪರಿಹೃತಾಃ | ಯದಾತ್ಮಕೋ ಭಗವಾಂಸ್ತದಾತ್ಮಿಕಾವ್ಯಕ್ತಿಃ | ಕಿಮಾತ್ಮಕೋ ಭಗವಾನ್ ಜ್ಞಾನಾತ್ಮಕ ಐಶ್ವರ್ಯಾತ್ಮಕ (ಏಕಾಯನ) ಇತಿ |**

ಬುದ್ಧಿ ಮನೋಂಗ ಪ್ರತ್ಯಂಗ ವತ್ತಾಂಭಗವತೋ ಲಕ್ಷಯಾಮಹೇ | ಬುದ್ಧಿ ಮಾನ್ಮನೋವಾನಂಗವಾನ್ಪ್ರತ್ಯಂಗವಾನ್ ಇತಿ | ಸದ್ದೇಹಃ ಸುಖ ಗಂಧಶ್ಚ ಜ್ಞಾನಾಭಾ ಸತ್ಪರಾಕ್ರಮಃ ಜ್ಞಾನಜ್ಞಾನಃ ಸುಖ ಸುಖಃ ಸವಿಷ್ಣುಃ ಪರ ಮೋಕ್ಷರಃ (ಪೈಂಗೀಶ್ರುತಿಃ) ಇತ್ಯಾದಿಕಾ

ಮೇಲಿನ ಶೃತಿಗಳಿಂದ ವಿಷ್ಣುವಿಗೆ ಶೃತಿಯೇ ಎಲ್ಲ ವಿರೋಧವನ್ನು ಪರಿಹರಿಸುವುದು.

– ಇತಿ ಪತ್ಯುರಧಿಕರಣಂ–

1. ಶಕ್ತಿಪಕ್ಷಂ ದೂಷಯತಿ ।

## ಸೂ॥ ಓಂ॥ ಉತ್ಪತ್ತ್ಯ ಸಂಭವಾತ್ ಓಂ॥ 42

ಈ ಅಧಿಕರಣದಲ್ಲಿ ಶಕ್ತಿಯೇ ಜಗತ್ಕಾರಣವೆಂಬ ಪಕ್ಷದ ನಿರಾಕರಣವು ಹೇಳಿವೆ.

ಸ್ತ್ರೀಯಿಂದಲೇ ಜಗದುತ್ಪತ್ತಿಯನ್ನು ಹೇಳುವ ಮಹಾವಾಮನ, ಮಧ್ಯವಾಮನ ಅಣುವಾಮನ ಈ ಮೂರು ವಿಧ ಶಾಕ್ತ ಪಂಥಗಳು ಅಸಾಧು. ಸ್ತ್ರೀ ಮಾತ್ರ ದಿಂದಲೇ ಉತ್ಪತ್ತಿಯು ಸ್ವತಂತ್ರವಾಗಿಲ್ಲ

ನ ಹಿ ಪುರುಷಾನನು ಗೃಹೀತಸ್ತ್ರೀಲಭ್ಯಃ ಉತ್ಪತ್ತಿಃ ದೃಶ್ಯತೆ ॥

ಶೃತಿ ಸ್ಮೃತಿ ಇತಿಹಾಸಾದಿ ಪುರಾಣಾದಿಗಳಲ್ಲಿ ಶಕ್ತಿಯೂ ಸರ್ವಜ್ಞಾದಿ ಗುಣ ಗಳಿಂದ ಸಕಲ ಜಗಜ್ಜನನೀ ಇತ್ಯಾದಿಯಾಗಿ ಹೇಳಿದ್ದರೂ ಅವು ಸಾಧುವಲ್ಲ. ಕೇವಲ ಸ್ತ್ರೀ ವ್ಯಕ್ತಿಯೇ ಜಗತ್ಕರ್ತೃವಲ್ಲ ಪುರುಷಾನುಗ್ರಹದಿಂದಲೇ ಉತ್ಪತ್ತಿಯು ಸ್ವತಂತ್ರ ವಾಗಿಲ್ಲ.

## ಸೂ॥ ಓಂ॥ ನ ಚ ಕರ್ತುಃ ಕರಣಂ ಓಂ॥ 43

ಯದಿ ಪುರುಷೋಂಗೀಕ್ರಿಯತೆ ತಸ್ಯಾಪಿ ಕರಣಾಭಾವಾದನುಪತ್ತಿಃ ।

ಪುರುಷನಾದ ಶಿವನಿಂದ ಅನುಗ್ರಹೀತ ಶಕ್ತಿಯೂ ಜಗತ್ಕಾರಣವಾಗಲಾರದು ಏಕೆಂದರೆ ಶಿವನಿಗೆ ಕರಣಭಾವವು ಸ್ವತಂತ್ರವಾಗಿಲ್ಲವಾದ್ದರಿಂದ.

## ಸೂ॥ ಓಂ॥ ವಿಜ್ಞಾನಾದಿಭಾವೇವಾತದ ಪ್ರತಿಷೇಧಃ ಓಂ॥ 44

ಯದಿ ವಿಜ್ಞಾನಾದಿಕರಣಂ ತಸ್ಯಾಂಗೀಕ್ರಿಯತೆ ತದಾ ತತ ಏವ ಸ್ವಷ್ಟ್ಯೈದ್ಯುಪ ಪತ್ತಿರೀಶಭಾವಾಂತರ್ಭಾವಃ ॥

ಶಿವನಿಗೆ ವಿಜ್ಞಾನಾದಿಭಾವ ಜ್ಞಾನೇಚ್ಛಾದಿಗಳಿದ್ದಲ್ಲಿ ಆಗಲೂ ಶಕ್ತಿಯು ಸ್ವತಂತ್ರ ಕರ್ತೃವಾಗುವುದು.

## ಸೂ॥ ಓಂ॥ ವಿಪ್ರತಿಷೇಧಾಚ್ಚ ಓಂ॥ 45

ಸಕಲ ಶೃತ್ಯಾದಿ ವಿರುದ್ಧತ್ವಾಚ್ಚಾಸಮಂಜಸಂ ।

ಸಕಲ ಶೃತಿ ಸ್ಮೃತಿ ವಿರುದ್ಧವಾದ್ದರಿಂದ ಶಾಕ್ತೇಯ ಮತವು ದುಷ್ಟವು.

— ಇತಿ ಉತ್ಪತ್ಯಧಿಕರಣಂ —

ದ್ವಿತೀಯಾಧ್ಯಾಯದ ದ್ವಿತೀಯ ಪಾದದ ಮುಕ್ತಾಯವು

॥ ಶ್ರೀ ಕೃಷ್ಣಾರ್ಪಣಮಸ್ತು ॥

- ಬ್ರಹ್ಮ ಸೂತ್ರ ಭಾಷ್ಯಂ -

ಶ್ರೀಮದಾನಂದ ತೀರ್ಥರ ಭಗತ್ಪಾದಾಚಾರ್ಯ ವಿರಚಿತಂ

ದ್ವಿತೀಯಾಧ್ಯಾಯ-ತೃತೀಯ ಪಾದಃ

## - ವಿಯದಧಿಕರಣಂ -

1 ಜೀವ ಪರಮಾತ್ಮಾಧಿಭೂತಾಧಿ ದೈವೇಷು ಶೃತೀನಾಂ ಪರಸ್ಪರ ವಿರೋದಮಪಾಕರೋತ್ಯನೇನ ಪಾದೇನ ।

ಈ ಪಾದದಲ್ಲಿ ಭೂತ ಪದಾರ್ಥಗಳ ಮತ್ತು ಅವುಗಳ ಕಾರಣಗಳ ಮತ್ತು ಅವುಗಳ ಕಾರಣಗಳಾದ ಅವ್ಯಕ್ತಾದಿ ಭೂತಾಭಿಮಾನಿ ದೇವತೆಗಳಲ್ಲಿ ಪರಮಾತ್ಮನಲ್ಲಿ ಮತ್ತು ಜೀವಾತ್ಮರುಗಳಲ್ಲಿಯೂ ಉತ್ಪತ್ಯಾದಿ ಶೃತಿ ವಿರೋಧಗಳನ್ನು ಸೂಕ್ತ ಸಮನ್ವಯದಿಂದ ಪ್ರಕಾಶಪಡಿಸುವರು

ಆಕಾಶಾದಿ ಶಬ್ದವಾಚ್ಯ ಅವ್ಯಕ್ತ (ಪ್ರಕೃತಿ) ಜೀವ, ಕಾಲ, ಅಹಂಕಾರಾದಿ ಭೂತಗಳು ಉತ್ಪತ್ತಿ ಇಲ್ಲದವುಗಳಲ್ಲ ಮತ್ತೆ ಉತ್ಪತ್ತಿ ಉಳ್ಳವುಗಳೇ, ಶ್ರೀ ಪರಮಾತ್ಮನಿಗೆ ಉತ್ಪತ್ತ್ಯಭಾವ ಶೃತಿಗಳು ಇರುವುದರಿಂದಲೂ ಮುಖ್ಯವಾಗಿ ಉತ್ಪತ್ತ್ಯಭಾವವು ಶ್ರೀಪರಮಾತ್ಮನಿಗೇ ಭೂತಾದಿ ವಸ್ತುಗಳಿಗಲ್ಲ

**ಸೂ|| ಓಂ|| ನವಿಯದಶ್ರುತೇಃ ಓಂ|| 1**

ಆಕಾಶಾದಿ ಭೂತ ಪದಾರ್ಥಗಳ ಉತ್ಪತ್ತಿಯನ್ನು "ಆತ್ಮನ ಆಕಾಶ ಸಂಭೂತ" ಎಂಬ ಶೃತಿಯಲ್ಲಿ ಹೇಳಿವೆ.

ನವಿಯದನುತ್ಪತ್ತಿಮತ್ । ತಥಾ ಶೃತೇಃ ।

ಆಕಾಶವು ಉತ್ಪತ್ತಿವುಳ್ಳದ್ದಲ್ಲವೆಂದಲ್ಲ. ಹಾಗೆ ಯಾವ ಶೃತಿಯೂ ಇಲ್ಲ.

## ಸೂ|| ಓಂ|| ಅಸ್ತಿತು ಓಂ|| 2

ಅಸ್ತ್ಯೇವ ಚೋತ್ಪತ್ತಿ ಶೃತಿಃ "ಆತ್ಮನ ಆಕಾಶಸ್ಸಂಭೂತಃ (ತೈ 2-1) ಇತ್ಯಾದಿ

ಮೇಲಿನ ಶೃತಿಯು ಭೂತಗಳಿಗೆ ಉತ್ಪತ್ತಿಯನ್ನು ಹೇಳುವುದು ಅನುತ್ಪತ್ತಿ ಶೃತಿಯು ಔಪಚಾರಿಕವಾಗಿ ಮಾತ್ರವೇ ಮುಖ್ಯವಲ್ಲ. ಬಹಳ ಶೃತಿಗಳು ಉತ್ಪತ್ತಿಯನ್ನು ಸಮರ್ಥಿಸುತ್ತವೆ.

## ಸೂ|| ಓಂ|| ಗೌಣ್ಯಸಂಭವಾತ್ ಓಂ|| 3

"ಶೂನ್ಯೋ ಲೌಕಿಕ", ಇತ್ಯಾದಿ ಶೃತಿ ಗೌಣೀ ||

"ಅಧ ಹವಾವ ನಿತ್ಯಾನಿ" ಇತ್ಯಾದಿ ಶೃತಿಯು ಗೌಣ ಅನಾದಿಯನ್ನೇ ಹೇಳುವುದು

5. ಅನ್ಯಥೋತ್ಪತ್ತಿ ಶೃತಿ ಬಾಹುಲ್ಯಾಸಂಭವಾತ್ ||

ಉತ್ಪತ್ತಿ ಶೃತಿಗಳು ಮುಖ್ಯಾರ್ಥ ಸರ್ವ ವಿಷಯಕವು ಇತರ ಅನುತ್ಪತ್ತಿ ಶೃತಿಗಳು ಗೌಣವ್ಯವಸ್ಥೆಯೆಂದು ತಿಳಿಯಬೇಕು ಅನಾದಿತ್ವ ಶೃತಿ ವಿರೋಧದಿಂದ ಉತ್ಪತ್ತಿ ಸ್ಥಿತಿಗೆ ಅನಾದಿತ್ವವನ್ನೇ ಹೇಳಲು "ಆತ್ಮನಃ ಆಕಾಶಃ ಸಂಭೂತಃ ಎಂದು ಹೇಳುವ ಉತ್ಪತ್ತಿಯು ಅನೇಕ ಭೂತಗಳ ಉತ್ಪತ್ತಿ ವಿಷಯಗಳಾದ್ದರಿಂದ ಆಕಾಶಾದಿ ಭೂತಗಳು ಮುಖ್ಯತಃ ಉತ್ಪತ್ತಿವುಳ್ಳವುಗಳೇ ಗೌಣ ರೀತಿಯಿಂದಲೇ ಉತ್ಪತ್ತಿಯಿಲ್ಲವು ಇಲ್ಲಿ ಬ್ರಹ್ಮ ಶಬ್ದಾರ್ಥ ದೃಷ್ಟಾಂತ.

## ಸೂ|| ಓಂ|| ಶಬ್ದಾಚ್ಚ ಓಂ|| 4

"ಅಥಹ ವಾವ ನಿತ್ಯಾನಿ ಪುರುಷಃ ಪಕ್ರೃತಿ ರಾತ್ಮಾಕಾಲ ಇತಿ ।
ಅಥಯಾನ್ಯ ನಿತಾನಿ ಪ್ರಾಣಃ ಶೃದ್ಧಾ ಭೂತಾನಿ, ಭೌತಿಕಾನೀತಿ ।
ಯಾನಿಹವಾವ ಉತ್ಪತ್ತಿಮಂತಿ ತಾನ್ಯ ನಿತ್ಯಾನಿ ನಹ್ಯೇತಾನಿ ಕದಾಚನೋ
ತ್ಪದ್ಯಂತೆಪುರುಷಃ ನವಿಲೀಯಂತೆ ಪ್ರಕೃತಿರಾತ್ಮಾ ಕಾಲ ಇತಿ ।
ಅಥೈತಾನ್ಯುತ್ಪತ್ತಿಮಂತಿ ಚ ಅನುತ್ಪತ್ತಿ ಮಂತಿ ಚ ಪ್ರಾಣಃ, ಪ್ರದ್ಧಾಕಾಶ
ಇತಿಗಭಾಗಶೋತ್ಪದ್ಯಂತೆ । ಇತಿಭಾಲ್ಲವೇಯ ಶೃತೇಶ್ಚ ।

ಮೇಲಿನ ಭಾಲ್ಲವೇಯ ಶೃತಿಯು ವಿವರವಾಗಿ ಈ ವಿಷಯವನ್ನು ತಿಳಿಸುವುದು ಯಾವ ವಸ್ತುಗಳೂ ನಿತ್ಯವೋ ಅವು ಪುರುಷ ಪ್ರಕೃತಿ, ಆತ್ಮಾ ಮತ್ತು ಕಾಲವು. ಯಾವುವು ಅನಿತ್ಯಗಳೋ ಆವುಗಳು ಪ್ರಾಣ,ಶ್ರದ್ಧಾ ಭೂತಗಳು ಉತ್ಪತ್ತಿವುಳ್ಳ ವಸ್ತುಗಳು ಯಾವಾಗಲೂ ಉತ್ಪತ್ತಿ ಲಯಗಳುಳ್ಳವುಗಳಲ್ಲ ಯಾವ ಪದಾರ್ಥಗಳುಉತ್ಪತ್ತಿ ಮತ್ತು ಅನುತ್ಪತ್ತಿವುಳ್ಳವುಗಳೋ ಅವುಗಳೆಂದರೆ ಪ್ರಾಣ, ಶ್ರದ್ಧಾ, ಆಕಾಶ ಭಾಗಶ ಉತ್ಪತ್ತಿವುಳ್ಳವುಗಳು ಪ್ರಾಣ ಪದೋಕ್ತ ಭೂತ ಅದರ ಮುಖ್ಯಾಮುಖ್ಯ ಅಭಿಮಾನಿ ರೂಪ ಕ್ರಿಯಾತ್ಮಕ ವಾಯುಗಳಿಗೆ ಭಾಗಗಳಿಂದ ಉತ್ಪತ್ತಿಯೂ|ಹಾಗೆಯೇ ಶ್ರದ್ಧಾ ಪದೋಕ್ತ ಭಾರತೀ ದೇವಿಯೂ ಕೂಡ ಆಕಾಶ ಪದೋಕ್ತ ಅವ್ಯಕ್ತ ತದಭಿಮಾನಿ ಚೈತನ್ಯ ಸ್ವರೂಪ, ಮತ್ತು ಅವಕಾಶ ಸ್ವರೂಪ ಭೂತ ಸೂಕ್ಷ್ಮ ರೂಪದಿಂದ ಉತ್ಪತ್ತಿವುಳ್ಳವುಗಳಲ್ಲ.

## ಸೂ|| ಓಂ|| ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ್ ಓಂ|| 5

ಸ್ಯಾದೇವೈಕಸ್ಯೋತ್ಪತ್ತಿಮತ್ವಮುತ್ಪತ್ತಿ ಮತ್ವಂಚ ಗೌಣ ಮುಖ್ಯತ್ವಾಪೇಕ್ಷಯಾ ।

"ಬ್ರಹ್ಮ" ಶಬ್ದವು ವಿಷ್ಣುವಿಗೆ ಮುಖ್ಯವಾಗಿಯೂ ಅನ್ಯರಲ್ಲಿ ಅಮುಖ್ಯವಾಗಿ ಹೇಗೆ ನಿಷ್ಕರ್ಷೆಯೋ ಹಾಗೆ ಗೌಣತ್ವ ಮುಖ್ಯತ್ವದಿಂದ ಆಕಾಶಕ್ಕೂ ಪ್ರವೃತ್ತಿಯು ಕೂಡುವುದು.

**8. ಯಥಾ ಬ್ರಹ್ಮಶಬ್ದಃ । ಅಥ ಕಸ್ಮಾದುಚ್ಯತೇ ಪರಂ ಬ್ರಹ್ಮೇತಿ ಬೃಂಹತಿ ಬೃಂಹಯತಿ ಚೇತಿಶ್ರುತೇಃ । ಪರಂಬ್ರಹ್ಮಣಿ**

ಮುಂಖ್ಯೋಽಪಿ ಗೌಣತ್ವೇನ ವಿರಂಚಾದಿಷ್ವಪಿ ವರ್ತತೆ । ಅತ ಏವಾ
ಬ್ರಹ್ಮತ್ವಂ ಚತೇಷಾಂ । ಏವಮನ್ಯತ್ರಾಪ್ಯನುತ್ಪತ್ತಿಮುಚ್ಛಬ್ಧಃ ।
ಅಥರ್ವ ಶೃತಿಯು

ಪರಬ್ರಹ್ಮ ವಸ್ತುವು ಶ್ರೇಷ್ಠ ಪ್ರಕಾಶವುಳ್ಳದ್ದು ಮತ್ತು ಪ್ರಕಾಶವಡಿಸತಕ್ಕದ್ದ ರಿಂದ ಮುಖ್ಯವಾಗಿ ಬ್ರಹ್ಮ ಶಬ್ದ ವಾಚಕವು ಚತುರ್ಮುಖತ್ವಾದಿಗಳಲ್ಲಿ ಗೌಣ ವಾಚಕವು. ಹೀಗೆಯೇ ಬೇರೆ ಕಡೆಗಳಲ್ಲಿ ಹೇಳಲ್ಪಡುವ ಉತ್ಪತ್ತಿ ಅನುತ್ಪತ್ತಿ ಧರ್ಮ ಗಳೂ ಕೂಡ.

## ಸೂ॥ ಓಂ॥ ಪ್ರತಿಜ್ಞಾ ಹಾನಿರವ್ಯತಿರೇಕಾಚ್ಛಬ್ದೇಭ್ಯಃ ಓಂ॥6

ಬ್ರಹ್ಮಣೋಽನ್ಯಸ್ಯ ನಿತ್ಯತ್ವೆ "ಸ ಇದಂ ಸರ್ವ ಅಸೃಜತ್"(ತೈ-2-6)ಇತ್ಯಾದಿ ಪ್ರತಿ ಜ್ಞಾಹಾನಿಃ । ಆಕಾಶಸ್ಯಾಪಿ ಸರ್ವಸ್ಮಾದವ್ಯತಿ ರೇಕಾತ್ ।

ಆಕಾಶಾದಿಗಳನ್ನು ಮುಖ್ಯ ಅನುತ್ಪತ್ತಿವುಳ್ಳವುಗಳೆಂದರೆ "ಸ ಇದಂ ಸರ್ವ ಅಸೃಜತ್' ಎಂಬ ಶ್ರೀವಿಷ್ಣುವಿಗೆ ಸರ್ವಕರ್ತೃತ್ವವನ್ನೂ ಹೇಳುವ ಶೃತಿಗೆ ಹಾನಿಯಾಗುವುದು. ಏಕೆಂದರೆ ಆಕಾಶವು ಇವುಗಳಲ್ಲೇ ಸೇರಿದೆ.

10 ಆತ್ಮಾವಾ ಇದಮೇಕ ಏವಾಗ್ರ ಆಸೀತ್ । (ಐ-1-1)
ಸದೇವ ಸೋಮ್ಯೇದಮಗ್ರ ಆಸೀತ್। ಏಕಮೇವಾ ದ್ವಿತೀಯಂ।
(ಛಾ-6-2-1) ಇದಂ ವಾ ಅಗ್ರೇ ನೈವ ಕಿಂಚನಾಸೀತ್
(ತ್ರೈ ಬ್ರಾ2-2-9) ಇತ್ಯಾದಿ ಶ್ರುತಿಭ್ಯ ॥

ಮೇಲಿನ ಶೃತ್ಯರ್ಥಗಳು (1) ಶ್ರೀ ಪರಶಬ್ದ ವಾಚ್ಯ ಶ್ರೀ ಪರಮಾತ್ಮನು ಪ್ರಳ ಯದಲ್ಲಿ ಒಬ್ಬನೇ ಗುಣಾಧಿಕನಾಗಿದ್ದನು (2) ಪರಶಬ್ದ ವಾಚ್ಯ ಶ್ರೀಪರಮಾತ್ಮನು ಪ್ರಳಯದಲ್ಲಿಯೂ ಒಬ್ಬನೇ ಸರ್ವಶ್ರೇಷ್ಠತೆಯಿಂದ ರಮಾಬ್ರಹ್ಮಾದಿ ಸರ್ವ ಜಗತ್ತಿಗೂ ಗುಣಾಧಿಕನಾಗಿದ್ದನು ಈತನಿಗೆ ಸಮನೂ ಸ್ವತಂತ್ರನೂ ಯಾರೂ ಇರಲಿಲ್ಲ. 3) ಪ್ರಳಯದಲ್ಲಿ ಶ್ರೀ ವಿಷ್ಣು ರಮಾದಿಗಳಿಂದ ಬೇರೆ ಯಾರೂ ಇರಲಿಲ್ಲ.

## ಸೂ|| ಓಂ|| ಯಾವದ್ವಿಕಾರಂತು ವಿಭಾಗೋ ಲೋಕವತ್ ಓಂ|| 7

ವಿಭಕ್ತತ್ವಾಚ್ಚವಿಕಾರಿತ್ವಂ ಯುಕ್ತಂ ।

ಕೇವಲ ಶೃತಿ ಬಲದಿಂದಲೇ ಆಕಾಶವು ಉತ್ಪತ್ತಿವುಳ್ಳದ್ದೆಂದಲ್ಲ ವಿಭಾಗತ್ವ ದಿಂದಲೂ ಅಲ್ಪಶಕ್ತಿ ಪ್ರಯುಕ್ತವೂ ಉತ್ಪತ್ತಿಯುಳ್ಳದ್ದೆ ಶ್ರೀ ಪರಮಾತ್ಮನಿಗೆ ಅವಿ ಭಕ್ತತ್ವವೂ ಅವಿಕಾರತ್ವ ಧರ್ಮಗಳೂ ಸ್ವರೂಪವಷ್ಟೆ.

12. **ವಿಕಾರಿಣ ಏವಹಿ ವಿಭಕ್ತಾ ಲೋಕೇ ದೃಶ್ಯಂತೇ ।**

ವಿಕಾರಿಣಿಗಳೇ ಭಾಗ ಹೊಂದುವುದನ್ನು ಲೋಕದಲ್ಲಿ ನೋಡುತ್ತೇವೆ

13 **ಏಕೋಽವಿಭಕ್ತಃ ಪರಮಃ ಪುರುಷೋ ವಿಷ್ಣುರುಚ್ಯತೇ ।**
**ಪ್ರಕೃತಿಃ ಪುರುಷಃ ಕಾಲಸ್ತ್ರಯ ಏತೇ ವಿಭಾಗತಃ ।**

ಪರಮಪುರುಷನಾದ ಶ್ರೀ ವಿಷ್ಣುವೊಬ್ಬನೇ ಅವಿಭಕ್ತನು, ಪ್ರಕೃತಿ ಪುರುಷ ಕಾಲ ಇವುಗಳು ಭಕ್ತಗಳಾಗಿಯೇ ಇರುವುವು.

14. **ಚತುರ್ಥಸ್ತು ಮಹಾನ್ ಪ್ರೋಕ್ತಃ ಪಂಚಮಾಹಂಕೃತಿರ್ಮತಾ**
**ತದ್ವಿಭಾಗೇನ ಜಾಯಂತ ಆಕಾಶಾದ್ಯಾಃ ಪ್ರಥಕ್ಪ್ರಥಕ್ ॥**

ನಾಲ್ಕನೆಯ ಭಾಗವಾದ ವಸ್ತುವು ಮಹಚ್ಛಬ್ದ ವಾಚ್ಯವು ಬ್ರಹ್ಮಾಂಡವು ಐದನೆಯದು ಅಹಂಕಾರಿಕವು ಅವುಗಳ ವಿಭಾಗದಿಂದ ಆಕಾಶಾದಿ ಭೂತಗಳು ಬೇರೆ ಬೇರೆ ಹುಟ್ಟುವುವು.

15. **ಯೋವಿಭಾಗೀ ವಿಕಾರಃ ಸ ಸೋಽವಿಕಾರಃ ಪರೋಹರಿಃ ।**
**ಅವಿಭಾಗಾತ್ಪರಾನಂದೋ ನಿತ್ಯೋ ನಿತ್ಯಗುಣಾತ್ಮಕಃ**
**ವಿಭಾಗೋಹ್ಯಲ್ಪಶಕ್ತಿಸ್ಸ್ಯಾ ನ್ನ ತದಸ್ತಿ ಜನಾರ್ಧನ ಇತಿ**
**ಬೃಹತ್ಸಂಹಿತಾಯಾಂ ॥**

ಯಾವಾತನು ವಿಭಾಗಗಳನ್ನು ವಿಕಾರಗಳನ್ನು ಉಂಟು ಮಾಡಲು ಶಕ್ತನೋ

ಆತನು ವಿಕಾರವಿಲ್ಲದವನು ಮತ್ತು ಶ್ರೇಷ್ಠವಸ್ತುವು ಶ್ರೀಹರಿಯು ವಿಭಾಗವಿಲ್ಲದ್ದ ರಿಂದಲೇ ಶ್ರೇಷ್ಟ ಆನಂದ ಉಳ್ಳವನು ನಿತ್ಯ ಗುಣಾತ್ಮಕನು. ವಿಭಾಗತ್ವವು ಅಲ್ಪ ಶಕ್ತಿಯನ್ನು ಹೇಳುವುದು ಅದು ಶ್ರೀವಿಷ್ಣುವಿನಲ್ಲಿಲ್ಲ. ಬೃಹಲ್ ಸಂಹಿತೆ

– ಇತಿ ವಿಯದಧಿಕರಣವು –

**– ಮಾತರಿಶ್ವಾಧಿಕರಣಂ –**

ಈ ಅಧಿಕರಣದಲ್ಲಿ ಈಶ್ವರನಿಗೆ ಸ್ರಷ್ಟೃತ್ವಾಧಿ ಸಮನ್ವಯ ವಿಷಯದಲ್ಲಿ ಮುಖ್ಯ ವಾಯುವಿಗೆ ಅನುತ್ಪತ್ತಿ ವಿಷಯಕ ಶೃತಿ ವಿರೋಧವು ಪರಿಹರಿಸಲ್ಪಡುತ್ತದೆ

1. **ಅಥ ಹ ನಿತ್ಯಾಶ್ಚಾನಿತ್ಯಾಶ್ಚ ತೇಜೋಬನ್ನಾನ್ಯಾಕಾಶ ಇತಿ ತಾನ್ಯ ನಿತ್ಯಾನಿ ವಾಯುನಾ ಹಿ ಸರ್ವಾಣಿ ಭೂತಾನಿ ವಿಜ್ಞಾಯಂತೇ ||**

ನಿತ್ಯಾನಿತ್ಯ ಭೂತ ಪದಾರ್ಥಗಳಲ್ಲಿ ತೇಜೋಭಿನ್ನಗಳಾದ ಆಕಾಶ ವಾಯುವಿಗೆ ನಿತ್ಯತ್ವವನ್ನು ಹೇಳಿ ಸರ್ವಭೂತಗಳನ್ನೂ ತಮ್ಮ ಕಾರ್ಯಗಳಲ್ಲಿ ನಿರತರನ್ನಾಗಿ ಮಾಡುವ ಶಕ್ತಿಯಿಂದ ವಾಯುವು ನಿತ್ಯವೇ ಅಂದರೆ "ಆಕಾಶಾದ್ವಾಯುಃ" ಎಂಬ ಶೃತಿಯಿಂದ ಉತ್ಪತ್ತಿ ಎಂದು ವಿರೋಧ

2. **ಅಥ ಹ ಚೇತನಾಶ್ಚಾಚೇತನಾಶ್ಚ ತೇಜೋ ಬನ್ನಾನ್ಯಾಕಾಶ ಇತಿ ತಾನ್ಯಚೇತನಾನಿ । ವಾಯುರ್ವಾವ ಚೇತನೋ ವಾಯುನಾ ಹಿ ಸರ್ವಾಣಿ ಭೂತಾನಿ ವಿಜ್ಞಾಯಂತೇ ||**

ಅನುತ್ಪತ್ತಿ ಶೃತಿಗೆ ಗೌಣಾರ್ಥವು ನಿರಾಕರಿಸಲ್ಪಟ್ಟಲ್ಲಿ ವಾಯುವಿಗೆ ಸರ್ವಭೂತಗಳ ನೇತೃತ್ವದಿಂದ ವಿಶೇಷ ಶಕ್ತಿ ಜ್ಞಾನ ಶ್ರೇಷ್ಟತ್ವವು ತಿಳಿಯುತ್ತಿರಲು ಸರ್ವಭೂತನವುತ್ವವು ಉಚಿತವಲ್ಲ

3. **ಕುವಿದಂಗ ನವುಸಾ ಯೇ ವೃಧಾಸಃ ಪುರಾದೇವಾ ಅನವದ್ಯಾಸ ಆಸನ್ । ತೇ ವಾಯವೇ ಮನವೇ ಬಾಧ್ಥಿ ತಾಯಾ ವಾಸಯಸ್ನುಷಸಂ ಸೂರ್ಯೇಣ ।** (ಋ-7-91-1)

ಮತ್ತು ವಾಯುವು ಉತ್ಪತ್ತಿವುಳ್ಳದ್ದೆಂದರೆ ಆಗ ಮೇಲಿನ ಶೃತಿಯಲ್ಲಿ ಹೇಳಲ್ಪಟ ಸರ್ವದೇವತಾ ಪೂಜ್ಯತ್ವವು ಅಸಂಭಾವಿತವು.

5. **ಸ ವಾ ಏಷಾ ದೇವತ್ಯಾನಾದಿರ್ಯೋಯಂ ಪವತ ಇತಿ ।**

ಈ ಶೃತಿಯು ವಾಯುವು ಉತ್ಪತ್ತಿವುಳ್ಳದ್ದಲ್ಲ. ಏಕೆಂದರೆ ವಾಯುವಿನ ಚಲನ ಶಕ್ತಿಯಿಂದ ಕಲ್ಮಷಗಳನ್ನು ಶೋಧಿಸುವುದರಿಂದ ಶುದ್ಧವು ಮತ್ತು "ಅಯಂ ವೆಬ್ರಹ್ಮಯೋಯಂ ಪವತಿ" ಎಂದು ಸಮರ್ಥಿಸುತ್ತದೆ.

5 **ಯಸ್ಯ ನಾದಿರ್ನಮಧ್ಯಂ ನಾಂತೋ ನ ನಿವ್ಮೋಚಃ ।**

ಈ ಶೃತಿಯು ವಾಯುವು ಉತ್ಪತ್ತಿವುಳ್ಳದ್ದಲ್ಲ ಏಕೆಂದರೆ ವಾಯುವ್ಯ ಚಲನ ಶಕ್ತಿಯಿಂದ ಕಲ್ಮಷಗಳನ್ನ ಶೋಧಿಸುವುದರಿಂದ ಶುದ್ಧವು ಮತ್ತು "ಆಯಂ ವೈಬ್ರಹ್ಮಯೋಯಂ ಪವತಿ" ಎಂದು ಸಮರ್ಥನೆಯು.

5. **ಯಸ್ಯ ನಾದಿರ್ನಮಧ್ಯಂ ನಾಂತೋ ನ ನಿವ್ಮೋಚ ಇತ್ಯಾದಿ ಶ್ರುತಿಭ್ಯೋ ವಾಯೋರನುತ್ಪತ್ತಿರಿತ್ಯತೋ ಬ್ರವೀತಿ ॥**

ಆ ದೇವತೆಯು ವಾಯುವು. ಇತ್ಯಾದಿ ಶೃತೆಭ್ಯೋವಾಯುರನುತ್ಪತ್ತಿರಿತಿ ॥

ಹೀಗೆ ವಾಯುವಿಗೆ ಉತ್ಪತ್ತಿ ನಿಷೇಧದಿಂದ ಜಗತ್ಕರ್ತೃತ್ವವು ಪರಬ್ರಹ್ಮನದೆಂದು ಸಮನ್ವಯವು ಸೂಕ್ತವಲ್ಲ.

ಅತೋ ಽಬ್ರವೀತ್-ಅದಕ್ಕಾಗಿ ಹೇಳಿದೆ.

## ಸೂ|| ಓಂ|| ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಂ|| 8

ಪೂರ್ವೋಕ್ತ ವಿಭಕ್ತ್ವಾದಿ ಕಾರಣಗಳಿಂದ ಮುಖ್ಯ ವಾಯುವು ಉತ್ಪತ್ತಿವುಳ್ಳವನೇ ಅನುತ್ಪತ್ತಿ ಶೃತಿಯು ಬ್ರಹ್ಮನಲ್ಲಿ ಮುಖ್ಯ ವೃತ್ತಿಯಿಂದಲೂ ಮಿಕ್ಕವರಲ್ಲಿ ಅಮುಖ್ಯ ವೃತ್ತಿಯಿಂದ ಹೇಳಿರುವುದರಿಂದ ಮತ್ತು ಅತಿ ಮುಖ್ಯ ಶೃತಿಯು ಪ್ರತಿಜ್ಞಾಹಾನಿಬಾಧಕದಿಂದಲೂ ಮುಖ್ಯ ವಾಯುವಿಗೆ ವಿಭಕ್ತಾದ್ಯಲ್ಪ ಶಕ್ತಿ ದೋಷದಿಂದ ಉತ್ಪತ್ತಿವುಂಟೆಂದು ಸಿದ್ಧಾಂತವು.

7. ಏತೇನ ಮುಖ್ಯಾಮುಖ್ಯಾನುತ್ಪತ್ತಿವಚನೇನ ವಿಭಕ್ತತ್ವಾಚ್ಚ
ವಾಯ್ವನುತ್ಪತ್ತಿಶ್ರುತಿರಪಿ ವ್ಯಾಖ್ಯಾತಾ ||

ಇದರಿಂದ ವಾಯುವು ಉತ್ಪತ್ತಿಯುಳ್ಳವನೇ

ನಿತ್ಯಃ ಪರಮನಿತ್ಯಶ್ಚ ತಥಾನಿತ್ಯಃ ಪರಸ್ತಥಾ ।
ಚತುರ್ಧೈತಜ್ಜಗತ್ಸರ್ವಂ ಪರಾನಿತ್ಯಂತು ಪಾರ್ಥಿವಂ ।
ಅನಿತ್ಯಾನಿತು ಭೂತಾನಿ ನಿತ್ಯೋವಾಯುರುದಾಹೃತಃ ।
ಪರಸ್ತು ಪುರುಷಃ ನಿತ್ಯಃ ಪ್ರಕೃತಿಃ ಕಾಲ ಏವ ಚ ।
ಏತಚ್ಚತುಷ್ಟಯಂ ವಿಷ್ಣುಃ ಸ್ವಯಂ ನಿತ್ಯಃ ಪರಾತ್ಪರಃ ।
ಪ್ರತಿವ್ಯೂಹ್ಯವ್ಯೂಹ್ಯ ಚಾಸಾ ವತೀತ್ಯ ಚ ಜನಾರ್ದನಃ ।
ಧಾರಯತ್ಯನಿಶಂದೇವೋ ನಿತ್ಯಾನಂದೈಕಲಕ್ಷಣಂ ||

ಇತಿ ಕಾರ್ಮೇ

ಪ್ರಮಿತ ಅಖಿಲ ಜಗತ್ತೂ ನಾಲ್ಕು ವಿಧ ಧರ್ಮವುಳ್ಳದ್ದು ನಿತ್ಯ ಪರಮನಿತ್ಯ ಅನಿತಾ ಹಾಗೂ ಪರಮಾನಿತ್ಯ ಎಂದು ಭೂತ ಪಸ್ತುಗಳಿಗೆ ಉಪಚಯ ನಾಶದಿಂಡ "ಪರಮಾನಿತ್ಯ'ಗಳು ಭೂತ ವಸ್ತುಗಳಿಗೆ ಅಭಿಮಾನಿ ದೇವತೆಗಳು "ಅನಿತ್ಯಗಳು'. ಪರನಿತ್ಯವಸ್ತುಗಳು ಪುರುಷ, ಪ್ರಕೃತಿ, ಕಾಲಗಳು, ಶ್ರೀ, ಭೂ, ದುರ್ಗಾಖ್ಯ ಚಿತ್ತ ಕೃತಿಯು ಮುಖ್ಯ ಪ್ರಾಣನು ಸ್ವರೂಪಾತಿರಿಕ್ತತ ಪ್ರತಿಭಾ ಜ್ಞಾನದಿಂದ ನಿತ್ಯನು ಮತ್ತು ಶರೀರಾಖ್ಯ ಪರಿಕರ ವಿಶಿಷ್ಟತ್ವದಿಂದ ಅನಿತ್ಯನು ಪರಃ-ಪರಾತ್ಪರ ನಿತ್ಯನು ಶರೀರವತಃ ಕೂಡ ನಿತ್ಯನು. ಶ್ರೀವಿಷ್ಣುವೂ ಪರಾತ್ಪರಃ ಸರ್ವತಂತ್ರನು. ತ್ಯಾನಿನಂದಸ್ವ ರೂಪದಿಂದಲೂ ಅನ್ಯರಿಗೆ ಸಂಸಾರವನ್ನು ಪರಣ

ಮಾಡುವ ಶಕ್ತಿಯಿಂದಲೂ ಜನಾರ್ಧನ ನಾಮಧೇಯನಾಗಿ ವ್ಯೂಹವತ್ಯೂಹಗಳನ್ನು ಅಧಿಕರಿಸಿ ನಿತ್ಯದ್ಯೋತನಾದ್ದರಿಂದ ಸರ್ವ ಸ್ವತಂತ್ರನಾಗಿ ಸರ್ವವಸ್ತುಗಳನ್ನು ನಿಯಾಮಕತ್ವದಿಂದ ಅಧಿಕರಿಸಿ ಸರ್ವವನ್ನು ಧಾರಣ ಮಾಡುವವನು

– ಇತಿ ಮಾತರಿಶ್ವಾಧಿಕರಣಂ –

– ಅಸಂಭವಾಧಿಕರಣಂ –

ಈ ಅಧಿಕರಣದಲ್ಲಿ "ಅಸತ್" ನಿಂದ ಜಗದುತ್ಪತ್ತಿಯನ್ನು ಹೇಳುವ ಶೃತಿ ವಿರೋಧವು ನಿರತವಾಗಿದೆ

**ಸೂ|| ಓಂ|| ಅಸಂಭವಸ್ತು ಸತೋಽನುಪಪತ್ತೇಃ ಓಂ||**

ಅಸದ್ವಾ ಇದಮಗ್ರ ಆಸೀತ್ । ತತೋವೈ ಸದಾ ಜಾಯತ (ತೈ–3-7) ಅಸತಸ್ಸದ ಜಾಯತ (ಋ–10–72–2) ಇತ್ಯಾದಿ ಶೃತಿಭ್ಯಃ ಸತೋಽಪ್ಯುತ್ಪತ್ತಿರಿತಿಚೇತ್–

ಮೇಲಿನ ವಾಕ್ಯಾದಿ ಬಹು ಶೃತಿಗಳಲ್ಲಿ ಪರಬ್ರಹ್ಮನಿಗೆ ಉತ್ಪತ್ತಿಯು ತಿಳಿಯುತ್ತದೆ ಆಕಾಶ ವಾಯು ಇತ್ಯಾದಿಗಳಿಗೆ ಮಾತ್ರವೇ ಅಲ್ಲ ಉತ್ಪತ್ತಿಯೆಂದರೆ ಪರಾಧೀನವಿಶೇಷಾ ವಾಪ್ತಿರೂಪವು ಸೂತ್ರಾರ್ಥವು-ಶ್ರೀವಿಷ್ಣುವಿಗೆ ಅನುತ್ಪತ್ತಿಯನ್ನೇ ತಿಳಿಯಬೇಕು ಈ ಮೇಲಿನ ಶೃತಿಗಳಿಂದ "ಅಸತ್ತಿ"ನಿಂದ ಉತ್ಪತ್ತಿಯು ಹೇಳಿದೆಯೆಂದು ತಿಳಿಯಲಾಗದು ಇದು ಅಸಾಧ್ಯವು

2. **ಅನುತ್ಪತ್ತಿರೇವ ಸತಃ । ಶುಶಬ್ದೇನೋಕ್ತವ್ಯವಸ್ಥಾಮುಪಾಕರೋತಿ ||**

ಸತ್ತಿಗೆ ಉತ್ಪತ್ತಿಯಿಲ್ಲ "ಸತ್ವಂ ಸ್ವಾತಂತ್ರ್ಯಮುದ್ದಿಷ್ಟಂ" ಎಂದು ಭಾಗವತ ವಾಕ್ಯ ಆಕಾಶ ವಾಯುಗಳು ಅಸ್ವಾತಂತ್ರ್ಯದಿಂದ ಉತ್ಪತ್ತಿವುಳ್ಳವು ವಿಷ್ಣುವು ಸ್ವತಂತ್ರನು

3 **ನ ಹ್ಯಸತಃ ಸದುತ್ಪದ್ಯತೇ । ಅದೃಷ್ಟತ್ವಾದನುಪಪತ್ತೇಃ ॥**

"ಅಸತಃ ಸದಜಾಯತ" ಎಂಬ ಶೃತಿಯು ಸತ್ತಿಗೂ ಅಸತ್ತಿನಿಂದ ಉತ್ಪತ್ತಿಯನ್ನು ಹೇಳುವುದೆಂದರೆ ಹಾಗಲ್ಲಾ ಆ ಶೃತಿಯು ಅರ್ಥವು ಬೇರೆ ರೀತಿ ಅಸತ ವಸ್ತುವಿನಿಂದ ಸತ್ಯ ವಸ್ತುವಿನ ಸೃಷ್ಟಿಯು ಕಂಡುಬರುವದು ಅಸಾಧ್ಯವು

4 **ತದ್ವಾ ಏತದ್ಬ್ರಹ್ಮೇತ್ಯಾಹುರ್ಬೃಂಹತಿ ಬೃಂಹಯತಿ ಚೇತಿ ।**
**ತದ್ವಾ ಏತದಸದಾಹುರ್ನ ಹ್ಯಾಸಾದಯತಿ ಕಶ್ಚನೇತಿ ।**
**ತದ್ವಾ ಏತತ್ಪರಮಾಹುಃ ।**
**ಪರತೋಹಿ ತದುದೀಕ್ಷ್ಯತ ಇತಿ ಶೃತೇರಸಚ್ಛಬ್ದೋ ಬ್ರಹ್ಮವಾಚೀ॥**

ಸತ್ ಶಬ್ದವು ಬ್ರಹ್ಮನನ್ನು ಹೇಳುತ್ತದೆ. ಬೃಹತಿ-ಬೆಳೆಯುತ್ತಾನೆ ಎಂಬ ಅರ್ಥದಿಂದ ನಿತ್ಯ ನಿರ್ವಿಕಾರನಾದರೂ ಬೆಳವಣಿಗೆಯು ವ್ಯಕ್ತಿತ್ವ ಮಾತ್ರ ಮತ್ತು ಜೀವರ ಬೆಳವಣಿಗೆಗೆ ಕಾರಣನಾಗಿ ವಿಷ್ಣು ಶಬ್ದವಾಚ್ಯನು "ಅಸತ್" ಶಬ್ದ ವಾಚ್ಯನು ಶ್ರೀ ವಿಷ್ಣುವೇ ಅತಿಸ ಮರ್ಥ ದೇವತೆಗಳಿಗೂ ಸಹ ಶಕ್ತರಾದ್ದರಿಂದಲೇ ವಿಷ್ಣು ಶಬ್ದ ವಾಚ್ಯನು. "ಅಸತ್" ಶ್ರೀ ವಿಷ್ಣುವೇ ರಮಾ ಬ್ರಹ್ಮಾದಿಗಳಿಂದ ಶ್ರೇಷ್ಠನೆಂದು ಜ್ಞಾನಿಗಳು ತಿಳಿಯುವರು

5 **ದೇವಾನಾಂ ಪೂರ್ವೇರ್ಯುಗೇsಸತಃ ಸದಜಾಯತೇತಿ ।**
**ಬ್ರಹ್ಮವಾ ಅಸತ್ ಸದ್ವಾವ ಪ್ರಾಣಃ ಪ್ರಾಣೋ ವಾವ ಮಹಾನ್ಸ**
**ಹ ಓಜೋಬಲಮಿತ್ಯಾಚಕ್ಷತ ಇತಿ ಪೈಂಗಿ ಶ್ರುತಿಃ ॥**

ಪೈಂಗೀ ಶೃತಿಯು-ಆದಿ ಸೃಷ್ಟಿ ಕಾಲದಲ್ಲಿ ದೇವತೆಗಳ ಮಧ್ಯದಲ್ಲಿ ಸಚ್ಛಬ್ದ ವಾಚ್ಯ ವಾಯುದೇವರು ಅಸತ್ ಶಬ್ದ ವಾಚ್ಯ ಶ್ರೀ ವಿಷ್ಣುವಿನಿಂದ ಹುಟ್ಟಿದರು. ಜ್ಞಾನ ವೃದ್ಧರು ಪ್ರಾಣವನ್ನು ಮುಖ್ಯವಾಗಿ ಪೂಜ್ಯನನ್ನಾಗಿ ತಿಳಿದರು. ಓಜ, ಸಹನ ಶಕ್ತಿಗಳಿಂದ ಮಹತ್ತಿನಿಂದ "ಸತ್" ಶಬ್ದವು ವಾಯು ವಾಚಕವು.

6 ತ್ವಂ ದೇವ ಶಕ್ತ್ಯಾಂ ಗುಣ ಕರ್ಮಯೋನೌ ರೇತಸ್ತ್ವಜಾಯಾಂ ಕವಿರಾದಧೇಜಃ । ತತೋ ವಯಂ ಸತ್ಪ್ರಮುಖಾ ಯದರ್ಥೇ ಬಭೂವಿಮಾತ್ಮನ್ಕರವಾಮ ಕಿಂತೇ ಇತಿ ಭಾಗವತೇ ॥

ಭಾಗವತ ವಾಕ್ಯವು-ಹೇ ವಿಷ್ಣುವೇ ನೀನು ದೇಹೋತ್ಪತ್ತಿ ಇಲ್ಲದವನಾದರೂ ನಿನ್ನಲ್ಲಿ ಸಾಮಾನ್ಯ ಜನರಂತೆ ಗರ್ಭಾದಾನಾದಿಗಳನ್ನು ಹೇಳಿದರೂ, ಅದು ಜ್ಞಾನಾದಿ ಸತ್ವಾದಿಗಳಲ್ಲಿ ಕರ್ಮಸ್ವರೂಪ ಅದೃಷ್ಟಾದಿ ಯೋನಿಗಳಲ್ಲಿ ಜನನ ಮರಣ ರಹಿತಳಾದ ಶ್ರೀ ತತ್ವದಲ್ಲಿ ಗರ್ಭವನ್ನಾದರಿಸಿ "ಸತ್" ಶಬ್ದ ವಾಚ್ಯ ಬ್ರಹ್ಮಾದಿ ದೇವತೆಗಳು ಹುಟ್ಟಿ ದರು. ಸತ್ಪ್ರಮುಖಾ ಎಂದರೆ ದೇವತೆಗಳು

7. ಅಜಾಯಮಾನೋ ಬಹುಧಾ ವಿಜಾಯತೆ(ತೈ-ಆ-3-13)ಇತಿ ಚ

ನಿನ್ನ ಅವತಾರ ರೂಪಗಳು ದೃಶ್ಯ ರೂಪಗಳು ಮಾತ್ರವೇ । ನಿನಗೆ ಜನನವಿಲ್ಲ ವಷ್ಟೆ

8. ಪ್ರತ್ಯಕ್ಷತ್ವಂ ಹರೇರ್ಜನ್ಮ ನ ವಿಕಾರಃ ಕಥಂಚನ ।
ಪುರುಷಃ ಪ್ರಕೃತಿಃ ಕಾಲೋ ಮಹಾನಿತ್ಯಾದಿಷು ಕ್ರಮಾತ್ ।
ವಿಕಾರ ಏವ ಜನನಂ ಪುರುಷೇ ತದ್ವಿಷೇಷಣಂ । ಪರತಂತ್ರ
ವಿಶೇಷೋಹಿ ವಿಕಾರ ಇತಿ ಕೀರ್ತಿತ ಇತಿ ಪಾದ್ಮೇ ॥

ಪಾದ್ಮದಲ್ಲಿ – ಪ್ರತ್ಯಕ್ಷತ್ವವೇ ಶ್ರೀ ಪರಮಾತ್ಮನಿಗೆ ಜನನ ವಾಚ ತ್ವವು ಯಾವ ವಿಕಾರವೂ ಸಾಧ್ಯವಲ್ಲ ಪುರುಷ, ಪ್ರಕೃತಿ, ಕಾಲ ಮಹತ್ವ ಇವುಗಳಲ್ಲಿ ಕ್ರಮವಾಗಿ ವಿಕಾರವೇ ಜನನ ವಾಚ್ಯವು. ಪರಮಾತ್ಮನಲ್ಲಿ "ಸ್ವತಂತ್ರ"ವೇ ವಿಶೇಷವು ಪರತಂತ್ರ ವಿಶೇಷವೇ ವಿಕಾರರೂಪ ಜನ್ಮವು

9. ಅವಿಕಾರೋಪಿ ಭಗವಾನ್ಸರ್ವಶಕ್ತಿ ತ್ವಹೇತುತಃ ।
ವಿಕಾರಹೇತುಕಂ ಸರ್ವಂ ಕುರುತೇ ನಿರ್ವಿಕಾರವಾನ್ ।
ಶಕ್ತಿಶಕ್ತಿಮತೋಶ್ಚಾಪಿ ನ ವಿಭೇದಃ ಕಥಂಚನ ।
ಅವಿಭಿನ್ನಾಪಿ ಸೇಚ್ಛಾದಿ ರ್ಭೇದೈರಪಿ ವಿಭಾವ್ಯತೇ ಇತಿ
ಭಾಗವತತಂತ್ರೇ ॥

ತನ್ನಲ್ಲಿ ಯಾವ ವಿಕಾರವಿಲ್ಲದಿದ್ದರೂ ಸರ್ವತಂತ್ರ ಶಕ್ತನಾದ ಪರಮಾತ್ಮನು ವಿಕಾರಿತ್ವ ಹೇತುವಿನಿಂದ ಯಲ್ಲಾ ಸೃಷ್ಟಿಯನ್ನು ಮಾಡುವನು ಇವನು ಸರ್ವದಾ ನಿರ್ವಿಕಾರನು ಅತಿಶಯ ಶಕ್ತರಲ್ಲಿಯೂ ಅತ್ಯತಿಶಯ ಶಕ್ತಿವಂತನು. ಸರ್ವ ಶಕ್ತಿ ಸ್ವರೂಪನು ಮತ್ತು ಸರ್ವಶಕ್ತಿದಾತನು. ಆದಾಗ್ಯೂ ಯಾವ ಶಕ್ತಿಯಿಂದಲೂ ಭೇದವಿಲ್ಲದವನು

– ಇತಿ ಅಸಂಭವಾಧಿಕರಣಂ –

**– ಅಥ ತೇಜೋಧಿಕರಣಂ –**

ಈ ಅಧಿಕರಣದಲ್ಲಿ "ತೇಜ"ಸ್ಸಿನ ಜನ್ಮ ವಿಷಯ ಶೃತಿ ವಿರೋಧವು ಪರಿಹಾರವು.

## ಸೂ॥ ಓಂ॥ ತೇಜೋತಸ್ತಥಾಹ್ಯಾಹ ಓಂ॥ 10

"ತತ್ತೇಜ' ಎಂಬ ಶೃತಿಯು ತಚ್ಛಬ್ದೋದಿತ ಬ್ರಹ್ಮವೇ ತೇಜೋ ಭೂತವನ್ನು ವಾಯುದ್ವಾರ ಸೃಷ್ಟಿಸಿದನು ಎಂದು ಫಲಿತಾರ್ಥವು.

ವಾಯೋರಗ್ನಿಃ (ತೈ-2-1) ಇತ್ಯಾದೇರ್ನಾನ್ಯತ ಉತ್ಪತ್ತಿರ್ಗ್ರಹ್ಯಾ ।
ಅತ ಏವ ಪರಾತ್ತ ದಪಿ ಜಾಯತೆ । "ತತ್ತೇಜೋ' ಸೃಜತ್" ಇತಿಹ್ಯಾಹ ।

ಮೇಲಿನ ಶೃತಿಯಲ್ಲಿ ತೇಜಸ್ಸು ವಾಯುವಿನಿಂದ ಹುಟ್ಟುವುದು ಎಂಬುದು ಪೂರ್ವ ಪಕ್ಷ ಸಿದ್ಧಾಂತಾರ್ಥವು-ವಿಯದ್ವಾಯುಗಳು ಸಚ್ಛಬ್ದ ವಾಚ್ಯವು ಕೃತಿದ್ವಾರ ಪರಮಾತ್ಮನಿಂದ ಜನ್ಯವು ಹಾಗೆಯೇ ಅಗ್ನಿಗೂ ಶ್ರೀ ಪರಮಾತ್ಮನಿಂದ ಮುಖ್ಯ

ಜನ್ಮವು ಸರ್ವಭೂತಗಳೂ ಕ್ರಮವಾಗಿ ಪರಮಾತ್ಮನಿಂದಲೇ ಜನ್ಯವು ಸರ್ವ ವ್ಯಾಪ್ತ ಭಗವಂತನು ವ್ಯಾಪ್ತ ಪ್ರಕೃತಿಯಲ್ಲಿರುವ ತನ್ನ ರೂಪದಿಂದ ಹುಟ್ಟಿಸುವುದಿಲ್ಲ ಆದರೆ ಆತನು ನಿಮಿತ್ತ ಮಾತ್ರವಾಗಿ ರೂಪ ವಿಶೇಷ ಜನ್ಯವಾದ ಶ್ರೀದೇವಿಯನ್ನು ಹೇಳುವುದು. (ತೇಜಃ ಶಬ್ದವು ಶ್ರೀ ಶಬ್ದ ವಾಚ್ಯಳಾದ ರಮಾದೇವಿಯನ್ನು ತದಭಿ ಮಾನಿ ತೇಜೋ ಭೂತವನ್ನು ಶೃತಿ ಸೂತ್ರಗಳಲ್ಲಿ ಹೇಳುವುದು )

ಸೋಽಸೃಜತ್ಪ್ರಥಮಂ ದೇವೀಂ ತೇಜ ಆಖ್ಯಾಂಶ್ರಿಯಂ ಸತೀಂ
ತತೆ ಸ್ಥಿತೇನ ರೂಪೇಣ ಸಾಜ್ಜೈವಹಿಯತಃ ಸದಾ
ತೇಜ ಇತ್ಯುಚ್ಯತೆ ತಸ್ಮಾತ್ ಜನೈರ್ವಾತತ ಏವತು ||

**2. ಕಾರಣತ್ವೇನೇತ್ಯುಕ್ತೇಽಪ್ಯಮುಖ್ಯ ತಯೋಽನ್ಯೇಷಾಮಪಿ**
**ಶಬ್ದೋಕ್ತತ್ವಾತ್ಪುನರುಕ್ತಿರುಭಯ ಕಾರಣತ್ವ ನಿವೃತ್ತ್ಯರ್ಥಂ ||**

ಕಾರಣತ್ವೇನ ಚಾಕಾಶಾದಿಷುಯಥಾವ್ಯಪದಿಷ್ಟೋಕ್ತೇಃ' ಎಂಬಲ್ಲಿ ಬ್ರಹ್ಮನಿಂದ "ತೇಜ" ಕ್ಕೆ ಕಾರಣತ್ವವು ಸಿದ್ಧಿಸಿದ್ದರೂ ಇಲ್ಲಿ ಬ್ರಹ್ಮ ವಾಯು ದೇವತೆಗಳಲ್ಲಿ ಸ್ವತಂತ್ರ ಕಾರ ಣತ್ವಶಂಕೆಯ ನಿವಾರಣೆಯು.

– ಇತಿ ತೇಜೋಧಿಕರಣಂ –

## – ಅಬಧಿಕರಣಂ –

ಈ ಅಧಿಕರಣದಲ್ಲಿ "ಅಪಃ" ಜನ್ಮ ವಿಷಯಕ ಶೃತಿ ವಿರೋಧದ ಪರಿಹಾರವು.

**ಸೂ|| ಓಂ|| ಅಪಃ ಓಂ|| 11**

ಹಿಂದಿನ ಅಧಿಕರಣವಂತೆಯೇ "ಅಪಃ' ಶ್ರೀವಿಷ್ಣುವಿನಿಂದಲೇ ಉತ್ಪತ್ತಿಯು ಬೇರೆ ಯಾರಿಂದಲೂ ಅಲ್ಲವೆಂದು "ಬ್ರಹ್ಮೈವೇದಂ" ಎಂಬ ಶ್ರುತಿ ವಾಕ್ಯದಿಂದ ಸಿದ್ಧವಾಗುವುದು

ಬ್ರಹ್ಮೈವೇದಮಗ್ರ ಆಸೀತ್ತದವೂ "ಸೃಜತ ತದಿದಂ ಸರ್ವಂ" ಇತಿ ಶ್ರುತೇಃ
ಅಗ್ನೇ ರಾಪಃ (ತೈ-2-1) ಇತ್ಯುಕ್ತೇಪಿ ಬ್ರಹ್ಮಣ ಏವಾಬಾದಿ ಸೃಷ್ಟಿಃ ||

"ಅಗ್ನೇರಾಪಃ" ಎಂಬ ಶ್ರುತಿಯು ಅಗ್ನಿಯಿಂದ "ಅಪ' ಜನನವೆಂದು ಹೇಳುತ್ತದೆ ಎಂದು ಪೂರ್ವಪಕ್ಷವು ಆಪಃ ಪದವು "ಇದಂಸರ್ವಂ" ಎಂಬ ಸ್ಪಷ್ಟೋಕ್ತಿಯು ಅಪಃಪೂರವು ಪುರುಷನ ಸೃಷ್ಟಿಯಿಂದ ಹೇಳುವುದು "ಅಗ್ನೇರಾಪಃ" ಎಂಬ ವಾಕ್ಯಕ್ಕೆ ದೃಷ್ಟಾಂತವಾಗಿ ಶಾಖದಿಂದ ಶರೀರದಲ್ಲಿ ಬವರುತ್ಪತ್ತಿಯು ದೃಷ್ಟಾಂತವು ಸಂಶಯಕ್ಕೆ ಕಾರಣವು ಆದರೆ ಶ್ರುತಿಯು ಪ್ರಳಯ ಕಾಲದಲ್ಲಿ ಬ್ರಹ್ಮನೊಬ್ಬನೇ ಇದ್ದನು ಅವನು ಅದನ್ನು ಸೃಷ್ಟಿ ಮಾಡಿದನು ಎಂಬ ಅರ್ಥದಿಂದ ಸಂಶಯ ನಿವಾರಣವು (ಭೂತವು

2. ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ |
ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ
(ಮು-2-1- ) ಇತ್ಯಾದಿ ಚ

ಇದಂ ಸರ್ವಂ-ಭೂತವಾಯ್ವಾದಿಗಳು ಬ್ರಹ್ಮನಿಂದಲೇ ಉತ್ಪನ್ನವು ಪ್ರತ್ಯರ್ಥವು ಪರಬ್ರಹ್ಮನಿಂದ ಮುಖ್ಯವಾಯುವು ಹುಟ್ಟಿದನು ಮನಸ್ಸು ಮತ್ತು ಸರ್ವೇಂದ್ರಿಯಗಳೂ ಕೂಡ, ಆಕಾಶ ಭೂತವಾಯು ತೇಜಸ್ಸು ಆಪಃ ಮತ್ತು ಪೃಥಿವೀಯೂ ಕೂಡ ಹುಟ್ಟಿದವು (ವಿಶ್ವಸ್ಯ ಧಾರಿಣೀ-ಪೃಥಿವಿ) ಪರಬ್ರಹ್ಮನೇ ಕಾರಣನು

3. ಕರ್ತಾ ಸರ್ವಸ್ಯ ವೈ ವಿಷ್ಣುರೇಕ ಏವ ನ ಸಂಶಯಃ |
ಇತರೇಷಾಂ ತು ಸತ್ತಾದ್ಯಾ ಯತ ಏವ ತದಾಜ್ಞಯೇತಿ ಭವಿಷ್ಯತ್ಪುರಾಣೇ ||

ಶ್ರೀ ವಿಷ್ಣುವೇ ಸರ್ವತ್ರ ಜಗತ್ತಿಗೆ ಮೂಲ ಕಾರಣವು ಇತರ ದೇವತೆಗಳಿಗೆ ಸತ್ತಾ ಪ್ರಧಾನವು ಶ್ರೀ ವಿಷ್ಣುವಿನ ಆಜ್ಞಾ ಮಾತ್ರದಿಂದಲೇ ಈ ಸ್ಮೃತಿ ವಾಕ್ಯದಿಂದಲೂ ಸ್ಪಷ್ಟವು.

4 ಪಾಮನೇ ಚ-ತತ್ರ ತತ್ರ ಸ್ಥಿತೋ ವಿಷ್ಣುಸ್ತತ್ತಚ್ಛಕ್ತೀಃ ಪ್ರಬೋ॥
ಪಯನ್ ಏಕ ಏವ ಮಹಾಶಕ್ತಿಃ ಕುರುತೇ ಸರ್ವ ಮಂಜಸಾ ಇತಿ

ಶ್ರೀ ವಿಷ್ಣುವು ಅನ್ಯಾಪೇಕ್ಷಯಿಲ್ಲದೆಯೇ ಕೇವಲ ಸ್ವಲೀಲೆಯಿಂದಲೇ ಸರ್ವ ಸ್ಥ ಗಳಲ್ಲಿದ್ದು ಅವುಗಳ ಸಾಮರ್ಥ್ಯಗಳನ್ನು ಉದ್ಬೋಧಗೊಳಿಸಿ ಆ ವಸ್ತುಗತ ದ್ವಾರ ಸರ್ವ ಪದಾರ್ಥಗಳನ್ನೂ ಚೆನ್ನಾಗಿ ಸೃಷ್ಟಿಸುವನು

5. ಘುವರ್ಾತ್ಸ್ವೇದಾದಿ ದೃಷ್ಟೇಃ ಪುನಃ ಸ್ಪ್ರತಿಷೇಧಃ ।

ಶಾಖ, ಭಯ, ಶೋಕಾದಿಗಳಿಂದ ಶರೀರಗಳಲ್ಲಿ ಜೀವರು ನೀರು ಕಂಡು ಬರ್ ವುದರಿಂದ ಈ ಶಂಕಾ ಪರಿಹಾರಕ್ಕಾಗಿ ಪುನಃ ಸ್ಪಿರಸ್ವಕಾಂಕ್ಷಯು

– ಇತಿ ಅಬಾಧಿಕರಣಂ –

## – ಪ್ರಧಿವ್ಯಧಿಕರಣಂ –

ಈ ಅಧಿಕರಣದಲ್ಲಿ ಈ ಸರ್ವ ಜಗತ್ತಿಗೂ ಶ್ರೀಪರಮಾತ್ಮನಿಂದಲೇ ಸಾಕ್ಷಾತ್ತಾಗಿಯೂ ಮತ್ತು ದ್ವಾರಮುಖೇನ ಸೃಷ್ಟಿಯನ್ನು ಹೇಳಿ ಬೇರೆ ದ್ವಾರಗಳಿಂದಲೂ ಹೇಳಲ್ಪಡುವ ಸೃಷ್ಟಿಗಳ ಶೃತಿ ವಿರೋಧವನ್ನು ಪರಿಹರಿಸಿ ಸರ್ವ ಸೃಷ್ಟಿಗೂ ಶ್ರೀ ಪರಮಾತ್ಮನೇ ಮುಖ್ಯನು ಎಂದು ಸಾಧಿಸಲ್ಪಡುತ್ತದೆ

1 ತಾ ಆಪ ಐಕ್ಷಂತ ಬಹ್ವ್ಯಃ ಸ್ಯಾಮ ಪ್ರಜಾಯೇಮ ಇತಿ ।
ತಾ ಅನ್ನಮಸೃಜಂತ ಛಾ -(1-2) ಇತ್ಯದೋನ್ನಸೃಷ್ಟಿಃ ಶ್ರೂಯತೆ
'ಅದ್ಭ್ಯಃ ಪೃಥಿವೀ (ತೈ-2-1) ಇತಿ ಕುತ್ರಚಿತ್ಪೃಥವೀಸೃಷ್ಟಿಃ
ಇತಿವಿರುದ್ಧವ್ಯದ ಪ್ರಮಾಣ್ಯಮಿತಿ ॥

ಕೃತ್ಯರ್ಥಃ. ತೇಜೋಽಭಿಮಾನಿ ರಮಾದೇವಿಯಿಂದ ಹುಟ್ಟಿದ "ಅಪ್ ಜಲಾಭಿಮಾನಿ ಮುಖ್ಯ ಪ್ರಾಣನು ಚಿಂತಿಸಿದನು ನಾನು ಬಹುರೂಪಗಳುಳ್ಳವನಾಗು ತ್ತೇನೆ ಮತ್ತು ಹುಟ್ಟಬೇಕಾಗಿರುವ ಈ ಜಗತ್ತಿನ ಬಹು ವಿಧ ಸೃಷ್ಟಿಯನ್ನು ಮಾಡು ವೆನೆಂದು ಅನ್ನನಾಮಕ ರುದ್ರ ನಾಭಿಮಾನಿ ಪೃಥ್ವ್ಯಾಖ್ಯ ಭೂತವನ್ನು ಸೃಷ್ಟಿ ಮಾಡಿ ದನು ಅದರ ತೃತ ಕರೀಯದಲ್ಲಿ "ಅದ್ಭ್ಯಃ ಅನ್ನಂ" ಎಂದು ಬೇರೆ ದ್ವಾರದಿಂದ ಪೃಥಿವೀ ಸೃಷ್ಟಿಯನ್ನು ಹೇಳುವುದು ಇದು ಪೂರ್ವ ಪಕ್ಷವು ಇದಕ್ಕೆ ಪರಿಹಾರವು

## ಸೂ॥ ಓಂ॥ ಪೃಥಿವ್ಯಧಿಕಾರರೂಪಶಬ್ದಾಂತರಾದಿಭ್ಯಃ ಓಂ॥12

"ತಾ ಅನ್ನಮಸೃಜಂತ" ಎಂಬ ಶೃತಿಯಲ್ಲಿ ಪೃಥಿವಿಯೇ ಅನ್ನ ಶಬ್ದ ವಾಚ್ಯವು ಪ್ರಸಿದ್ಧಾನ್ನವಲ್ಲ ಏಕೆಂದರೆ ಈ ಪ್ರಕರಣವು ಅಧಿಕಾರ ರೂಪ ಶಬ್ದಾಂತರದಿಂದ ಭೂತ ಸೃಷ್ಟರೂಪವನ್ನು ಹೇಳಿರುವುದರಿಂದ "ಪೃಥಿವೀಚಾನ್ನಂ" ಎಂಬ ಶೃತಿ ವಾಕ್ಯ ದಿಂದಲೂ ದೋಷವಿಲ್ಲ "ತತ್ತೇಜೋ ಸೃಜತ್-"ತದಪೋ "ಸೃಜತ್" ತಾಸಾಂ ತ್ರಿವೃತಂ ತ್ರಿವೃತಂ ತ್ರಿವೃತಮೇಕೈಕಮಕರೋತ್ ಎಂಬ ಶೃತಿಗಳ ವಾಕ್ಯಾಂತರವು ಭೂತ ವಿಷಯಕ ಪ್ರಕರಣಗಳಾದ್ದರಿಂದ ಅನ್ನಶಬ್ದಾರ್ಥವು ಪೃಥಿವಿಯೆಂದೇ ತಿಳಿಯು ತ್ತದೆ

3. **ಕಾರ್ಷ್ಣ್ಯಪ್ರಚುರಾ ಚ ಪೃಥಿವೀ । ನಾನ್ನಸ್ಯ ತಥಾ ವಿಶೇಷಃ ।**

ಪೃಥಿವಿಯು ಕೃಷ್ಣವರ್ಣ ಬಾಹುಳ್ಯದಿಂದ ಪೃಥಿವಿಯು "ಕಾರ್ಷ್ಣ್ಯಂಚಾನ್ನೇಶ" ಎಂಬ ವಾಕ್ಯದಿಂದ ಅನ್ನಕ್ಕೆ ವಿಶೇಷವಿಲ್ಲವಾಗಿ ಪೃಥಿವಿಯೇ ಅನ್ನ ಶಬ್ದ ಮುಖ್ಯ ವಾಚ್ಯವು.

4 **ಆಪಶ್ಚ ಪೃಥಿವೀ ಚಾನ್ನಂ।** (ಐ ಆ-2-3-1) **ಪೃಥಿವೀ ವಾಽನ್ನಂ ।**
(ತೈ-3-9) **ತಾ ಆಪೋಽನ್ನ ಮಸೃಜಂತ ಪೃಥಿವಿ ವಾ ಅನ್ನ**
**ಮಿತ್ಯಾದಿ ಶಬ್ದಾಂತರಾಚ್ಚ ॥**

ಈ ಮೇಲಿನ ಶೃತಿಗಳಿಂದಲೂ ಪೃಥಿವಿಯು ಅನ್ನಶಬ್ದ ವಾಚ್ಯವು.

5 ಅಪಿ ಶಬ್ದಾದ್ಯುಕ್ತಿಃ । ಅಪೌರುಷೇಯತ್ವೇನಾದೋಷಸ್ಯ
ವಾಕ್ಯಸ್ಯ ನಾ ಪ್ರಾಮಾಣ್ಯಮಿತ್ಯಾದಿ ॥

ಈ ವಾಕ್ಯಗಳು ದೋಷರಹಿತ ಅಪೌರುಷೇಯ ವೇದವಾಕ್ಯಗಳಾದ್ದರಿಂದ ಪ್ರಮಾಣಗಳು

6 ಕೌರ್ಮೇ ಚ ವಿರೋಧೋ ವಾಕ್ಯಯೋರ್ಯತ್ರ ನಾಪ್ರಾಮಾಣಂ
ತದೇಷ್ಯತೇ । ಯಥಾ ವಿರುದ್ಧತಾ ನ ಸ್ಯಾತ್ತಥಾರ್ಥಃ ಕಲ್ಪ್ಯ
ಏತಯೋಃ ॥

ವೇದ ವಾಕ್ಯಗಳಲ್ಲಿ ಆಪಾತತಃ ವಿರೋಧವು ಕಂಡು ಬಂದಲ್ಲಿ ಪ್ರಮಾಣ ವಿರೋಧವಿಲ್ಲವಂತೆ ಅರ್ಥಾಂತರವನ್ನು ಯೋಜಿಸಬೇಕು ಅಪ್ರಾಮಾಣ್ಯವನ್ನು ಮಾತ್ರ ಶಂಕಿಸಬಾರದು ವೇದವಾಕ್ಯಗಳು ಸ್ವತಃ ಪ್ರಮಾಣಗಳು

7 ರಕ್ತೋಽಗ್ನಿರುದಕಂ ಶುಕ್ಲಂ ಕೃಷ್ಣೈವ ಪೃಥಿವೀ ಸ್ವತಃ ।
ನಾಭಿಪದ್ಮಾಭಿ ಸಂಬಂಧಾತ್ಪೀತಾ ಸೈತ್ಯಭಿಧೀಯತೇ ।
ಕ್ಷತ್ರರಕ್ತಾಭಿಸಂಬಂಧಾದ್ರಕ್ತೋಽಂಕ ಬಹುತ್ವತಃ ।
ಶುಕ್ಲತ್ವಮೇತ್ಯೇವಮೇವ ವರ್ಣಾಂತರಗತಿರ್ಭವೇತ್ ।
ವಿಷ್ಣುವೀರ್ಯಾಭಿ ಯೋಗಾಚ್ಚ ಪೀತತ್ವಂ ಭುವ ಇಷ್ಯತೇ ।
ಸ್ವರ್ಣವೀರ್ಯೋ ಹಿ ಭಗವಾನನಾದಿಃ ಪರಮೇಶ್ವರ ಇತಿ
ವ್ಯೋಮಸಂಹಿತಾಯಾಂ ॥

ಅಗ್ನಿಯು ರಕ್ತವರ್ಣವು ನೀರು ಶುಕ್ಲವರ್ಣವು ಪೃಥಿವೀ ಸ್ವರಃ ಕೃಷ್ಣವರ್ಣವು ಶ್ರೀ ಪರಮಾತ್ಮನ ಲೋಕಾಧಾರಕತ್ವ ನಾಭಿಕಮಲ ಸಂಬಂಧದಿಂದ ಪೀತವರ್ಣವೆಂದು ಕರೆಯಲ್ಪಡುತ್ತದೆ

– ಇತಿ ಪೃಥಿವ್ಯಧಿಕರಣಂ –

ಈ ಅಧಿಕರಣದಲ್ಲಿ ಅನ್ಯ ವಿರೋಧಗಳಿಂದ ಶ್ರೀ ಪರಮಾತ್ಮನ ಅಧಿಭೂತ ಅಧಿಷ್ಠಿನಾದಿ , ಪ್ರಯುಕ್ತಸಂಹಾರಗಳ ಕರ್ತೃತ್ವ ಪರಿಹಾರವು.

1 ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾವಿಶಾಂತಕಃ ।
ತೇನಾನ್ನಾನ್ಯಾಯಸ್ವ । (ಮಹಾನಾ-16-2) ಇತ್ಯಾದಿನಾನ್ಯ
ಸಂಹರ್ತೃತ್ವ ಪ್ರತೀಯತೆ ಇತಿ ॥

ಶ್ರೀ ವಿಷ್ಣುವು ತಾನೇ ಜಗತ್ತಿಗೆ ಸೃಷ್ಟಿ ಮತ್ತು ಪಾಲನ ಕರ್ತನಾದ್ದರಿಂದ ಅವನೇ ಸಂಹಾರಕನಾಗಲಾರನು. ಈ ವಿಷಯ ಸಮರ್ಥನೆಗೆ ಮೇಲಿನ ಶೃತಿಯಲ್ಲಿ ರುದ್ರನೇ ಜಗತ್ಸಂಹರ್ತೃವೆಂದು ಹೇಳುವ ಪೂರ್ವ ಪಕ್ಷವು ಮುಂದಿನ ಸಿದ್ಧಾಂತ ಸೂತ್ರವು

2 ಅತೋ ಅಬ್ರವೀತ್-ಅದಕ್ಕಾಗಿ ಹೇಳಿವೆ

## ಸೂ॥ ಓಂ॥ ತದಭಿಧ್ಯಾನಾದೇವತು ತಲ್ಲಿಂಗಾತ್ಸಃ ಓಂ॥ 13

"ತಸ್ಯಾಭಿಧ್ಯಾನಾದ್ಯೋಜನಾತ್ತತ್ವ ಭಾವಾದ್ಭೂಯಶ್ಚಾಂತೆ ವಿಶ್ವಮಾಯಾ ನಿವೃತ್ತಿಃ (ಶ್ವೆ-1-10) ಇತಿ ಬಂಧಲಯಸ್ಯ ತದಭಿಧ್ಯಾನ ನಿಮಿತ್ತತ್ವ ಲಿಂಗಾತ್ತತ್ಕರ್ತೃತ್ವಂ ಪ್ರತೀಯತೆ ಕಿಮುನಾದೇರ್ಜಗತಃ । ಇತ್ಯೇತಸ್ಮಾದೇವ ಸರ್ವ ಸಂಹಾರಕರ್ತಾ ವಿಷ್ಣುರಿತಿ ಪ್ರತೀಯತೆ ॥

ಶ್ರೀವಿಷ್ಣುವು ಇಚ್ಛಾ ಮಾತ್ರದಿಂದಲೆ ಸಂಹಾರ ಕರ್ತನು. ಶ್ರೀ ರುದ್ರ ದೇವರಲ್ಲ

ಮೇಲಿನ ಶೃತಿಯಿಂದ ಅನಾದಿ ಬಂಧ ಸಂಹಾರೇಚ್ಛಾರೂಪ ಸಾದಿ ಜಗತ್ಸಂಹರ್ತೃತ್ವವು ಸಾಧಿಸಲ್ಪಟ್ಟಿರುತ್ತದೆ ಆದ್ದರಿಂದ ಶ್ರೀವಿಷ್ಣುವೆ ಮುಖ್ಯ ಸಂಹಾರಕತ್ವವು ಅನ್ಯರಾಗಲಾರರು ಸಮಸ್ತವೇದ ವಾಕ್ಯ ತಾತ್ಪರ್ಯಾರ್ಥ ಸಾಧಕ ಜಗತ್ಕರ್ತೃತ್ವವು ಶ್ರೀವಿಷ್ಣುವಿಗೇ ಸರ್ವಸಂಹಾರಕನೂ ಹೌದು

3 ಕಿ.ಗುು" ಯಮನ್ಯೇತಿಭುವನಂ ಸಾಂಪರಾಯೇ ಸ ನೋ ಹರಿ
ರ್ಘೃತಮಿಹಾಯುಷೇತ್ತು ದೇವಃ । ಯ ಇದಂ ಸರ್ವಂ
ವಿಲಾಪಯತಿ ಸ ಹರಿಃ ಪರಃ ಪರಮಾತ್ಮೇತ್ಯಾದಿ ಶೃತಿಭ್ಯ
ಇತ್ಯೇವಶಬ್ದಃ ॥

ಒಂದೇ ಮೂಲ ಶೃತಿಯು ಸ್ಪಷ್ಟವಾಗಿ ಶ್ರೀವಿಷ್ಣುವೇ ಸರ್ವ ಸಂಹಾರ ಕರ್ತನೆಂದು ಹೇಳಿ ಈ ವಿಷಯದಾರ್ಢ್ಯವನ್ನು ಅನೇಕ ಶೃತಿಗಳು ಆತನ ಇಚ್ಛಾರೂಪ ಪ್ರಸಾದ ಮಾತ್ರದಿಂದಲೇ ಸಂಸಾರ ನಿವರ್ತನ ರೂಪಮೋಕ್ಷನೂ ಸಾಧ್ಯವು ಎಂದು ಸಾರುತ್ತವೆ.

ಅಜೀದ್ವೇ ಪ್ರಕೃತೀ ದುಷ್ಟೇ ನೃಷು ಪ್ರಾತಿಸ್ವಿಕತಂ ಸ್ಥಿತೇ ।
ಸ್ವಗುಣಾಚ್ಛಾದಿಕಾತ್ವೇಕಾ ಪರಮಾಚ್ಛಾದಿಕಾಪರಾ ।
ಸ್ವಗುಣಾಚ್ಛಾದಿ ಕಾಂ ಹತ್ವಾ ಪರಮಾಚ್ಛಾಕಾಂಪರಃ ।
ವ್ಯಾಘುಟ್ಯ ಮೋಕ್ಷ ಪದವೀಂ ದದಾತಿ ಪುರುಷೋತ್ತಮಃ ॥

ಜೀವರಿಗೆ ಜಡಪ್ರಕೃತಿ ಬಂಧವೂ, ಚಿತ್ಪ್ರಕೃತ್ತಿದ್ವಾರ, ಈ ಮೋಹಕ ಶಕ್ತಿಯಲ್ಲದೆ ಬೇರೆ ದುಷ್ಟ ಪ್ರಕೃತಿಗಳು ಎರಡು. ಸ್ವಗುಣಾಚ್ಛಾದಿಕಾ, ರಮಾಚ್ಛಾದಿಕಾ ಎಂದು ತನ್ನ ಸ್ವರೂಪ ಗುಣಗಳ ಮರೆ ಮಾಡಿರುವನೆಂದ ಮೊದಲನೆಯದನ್ನು ಉಚ್ಚಾಟನೆ ಮಾಡಿ ಎರಡನೆಯದಾದ ಪರಮಾತ್ಮನ ಗುಣಗಳನ್ನು ಮರೆಮಾಡಿರುವ ಶಕ್ತಿಯನ್ನು ಸಂಹರಿಸಿ ಮೋಕ್ಷವನ್ನು ತೂಡುವವನು ಶ್ರೀ ವಿಷ್ಣುವೇ ಜೀವರಿಗೆ ಈ ಮಾವರಕಗಳಷ್ಟೆ ಅಲ್ಲ ದೇಹ ಬಂಧ, ಪ್ರಕೃತಿ ಬಂಧ, ಸತ್ವಾದಿಗುಣಬಂಧ, ಕರ್ಮಬಂಧ ಈಶ್ವರೇಚ್ಛಾ ಮುಂತಾದ ಬಹು ಆವರಕಗಳು ಮತ್ತು ದೇಹದಿಂದ ಹೊರಗೆ ಮನೆ, ಸಂಸಾರ, ಆಸ್ತಿ ಇತ್ಯಾದಿಗಳು

ಜ್ಞಾನೇ ನತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।
ತೇಷಾಂಮಾದಿತ್ಯವ ಜ್ಞಾನಂ ಪ್ರಕಾಶಯತಿ ತತ್ಪರಂ ॥

ಶ್ರವಣಜನಿತ ಅಲ್ಪಜ್ಞಾನಸ್ಪ ಆವರ್ತನ ರೂಪ ಮನನ ರೂಪದಾರ್ಢ್ಯದಿಂದ ವಿಜ್ಞಾನವು ಪೂರ್ಣವಾಗಿ ಶಿಥಿಲವಾಗಿ ಪರಮಾತ್ಮನ ಇಚ್ಛಾ ರೂಪ ಪ್ರಸಾದದಿಂದಲೇ ಆತ್ಯಂತಿಕ ನಿವೃತ್ತಿ ರೂಪ ಮೋಕ್ಷದ ಸಿದ್ಧಿಯು ಲೋಕ ವಿಲಕ್ಷಣ ಸ್ವಭಾವವುಳ್ಳ ಶ್ರೀಪರಮಾತ್ಮನು ನಿತ್ಯತೃಪ್ತ ಪ್ರಾಕೃತತ್ವಶೂನ್ಯನಾದರೂ ಮಮತಾದಿ ದೋಷವಿಲ್ಲದ್ದ ರಿಂದಲೇ ಸಂಹಾರಕರ್ತೃವೂ ಆತನೇ

4 ಸೃಷ್ಟತ್ವಾದಿಕಮನ್ಯೇಷಾಂ ದಾರುಯೋಷಾವದುಚ್ಯತೇ ।
ಸೃಷ್ಟಾ ಪಾತಾ ಚ ಸಂಹರ್ತಾ ಸ ಏಕೋ ಹರಿರೀಶ್ವರಃ ।
ಏಕದೇಶ ಕ್ರಿಯಾಚಾತ್ರ ನತು ಸರ್ವಾತ್ಮನೇರಿತಂ ।
ಸೃಷ್ಟ್ಯಾದಿಕಂ ಸಮಸ್ತಂತು ವಿಷ್ಣೋರೇವ ಪರಾದ್ಭವೇತ್ ॥

ಇತಿ ಚ ಸ್ಕಾಂದೇ

“ರುದ್ರೋವಾ ವಿರಾಂತಕಃ” ಎಂಬ ಶ್ರುತಿಯು ರುದ್ರನನ್ನು ಅಂತಕನೆಂದು ಹೇಳಿ ಶ್ರೇಷ್ಠನಾದ ಶ್ರೀ ವಿಷ್ಣುವು ಇತರ ಬ್ರಹ್ಮಾದಿ ದೇವತೆಗಳಿಗಿಂತ ಶ್ರೇಷ್ಠನಾದ ಪರಮೇಶ್ವರನಾದ್ದರಿಂದ ಸ್ವತಂತ್ರವಾಗಿ ಸೃಷ್ಟಿ, ಸಂಹಾರಾದಿ ಕರ್ತೃವೆಂದೂ ಮಿಕ್ಕವರು ಅವನ ಅಧೀನ ದ್ವಾರಿಗಳೇ ಮರದಲ್ಲಿ ಮಾಡಿದ ಮೂರ್ತಿಗಳಂತೆ ಅಸ್ವತಂತ್ರ್ಯರು ದ್ವಾರ ಮಾತ್ರವೇ ಸರ್ವಥಾ ಸ್ವತಂತ್ರರಲ್ಲ

6 ನಿಮಿತ್ತಮಾತ್ರ ಮೀಶಸ್ಯ ವಿಶ್ವಸರ್ಗನಿರೋಧಯೋಃ ।
ಹಿರಣ್ಯಗರ್ಭಃ ಶರ್ವಸ್ಚ ಕಾಲಾಖ್ಯಾ ರೂಪಿಣಸ್ತವ ॥

ಇತಿ ಚ ಭಾಗವತೇ

ಲೋಕ ಸೃಷ್ಟಿ ಕಾಲನ ಸಂಹಾರಾದಿ ಕರ್ತೃತ್ವದಲ್ಲಿ ಕಾಲ ರೂಪ ಶ್ರೀ ಪರಮಾತ್ಮನಿಗೆ ಬ್ರಹ್ಮ ರುದ್ರಾದಿ ದೇವತೆಗಳು ನಿಮಿತ್ತಮಾತ್ರರು

6 ಸ ಬ್ರಹ್ಮಣಾ ವಿಸೃಜತಿ ಸ ರುದ್ರೇಣ ವಿಲಾಪಯತಿ ಸೋನುತ್ಪತ್ತಿ
ರಲಯ ಏಕ ಏವ ಹರಿಃ ಪರಃ ಪರಾನಂದ ಇತಿ ಚ ಮಹೋಪನಿ
ಷದಿ ॥

ಶ್ರೀ ವಿಷ್ಣುವೇ ಬ್ರಹ್ಮನ ದ್ವಾರ ಸೃಷ್ಟಿ ಕರ್ತನು ರುದ್ರನ ದ್ವಾರಲಯಕರ್ತನು ಆತನನ್ನು ಬಿಟ್ಟು ಯಾವ ಕಾರ್ಯವೂ ನಡೆಯುವುದಿಲ್ಲ ಆತನೇ ಉತ್ಪತ್ತಿಯಿಲ್ಲ

ದವನು ಒಯವಿಲ್ಲದವನು. ಅನಂತನು ಪರಾತ್ಪರನು ಪರಾನಂದನು ಸರ್ವತಂತ್ರ ಸ್ವತಂತ್ರನು

– ಇತಿ ತದಭಿಧ್ಯಾನಾಧಿಕರಣವು –

– ವಿಪರ್ಯಯಾಧಿಕರಣಂ –

ಈ ಅಧಿಕರಣದಲ್ಲಿ ಅಧಿ ಭೂತಾದಿ ಸಂಹಾರಕ್ರಮ ವಿಷಯದಲ್ಲಿ ಶ್ರುತಿ ವಿರೋಧಕವು ಪರಿಹಾರ ಮಾಡಲ್ಪಡುವುದು

1. "ಅತ ಏವ ಹೀದಂ ಪರಾತ್ಕ್ರಮಾದುತ್ಪದ್ಯತೇ ಕ್ರಮಾದ್ವಿಲೀಯತೇ ನಾಸಾವುಪೇತಿ ನಾಸ್ತಮೇತೀತಿ ಭಾಲ್ಲವೇಯಶ್ರುತೌ ಕ್ರಮಾಲ್ಲಯಃ ಪ್ರತೀಯತೇ । ಅಕ್ಷರಾತ್ಪರಮಾದೇವ ಸರ್ವಮುತ್ಪದ್ಯತೇ ಕ್ರಮಾತ್ ॥

ವ್ಯುತ್ಕ್ರಮಾದಿ ವಿಲಯಶ್ಚೈವ ತಸ್ಮಿನ್ನೇವ ಪರಾತ್ಮನಿ ॥ ಇತಿ ಚತುರ್ವೇದ ಶಿಖಾಯಾಂ ವ್ಯುತ್ಕ್ರಮಾಲ್ಲಯಃ ಪ್ರತೀಯತೆ ।

ಶ್ರೀವಿಷ್ಣುವೇ ಸರ್ವೋತ್ತಮನಾದ್ದರಿಂದ ಈ ಸಮಸ್ತ ಜಗತ್ತೂ ಆತನಿಂದಲೇ ತತ್ತ್ವದೇವತಾತಾರತಮ್ಯ ಕ್ರಮದಿಂದ ಉತ್ಪತ್ತಿಯು ಮತ್ತು ಕ್ರಮದಿಂದಲೇ ಲಯವು ಈ ಪರಮಾತ್ಮನು ಉತ್ಪತ್ತಿವುಳ್ಳವನಲ್ಲ. ನಾಶ ಹೊಂದುವವನಲ್ಲ ಹೀಗೆ ಕ್ರಮೋತ್ಪತ್ತಿ ಲಯವನ್ನು ಹೇಳಿದೆ ಚತುರ್ವೇದ ಶಿಖೆಯಲ್ಲಿಯಾದರೂ ವ್ಯುತ್ಕ್ರಮದಿಂದ ಲಯವು ಹೇಳಿದೆ. ಹೀಗೆ ವ್ಯತ್ಯಾಸದಿಂದ ಸಂಶಯವು.

ಎಂದು ಬೇರೆ ಶೃತಿಯಲ್ಲಿಯಾದರೋ ಜೀವನು ಅಣು ಸ್ವರೂಪನು ಪುಣ್ಯ ಪಾಪಗಳಿಂದ ಬದ್ಧನು ಎಂದು ವಿರುದ್ಧಾರ್ಥವು, ಜೀವ ಪರಿಮಾಣ ವಿಷಯದಲ್ಲಿ ಸಂಶಯವೆಂದ್ವ ಪೂರ್ವಪಕ್ಷವು

2 ಅತೋ ಅಬ್ರವೀತ್—ಅದಕ್ಕಾಗಿ ಹೇಳಿದೆ.

## ಸೂ|| ಓಂ|| ಉತ್ಕ್ರಾಂತಿಗತ್ಯಾಗತೀನಾಂ ಓಂ|| 20

ಹೇತೂನಾಂ ಸಕಾಶಾದಣುರೇವ. ಈ ಕಾರಣಗಳಿಂದ ಅಣುವೇ

"ಸೋಸ್ಮಾತ್-" ಇತ್ಯಾದಿ ವಾಕ್ಯೋಕ್ತ ದೇಹೋತ್ಕ್ರಮಣ, ಲೋಕಾಂತರ ಗಮನ ರೂಪ ಪ್ರಕರಣ ಬಲದಿಂದ ಜೀವನು ಅಣು ಪ್ರಮಾಣನೇ

3 **ಸೋಸ್ಮಾಚ್ಛರೀರಾದುತ್ಕ್ರಮ್ಯಾಮುಂ ಲೋಕಾಮಭಿಗಚ್ಛ ತ್ಯಮುಷ್ಮಾದಿಮಂ ಲೋಕಮಾಗಚ್ಛತಿ ಸಗರ್ಭೀಭವತಿ ಸ ಕರ್ಮ ಕುರುತ ಇತಿ ಪೌಷ್ಯಾಯಣ ಶ್ರುತೇಃ ||**

ಆ ಜೀವನು ಬಾಹ್ಯ ಶರೀರದಿಂದ ಹೊರ ಹೊರಟು ಬೇರೆ ಲೋಕವನ್ನು ಹೊಂದುವನು ಮತ್ತು ಆ ಲೋಕದಿಂದ ಮತ್ತೆ ಭೂಲೋಕಕ್ಕೆ ತಿರುಗಿ ಬರುತ್ತಾನೆ. ಅನಂತರ ಗರ್ಭವಲ್ಲದ ಸ್ಥಿತಿಯಿಂದ ಗರ್ಭ ಹೊಂದಲು ತಾಯಿಯ ಗರ್ಭವನ್ನು ಹೊಂದುವನು ಅನಂತರ ಹುಟ್ಟುವನು ಪುಣ್ಯ ಪಾಪ ಸಾಧಕ ಕರ್ಮಗಳನ್ನು ಮಾಡುತ್ತಾನೆ ಆತನು ಅಣುವೇ

4 **ತತ್ರ ಸ್ವಾತಂತ್ರ್ಯ ಪ್ರತೀತೇಃ । ಏಕಃ ಪ್ರಸೂಯತೇ ಜಂತುರೇಕ ಏವಪ್ರಮೀಯತೇ । ಏಕೋಽನುಭುಂಕ್ತೇ ಸುಕೃತಮೇಕ ಏವ ಚ ದುಷ್ಕೃತ ಮಿತ್ಯಾದೇಶ್ಚ ಸ್ವಮೇವ ಏತಿ ||**

ಸ್ವತಂತ್ರನಾದ ಜೀವನು ಒಬ್ಬನೇ ಉತ್ಪನ್ನವಾಗುವನು, ನಾಶ ಹೊಂದುವನು ಸುಕೃತ ದುಷ್ಕೃತಗಳನ್ನು ಅನುಭವಿಸುವನು ಎಂದು ಈ ವಾಕ್ಯದಲ್ಲಿ ಜೀವನಿಗೆ ಸ್ವಾತಂತ್ರ್ಯವು ತಿಳಿಯುತ್ತದೆ.

5. ಅತೋ ಏಕ್ತಿ—ಅದಕ್ಕೆ ಹೇಳಿದೆ

## ಸೂ॥ ಓಂ॥ ಸ್ವಾತ್ಮನಾ ಚೋತ್ತರಯೋಃ ಓಂ॥ 21

ಜೀವನು ಸ್ವತಂತ್ರನಾದ ಶ್ರೀ ಪರಮಾತ್ಮನ ಪ್ರೇರಣೆಯಿಂದಲೇ ಉತ್ಕ್ರಾಂತ್ಯಾದಿ ಶಕ್ತಿಯುಳ್ಳವನು ಸ್ವತಂತ್ರವಾಗಲ್ಲ, ಮುಂದಿನ ಶೃತಿ ವಾಕ್ಯವು ಹಾಗೆ ವಿಧಿಸುವುದು

"ಸಏಶೇ ನ್ಯೈವ ಸ್ವಾತ್ಮನಾವರೇಣೇಮಂ ಗರ್ಭಮನು ಪ್ರವಿಶತಿ ಪರೇಣ ಜಾಯತೆ ವರೇಣ ಕರ್ಮ ಕುರುತೆ ಪರೇಟನೀಯತೆ ಪರೇಣೋನ್ನೀಯತೆ ತಂ ವಾ ಏತ ಮಭಿ ವಂದತಿ ಸ್ವಾತ್ಮಾ "ಇತಿ" ಏಷಹ್ಯಾನಂದ ಮಾದತ್ತೆ ಏಷಹ್ಯೇನಂ ಜೀವಮಭಿ ಜೀವಯತ್ಯಷ ಉಗ್ಗಮಯತ್ಯೇಷ ಆಗಮಯತಿ" (ಪಾಷ್ಯಾಯಣ) ಇಪ್ಯುತ್ತರಯೋರ್ವಾಕ್ಯಯೋಃ ಪರಮಾತ್ಮನೈವೋತ್ಕ್ರಾಂತ್ಯಾದಯಃ ॥

ಜೀವನು ಸ್ವಾತ್ಮ ಶಬ್ದ ವಾಚ್ಯನಾದ ಶ್ರೀ ಪರಮಾತ್ಮನಿಂದ ಅನುಗ್ರಹೀತನಾಗಿ ಮಾತೃ ದೇಹದ ಗರ್ಭವನ್ನು ಪ್ರವೇಶಿಸಿ ಆ ಪರಮಾತ್ಮನ ಪ್ರೇರಣೆಯಿಂದಲೇ ಜನ್ಮ ತಾಳುವನು ಈ ಪರಮ ಮಹಾ ಮಹಿಮನೇ ಶ್ರೀ ವಿಷ್ಣುವೆಂದು ವಿದ್ವಾಂಸರು ತಿಳಿಯುವರು ಈತನೇ ಜೀವಕೃತ ಶುಭ ಫಲವನ್ನು ಮಾತ್ರ ಉಣ್ಣುತ್ತಾನೆ ಸ್ವರೂಪಾನಂದದಿಂದಿರುವನು ಪ್ರಾಣವನ್ನು ಪ್ರಾಪಿಸುವನು ದೇಹದಿಂದ ಹೊರಹೊರಡಿಸಿ ಪರಲೋಕವನ್ನು ಹೊಂದಿಸುವನು ಪುನಃ ದೇಹವನ್ನು ಪ್ರವೇಶಿಸುವನು, ಎಂದು ಸರ್ವಾವಸ್ಥೆಯಲ್ಲಿಯೂ ಪರಮಾತ್ಮನಿಗೇ ಸ್ವತಂತ್ರತ್ವವು.

## ಸೂ॥ ಓಂ॥ ನಾಣುರತಚ್ಛ್ರುತೇರಿತಿ ಚೇನ್ನೇತ ರಾಧಿಕಾರಾತ್ ಓಂ॥ 22

"ವ್ಯಾಪ್ತಾಹ್ಯಾತ್ಮಾನಃ ಚೇತನಾ ನಿರ್ಗುಣಾಶ್ಚ" ಇತಿ ವ್ಯಾಪ್ತಿಶೃತೇರ್ನಾಣು ರ್ಜೀವ ಇತಿ ಚೇತ್ ॥

ಈ ಶೃತಿಯಲ್ಲಿ ಅಣುತ್ವ ವಿರುದ್ಧ ವ್ಯಾಪ್ತತ್ವದಿಂದ ಜೀವನು ಅಣುವಲ್ಲವೆಂದರೆ, ಅದು ಸರಿಯಲ್ಲ. ಈ ವಾಪ್ತತ್ವ ಶೃತಿಯು ಶ್ರೀಪರಮಾತ್ಮ ಪ್ರಕರಣವಾದ್ದರಿಂದ

7 **ನ, ಸ ಆತ್ಮೇದಂ ಸೃಜತಿ ಸ ದ್ವಿಧೇದಂ ಬಿಭರ್ತ್ಯಂತರ್ಬಹಿಶ್ಚ ಸ ಬಹುಧೇದಮನುಪ್ರವಿಶ್ಯಾತ್ಮನೋಭಿನಯತಿ । ಸ ಆತ್ಮಾಸ ಆತ್ಮಾನಃ ಈಶಃ ಸ ವಿಷ್ಣುಃ ಸ ಪರಃ ಪರೋವರೀಯಾಸ್। ಇತಿ ಪರಮಾತ್ಮಾಧಿಕಾರತ್ವಾತ್ ॥**

ಆ ಪರಮಾತ್ಮನು ಈ ಜಗತ್ತನ್ನು ಸೃಷ್ಟಿಸುವನು. ಅವನು ಒಳಗೂ ಹೊರಗೂ ಈ ಜಗತ್ತನ್ನೂ ಧಾರಣ ಮಾಡುವನು. ಬಹು ಸಂಖ್ಯಾತನಾಗಿ ಇದನ್ನು ಪ್ರವೇಶಿಸಿ ತನ್ನ ಪ್ರೇರಣೆಯಂತೆ ಕಾರ್ಯವನ್ನು ಮಾಡಿಸುವನು. ಹೀಗೆ ಆತನು ಏಕವಚನ ಬಹುವಚನ ರೂಪ ಸರ್ವೋತ್ತಮನು ಬಹು ರೂಪದಿಂದ ಈ ಜಗತ್ತನ್ನು ಪ್ರವೇಶಿಸುತ್ತಾನೆ. ಎಲ್ಲವನ್ನು ತನ್ನಂತೆಯೇ ನಡೆಸುವನು ಹೀಗೆ ಈ ಶ್ರುತಿಯು ವಿಷ್ಣು ವಿಷಯತ್ವವನ್ನು ಸಾಧಿಸುವುದರಿಂದ ಜೀವ ಪರತ್ವವಲ್ಲ.

8 **ಏಕಶಬ್ದೈರ್ದ್ವಿಶಬ್ದೈಶ್ಚ ಬಹು ಶಬ್ದೈಶ್ಚ ಕೇಶವಃ । ಏಕ ಏವೋಚ್ಯತೇ ವೇದೈಸ್ತಾವತಾ ನಾಸ್ಯ ಭಿನ್ನತೇತಿ ಭವಿಷ್ಯತ್ಪುರಾಣೇ ॥**

ಸೃಷ್ಟಿ ಸಂಹಾರಕಾರ್ಯಗಳಲ್ಲಿ ಬ್ರಹ್ಮರುದ್ರಾದಿ ದೇವತೆಗಳನ್ನು ನಿಯೋಜಿಸುವುದರಿಂದ ಶ್ರೀವಿಷ್ಣು ಒಬ್ಬನೇ ವೇದಗತ ಏಕ ಶಬ್ದದಿಂದಲೂ ಮತ್ತು ಬಹುವಚನ ಶಬ್ದಗಳಿಂದಲೂ ಹೇಳಲ್ಪಡುವನು. ಈ ವಾಕ್ಯಗಳಿಂದ ಅವನಲ್ಲಿ ಭಿನ್ನತ್ವವನ್ನು ತಿಳಿಯಬಾರದು-ಭವಿಷ್ಯತ್ಪುರಾಣವು.

9. **"ತದಯಂ ಪ್ರಾಣೋಧಿತಿಷ್ಠತಿ । ತದುಕ್ತಮೃಷಿಣಾ ಆತೇನ ಯಾತಂ"**ಐ ಆ (2-3-8) ಇತ್ಯಾದಿ ಚ

ಆತೇನಯಾತಂ ಮನಸೋಜವೀಯಸಾ ।
ರಥಂಯಂ ವಾಮೃಭವಶ್ಚಕ್ರುರಶ್ವಿನಾ ॥
ಯಸ್ಯ ಯೋಗೇ ದುಹಿತಾ ಜಾಯತೆ-ದಿವ ।
ಉಭೆ ಅಹನೀ ಸುದಿನೇ ವಿವಸ್ವತಃ ॥ (ಋ-10-39-12)

ಹೇ ಅಶ್ವಿನಿ ದೇವತೆಗಳೇ ಅತಿ ವೇಗದ ಗಮನವುಳ್ಳ ಹಯೂಸ್ಯ ವಾಚ್ಯ ವಿಷ್ಣು ದೇವತೆಗಳ ರಥಾಖ್ಯ ದೇಹವು ಸರ್ವ ದೇವತೆಗಳಿಂದಲೂ ಚೆನ್ನಾಗಿ ಯೋಗ ಹೊಂದು ವುದಕ್ಕಾಗಿ ಭಗವದರ್ಪಣ ಬುದ್ಧಿಯಿಂದ ಮನೋವಾಕ್ಕರ್ಮಗಳನ್ನು ಪರಮಾತ್ಮಾ ಧೀನವೆಂಬ ಜ್ಞಾನದಿಂದ ವಿವಿಧವಾಗಿ ಆಚರಿಸುತ್ತಾ ವಾಸ ಮಾಡುವರೋ ಆ ವಿಷ್ಣು ವಿಷ್ಣು ತತ್ತ್ವಾ ಪರೋಕ್ಷ ಜ್ಞಾನವು ಆಗುವ ಜೀವನು ಜೀವನ್ಮುಕ್ತಿಯನ್ನು ಹೊಂದಿ ವೇಗದಿಂದ ಆರಥಾಖ್ಯ ರೂಪವನ್ನು ಸಮೀಪಿಸಿ ಸ್ವರೂಪ ಸುಖವನ್ನು ಹೊಂದುವನು (ಆನಂದಾಖ್ಯ ಸುಖವು)

## ಸೂ॥ ಓಂ॥ ಸ್ವಶಬ್ದೋನ್ಮಾನಾಭ್ಯಾಂ ಚ ಓಂ॥ 23

ಪ್ರಕರಣ ಬಲದಿಂದಲೇ ವ್ಯಾಪ್ತ ಶೃತಿಯು ವಿಷ್ಣುಪರವೆಂದಲ್ಲ ಮತ್ತೆ ಕಾಷಾ ಯಣ ಶೃತಿಯಲ್ಲಿ ಸ್ವಶಬ್ದ ವಾಚಾತ್ಮಶಬ್ದ ಉನ್ಮಾನ ಶಬ್ದ ಅಪರಿಮಿತತ್ವ ಲಿಂಗ ದಿಂದಲೂ ವ್ಯಾಪ್ತತ್ವ ಶೃತಿಯು ಶ್ರೀ ವಿಷ್ಣುಪರವೇ ಜೀವ ಪರವಲ್ಲ

ಏಷೋಹ್ಯಾತ್ಮಾ "ಧ್ಯುದ್ಗತೋಮಾನಶಕ್ತೇಸ್ತಥಾಪ್ಯಸೌ ಪ್ರಮಿತಿಂಯಾತಿವೇದ್ಯೈಃ
ಪೂರ್ಣೋ "ಚಿಂತ್ಯಃ ಸರ್ವವೇದ್ಯೈಕಯೋನಿಃ ಸರ್ವಾಧೀಶಃ ಸರ್ವವಿತ್ಸರ್ವ
ಕರ್ತಾ॥ ಇತ್ಯಾದಿ ವಾಕ್ಯ ಶೇಷೇ ಆತ್ಮ ಶಬ್ದೋನ್ಮಾನಾಭ್ಯಾಂಚ ॥

ಈ ಹರಿಯು ಗುಣಗಳಿಂದ ಪೂರ್ಣನು ಅ ಚಿಂತ್ಯನು ಸರ್ವ ವೇದಗಳಿಂದಲೂ ವ್ಯಕ್ತಿ ಯೋಗವುಳ್ಳವನು ವೇದ್ಯೈಕ ಯೋನಿಯು ಸರ್ವಾಧೀಶನು ಸರ್ವಜ್ಞನು ಸರ್ವ ಕರ್ತನು ಆದ್ದರಿಂದಲೇ ಪುರುಷರ ಪರಿಮಾಣ ಶಕ್ತಿಯನ್ನತಿಕ್ರಮಿಸಿ ಪೂರ್ಣನು ವೇದ ಜನ್ಯ ಜ್ಞಾನ ವಿಷಯನು. ಅಪರಿಮಿತ ವಿಷಯನಾದಾಗ್ಯೂ ಏಕದೇಶ ಜ್ಞಾನ ವನ್ನು ಅವನ ಪ್ರಸಾದದಿಂದಲೇ ಜೀವರಿಗೆ ಹೊಂದಲು ಸಾಧ್ಯವು ಅಂದರೆ ಜೀವನು ಸ್ವಯೋಗ್ಯ ಬಿಂಬಾ ಪರೋಕ್ಷವನ್ನು ಹೊಂದುವನು

**11. ಆತ್ಮಾಽಮೇಯಃ ಪರಂ ಬ್ರಹ್ಮ ಪರಾನಂದಾದಿಕಾಭಿಧಾಃ ।**
**ವದಂತಿ ವಿಷ್ಣುಮೇವೈಕಂ ನಾನ್ಯತ್ರಾಸಾಂ ಗತಿಃ ಕ್ವಚಿತ್**
**ಇತಿ ಕೌರ್ಮೇ ॥**

ಪರಮಾತ್ಮನು ಅಪರಿಮಿತ ಸ್ವರೂಪನು ಶ್ರೇಷ್ಠ ಬ್ರಹ್ಮ ಶಬ್ದ ವಾಚ್ಯನು. ಪರ

ಮಾನಂದ ಸ್ವರೂಪವನು ಹೀಗೆಂದು ಶ್ರೀ ವಿಷ್ಣುವನ್ನು ಹೇಳುವುದು ಯಾವುದೂ ಆತ ನಲ್ಲಿ ಅಸಂಗತವಲ್ಲ ಮಿಕ್ಕವರಲ್ಲಿ ವ್ಯಕ್ತಿ ಮಾತ್ರವು ಮುಖ್ಯವಾಗಲ್ಲ.

## ಸೂ॥ ಓಂ॥ ಅವಿರೋಧಶ್ಚಂದನವತ್ ಓಂ॥ ॥ 24

ಚಂದನ ಬಿಂದುವು ದೇಹದ ಒಂದು ಸ್ಥಳದಲ್ಲಿದ್ದೂ ತನ್ನ ಅಂಶದಿಂದ ಪೂರ್ಣ ಶರೀರವನ್ನು ವ್ಯಾಪಿಸುವಂತೆ ಜೀವನು ಅಣು ಸ್ವರೂಪನಾದರೂ ಅಂಶಗಳಿಂದ ಸರ್ವ ದೇಹ ವ್ಯಾಪ್ತತ್ವವು ವಿರೋಧವಲ್ಲ, ಯುಕ್ತವೇ

ಅಣೋರಪಿ ಜೀವಸ್ಯ ಸರ್ವ ಶರೀರ ವ್ಯಾಪ್ತಿರ್ಯುಜ್ಯತೆ ।
ಯಥ ಹರಿಂದನ ವಿಪ್ರುಷ' ಏಕ ದೇಶ ಪತಿತಾಯಾಃ ಸರ್ವಶರೀರ ವ್ಯಾಪ್ತಿಃ

ಜೀವನು ಅಣು ಸ್ವರೂಪನಾದರೂ ಅಂಶದಿಂದ ಸರ್ವ ಶರೀರ ವ್ಯಾಪ್ತಿಯು ಯುಕ್ತವೇ

13. **ಅಣುಮಾತ್ರೋsಪ್ಯಯಂ ಜೀವಃ ಸ್ವದೇಹಂ ವ್ಯಾಪ್ಯ ತಿಷ್ಠತಿ ।
ಯಥಾ ವ್ಯಾಪ್ಯಶರೀರಾಣಿ ಹರಿಚಂದನ ವಿಪ್ರುಷ ಇತಿ
ಬ್ರಂಹ್ಮಾಡೇ ॥**

ಹರಿ ಚಂದನವು ತುಂತುರು ಶರೀರವೆಲ್ಲವನ್ನೂ ವ್ಯಾಪಿಸಿರುವಂತೆ ಜೀವನು ಸ್ವರೂಪತಃ ಅಣುವಾದರೂ ಪೂರ್ಣ ದೇಹವನ್ನು ವ್ಯಾಪಿಸಿರುವನು

## ಸೂ॥ ಓಂ॥ ಅವಸ್ಥಿತಿ ವೈಶೇಷ್ಯಾದಿತಿ ಚೇನ್ನಾಭ್ಯುಪಗಮಾದ್ಹೃದಿಹಿ ಓಂ॥ 25

ಚಂದನ ಬಿಂದು ಸಾಮ್ಯವು ಯುಕ್ತವಲ್ಲ ಚಂದನ ಬಿಂದುವು ಶರೀರದಲ್ಲಿ ಒಂದು ಕಡೆ ಸ್ಥಿರವಾಗಿರುವುದು ಹಾಗೆ ಜೀವನಿಗೆ ಸ್ಥಿರತೆ ಇಲ್ಲದ್ದರಿಂದ ಸಾಧುವಲ್ಲ ವೆಂದರೆ

ಸಮ್ಯಗಸಮ್ಯಗವಸ್ಥಾನ ವಿಶೇಷಾದ್ಯುಜ್ಯತೆ ಚಂದನ ಸ್ಯೇತಿ ಚೇತ್ ।

15 **ನ ಹೃದಿ ಹ್ಯೇಷ ಆತ್ಮಾ (ಪ್ರ 3-6) ಇತಿ ಜೀವಸ್ಯಾಪಿ ತಥಾ ಭ್ಯುಪಗಮಾತ್ ।**

ಮೇಲಿನ ಶೃತಿಯಿಂದ ಜೀವನಿಗೂ ಹೃದಯ ದಲ್ಲಿ ಸ್ಥಿತಿತ್ವವು ಹೇಳಿರುವುದರಿಂದ ಚಂದನ ಬಿಂದುವಿನಿಂದ ಸಾಮ್ಯವು ಸಾಧ್ಯವಾಗಿ ಅವಯವಗಳಲ್ಲಿ ಅಸಾಮ್ಯ ಸ್ಥಿತಿಯು ಯುಕ್ತವು

ಹೃದಯೇ ಸಂಸ್ಥಿತೋ ಜೀವೋ ವಿಶೇಷೇಣ ಹರಿಃ ತಥಾ ।
ಚಕ್ಷುರಾದಿಷು ರೂಪಾಣಿ ಜಾಗ್ರತ್ಕಾಲೆ ತಯೋಸ್ಸದಾ ।
ಬಹೂನಿ ಸಂತಿತಾನ್ಯೇವ ಯದ್ವೈಕೀ ಭಾವಮಾಪ್ನುಯುಃ ॥

ಹೀಗೆ ಸ್ವರೂಪತದಂಶಿಗಳಿಂದ ಜೀವರಿಗೆ ಶರೀರ ವ್ಯಾಪ್ತಿ ಅವ್ಯಾಪ್ತಿಯನ್ನು ದೃಷ್ಟಾಂತ ಪೂರ್ವಕವಾಗಿ ತೋರಿಸಿ ಶೃತಿ ಸಮನ್ವಯವನ್ನು ತೋರಿಸುವರು.

## ಸೂ॥ ಓಂ॥ ಗುಣಾದ್ವಾ ಲೋಕವತ್ ಓಂ॥ 26

ಪ್ರದೀಪ ದೃಷ್ಟಾಂತ ಪ್ರಕಾರದಿಂದಲೂ ಸಮ್ಯಗವ ಸ್ಥಾನ ಅಸಮ್ಯಗವಸ್ಥಾನ ವನ್ನು ಸಮರ್ಥಿಸುವರು ದೀಪದ ಪ್ರಭೆಯು ಹೇಗೆ ವ್ಯಾಪ್ತವೋ ಹಾಗೆ ಅಣು ಸ್ವರೂಪ ಜೀವರು ಪ್ರಕಾಶತ್ವದಿಂದಲೇ ವ್ಯಾಪ್ತಿಯೂ ಕೂಡುವುದು ದೇವತೆಗಳಿಗೆ ಅಂಶತೋ ವ್ಯಾಪ್ತತ್ವವೂ ಗುಣ ಶಬ್ದೋಕ್ತ ಪ್ರಕಾಶತ್ವ ವ್ಯಾಪ್ತಿಯು ಮನುಷ್ಯರು ಗಳಿಗೆ

ಯಥಾ "ಲೋಕಸ್ಯ ಪ್ರಕಾಶ ಗುಣೇನ ವ್ಯಾಪ್ತಿ ಜ್ಯೋತಿ ರೂಪೇಣಾ ವ್ಯಾಪ್ತಿಃ ಏವಂ ಚಿದ್ಗುಣೇನ ವ್ಯಾಪ್ತಿ ರ್ಜೀವ ರೂಪೇಣಾ ವ್ಯಾಪ್ತಿರಿತಿವಾ ॥

ದೀಪವು ಹೇಗೆ ಪ್ರಕಾಶ ರೂಪದಿಂದ ವ್ಯಾಪ್ತವೋ ಜ್ಯೋತಿರೂಪದಿಂದ ಅವ್ಯಾಪ್ತವೋ ಹಾಗೆ ಜೀವರಿಗೆ ಚಿದ್ಗುಣದಿಂದ ವ್ಯಾಪ್ತಿಯು ಜೀವ ರೂಪದಿಂದ ಅವ್ಯಾಪ್ತಿಯು.

17 ಸ್ಕಾಂದೆ **ಅಸಮ್ಯಕ್‌ಸಮ್ಯಗಿತಿ ಚ ಹ್ಯವಸ್ಥಾ ಬೇದತಃ ಸುರಾಃ।
ವ್ಯಾಪ್ತ್ಯ ವ್ಯಾಪ್ತಿ ಯುತಾಸ್ತ್ವನ್ಯೆ ಚಿದ್ಗುಣೇನೈವ ನಾನ್ಯಥಾ ॥**

ಒಂದೇ ಶರೀರದಲ್ಲಿ ಹೃದಯದಿಂದ ಬೇರೆ ಸ್ಥಳದಲ್ಲಿ ಅಂಶತ್ವದಿಂದ ಅಸಮ್ಯಕ್ ಅವಸ್ಥಾನವೂ ಹೃದಯದಲ್ಲಿ ಸಂಮ್ಯಕ್ ಅವಸ್ಥಾನವು ಹಾಗೆ ಅವಸ್ಥಾಭೇದದಿಂದ ವ್ಯಾಪ್ತಿ ಅವ್ಯಾಪ್ತಿವುಳ್ಳವರು ದೇವತೆಗಳು ಮನುಷ್ಯರು ಪ್ರಕಾರ ಗುಣದಿಂದ ವ್ಯಾಪ್ತರು (ಪರಿಜ್ಞಾನ ಯೋಗದಿಂದ)

18 **ಚಿದ್ಗುಣಸ್ಯ ಸ್ವರೂಪತ್ವಾತ್ತದ್ವ್ಯಾಪ್ತಿಶ್ಚೇತಿಯುಜ್ಯತೇ।**
**ಶಕ್ತಿಯೋಗಾತ್ಸುರಾಣಾಂ ತು ವಿವಿಧಾ ಚ ವ್ಯವಸ್ಥಿತಿರಿತಿ ॥**

ಗುಣವ್ಯಾಪ್ತಿಯಾದರೂ ಗುಣಿಗಳ ವಿಷಯದಲ್ಲಿ ಜ್ಞಾನಾಖ್ಯ ಗುಣವು ಸ್ವರೂಪವಾದ್ದರಿಂದ ಗುಣಿಯಿಂದ ಅಭಿನ್ನವಾದ ವ್ಯಾಪ್ತಿ ಸಿದ್ಧಿಯು ದೇವತೆಗಳಿಗೆ ಅಧಿಕ ಶಕ್ತಿತ್ವದಿಂದ ವಿವಿಧ ರೀತಿಯ ವ್ಯಾಪ್ತಿಯು ಯೋಗ್ಯವು.

– ಇತ್ಯುತ್ಕ್ರಾಂತ್ಯಧಿಕರಣವು –

## – ವ್ಯತಿರೇಕಾಧಿಕರಣಂ –

ಈ ಅಧಿಕರಣದಲ್ಲಿ ಜೀವನಿಗೆ ಏಕತ್ವ ಅನೇಕತ್ವರೂಪಕ ವಿಷಯದಲ್ಲಿ ಶ್ರುತಿ ವಿರೋಧವು ಪರಿಹರಿಸಲ್ಪಡುವುದು.

1 **ಸ ನಿತ್ಯೋ ನಿರವಯವಃ ಪುಣ್ಯಯುಕ್ಪಾಪಯುಕ್ಚ ಸ ಇಮಂ ಲೋಕಮಮುಂ ಚಾವರ್ತತೇ ಸ ವಿಮುಚ್ಯತೇ ಸ ಏಕಧಾ ನ ಸಪ್ತಧಾ ನ ದಶಧಾ ನ ಶತಧೇತಿ ಗೌಪವನಶ್ರುತಾವೇಕಸ್ಯಾ ಬಹುತ್ವಂ ಪ್ರತೀಯತೇ ॥**

ಹೀಗೆ ಗೌಪವನ ಶ್ರುತಿಯು ಜೀವನಿಗೆ ಏಕ ರೂಪಗಳನ್ನು ಹೇಳುವುದು

ಸ ಪಂಚಧಾಸ ಸಪ್ತದಾ ಸದಶಧಾ ಭವತಿ ಸಶತಧಾಚ ಸಹಸ್ರಧಾಚ ನಹಸ್ರಧಾ ಸಗಚ್ಛತಿ ಸಮುಚ್ಯತೆ ಇತಿ ॥ (ಹೀಗೆ) ಪ್ರಾರಾಶರ್ಯಾಯಣ ಶ್ರುತೌ ಬಹು ರೂಪತ್ವಂ ಪ್ರತೀಯತೆ ॥

2) **ಅತೋ ವಿರೋಧಂ ಪರಿಹರತಿ ।**

ಹೀಗೆ ವಿರೋಧವು, ಅದರ ಪರಿಹಾರವು ಮಾಡಲ್ಪಡುತ್ತದೆ.

## ಸೂ॥ ಓಂ॥ ವ್ಯತಿರೇಕೋ ಗಂಧವತ್ತಥಾ ಚ ದರ್ಶಯತಿ ಓಂ॥ 27

ಯಥಾ ಪುಷ್ಪಾದ್ಗಂಧಃ ನೃಥಗ್ಗಚ್ಛತ್ಯೇವ ಮುಂಸಿನೋಜೀವಾದಂಶಾಃ ಪೃಥಗಚ್ಛಂತಿ ॥

ಪುಷ್ಪಗಂಧವು ತನ್ನನ್ನೂ ಬೇರೆ ಅಂಶಗಳನ್ನಾಗಿಮಾಡಿ ವಿಭಾಗದಿಂದವ್ಯಾಪಕವಾಗುವುದೋ ಹಾಗೆ ಜೀವನು ಅಣು ಸ್ವರೂಪನಾದಾಗ್ಯೂ ಶಾಂಡಿಲ್ಯ ಶೃತಿಯಲ್ಲಿ ಹೇಳಿರುವಂತೆ ತನ್ನಂಶಗಳಿಂದ ವಿಭಾಗವಾಗುವನು ಈಶ್ವರ ಶಕ್ತಿಯಿಂದ ಸಾಧ್ಯವು ಗಂಧವು ವಾಯುವಿನಿಂದ ಎಳೆಯಲ್ಪಟ್ಟು ಬೇರೆ ಪ್ರದೇಶದಲ್ಲಿರುವ ಘ್ರಾಣೇಂದ್ರಿಯನನ್ನು ನೇರುವಂತೆ ಯೋಗಿ ಜೀವನು ತನ್ನಂಶಗಳಾದ ಅವಯವಗಳಿಂದ ನೆಳೆಯಲ್ಪಟ್ಟು ವಿವಿಧ ಸ್ಥಳಗಳನ್ನು ಹೊಂದುವುದು ಗಮನೋಕ್ತ ವಿಷಯವು ಸೂಕ್ಷ್ಮ ಅವಯವ ವಿಷಯವು

3 **ಅಧೈಕ ಏವ ಸರ್ ಗಂಧವದ್ವ್ಯತಿರಿಚ್ಯತೇ । ಅಧೈಕೀ ಬವತ್ಯಥ ಬಹ್ವೀ ಭವತಿ ತಂ ಯಥಾಯಥೇಶ್ವರಃ ಪ್ರಕುರುತೇ ತಥಾ ತಥಾ ಭವತಿ ಸೋಚಿಂತ್ಯಃ ಪರನೋ ಗರೀಯಾನಿತಿ ಶಾಂಡಿಲ್ಯ ಶೃತಿಃ ॥**

ವಿಭಕ್ತಾಂಶ ಬಾಹುಳ್ಯದಿಂದ ಬಹುರೂಪ ಸಂಭವವು ಜೀವನಿಗೆ ಗೌಪ್ಯವನ ಶೃತಿ ರೀತ್ಯಾ ಹೇಗೆ ಸಾಧ್ಯವು ಎಂದರೆ ಸ್ವರೂಪೈಕ್ಯದಿಂದ ಸಾಧ್ಯವು ಎಂದು ಪರಿಹಾರವು. ಯೋಗಿ ಜೀವನು ಸ್ವರೂಪತಃ ಒಬ್ಬನೇ ಆದರೂ ಗಂಧ ಗುಣದಂತೆ ಬಹುರೂಪನಾಗಿ ಪುನಃ ಒಂದಾಗುತ್ತಾನೆ ಮತ್ತೆ ಬಹು ರೂಪನಾಗುತ್ತಾನೆ. ಈಶ್ವರನ ಅಚಿಂತ್ಯ ಶಕ್ತಿಯಿಂದ ಆತನ ಇಚ್ಛೆಯಿಂದಲೇ ಸಾಧ್ಯವು. ಈಶ್ವರನು ಅಸಾಧಾರಣ ಶಕ್ತಿಯುಕ್ತನು

ಶ್ರೇಷ್ಠನು   ಎಲ್ಲರಿಗಿಂತ ಉತ್ತಮನಾಗಿ ಲೋಕ ವಿಲಕ್ಷಣನು.

14. **ಅಚಿಂತ್ಯಯೇಶಶಕ್ತ್ಯೈವ ಹ್ಯೇಕೋಽವಯವ್ವರ್ಜಿತಃ । ಆತ್ಮಾನಂ ಬಹುಧಾ ಕೃತ್ವಾ ಕ್ರೀಡತೇ ಯೋಗ ಸಂಪದೇತಿ ಚ ಪಾದ್ಮೆ ॥**

ಈಶ್ವರ ಪ್ರಸಾದ ಗತ ಧ್ಯಾನೋಪಾಯಾಖ್ಯ ಸಂಪತ್ತಿನಿಂದ ಯೋಗಿ ಜೀವನು ಅವಯವಿಯಲ್ಲದವನಾದರೂ ತನ್ನನ್ನೂ ಬಹು ಸಂಖ್ಯಾಕನನ್ನಾಗಿ ಮಾಡಿಕೊಂಡು ಯೋಗ ಸಂಪತ್ತಿನಿಂದ ಕ್ರೀಡಿಸುವನು.

– ಇತಿ ವ್ಯತಿರೇಕಾಧಿಕರಣವು –

## – ಪೃಥಗಧಿಕರಣವು –

ಈ ಅಧಿಕರಣದಲ್ಲಿ ಜೀವನಿಗೆ ಪರಮಾತ್ಮನಿಂದ ಅಭಿನ್ನತ್ವಾದಿ ವಿಷಯ ಶ್ರುತಿ ವಿರೋಧವು ಪರಿಹಾರ ಮಾಡಲ್ಪಡುತ್ತದೆ.

1. **ತತ್ವಮಸಿ** (ಛಾ-6-8-7) “**ಅಹಂ ಬ್ರಹ್ಮಾಸ್ಮಿ** (ಬೃ-3-4-10) **ಇತ್ಯಾದಿಷು ಜೀವಸ್ಯ ಪರೇಣಾಭೇದಃ ಪ್ರತೀಯತೆ** । “**ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ** ಶ್ವೆ-6-13) **ದ್ವಾಸು ಪರ್ಣಾ** (ಶ್ವೆ- 4-6) **ಇತ್ಯಾದಿಷುಭೇದಃ** ॥

ಈ ಶ್ರುತಿಗಳಲ್ಲಿ ಜೀವನಿಗೆ ಪರಮಾತ್ಮನಿಂದ ಅಭೇದವೂ ಮತ್ತು ಭೇದವೂ ಹೀಗೆ ವ್ಯತ್ಯಸ್ತವಾಗಿ ಶ್ರುತವಾಗುತ್ತದೆ

2. ಅತ **ಉಚ್ಯತೆ**—ಅದಕ್ಕಾಗಿ ಹೇಳಿದೆ.

**ಸೂ॥ ಓಂ॥ ಪೃಥಗುಪದೇಶಾತ್ ಓಂ॥ 28**

ಜೀವನು ಪರಮಾತ್ಮನಿಂದ ಅತ್ಯಂತ ಭಿನ್ನನು ಹಾಗೆ ಕೌಶಿಕ ಶ್ರುತಿಯಲ್ಲಿ ಭಿನ್ನೋ ಅಚಿಂತ್ಯ ಎಂದು ಉಪದೇಶವಾಗಿರುವುದು.

"ಭಿನ್ನೋಽಚಿಂತ್ಯ · ಪರಮೋ ಜೀವ ಸಂಘಾತ್ಪೂರ್ಣಃ ಪರೋ ಜೀವ ಸಂಘೋಹ್ಯ ಪೂರ್ಣಃ । ಯತಸ್ತ್ವಸೌ ನಿತ್ಯ ಮುಕ್ತೋಹ್ಯಯಂಚ ಬಂಧಾನ್ಮೋಕ್ಷಂ ತತ ಏವಾಭಿವಾಂಛೇತ । ಇತಿ ಸೋಪಪತ್ತಿಕ ಕೌಶಿಕ ಶೃತೇರ್ಭಿನ್ನ ಏವ ಜೀವಃ।

ಶ್ರೀ ಪರಮಾತ್ಮನು ಜೀವರಿಂದ ಪೂರ್ಣವಾಗಿ ತಿಳಿಯಲು ಅಸಾಧ್ಯನು. ಜೀವ ಸಂಘದಿಂದ ಪೂರ್ಣಗುಣತ್ವದಿಂದ ಅತ್ಯಂತ ಉತ್ತಮನು. ಈ ಹರಿಯು ನಿತ್ಯ ಮುಕ್ತನು ಜೀವನಾದರೋ ಸಂಸಾರ ಹೊಂದಿಸಲ್ಪಟ್ಟವನಾಗಿ ಬಂಧದಿಂದ ಮುಕ್ತಿಯನ್ನು ಪರಮಾತ್ಮ ಪ್ರಸಾದದಿಂದ ಹೊಂದಲು ಇಚ್ಛಿಸುವನು. ಹೀಗೆ ಜೀವರಿಗಿಂತ ವಿರುದ್ಧ ಧರ್ಮವುಳ್ಳದ್ದರಿಂದ ಶ್ರೀ ಪರಮಾತ್ಮನು ಜೀವರಿಂದ ಬೇರೆಯೇ.

## ಸೂ॥ ಓಂ॥ ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್ ಓಂ॥ 29

ಸರ್ವಜ್ಞನಾದ ಪರಮಾತ್ಮನಲ್ಲಿ "ಸರ್ವಂಖಲ್ವಿದಂ ಬ್ರಹ್ಮ" ಎಂದು ಜಗತ್ತಿನಿಂದ ಅಭೇದವನ್ನು ಹೇಳಿದೆ ಹಾಗೆಯೇ "ತತ್ವಮಸಿ"ಎಂಬುದು ಜೀವರಿಗೆ ಬಹ್ಮೈಕ್ಯೋಕ್ತಿಯು ಸಾಧ್ಯವು ಹೇಗೆಂದರೆ ಜೀವನು ಬ್ರಹ್ಮನ ಗುಣಸಾದೃಶ್ಯ ಅಲ್ಪ ಜ್ಞಾನಾನಂದಾದಿ ಗುಣಸ್ವರೂಪ ನಿಮಿತ್ತದಿಂದ ಹೇಳಲ್ಪಡುವನು.

ಜ್ಞಾನಾನಂದಾದಿ ಬ್ರಹ್ಮಗುಣಾ ಏವಾಸ್ಯಯತಃ ಸಾರಂಃ ಸ್ವರೂಪಮತೋ ಭೇದ ವ್ಯಪದೇಶಃ । ಯಥಾ ಸರ್ವಗುಣಾತ್ಮಕತ್ವಾತ್ಸರ್ವಾತ್ಮಕತ್ವಂ ಬ್ರಹ್ಮಣ ಉಚ್ಯತೆ" ಸರ್ವಂ ಖಲ್ವಿದಂ (ಛಾ-3-14-1) ಇತಿ.

ಜೀವನಿಗೆ ಬ್ರಹ್ಮ ಗುಣಗಳ ಸದೃಶ ಗುಣ ಸ್ವರೂಪವು ಈ ವಿವಕ್ಷೆಯಿಂದ ಜೀವನಿಗೆ ಬ್ರಹ್ಮನಿಂದ ಅಭೇದೋಕ್ತಿಯು ಗೌಣವೃತ್ತಿಯು. ಅಭೇದಾಖ್ಯಾಭಿ

ಬ್ರಹ್ಮ ಎಂಬಲ್ಲಿ ಪ್ರೇಷ್ಠ ಜ್ಞಾನ ನಿಮಿತ್ತದಿಂದ ಪ್ರಾಜ್ಞ ಶಬ್ದೋಕ್ತ ಬ್ರಹ್ಮನು (ಸರ್ವಾತ್ಮಕತ್ವಂ) ಜಡ ಜಗವ ಬೇಧದಿಂದ ಜಗತ್ತೆಂದು ಹೇಳಲ್ಪಟ್ಟಿದೆ. ಈ ಬ್ರಹ್ಮವು ಅತಿ ಸಾಮೀಪ್ಯದಿಂದ ಸರ್ವಗುಣ ಪೂರ್ಣತ್ವದಿಂದಲೂ ಪರಮಾತ್ಮನಲ್ಲಿ ಮುಖ್ಯ ವೃತ್ತಿಯು ವಾಕ್ಯಾನ್ವಯಾಭಿಪ್ರಾಯದಿಂದ ಜಗತ್ತಿಗೆ ಗೌಣ ವೃತ್ತಿಯು.

4. ಭವಿಷ್ಯತ್ಪುರಾಣೇಚ—**ಭಿನ್ನಾ ಜೀವಾಃ ಪರೋಭಿನ್ನಸ್ತಥಾಪಿ ಜ್ಞಾನರೂಪತಃ ಪ್ರೋಚ್ಯಂತೇ ಬ್ರಹ್ಮರೂಪೇಣ ವೇದವಾದೇಷು ಸರ್ವಶ ಇತಿ ||**

ಜೀವರು ಪರಮಾತ್ಮನಿಂದ ಅತ್ಯಂತ ಭಿನ್ನರು ಮತ್ತು ಪರಮಾತ್ಮನೂ ಜೀವರಿಗಿಂತ ಭಿನ್ನನೂ ಆದಾಗ್ಯೂ ಜ್ಞಾನ ರೂಪದಿಂದ ಬ್ರಹ್ಮನೆಂದು ಈ ಎರಡು ವಸ್ತುಗಳೂ ವೇದಾದಿಗಳಲ್ಲಿ ಪೇಳಲ್ಪಡುತ್ತವೆ ಚಿದ್ರೂಪ ಅಲ್ಪ ಸಾಮ್ಯವು ಮುಖ್ಯ ಕಾರಣವು ಸ್ವರೂಪೈಕ್ಯವಲ್ಲ

– ಇತಿ ಪೃಥಗಧಿಕರಣಂ –

**– ಯಾವದಧಿಕರಣಂ –**

**ಈ ಅಧಿಕರಣದಲ್ಲಿ ಜೀವ ನಿತ್ಯತ್ವ ವಿಷಯ ಶೃತಿ ವಿರೋಧವು ಪರಿಹರಿಸಲ್ಪಡುವುದು. ಜೀವನಿಗೆ ಪರಮಾತ್ಮನಿಂದ ಉತ್ಪತ್ತಿಯನ್ನು ಹೇಳಿದೆ. ಆದ್ದರಿಂದ ಆತನಿಗೆ ಅನಾದಿಕರ್ಮ ಸಂಬಂಧವು ಯುಕ್ತವಲ್ಲ. ಹಾಗೆಯೇ ಆತನಿಗೆ ನಾಶವನ್ನು ಹೇಳಿರುವುದರಿಂದ ಅವಿನಾಶತ್ವ ರೂಪ ಮುಕ್ತಿಯು ಸಾಧ್ಯವಲ್ಲವೆಂದು ಪೂರ್ವ ಪಕ್ಷವು**

**ಜೀವಸಾಪ್ಯುತ್ಪತ್ತಿರುಕ್ತಾ । ಅತಸ್ತಸ್ಯ "ಸೋಽನಾದಿನಾ ಪುಣ್ಯೇನ ಪಾಪೇನ ಚಾನುಬದ್ಧಃ" ಪರೇಣನಿರ್ಮುಕ್ತೋ ಅನಂತ್ಯಾಯ ಕಲ್ಪತೇ ಇತ್ಯನಾದಿ ಕರ್ಮ ಸಂಬಂಧ ಆನಂತ್ಯಾ ವ್ಯಾಪ್ತಿಶ್ಚ ನಯುಜ್ಯತೇ ಇತಿ ।**

ಎಂಬ ಶ್ರುತಿಗಳು ಪೂರ್ವ ಪಕ್ಷಕ್ಕೆ ಆಧಾರಗಳು

ಅತ ಅಹ—ಅದಕ್ಕಾಗಿ ಹೇಳಿದೆ

## ಸೂ॥ ಓಂ॥ ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತ ದ್ದರ್ಶನಾತ್ ಓಂ॥ 30

ಎಲ್ಲಿಯವರೆಗೆ ಶ್ರೀಪರಮಾತ್ಮ ನಿತ್ಯ ಸಿದ್ಧನೋ ಅದುವರೆಗೆ ನಿತ್ಯತ್ವವು ಸಿದ್ಧವು ಆದ್ದರಿಂದ ದೋಷ ಶಂಕೆಯಿಲ್ಲ "ನಿತ್ಯೋ ಜೀವಃ ಎಂಬ ಶೃತಿಯಲ್ಲಿಯೂ ಸ್ಮೃತಿಯಲ್ಲಿಯೂ ಆತ್ಮಾನಿತ್ಯ ಜೀವ ಇತಿ ಭಾಗವತದಲ್ಲಿಯೂ ಅವಿನಾಶಿತ್ವವೂಮುಕ್ತಿಯೂ ಪ್ರಮಾಣಸಾಧನಗಳು. ಜೀವನು ಅನಾದಿಬಂಟಕ ಪುಣ್ಯಾಪಾಪಗಳಿಂದ ಪರಮಾತ್ಮನಿಂದ ಬಂಧಿಸಲ್ಪಟ್ಟವನಾಗಿ ಅವನ ಅನುಗ್ರಹದಿಂದಲೇ ಬಂಧ ಮುಕ್ತನಾಗಿ ವಿನಾಶವಿಲ್ಲದ ಮೋಕ್ಷ ಪದವಿಯನ್ನು ಪ್ರಸಾದ ರೂಪವಾಗಿ ಹೊಂದುವನು

3 **ನಿತ್ಯಃಪರೋ ನಿತ್ಯೋ ಜೀವೋಽ ನಿತ್ಯಾಸ್ತ್ವನ್ಯಧಾತವಃ ।**
**ಅತ ಉತ್ಪದ್ಯತೇ ಮ್ರಿಯತೇ ವಿಮುಚ್ಯತೇ ಚ ॥**

**ಇತಿ ಅಗ್ನಿ ವೇಶ್ಯ ಶೃತಿ**

ಅಗ್ನಿವೇಶ್ಯ ಶೃತಿಯೂ ಬಿಂಬ ಭೂತನಾದ ಶ್ರೀ ಪರಮಾತ್ಮನು ನಿತ್ಯನುಃ ಜೀವನೂ ಪ್ರತಿಬಿಂಬ ಉಪಾಧಿ ಭೂತನಾಗಿ ಜೀವ ಪ್ರಕಾಶ ಸ್ವರೂಪವೂ ನಿತ್ಯವು, ಜೀವನ ಬಾಹ್ಯದೇಹವು ಅನಿತ್ಯವಾದ್ದರಿಂದ ನಾಶವುಳ್ಳವುಗಳು. ಹೀಗೆ ಶೃತಿಯು ಉಪಾಧಿ ವಿಷಯಕವಾದ್ದರಿಂದ ಸ್ವರೂಪತ್ವ ವಿನಾಶವಿಲ್ಲದವನಾಗಿ ದೇಹ ಬಂಧನದಿಂದ ಮುಕ್ತನಾಗಿ ಮೋಕ್ಷದಲ್ಲಿ ನಿತ್ಯ ಭಾಗಿಯೂ ಆಗುವನು.

4. **ಆತ್ಮಾ ನಿತ್ಯಃ ಸುಖದುಃಖೇತ್ವನಿತ್ಯೇ ಜೀವೋ ನಿತ್ಯೋ ಧಾತುರಸ ತ್ವನಿತ್ಯ ಇತಿ ಭಾರತೇ ॥**

ಆತ್ಮನು ನಿತ್ಯನು ಸುಖದುಃಖಗಳು ಅನಿತ್ಯಗಳು ಜೀವನು ನಿತ್ಯನು (ಸ್ವರೂಪತಃ ಆತನ ದೇಹಗಳು ಅನಿತ್ಯಗಳು ಎಂದು ಭಾರತದಲ್ಲಿ ಹೇಳಿದೆ.

**ಇತಿ ಯಾವದಧಿಕರಣಂ**

## ಪುಂಸ್ತ್ವಾಧಿಕರಣಂ

ಈ ಅಧಿಕರಣದಲ್ಲಿ ಜೀವನಿಗೆ ಆನಂದಾದಿರೂಪತ್ವದ ಭಾವ ರೂಪತ್ವ ಶ್ರುತಿ ವಿರೋಧವು ಪರಿಹರಿಸಲ್ಪಡುವುದು

1 **ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ (ಪ್ರ 4-11) 'ಸ ಆನಂದ ಸಪರೇಃಣಾಮುಂ ಲೋಕಂ ನೀಯತೆ ಸ ಮುಚ್ಯತೆ" ಇತಿ ಜೀವಸ್ಯ ಜ್ಞಾನಾನಂದಾದಿ ರೂಪತ್ವ ಮುಚ್ಯತೆ ಸ ಮುಖಾ ದ್ವಿ ಮುಕ್ತ ಆನಂದೀ ಭವತಿ ಸೋಽಜ್ಞಾನಾದ್ವಿಮುಕ್ತೋ ಜ್ಞಾನೀಭವತಿ ಸೋಽಬಲಾದ್ವಿಮುಕ್ತೋ ಬಲೀ ಭವತಿ ಸನಿತ್ಯೋ ನಿರಾತಂಕೋಽವತಿಷ್ಠತ ಇತಿ ಪೈಂಗಿಶ್ರುತಾವನಾನಂ ದಾದಿ ಸ್ವರೂಪಂ ಪ್ರತೀಯತೇ ।**

ಮೊದಲನೆಯ ಶ್ರುತಿಯು ಜೀವನಿಗೆ ಜ್ಞಾನಾನಂದಾದಿ ರೂಪತ್ವವನ್ನು ಹೇಳು ವುದು ವಿಜ್ಞಾನ ಸ್ವರೂಪ ಜೀವನು ಚಕ್ಷುರಾದ್ಯಾತದ್ವಿಷಯ ರೂಪಗಳು ಪೃಧಿ ವ್ಯಾದಿ ಮಾತ್ರಗಳು,ಅಭಿಮಾನಿ ಸರ್ವದೇವತೆಗಳು ಕೂಡ ಯಾವ ಬ್ರಹ್ಮನಲ್ಲಿ ಸಾವ್ಯ ದಿಂದಿರುವರೋ ಆ ಅಕ್ಷರ ಶಬ್ದ ವಾಚ್ಯ ಪುರುಷನನ್ನು ಚೆನ್ನಾಗಿ ತಿಳಿದ ಪುರುಷನು ಸರ್ವಜ್ಞನಾಗಿ ಶ್ರೇಷ್ಠ ಪುರುಷ ಪರಬ್ರಹ್ಮನನ್ನು ಪ್ರವೇಶಿಸುವನು

ಎರಡನೆಯ ಶ್ರುತಿ—ಜೀವನು ಪೂರ್ವದಲ್ಲಿ ಅನಭಿವ್ಯಕ್ತಾನಂದ ರೂಪನಾಗಿ ಮುಕ್ತಿಯಲ್ಲಿ ಅಭಿವ್ಯಕ್ತಿ ಆನಂದ ರೂಪವಾಗುತ್ತಾನೆ ಅಜ್ಞಾನ ನಿವಾರಣೆಯಿಂದ ಜ್ಞಾನಿಯಾಗುವನು. ಅಬಲದಿಂದ ಬಲವಂತನಾಗುತ್ತಾನೆ, ಆ ಜೀವನು ಮುಕ್ತ ನಾಗಿ ನಿರ್ಭಯನಾಗಿ ನಿತ್ಯ ಪರಮಾತ್ಮನಲ್ಲಿರುತ್ತಾನೆ.

2. ಜೀವನು ಜ್ಞಾನಾನಂದಾದಿ ರೂಪನಲ್ಲ,(ಶೃತಿ ವಾಕ್ಯಕ್ಕೆ ಅನುಭವಾಭಾವ ದಿಂದ ಆಕ್ಷೇಪವು—ಎಂದರೆ

### ಸೂ|| ಓಂ|| ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿ ಯೋಗಾತ್ ಓಂ|| 31

ಹೆಣ್ಣು ಗಂಡು ದೇಹಗಳಿಗೆ ಅಪತ್ಯೋತ್ಪತ್ತಿಯು ಜೀವ ಸ್ವರೂಪವಾದರೂ ಕಾಲ ವಿಶೇಷದಲ್ಲಿ ಮಾತ್ರ ಆ ಶಕ್ತಿ. ಹಾಗೇ ಪೂರ್ವದಲ್ಲಿಯೂ ಜ್ಞಾನಾನಂದಾದಿ ಗುಣಗಳು ಇದ್ದಾಗ್ಯೂ ಮುಕ್ತ್ಯನಂತರ ಅಭಿವ್ಯಕ್ತಿಯು ಆದ್ದರಿಂದ ಆನಂದಾದಿ ರೂಪವು ಸಿದ್ಧವು. ವಿರೋಧವಿಲ್ಲ

ಯಥಾಬಾಲಸ್ಯ ಸದೇವ ಪುಂಸ್ತ್ವಂ ಯೌವನೇಭಿವ್ಯಜ್ಯತೆ ಏವಂ ಸತಾ
ಮೇವಾನಂ ದಾದೀನಾಂ ವ್ಯಕ್ತ್ಯಪೇಕ್ಷಯಾತದುಕ್ತಿಃ ||

ಬಾಲ್ಯ ದೇಹದಲ್ಲಿ ಅಪತ್ಯೋತ್ಪಾದನ ಶಕ್ತಿಯು ಇದ್ದರೂ ಹೇಗೆಗುಪ್ತವೋ ಮತ್ತು ಪ್ರಾಯದಲ್ಲಿಅಭಿವ್ಯಕ್ತವೋ,ಹಾಗೆಯೇ ಜೀವನಿಗೆ ಸ್ವರೂಪಾನಂದಾದಿಗುಣಗಳುಪ್ರಸನ್ನಾದ ಈಶ್ವರ ಪ್ರಸಾದದಿಂದ ಹೊಂದಿದ ಮುಕ್ತ್ಯವಸ್ಥೆಯಲ್ಲಿ ಅಭಿವ್ಯಕ್ತಿ ವಾಗುತ್ತದೆ

ಹಿಂದಿಲ್ಲದಿದ್ದ ಗುಣಗಳಿಗೆ ಅಭಿವ್ಯಕ್ತಿಯು ಯಾಕೆ ಆಗಬಾರದೆಂದರೆ—

**3. ಬಲಮಾನಂದ ಓಜಶ್ಚ ಸಹೋಜ್ಞಾನಮನಾಕುಲಂ ।**
**ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋರಿತಿ**
**ಗೌಪವನಶ್ರುತಿಃ ||**

ಆನಂದ, ಬಲ, ಪರಾಕ್ರಮ, ಸಹನ ಶಕ್ತಿ ಸಂಶಯವಿಲ್ಲದ್ದು ಮತ್ತು ದೃಢ ಜ್ಞಾನ ಇವುಗಳು ಜೀವನ ಸ್ವರೂಪಗಳಾದಾಗ್ಯೂ ಮುಕ್ತಿಯಲ್ಲಿ ಪರಮಾತ್ಮ ಪ್ರಸಾದದಿಂದಲೇ ಪ್ರಕಟವಾಗುವುದು. ಪೂರ್ವದಲ್ಲಿಲ್ಲದ ಗುಣಗಳು ವ್ಯಕ್ತವಾಗುವುದಿಲ್ಲ. ಅಲ್ಪ ಪರಿಮಾಣವನ್ನು ಮಹತ್ವ ಪರಿಮಾಣವನ್ನಾಗಿ ಪರಮಾತ್ಮನು ಮಾಡುವನು.

## ಸೂ|| ಓಂ|| ನಿತ್ಯೋಪಲಬ್ಧ್ಯನುಪಲಬ್ಧಿ ಪ್ರಸಂಗೋನ್ಯತರ ನಿಯಮೋವಾನ್ಯಥಾ ಓಂ|| 32

ಜೀವನಿಗೆ ಆನಂದಾದಿರೂಪವನ್ನು ಅಂಗೀಕರಿಸಲು ಉಪಾಧಿಯಿಂದ ಆವರಕವನ್ನು ಅಂಗೀಕರಿಸಬೇಕು. ಇಲ್ಲದಿದ್ದಲ್ಲಿ ಜೀವನಿಗೆ ನಿತ್ಯೋಪಲಬ್ಧಿ ಅನುಪಲಬ್ಧಿ ಪ್ರಸಂಗವು ಆದ್ದರಿಂದ ಜೀವರ ಸ್ವರೂಪಾನಂದಾದಿಗಳು ಉಪಾಧಿಯಿಂದಾಪರಿಸಲ್ಪಟ್ಟು ಪರಮಾತ್ಮ ಪ್ರಸಾದದಿಂದ ಬಿಡುಗಡೆಯಾಗಿ ಮುಕ್ತನಾಗುವನು.

ವ್ಯಕ್ತ್ಯನಂಗೀಕಾರೆ ದೇವಾನಾಂ ನಿತ್ಯೋಪಲಬ್ಧಿರಾನಂದಾದೀ ನಾಮಸುರಾಣಾಂ ನಿತ್ಯಾಸುಪಲಬ್ಧಿ ಪುನರ್ಮಷ್ಯಾಣಾಂ ಚ ನಿತ್ಯೋಪಲಬ್ಧ್ಯನುಪಲಬ್ಧೀ ಪ್ರಸಜ್ಯೇತೆ ॥

ಮುಕ್ತಿಯಲ್ಲಿ ಮುಕ್ತಿಯೋಗ್ಯರಿಗೆ ನಿತ್ಯಾನಂದಾನುಭವವೂ, ತಮೋ ಯೋಗ್ಯರಿಗೆ ಸ್ವರೂಪ ದುಃಖಾನುಭವವೂ ಮಧ್ಯಮ ಜೀವರುಗಳಿಗೆ ಸುಖದುಃಖಮಿಶ್ರಾನುಭವವೂ ಪ್ರತಿಬಂಧ ಕಾರಣದಿಂದ ಬಿಡುಗಡೆಯಾದ ಮೇಲೆಯೇ ನಿಯಮವು.

5. **ನಿತ್ಯಾನಂದೋ ನಿತ್ಯಜ್ಞಾನೋ ನಿತ್ಯಬಲಃ ಪರಮಾತ್ಮಾ ನೈವ ಮಸುರಾ ಏವಮಸೇವಂ ಚ ಮನುಷ್ಯಾ ಇತಿ ಹ್ಯಾಗ್ನಿವೇಶ್ಯಶ್ರುತಿಃ**

ಪರಮಾತ್ಮನು ಯಥಾರ್ಥ ಜ್ಞಾನಾನಂದಾದಿ ಸ್ವರೂಪನು. ಇದಕ್ಕೆ ವ್ಯತಿರಿಕ್ತ ಸ್ವರೂಪವು ಅಸುರರದು. ಮನುಷ್ಯರಾದರೊಹಾಗೆ ಹೀಗೆ ದ್ವಿಸ್ವರೂಪರು

ಜೀವರಿಗೆ ಆನಂದತ್ವಾದಿ ಸ್ವರೂಪತ್ವ ಅಂಗೀಕರಿಸದಿದ್ದಲ್ಲಿ,ಶ್ರುತಿ ವಿರೋಧವನ್ನು ಎದುರಿಸಬೇಕು ಆದ್ದರಿಂದ ಅಂಗೀಕರಿಸಲೇಬೇಕು.

6. **ನಿತ್ಯಾನಂದ ಜ್ಞಾನಬಲಾ ದೇವಾ ನೈವಂ ತು ದಾನವಾಃ ।**
**ದುಃಖೋಪಲಬ್ಧಿ ಮಾತ್ರಾಸ್ತೇ ಮಾನುಷಾಸ್ತೂಭಯಾತ್ಮಕಾಃ ॥**
**ಭವಿಷ್ಯತ್ಪುರಾಣೇ ಇತಿ**

ದೇವತೆಗಳು ಮುಕ್ತಿ ಯೋಗ್ಯರು ರಾಕ್ಷಸರು ತಮೋ ಯೋಗ್ಯರು ಈ ಯೋಗ್ಯತ್ವವು ಸಂಸಾರದಲ್ಲಿಯೂ ಇರುವುದು. ಮಧ್ಯಮ ಮನುಷ್ಯರು ಉಭಯಾತ್ಮಕರು ಅಂದರೆ ಸುಖ ದುಃಖ ಮಿಶ್ರಸ್ವರೂಪರು.

7. **ತೇಷಾಂ ಯದನ್ಯಥಾ ದೃಶ್ಯಂ ತದುಪಾಧಿಕೃತಂ ಮತಂ ।**
**ವಿಜ್ಞಾನೇನಾತ್ಮಯೋಗ್ಯೇನ ನಿಜರೂಪೇ ವ್ಯವಸ್ಥಿತಿಃ ॥**

ದೇವತೆಗಳಿಗೆ ಸ್ವರೂಪದಿಂದ ಬೇರೆ ದೃಶ್ಯತ್ವವು ಉಪಾಧಿಕೃತವು ತಮಗೆ ಯೋಗ್ಯವಾದ ವಿಜ್ಞಾನದಿಂದ ನಿಜರೂಪ ಸ್ಥಿತಿಯು

8 **ಸಮ್ಯಕ್ ಜ್ಞಾನಂತು ದೇವಾನಾಂ ಮನುಷ್ಯಾಣಾಂ ವಿಮಿಶ್ರಿತಂ ।
ವಿಪರೀತಂತು ದೈತ್ಯಾನಾಂ ಜ್ಞಾನ ಸ್ಯೈವಂವ್ಯವಸ್ಥಿತಿಃ ॥ ಇತಿ**

ಜ್ಞಾನದ ವ್ಯವಸ್ಥಿತಿಯು—ಮುಕ್ತ ಯೋಗ್ಯರಿಗೆ ಸಮ್ಯಕ್ ಜ್ಞಾನವು ದೈತ್ಯರಿಗೆ ವಿಪರೀತ ಜ್ಞಾನವು ಮಿಶ್ರ ಮನುಷ್ಯರಿಗೆ ಮಿಶ್ರ ಜ್ಞಾನವು

– ಇತಿ ಪುಂಸ್ತ್ವಾಧಿಕರಣವು –

## – ಕರ್ತೃತ್ವಾಧಿಕರಣಂ –

**ಈ ಅಧಿಕರಣದಲ್ಲಿ ಜೀವ ಕರ್ತೃತ್ವ ಶ್ರುತಿ ವಿರೋಧವು ಪರಿಹರಿಸಲ್ಪಡುವುದು.**

1. **ಈಶ್ವರಸ್ಯೈವ ಕರ್ತೃತ್ವಮುಕ್ತಂ ಯತ್ಕರ್ಮ ಕುರುತೇ ತದಭಿ ಸಂಪದ್ಯತ (ಬೃ-6-4-5) ಇತಿ ಜೀವಸ್ಯೋಪಲಭ್ಯತೇ ।**

"ನಾನ್ಯಃ ಕರ್ತಾ" ಎಂಬ ಶ್ರುತಿಯಲ್ಲಿ ಅನ್ಯರಲ್ಲಿ ನಿಷೇಧದ ರೂಪವಾದ ಕರ್ತೃತ್ವವು ಶ್ರೀವಿಷ್ಣುವಿನಲ್ಲಿಯೇ ಎಲ್ಲಾ ಕರ್ತೃತ್ವವೆಂದು ಹೇಳುವುದು. ಆದರೆ ಮೇಲಿನ ಶ್ರುತಿಯು ಜೀವನು ಯಾವ ಕರ್ಮ ಮಾಡುವನೋ ಆ ಕರ್ಮದ ಫಲವನ್ನು ಅನುಭವಿಸುವನು. ಎಂದು ಜೀವನಿಗೆ ಸ್ವತಂತ್ರ ಕರ್ತೃತ್ವವು ಫಲಾನುಭವರೂಪವಾಗಿ ಹೇಳಿರುವುದು ಆದ್ದರಿಂದ ಶ್ರೀ ಪರಮಾತ್ಮನ ಕರ್ತೃತ್ವದಲ್ಲಿ ಸಂಶಯವು.

2. **ಅತ ಆಹ—ಅದಕ್ಕಾಗಿ ಹೇಳಿದೆ.**

## ಸೂ|| ಓಂ|| ಕರ್ತಾ ಶಾಸ್ತ್ರಾರ್ಥವತ್ವಾತ್ ಓಂ|| 33

ಜೀವಸ್ಯ ಕರ್ತೃತ್ವಾಭಾವೆ ಶಾಸ್ತ್ರಸ್ಯಾಪ್ರಯೋಜಕತ್ವ ಪ್ರಾಪ್ತೇರ್ಜೀವೋ "ಪಿಕರ್ತಾ||

ಜೀವನೂ ಕರ್ತನೇ ಹೌದು ವಿಧಿನಿಷೇಧ ರೂಪ ಶಾಸ್ತ್ರ ಪ್ರಯೋಜನ ಫಲ ವಿರುವಿದರಿಂದಲೂ ಅನ್ಯಥಾ ಫಲ ವ್ಯರ್ಥರೂಪ ಪ್ರಸಂಗದಿಂದಲೂ ಜೀವನಿಗೂ ಕರ್ತೃತ್ವವು ಉಂಟು "ಯಜೇತಸ್ವರ್ಗಕಾಮಃ" "ಬ್ರಾಹ್ಮಣೋನ ಹಂತವ್ಯ ಇತ್ಯಾದಿ ಶೃತಿ ವಾಕ್ಯಗಳಲ್ಲಿ ಫಲವಿರುವುದರಿಂದಲೂ ವಿಧಿ ನಿಷೇಧರೂಪ, ಶಾಸ್ತ್ರಗಳು ಅರ್ಥವಿಲ್ಲದ್ದಾಗದಿರಲು ಜೀವರಿಗೆ ಕರ್ತೃತ್ವವನ್ನು ಅಂಗೀಕರಿಸಲ್ಪಡುವುದರಿಂದ ಜೀವರು ಕರ್ತೃಗಳೇ.

## ಸೂ|| ಓಂ|| ವಿಹಾರೋಪದೇಶಾತ್ ಓಂ|| 34

ಮುಕ್ತಿಯಲ್ಲಿಯೂ ಜೀವನು "ಜಕ್ಷನ್, ಕ್ರೀಡನ್" ಎಂಬುದಾಗಿ ವಿಹಾರ ಕರ್ತೃತ್ವವನ್ನು ಹೇಳಿರುವುದರಿಂದ ಜೀವನೂ ಪಾರಮಾರ್ಥಿಕವಾಗಿ ಕರ್ತನೇ ಕಾಲ್ಪನಿಕ ವಾಗಿಯಲ್ಲ.

ಸ್ತ್ರೀಭಿಃ ವಾ ಯಾನೈರ್ವಾ ಜ್ಞಾತಿಭಿರ್ವಾ" (ಛಾ–8-12-3) ಇತ್ಯಾದಿ ಮೋಕ್ಷೇ ಪಿ ||

"ಸೋ"ಶ್ನುತೆ ಸರ್ವಾನ್ಕಾ ಮಾನ್ ಸ್ತ್ರೀಭಿಃ ಇತ್ಯಾದಿ ಶೃತಿಗಳು ಜೀವನಿಗೆ ಸಾಕ್ಷಾತ್ತಾಗಿ ವಿಹಾರವನ್ನು ಹೇಳುವುದರಿಂದ ಜೀವನಿಗೆ ತತ್ವತಃ ಕರ್ತೃತ್ವವುಂಟು ಕಾಲ್ಪನಿಕವೆಂದು ಹೇಳಲಾಗದು 'ಬ್ರಹ್ಮವಿದಾಪ್ನೋತಿಪರಂ" ಎಂದು ಪುರುಷಾರ್ಥ ವನ್ನು ಹೇಳಿದೆ.

## ಸೂ|| ಓಂ|| ಉಪಾದಾನಾತ್ ಓಂ|| 35

ಸಾಧನಾದ್ಯುಪಾದಾನಪ್ರತೀತೇಶ್ಚ ।

ಜೀವನಿಗೆ ಮೋಕ್ಷಾಖ್ಯ ಪರಮಪುರುಷಾರ್ಥ ಸಿದ್ಧಿಗಾಗಿ ಸಾಧನಾನುಷ್ಠಾನವನ್ನು ವಿಧಿಸುವುದರಿಂದಲೂ ಅದರ ಅನುಷ್ಠಾನದಿಂದ ಫಲದರ್ಶನವೂ ಕೂಡ ಸಿದ್ಧಿಸಿರುವುದ

ರಿಂದಲೂ ಜೀವನಿಗೆ ಸಂಸಾರದಲ್ಲಿಯೂ ಕಲ್ಪಿತ ಕರ್ತೃತ್ವವಲ್ಲ ತತ್ವತಃ ಕರ್ತೃತ್ವವೇ

## ಸೂ|| ಓಂ|| ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇಶ ವಿಪರ್ಯಯಃ ಓಂ|| 36

ಮೇಲಿನ ವಾಕ್ಯದಲ್ಲಿ ಜೀವನಿಗೆ ಉಪಾಸನಾ ಕ್ರಿಯೆಯನ್ನು ಹೇಳುವುದರಿಂದಲೂ ಕರ್ತೃತ್ವವು ಸಿದ್ಧವು. ಇದನ್ನು ನಿಷೇಧಿಸಿದಲ್ಲಿ ಜೀವನ ಕರ್ತೃತ್ವ ವಚನಗಳೂ ಶ್ರೀಪರಮಾತ್ಮನ ಕರ್ಮತ್ವ ವಚನಗಳೂ ವಿಪರೀತ ವಾಕ್ಯಗಳಾಗುವುವು

"ಆತ್ಮಾನಮೇವ ಲೋಕ ಮುಪಾಸೀತತ್" (ಬೃ-3-4-15) ಇತಿ ಕ್ರಿಯಾಯಾಂ ವ್ಯಪದೇಶಾಚ್ಚ ||
ಪ್ರತ್ಯಕ್ಷ್ಯೈಷಾ ಕರ್ತೃತಾ ಜೀವ ಸಂಸ್ಥಾ | ತಥಾಗಮಾದನುಮಾನಾಚ್ಚ ಸರ್ವಂ| ಇತ್ಯಾದಿ

ಶೃತ್ಯರ್ಥವು-ಸರ್ವಾಶ್ರಯಣದ ಪ್ರಕಾಶಮಾನನಾದ ಶ್ರೀ ವಿಷ್ಣುವನ್ನು ಜೀವನು ಉಪಾಸನೆ ಮಾಡಬೇಕು

6. **ಅನ್ಯಥಾತ್ಮೈವ ಲೋಕಮಿತಿ ನಿರ್ದೇಶಃ ಸ್ಯಾತ್ ||**

ಮೇಲಿನ ಶೃತಿಯು ಜೀವನಿಗೆ ಸಾಕ್ಷಾತ್ತಾಗಿ ಕರ್ತೃತ್ವವನ್ನು ಹೇಳಿಲ್ಲವೆಂದರೆ ಅದು ವ್ಯರ್ಥವು. ವಿಪರ್ಯಾಸವಾಗಿ ಪರಮಾತ್ಮನೇ ತನ್ನನ್ನಾಗಲೀ ಅನ್ಯರನ್ನಾಗಲೀ ಉಪಾಸಿಸಬೇಕೆಂದು ಅರ್ಥವಾಗಿ ವಾಕ್ಯವು "ಆತ್ಮಮೇವ ಉಪಾಸಿಸಬೇಕೆಂದು ಅರ್ಥವಾಗಿ ವಾಕ್ಯವು "ಆತ್ಮಮೇವ ಉಪಾಸೀತ" ಎಂದು ಆಗಬೇಕಾಗುವುದು. ಈ ಶೃತಿಯು ಜೀವ ಪರಮಾತ್ಮರಿಬ್ಬರಲ್ಲಿಯೂ ಕರ್ತೃತ್ವವನ್ನು ಹೇಳುವುದೆಂದರೆ ಅದು ಗೌರವವೇ.

7. **ತರ್ಹಿ ಕಥಮೀಶ್ವರಸ್ಯೈವ ಕರ್ತೃತ್ವಮಿತ್ಯತೋ ವಕ್ತಿ ||**

## ಸೂ|| ಓಂ|| ಉಪಲಬ್ಧಿವದನಿಯಮಃ ಓಂ|| 37

ಹಾಗಾದರೆ ಈಶ್ವರನಿಗೇ ಕರ್ತೃತ್ವ ಸಿದ್ಧಿಯು ಹೇಗೆಂದರೆ ಜ್ಞಾನಿಗೆ ಜ್ಞಾನೋಪಲಬ್ಧಿಯಲ್ಲಿ ಸ್ವೇಚ್ಛಾನುಸಾರ ಜ್ಞಾನ ಲಬ್ಧವಲ್ಲ ಅನಿಯಮವಾಗಿಯೇ ಹೇಗೆ ಜ್ಞಾನವೋ ಹಾಗೆಯೇ ಜೀವನಿಗೆ ಕರ್ಮ ಕರ್ತೃತ್ವದಲ್ಲಿಯೂ ಅನಿಯಮವು ಪರಮೇಶ್ವರನು ತನ್ನಿಚ್ಛಾನುಸಾರ ಸ್ವತಂತ್ರ ಕರ್ತೃವು ಜೀವನಾದರೋ ಶ್ರೀಪರಮಾತ್ಮ ಪ್ರೇರಣೆಯಂತೆ ಕರ್ತೃತ್ವವು ಸ್ವತಂತ್ರವಾಗಿಯಲ್ಲ ಫಲಪ್ರಾಪ್ತಿಯಲ್ಲಿಯೂ ಹೀಗೆಯೇ ತಿಳಿಯಬೇಕು.

ಜ್ಞಾನೇ ಇದಂ ಜ್ಞಾಸ್ಯಾಮೀತ್ಯನಿಯಮಃ ಪ್ರತೀಯತೇ ಏವಂ ಕರ್ಮಣ್ಯಾಪಿ ಜೀವಸ್ಯ ।

8 **ಯ ಆತ್ಮಾನಮಂತರೋ ಯಮಯತೀತಿ ಚ ಶ್ರುತಿಃ ।**

ಸರ್ವಜೀವರಿಗೂ ನಿಯಮನವು ಈಶ್ವರನಿಂದಲೇ ಆದ್ದರಿಂದ ಜೀವರಿಗ ಸ್ವೇಚ್ಛೆಯಿಂದ ಕರ್ತೃತ್ವಾಭಾವವು ಈಶ್ವರನಿಂದ ನಿಯಮನವಾಗಿ ಕರ್ತೃತ್ವವು ಈಶ್ವರನಿಗಾದರೋ ನಿಯಾಮಕತ್ವದಿಂದಲೇ ಸ್ವತಂತ್ರ ಕರ್ತೃತ್ವವು

9. ಕುತಃ ಏಕೆಂದರೆ

## ಸೂ|| ಓಂ|| ಶಕ್ತಿವಿಪರ್ಯಯಾತ್ ಓಂ|| 38

ಅಲ್ಪಶಕ್ತಿತ್ವಾಜ್ಜೀವಸ್ಯ

ಈಶ್ವರ ಜೀವರುಗಳಿಗೆ ಪೂರ್ಣ ಅಪೂರ್ಣ ಶಕ್ತಿಭೇದದಿಂದ ಕರ್ತೃತ್ವದಲ್ಲಿ ಸ್ವಾತಂತ್ರ್ಯ ಅಸ್ವಾತಂತ್ರ್ಯ ಭೇದ ವ್ಯತ್ಯಾಸವು ಜೀವರಿಗೆ ಪೂರ್ಣ ಶಕ್ತಿಯಿಲ್ಲದ್ದರಿಂದ ಸ್ವತಂತ್ರ ಕರ್ತೃತ್ವವು ಇಲ್ಲ

## ಸೂ|| ಓಂ|| ಸಮಾಧ್ಯಭಾವಾಚ್ಚ ಓಂ|| 39

ಸಮಾಧಾನಾಭಾವಾಚ್ಚ ಅಸ್ವಾತಂತ್ರ್ಯಂ ಪ್ರತೀಯತೇ ಅತಃ ।

ಜೀವನಿಗೆ "ಅಲ್ಪಬುದ್ಧಿ ಇಲ್ಲದ್ದರಿಂದ (ಪೂರ್ಣತೃಪ್ತಿ) ಸ್ವತಂತ್ರ ಕರ್ತೃತ್ವನಿಲ್ಲ ಪರತಂತ್ರ ಕರ್ತೃತ್ವವೇ. ಅಸ್ವಾತಂತ್ರ್ಯದಿಂದಲೇ ಪರತಂತ್ರವು

## ಸೂ|| ಓಂ|| ಯಥಾ ಚ ತಕ್ಷೋಭಯಥಾ ಓಂ|| 40

ಯಥಾತಕ್ಷ್ಣಃ ಕಾರಯಿತೃ ನಿಯತತ್ವ ಕರ್ತೃಂ ಚ ವಿದ್ಯತೆ ಏವಂ ಜೀವಸ್ಯಾಪಿ

ವರ್ಧಕಿಯು ಹೇಗೆ ಪ್ರಾಸಾದಾದಿ ಕಾರ್ಯದಿಂದಲೂ ಮಾಡಿಸುವ ಪ್ರೇರಣೆಯಿಂದಲೂಕರ್ತೃತ್ವದಿಂದಲೂ ಹೇಳಲ್ಪಡುವನೋ ಹಾಗೆಯೇ ಈಶ್ವರನಿಂದ ನಿಯಮಿಸಲ್ಪಟ್ಟಜೀವನು ಕರ್ತೃವೆಂದು ಹೇಳಲುಸಾಧ್ಯವು ಜೀವನಿಗೆ ಪರಮಾತ್ಮಾಧೀನವಾದರೂ ಕಾರಕತ್ವ ಪ್ರಯೋಜನತ್ವ ರೂಪ ಅಮುಖ್ಯ ಸ್ವಾತಂತ್ರ್ಯಪರ ಕರ್ತೃತ್ವ ಯುಕ್ತವು

## ಸೂ|| ಓಂ|| ಪರಾತ್ತು ತಚ್ಛ್ರುತೇ ಓಂ|| 41

ಸಾ ಚ ಕರ್ತೃತ್ವ ಶಕ್ತಿಃ ಪರಾದೇವ |

ಜೀವನಿಗೆ ಕರ್ತೃತ್ವ ಶಕ್ತಿಯೂ ಶ್ರೀ ಪರಮಾತ್ಮನಿಂದ ಆತನನ್ನು ಅನುಸರಿಸಿ ಆತನಿಗೆ ಅಧೀನವಾಗಿಯೇ ಇರುವನು, ಜೀವಸ್ವತಂತ್ರತೆಯಿಂದಲ್ಲ

13. **ಕರ್ತೃತ್ವಂ ಕರಣತ್ವಂ ಚ ಸ್ವಭಾವಶ್ಚೇತನಾಧೃತಿಃ ||**
**ಯತ್ಪ್ರಸಾದಾದಿಮೇ ಸಂತಿ ನ ಸಂತಿ ಯದುಪೇಕ್ಷಯೇತಿ**
**ಪೈಂಗಿಶೃತಿಃ ||**

ಜೀವನಿಗೆ ಕರ್ತೃತ್ವಶಕ್ತಿಯೂ ಕರಣಶಕ್ತಿಯೂ ಸ್ವಭಾವವೂ, ಸ್ಮರಣ ಶಕ್ತಿಯೂ ಚೈತನ್ಯವೂ ದೇಹಧಾರಣ ಸಾಮರ್ಥ್ಯವೂ ಯಾವ ಪರಮಾತ್ಮನ ಪ್ರಸಾದದಿಂದ ಇರುವುದೋ ಅವುಗಳು ಆವನ ಉಪೇಕ್ಷೆಯಿಂದ ಇರಲು ಸಾಧ್ಯವಿಲ್ಲವು. ಈಶ್ವರನಿಗೆ ಕರ್ಮ ಮಾಡಲೂ ಸ್ವಾತಂತ್ರ್ಯವು ಆದರೆ ಸಂಕಲ್ಪವಲ್ಲದ್ದರಿಂದ ಹಾಗೆ ಮಾಡುವುದಿಲ್ಲ ಅವನ ಇಚ್ಛೆಯಂತೆಯೇ ಜೀವನಿಗೆ ಕರ್ಮವು ನಿಯಮವು.

## ಸೂ॥ ಓಂ॥ ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷೇಧಾವೈಯರ್ಥ್ಯಾದಿಭ್ಯಃ ಓಂ॥ 42

ತತೋಽಪ್ರಯೋಜಕತ್ವಂ ಶಾಸ್ತ್ರಸ್ಯ ನಾಪದ್ಯತೆ ಕೃತ ಪ್ರಯತ್ನಾಪೇಕ್ಷತ್ವಾತ್ಪ್ರೇರಕತ್ವಸ್ಯ ॥ ಆದಿ ಶಬ್ದೇನ ಅವೈಷಮ್ಯಾದಿ ॥

ಶ್ರೀಪರಮಾತ್ಮನು ವಿಧಿನಿಷೇಧರೂಪ ಶಾಸ್ತ್ರವು ವ್ಯರ್ಥವಾಗದ ರೀತಿಯಲ್ಲಿ ತನ್ನಲ್ಲಿ ವೈಷಮ್ಯ ನೈರ್ಘೃಣ್ಯ ದೋಷಾರೋಪಗಳು ಬಾರದಂತೆ ಜೀವರಲ್ಲಿ ಕರ್ತೃತ್ವ ಪ್ರಯತ್ನ ಯೋಗ್ಯತೆಯನ್ನು ಅನುಸರಿಸಿ ಪ್ರೇರಿಸುವನು. ಅನ್ಯಥಾ ಅಲ್ಲದ್ದರಿಂದ ಈಶಾಧೀನವಾದ ಜೀವ ಶಕ್ತಿಯೂ ಈಶಾಪೇಕ್ಷ ಕೃತಿರೂಪವುಳ್ಳದ್ದು ಮತ್ತು ಫಲರೂಪವುಳ್ಳದ್ದು

15 **ಪೂರ್ವ ಕರ್ಮಪ್ರಯತ್ನಂ ಚ ಸಂಸ್ಕಾರಂ ಚಾಪ್ಯಪೇಕ್ಷ್ಯ ತು ।**
**ಈಶ್ವರಃ ಕಾರಯೇತ್ಸರ್ವಂ ತಚ್ಚೇಶ್ವರಕೃತಂ ಸ್ವಯಂ ।**
**ಅನಾದಿತ್ವಾದದೋಷಶ್ಚ ಪೂರ್ಣಶಕ್ತಿತ್ವತೋ ಹರೇರಿತಿ**
**ಭವಿಷ್ಯತ್ಪರ್ವಣಿ ॥**

ಈಶ್ವರನು ಜೀವರ ಪೂರ್ವಕರ್ಮ ಪ್ರಯತ್ನ ಮತ್ತು ಯೋಗ್ಯತೆಗಳಿಗೆ ಅನುಸಾರವಾಗಿ ಪುಣ್ಯಪಾಪಾದಿ ಫಲಪ್ರಾಪ್ತಿಗಾಗಿ ಕರ್ಮಗಳನ್ನು ಪ್ರೇರಿಸಿ ಮಾಡಿಸುವನು ಕರ್ಮಗಳಿಗೆ ಕಾರಣೀಭೂತ ಕರ್ಮ ಪರಂಪರೆಯಾದರೋ ಅನಾದಿಯಾದ್ದರಿಂದಲೇ ಪರಮಾತ್ಮನಿಗೆ ಕರ್ತೃತ್ವ ವೈಷಮ್ಯ ದೋಷವಿಲ್ಲ ಪೂರ್ವ ಪೂರ್ವ ಕರ್ಮಗಳಿಗೆ ಅನಂತತ್ವದಿಂದ ಹೇಗೆ ಪರಮಾತ್ಮನ ಕರ್ತೃತ್ವವು ಎಂದರೆ ಆತನು ಪೂರ್ಣನಾದ್ದರಿಂದಲೂ ಅಮಿತ ಶಕ್ತಿಯಿಂದಲೂ ಅನಂತ ಕರ್ಮಕರ್ಮಕಾರ ಲಕ್ಷಣತ್ವವು ಸಂಭವಿಸುವುದು

16. **ಏತದೇವಂ ನ ಚಾಸ್ತ್ಯೇವಮೇತದಸ್ತಿ ನ ಚಾಸ್ತಿ ಚೇತಿ ಮೋಕ್ಷಧರ್ಮೇ ॥**

ಜೀವನ ಕರ್ತೃತ್ವವು ಪ್ರಾಮಾಣಿಕವು ಆದರೆ ಈಶ್ವರನಂತೆ ಸ್ವಾತಂತ್ರ್ಯದಿಂದಲ್ಲ ಮತ್ತೆ ಅಸ್ವಾತಂತ್ರ್ಯವೇ "ನಾಸ್ಯ ಕರ್ತಾ" ಎಂಬ ಶೃತ್ಯರ್ಥವು ಇದು ಈ ಅಧಿಕರಣದ ತಾತ್ಪರ್ಯಾರ್ಥವು.

– ಇತಿ ಕರ್ತೃತ್ವಾಧಿಕರಣವು –

## - ಅಂಶಾಧಿಕರಣವು -

ಈ ಅಧಿಕರಣದಲ್ಲಿ ಜೀವ ವಿಷಯಕ ಶೃತಿ ವಿರೋಧದ ಪರಿಹಾರವು.

1 **ಅಂಶಾ ಏವ ಹಿ ಮೇಜೀವಾಃ ಅಂಶೇಹಿ ಪರಮೇಶ್ವರಃ ||**
**ಸ್ವಯಮೇವಂ ಶ್ಚೈರಿದಂ ಸರ್ವಂ ಕಾರಯತ್ಯಚಲೋ ಹರಿಃ ||**

ಇತಿ ಗೌಪವನ ಶ್ರುತೌ ಅಂಶತ್ವಂ ಜೀವಸ್ಯೋಪಲಭ್ಯತೇ ||

ಜೀವರು ತಂದೆ ಮಕ್ಕಳು ಇತ್ಯಾದಿ ಸಂಬಂಧದಂತೆ ಉಪ ಜೀವ್ಯತ್ಯ ಭಾವದಿಂದ ಶ್ರೀಪರಮಾತ್ಮನ ಅಂಶರು ತನ್ನ ಸಾಕ್ಷಾದಂಶವಾದ ಅನಿರುದ್ಧಾದಿಗಳಿಂದ ಜಗತ್ತನ್ನು ಸೃಷ್ಟಿ ಮಾಡುತ್ತಾನೆ ಜೀವರುಗಳ ಮೂಲಕ ತನ್ನ ಸ್ಥಳದಿಂದ ಕದಲದೆ ತನ್ನಲ್ಲಿ ವಿಕಾರವಿಲ್ಲದೆ ತಾನಿದ್ದಲ್ಲಿಯೇ ಇದ್ದು ಪ್ರಪಂಚ ಸೃಷ್ಟಿಯನ್ನು ಶ್ರೀಹರಿಯು ಮಾಡಿಸುವನು

2 **ನೈವಾಂಶೋ ನ ಸಂಬಂಧೋ ನಾಪೇಕ್ಷ್ಯೋ ಜೀವಃ ಪರಸ್ಯ |**
**ತಥಾಪಿ ತು ಯಥಾ ಯೋಗಂ ಫಲದಃ ಪ್ರಭುರೇಕರಾಟ್ ||**
**ನ ನಿಯಮ್ಯಃ ಸ ಕಸ್ಯಾಪಿ ಸ ಸರ್ವಸ್ಯ ನಿಯಾಮಕ ಇತಿ**
**ಭಾಲ್ಲವೇಯಶ್ರುತೌ ||**

ಜೀವರುಗಳಿಗೆ ಮೇಲಿನ ವಾಕ್ಯದಲ್ಲಿ ಹೀಗೆ ಹೇಳುವುದು. ಜೀವನು ಶ್ರೀ ಪರಮಾತ್ಮನಅಂಶವಲ್ಲ ಅನಂಶನೇ. ಪಿತೃತ್ವಾದಿ ರೂಪಸಂಬಂಧವೂ ಉಪಮೃತ್ಯಾದಿ ರೂಪ ಸಂಬಂಧವೂ ಇಲ್ಲ ಜೀವರ ಯೋಗ್ಯತಾನುಸಾರವಾಗಿಯೇ ಫಲದಾತೃತ್ವವು. ಪೂರ್ಣ ಸ್ವತಂತ್ರ ಸರ್ವಸ್ವಾಮಿಯು ಯಾರಿಂದಲೂ ನಿಯಮಿಸಲ್ಪಡುವುದಿಲ್ಲ. ಮತ್ತು ಅವನು ಎಲ್ಲರನ್ನೂ ನಿಯಮಿಸುವ ಸ್ವಾಮಿಯು-ಹೀಗೆ ಜೀವನು ಅಂಶನು ಅನಂಶನು ಎಂದು ಸಂಶಯವು

ಅತೋಬ್ರವೀತ್-ಅದಕ್ಕಾಗಿ ಹೇಳಿದೆ

**ಸೂ|| ಓಂ|| ಅಂಶೋ ನಾನಾ ವ್ಯಪದೇಶಾದನ್ಯಥಾ ಚಾಪಿ ದಾಶ ಕಿತವಾದಿತ್ವಮಧೀಯಂತ ಏಕೇ ಓಂ|| 43**

ಜೀವನು ಪರಮಾತ್ಮನ ಅಂಶನೇ. ತಂದೆ ಮಕ್ಕಳ ರೀತಿಯಲ್ಲಿ ಪರಮಾತ್ಮನನ್ನು ಆಶ್ರಯಿಸಿಕೊಂಡಿರುವನೇ ಅವನು ಪರಮಾತ್ಮನಂತೆ ಆಶ್ರಯನಲ್ಲ "ಮಾಂ ರಕ್ಷತು"ಎಂಬ ವಾಕ್ಯವು ಪಿತೃ ಭ್ರಾತೃತ್ವಾದಿ ನಾನಾ ಪ್ರಾಕಾರವಾಗಿ ಈಶ್ವರನ ಸಂಬಂಧವನ್ನು ಹೇಳುವುದು ಆದರೆ ಕೆಲವು ಶಾಖಾ ವಾಕ್ಯಗಳು ಭಿನ್ನತ್ವದಿಂದ ಹೇಳುತ್ತವೆ "ಅನ್ಯೋಪರಃ ಅನ್ಯೋ ಜೀವಃ ಇತ್ಯಾದಿ ಮತ್ತೆ ಕೆಲವು ಬ್ರಹ್ಮದಾಶಾ ಬ್ರಹ್ಮಕೀತವಾ ಎಂದು ದಾಶಕಿತವ ಹಬ್ಧಿತ ಜಾತಿ ಕೀತವೋಕ್ತಿಯಿಂದ ಅಭೇದೋಕ್ತಿಯು ಹೀಗೆ ಸಂಶಯವು ನಾನಾ ರೀತಿ ವಾಕ್ಯಗಳಿಂದ

1 **ಮಾಂ ರಕ್ಷಂತು ವಿಭುರ್ನಿತ್ಯಂ ಪುತ್ರೋऽಹಂ ಪರಮಾತ್ಮನಃ ||**

ಸರ್ವಸ್ವಾಮಿಯಾದ ಪರಮಾತ್ಮನು ಪುತ್ರನೋಪಾದಿಯಲ್ಲಿ ಅನಾದಿ ಸಂಬಂಧವುಳ್ಳ ನನಗೆ ಸರ್ವದಾ ಆದಾನಾದಿ ಕರ್ತನಾಗಲಿ ಆತನಿಗೆ ನಾನು ಯಾವ ರೀತಿಯಲ್ಲಿಯೂ ಉಪಕರ್ತೃವಾಗಲಾರೆನು ಆದರೆ ಆತನು ನನಗೆ ನರಕದಿಂದ ತ್ರಾತನಾಗಿ ಸರ್ವಕಾಲದಲ್ಲಿಯೂ ಸಂರಕ್ಷಕನಾಗಿ ಮೋಕ್ಷ ಫಲದಾತೃವಾಗಲಿ

2 **'ಅವ ಪರೇಣ ಪಿತರಂ ಯೋ ಅಸ್ಯಾನುವೇದ ಪರ ಏನಾऽವರೇಣ ||** (ಋ 1-164-18)

ಶ್ರೇಷ್ಠನಾದ ಶ್ರೀಹರಿಯಿಂದ ನೀಚನಾದ ಜೀವನು ನರಕತ್ರಾತ ಮೋಕ್ಷದಾತ ಪಿತೃತ್ವರೂಪ ಪರಮಾತ್ಮನ ಯಥಾರ್ಥ ಜ್ಞಾನವನ್ನು ಹೊಂದುವುದು ದುರ್ಲಭವು ಹೀಗೆ ಪರಬ್ರಹ್ಮ ಜ್ಞಾನವನ್ನು ಹೊಂದಿ ಉಪದೇಶ ಮಾಡುವವದು ಪರಮಾತನಿಂದ ಅನುಗ್ರಹೀತನಾಗಿಯೆ ಪೂರ್ಣ ಜ್ಞಾನಿಯು

3. **ಯಸ್ತದ್ವೇದ ಸ ಪಿತುಷ್ಪಿತಾऽಸತ್** | (ಮಹಾನಾ-2-4)
**ಯಸಂವಿಜಾನಾತ್ಸಪಿತುಷ್ಪಿತಾऽಸತ್**|| (ಋ-1-164-16)

ಶ್ರೀತದ್ವೀಪದಲ್ಲಿ ನಿಗೂಢವಾಗಿರುವ ಮೂರು ಪರಮಾತ್ಮ ರೂಪಗಳನ್ನು

ಎಂದರೆ ಪರಬ್ರಹ್ಮನ ಸ್ವರೂಪವನ್ನೂ ತಿಳಿದಿರುವನೋ ಆತನು ಜಗತ್ಪಿತುವಾದ ಚತುರ್ಮುಖ ಬ್ರಹ್ಮನ ತಂದೆಯಾದ ಪರಬ್ರಹ್ಮನೇ.

4 **"ದ್ವಾಸುಪರ್ಣಾ ಸಯುಜಾ ಸಖಾಯಾ"** (ಮು-3-1-1)

ಈ ಶೃತಿಯು ಪರಮಾತ್ಮನ ಶ್ರೇಷ್ಠತ್ವ ಅನ್ಯತ್ವ ಮತ್ತು ಉಪ ಜೀವನತ್ವವನ್ನು ಹೇಳುವುದು

ಇತ್ಯಾದಿ ನಾನಾ ವ್ಯಪದೇಶಾದಂತೋ ಜೀವಃ — ಈ ರೀತಿ ನಾನಾ ರೀತಿಯ ಅನ್ಯತ್ವ, ಉಪ ಜೀವ್ಯತ್ವಾದಿಗಳನ್ನು ಹೇಳುವುದರಿಂದ ಜೀವನು ಪರಮಾತ್ಮನ ಅಂಶನೇ

5 **ತಥಾ ಚ ಪಾರಾಶರ್ಯಾಯಣಶ್ರುತಿಃ ।**

ಅಂಶೋಹ್ಯೇಷ ಪರಸ್ಯಯೋಽಯಂ ಪ್ರಮಾನುತ್ಪದ್ಯತೆ ಚ ಮ್ರಿಯತೇ ನಾನಾ ಹ್ಯೇನಂ ವ್ಯಪದಿಶಂತಿ । ಪಿತೇತಿ ಪುತ್ರೇತಿ ಭ್ರಾತೇತಿ ಸಖೇತಿ ಚ ಇತಿ ।

ಹೀಗೆ ಶೃತಿಯು ಪರಮಾತ್ಮನನ್ನು ಜೀವನಿಂದ ಭಿನ್ನನನ್ನಾಗಿಯೇ ತಿಳಿಸುವುದು.

6. **ಅನ್ಯಃ ಪರೋಽನ್ಯೋಜೀವೋ ನಾಸಾವಸ್ಯ ಕುತಶ್ಚನ ।**

ಇತ್ಯನ್ಯಥಾ ಚ ಕಾಷಾಯಣ ಶೃತಿಯು. ಪರಮಾತ್ಮನನ್ನು ಜೀವನಿಂದ ಭಿನ್ನನೆಂದು ಹೇಳಿದೆ.

7. **ಬ್ರಹ್ಮ ದಾಶಾ ಬ್ರಹ್ಮಕಿತವಾಃ ಬ್ರಹ್ಮೈವೇಮೇದಾಶಾಃ ಇತ್ಯಭೇದೇ ನಾಪ್ಯೇಕೇಽಧೀಯತೆ ।**

ಈ ಶೃತಿಯು ಬೇದ ಅಭೇದವನ್ನೇ ಹೇಳುವುದು.

8. **ತಥಾ ಚಾಗ್ನಿವೇಶ್ಯಶ್ರುತಿಃ—ಅಂಶೋ ಹ್ಯೇಷ ಪರಸ್ಯ ಭಿನ್ನಂ ಹ್ಯೇನ ಮಧೀಯೀ ಅಭಿನ್ನಂ ಹ್ಯೇನ ಮಧೀಯರೆ–ಇತಿ**

ಜೀವನು ಪರಮಾತ್ಮನ ಅಂಶನೇ. ನ್ಯೂನತ್ವವಿದ್ದರೂ ಸಾದೃಶ್ಯ ರೂಪಾಂಶತ್ವವೆಂದು ತಿಳಿಯುವುದು.

8. ಈ ಮೇಲಿನ ಅರ್ಥದ ತಾತ್ಪರ್ಯಾಖ್ಯ ಸ್ಮೃತಿಯು ವಾರಾಹೆ ಚ

ಪುತ್ರ ಭ್ರಾತೃ ಸಖಿತ್ವೇನ ಸ್ವಾಮಿತ್ವೇನ ಯತೋ ಹರಿಃ ।
ಬಹುಧಾ ಗೀಯತೇ ವೇದೈರ್ಜೀವೋಂಶಸ್ತಸ್ಯ ತೇನ ತು ॥

ಶ್ರೀಹರಿಯನ್ನು ಪುತ್ರಭ್ರಾತೃ ಸಖಾ, ಸ್ವಾಮಿ ಸಂಬಂಧಗಳಿಂದ ನಾನಾ ರೀತಿ ಯಲ್ಲಿ ಪ್ರತಿಪಾದಿಸಿರುವುದರಿಂದ ಜೀವನು ಪರಮಾತ್ಮಾಂಶನೇ ಅನಂಶನಲ್ಲ

9 **ಯತೋ ಭೇದೇನ ತಸ್ಯಾಯಮಭೇದೇನ ಚ ಗೀಯತೆ ।**
**ಅತಶ್ಚಾಂಶತ್ವಮುದ್ದಿಷ್ಟಂ ಭೆದಾಭೇದೌ ನ ಮುಖ್ಯತ ಇತಿ ॥**

ಕೆಲವು ಶಾಖೆಯಲ್ಲಿ ಜೀವನನ್ನು ಪರನಿಂದ ಬೇರೆಯೆಂದೂ ಮತ್ತೆ ಕೆಲವು ಜೀವ ನನ್ನು ಪರನಿಂದ ಭೇದವಿಲ್ಲವೆಂದು ಹೇಳಿರುವರು ಆದ್ದರಿಂದ ಜೀವನನ್ನು ಪರಮಾತ್ಮ ನಿಂದ ನ್ಯೂನತ್ವ ಸದೃಶತ್ವ ರೂಪ ಅಂಶತ್ವವನ್ನು ಹೇಳುವುದು ಮುಖ್ಯವು

## ಸೂ ಓಂ॥ ಮಂತ್ರವರ್ಣಾತ್ ಓಂ॥ 44

ಪಾದೋಸ್ಯವಿಶ್ವಾಭೂತಾನಿ ಋ-10-90-3) ಇತಿ

"ಪಾದೋಸ್ಯ-" ಎಂಬ ಶೃತಿ ವಾಕ್ಯದಿಂದಲೂ ಜೀವನು ಪರಮಾತ್ಮನ ಅಂಶನೇ

## ಸೂ ಓಂ॥ ಅಪಿಸ್ಮರ್ಯತೇ॥ ಓಂ॥ 45

"ಮಮೈವಾಂಶೋಜೀವಲೋಕೇ ಜೀವಭೂತಸ್ಸನಾತನಃ (ಗೀ 15-7)

ಮೇಲಿನ ಭಗವದ್ಗೀತಾ ವಾಕ್ಯವು ಜೀವವನ್ನು ಶ್ರೀಪರಮಾತ್ಮನ ಅಂಶವೆಂದೇ ಹೇಳುವುದು ಜೀವ ಶರೀರದಲ್ಲಿರುವ ನಿತ್ಯನಾದ ಜೀವಪಾಚ್ಯ ಬ್ರಹ್ಮಾದಿ ಚೇತನ ರಾಶಿಯು ನನ್ನನ್ನು ಅನುಸರಿಸುವ ನನ್ನ ಅಧೀನವಾದ ನನಗೆ ಅಲ್ಪ ಸಾದೃಶ್ಯವಾದ ಅಂಶವೆ ಅಭಿನ್ನಾಂಶವಲ್ಲ ಅನಂಶನೂ ಅಲ್ಲ ಈಶ್ವರನು ಜೀವನ ವಿಷಯಾನುಭವ

ಕ್ಕಾಗಿ ಮನೋಯುಕ್ತ ಆರೂ ಇಂದ್ರಿಯಗಳು ಆ ಗೋಲಕಗಳಲ್ಲಿದ್ದು ವಿಷಯ ಗಳನ್ನು ಆಕರ್ಷಣ ಮಾಡುವನು.

ಅನಂಶತ್ವಶೃತೇರ್ಗತಿಮಾಹ- ಅಂಶನಲ್ಲ ಎಂಬ ಶೃತಿಯ ಅರ್ಥ ಮುಂದಿದೆ

## ಸೂ ಓಂ|| ಪ್ರಕಾಶಾದಿ ವನ್ನೈವಂ ಪರಃ ||ಓಂ|| 46

ಅನಂಶತ್ವಶೃತೇರಪಿ ನ ಮತ್ಸ್ಯಾದಿ ರೂಪೀ ಪರ ಏವಂ ವಿಧಃ ।

ಜೀವರಿಗೆ ಅಂಶತ್ವವು ಯುಕ್ತವಲ್ಲ. ಮತ್ಸ್ಯಾದಿ ರೂಪಗಳು ಸಾಮ್ಯತ್ವದಿಂದ ಸರಿಯಲ್ಲವೆಂದರೆ ಮತ್ಸ್ಯಾದಿ ಪರಮಾತ್ಮ ರೂಪಗಳು ಸರ್ವಥಾ ಸ್ವರೂಪಾಂಶಗಳೇ

13 **ಯಥಾ ತೇಜೋಂಶಸ್ಯೈವ ಕಾಲಾಗ್ನೇಃ ಖದ್ಯೋತಸ್ಯ ಚ ನೈಕಪ್ರಕಾರತಾ । ಯಥಾ ಜಲಾಂಶಸ್ಯಾಮೃತಸಮುದ್ರಸ್ಯ ಮೂತ್ರಾದೇಶ್ಚ । ಯಥಾಚ ಪೃಥಿವ್ಯಂಶಸ್ಯ ಮೇರೋರ್ವಿಷ್ಠಾದೇಶ್ಚ ॥**

ಪ್ರಲಯ ಕಾಲಾಗ್ನಿಯ ಪ್ರಕಾಶವು ಮಿಣುಕು ಹುಳದ ಪ್ರಕಾಶವೂ ಏಕ ಜಲಾಂಶ ಅಮೃತ ಸಮುದ್ರವು ಮತ್ತು ಮೂತ್ರಾದಿಗಳು ಮತ್ತು ಮೇರು ಪರ್ವತಾಭಿಮಾನಿ ಪೃಥಿವಿಯಭಿನ್ನಾಂಶವು ವಿಷ್ಠಶಬ್ದಿತ ಅಶುದ್ಧಾಂಶವೂ ಹೇಗೆ ಏಕ ಪ್ರಕಾರಾಂಶಗಳಲ್ಲವೋ ಹಾಗೆಯೇ ಅಭಿನ್ನ ಭಿನ್ನಾಂಶಗಳ ಅವಸ್ಥಿತಿಯು.

ಅಭಿನ್ನಾಂಶಾಸ್ತು ಮತ್ಸ್ಯಾದ್ಯಾಸ್ತೇಜಸಃ ಕಾಲವಹ್ನಿವತ್ ।
ಜೀವಾ ಭಿನ್ನಾಂಶಕಾಸ್ತತ್ರ ತೇಜಸಃ ಪ್ರತಿ ಬಿಂಬವತ್ ॥

**14. ಅಭಿಮಾನಿದೇವತಾಪೇಕ್ಷಯೈತತ್ ॥**

ಈ ಮೇಲಿನ ದೃಷ್ಟಾಂತಗಳು ಹೇಗೆ ಭಿನ್ನಾಂಶಗಳಿಗೆ ಸಾಧುವು ಎಂದರೆ ತೇಜೋ ಜಲ ಪ್ರಥಿವ್ಯಭಿಮಾನಿಗಳಾದ ಸೂರ್ಯ, ವರುಣ, ಧರಾ ದೇವತೆಗಳು ಕಾಲಾಗ್ನಿ.

ಅಮೃತ ಸಮುದ್ರ ಮೇರು ಸರ್ವತಾಭಿಮಾನಿಗಳ ಅಂಶಗಳಿಗೂ; ಮಣಾಕು ಭ್ರೂಚಿ ಮೂತ್ರ, ವಿಷ್ಠಾ, ಅಭಿಮಾನಿ ಆತ ಭ್ರಷ್ಟ ದೇವತೆಗಳಿಂದ ಕ್ರಮವಾಗಿ ಅಭಿಮಾನಿ ಭಿನ್ನತ್ವಗಳೂ ಹಾಗೆ ವ್ಯತ್ಯಾಸವು ಹೀಗೆ ಅಂಶ ಶೃತಿಗೆ ವಿರೋಧಶೃತಿಯ ವೈಲಕ್ಷ್ಯಗಳು

## ಸೂ ಓಂ॥ ಸ್ಮರಂತಿ ಚ ॥ಓಂ॥ 47

ಸ್ಮೃತಿಗಳಲ್ಲಿ ಜೀವರನ್ನು ಭಿನ್ನಾಂಶರೆಂತಲೂ ಮತ್ಸ್ಯಾದಿಗಳನ್ನು ಅಭಿನ್ನಾಂಶ ರೆಂತಲೂ ಸಿದ್ಧಾಂತ ಮಾಡಿ ಹೇಳುವರು

16 **ಏತೆ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ಸ್ವಯಂ।**
**ಇಂದ್ರಾರಿ ವ್ಯಾಕುಲಂ ಲೋಕಂ ಮೃಡಯಂತಿ ಯುಗೇ ಯುಗೇ॥**

ಜಗೃಹೆ ಪೌರುಷಂ ರೂಪಂ ಭಗವಾನ್ಮಹ ದಾದಿಭಿಃ ।
ಸಂಭೂತಂ ಷೋಡಶಕಲ ಮಾದೌ ಲೋಕಸಿಸೃಕ್ಷಯಾ ॥

ಭಗವಂತನು ಹಿಂದಿನ ಯುಗಾಂತ್ಯದಲ್ಲಿ ಸರ್ವ ಜಗತ್ತನ್ನು ಸಂಗ್ರಹಿಸಿ ಚಿತ್ಪ್ರಕೃತ್ಯಾತ್ಮ ಪ್ರಲಯೋದಕ ಶ್ರೀಲಕ್ಷ್ಮೀ ಪರ್ಯಂಕದಲ್ಲಿ ಪ್ರಕೃತಿಮಯ ತಮಸ್ಸಿನಿಂದ ಮರೆ ಮಾಡಿಕೊಂಡಿದ್ದನು ಈ ಪರಮಾತ್ಮನೇ ಸೃಷ್ಟಿ ಕಾಲ ಪ್ರಾಪ್ತವಾದಾಗ ಪುನಃ ಲೋಕಗಳನ್ನು ಸೃಷ್ಟಿ ಮಾಡಲಿಚ್ಛಿಸಿ ಆವರಕ ತಮಸ್ಸನ್ನು ನಿಗ್ರಹಿಸಿ (ಕುಡಿದು) ಆದಿಯಲ್ಲಿ ಸೂಕ್ಷ್ಮರೂಪದಿಂದ ತನ್ನಲ್ಲಿ ಪ್ರವೇಶಿಸಿದ ಮಹದಹಂಕಾರಾದಿಗಳ ಸಹಿತ ಏಕಾದಶೇಂದ್ರಿಯ ಪಂಚ ಮಹಾಭೂತ ಷೋಡಶ ಕಲಾಯುಕ್ತ ಪರಮ ಪುರುಷಾಖ್ಯ ರೂಪವನ್ನು ವ್ಯಕ್ತಪಡಿಸಿ ಅಂಡ ಸೃಷ್ಟ್ಯನಂತರ ಮಹದಾದಿ ತತ್ವ ದೇವತೆಗಳೊಡನೆ ಅಂಡವನ್ನು ಪ್ರವೇಶಿಸಿ ಪರಮ ಪುರುಷ ಚತುರ್ಮುಖ ಬ್ರಹ್ಮನಿಗೆ ಜನ್ಮಸ್ಥಾನ ನಾಭಿ ಪದ್ಮ ಶೇಷಶಾಯಿ ಪದ್ಮನಾಭ ರೂಪದಿಂದ ವ್ಯಕ್ತವಾಗಿ ಅಂತರಿಕ್ಷಾದಿ ಸರ್ವಲೋಕ ಜನಕ ವಿರಾಡ್ರೂಪವನ್ನು ಪ್ರಕಟಿಸಿ ಅಂಶಾಂಶಗಳಿಂದ ಸರ್ವದೇವ ತಿರ್ಯಕ್ ನರಾದಿ ಗಳನ್ನು ತನ್ನ ಸಾಮರ್ಥ್ಯ ಏಕ ದೇಶದಿಂದಲೇ ಸೃಷ್ಟಿಸುವನು. ಈ ಅಂಶಗಳಲ್ಲಿ ಭೇದ ವನ್ನು ಸಾಮರ್ಥ್ಯ ಏಕದೇಶದಿಂದಲೇ ಸೃಷ್ಟಿಸುವನು. ಈ ಅಂಶಗಳಲ್ಲಿ ಭೇದವನ್ನು ಹೇಳಲು "ದ್ವಿತೀಯಂ ತು ಭವಾಯಾಸ್ಯ ಎಂದಾರಂಭಿಸಿ "ಅಥಾಸೌ ಯುಗೆ ಸಂಧ್ಯಾ ಯಾಂ" ಎಂದು ವಿಸ್ತಾರವಾಗಿ ವರಾಹಾದಿಗಳ ಭಗವದಂಶತ್ವವನ್ನು ಹೇಳಿ ಮುಂದೆ

ಋಷಯೋ ಮನವೋ ದೇವಾ ಮನುಪುತ್ರಾಮಹೌಜಸಃ ।
ಕಲಾಃ ಸರ್ವೆ ಹರೇರೇವ ಸಪ್ರಜಾಪತ ಯಸ್ಸ್ಕೃತಾಃ ॥

ಎಂದು ಋಷಿಗಳು ಪ್ರಿಯವ್ರತಾದಿ ಮನು ಪುತ್ರರು ದಕ್ಷಾದಿ ಪ್ರಜೇಶ್ವರರ ಇತರ ನರಸಮುದಾಯಗಳೂ "ಕಲಾ" ಭಗವಂತನ ಅಂಶರೆಂದು ಸೃಷ್ಟಿಸಲ್ಪಟ್ಟರು

17 ಅತಃ ಪರಂ ಯದವ್ಯಕ್ತಮವ್ಯೂಢಗುಣಬೃಂಹಿತಂ ।
ಅದೃಷ್ಟಾಶ್ರುತವಸ್ತುತ್ವಾತ್ಸ ಜೀವೋ ಯಃ ಪುನರ್ಭವಃ ॥

ಎಲ್ಲಾ ಸೃಷ್ಟಿಯೂ ಶ್ರೀ ಪರಮಾತ್ಮನ ಅಂಶಗಳಾದರೂ ಅವುಗಳಲ್ಲಿ ಸ್ವರೂಪಾಂಶ, ಅಂಶಾಂಶ ರೂಪಗಳೆಂದು ಭೇದವು. ವರಾಹಾದಿ ರೂಪಗಳೂ ಸ್ವರೂಪಾಂಶರೆಂದೂ ಭಿನ್ನಾಂಶರಲ್ಲವೆಂದೂ ಶ್ರೀ ಕೃಷ್ಣನು ಸಾಕ್ಷಾತ್ಪರಮಾತ್ಮನ ಮೂಲರೂಪವೇ ಅತ್ಯಂತಾಭಿನ್ನವೆಂದು ಹೇಳಿದೆ ಯುಗ ಯುಗಗಳಲ್ಲಿ ಪ್ರಾದುರ್ಭಾವವನ್ನು ಹೊಂದಿ ದುಷ್ಟಶಿಕ್ಷಣ ಶಿಷ್ಟ ಪರಿಪಾಲನಗಳನ್ನು ಮಾಡುವನು

ಪರಮಾತ್ಮನ ಭಿನ್ನಾಂಶವು ಈ ಮೇಲಿನ ಸ್ವರೂಪಾಂಶಗಳಿಂದ ಬೇರೆಯೇ ಪರ ಪುರುಷ ಜಡವಸ್ತುಗಳಿಂದ ಬಿಡಲ್ಪಡದ ಸೂಕ್ಷ್ಮ ಚೈತನ್ಯ ಸ್ವರೂಪಗಳು, ಪೂರ್ವ ಪೂರ್ವ ಕರ್ಮಜನಕ ಫಲಾನುಭವ ರೂಪ ನಾನಾ ಜನ್ಮಗಳನ್ನು ಹೊಂದುತ್ತಾ ಸಂಸಾರಾನುಭವವನ್ನು ಹೊಂದಿರುತ್ತವೆ ಈ ಜೀವ ಸಮುದಾಯವು ಶ್ರೀ ಪರಮಾತ್ಮನ ಮಹಾಮಹಿಮೋಪೇತ ರೂಪದರ್ಶನವಿಲ್ಲದೆ ಮರಳಿ ಮರಳಿ ಸಂಸಾರದಲ್ಲಿ ನರಳುತ್ತಿರುವುವು ಈ ಜೀವ ಸಮುದಾಯಗಳು ಪರಮೂರ್ತಿ ಸದೃಶ ಅಲ್ಪಾಲ್ಪ ಗುಣವುಳ್ಳವುಗಳು.

18 ಸ್ವರೂಪಾಂಶ ಅಸ್ವರೂಪಾಂಶ ಭಾಗಗಳ ಲಕ್ಷಣಗಳನ್ನು ಸ್ಮೃತಿಯಲ್ಲಿ ಹೇಳಿದೆ.

ಸ್ವಾಂಶಶ್ಚಾಥೋ ವಿಭಿನ್ನಾಂಶ ಇತಿ ದ್ವೇಧಾಂಶ ಇಷ್ಯತೆ ।
ಅಂಶಿನೋಯತ್ತು ಸಾಮರ್ಥ್ಯಂತತ್ ಸ್ವರೂಪಂ ಯಥಾ ಸ್ಥಿತಿಃ ।
ತದೇವ ನಾಣುಮಾತ್ರೋಪಿ ಭೇದಃ ಸ್ವಾಂಶಾಂಶಿನೋಃಕ್ವಚಿತ್ ।
ವಿಭಿನ್ನಾಂಶೋಲ್ಪ ಶಕ್ತಿಸ್ಸ್ಯಾತ್ಕಿಂಚಿತ್ಸ ದೃಶ್ಯ ಮಾತ್ರಯುಕ್ ॥ ಇತಿ ವರಾಹೆ

ಶ್ರೀ ಪರಮಾತ್ಮಾಂಶಗಳು ಎರಡು ವಿಧ "ಸ್ವಾಂಶ", "ವಿಭಿನ್ನಾಂಶ"ಗಳೆಂದು ಜಗತ್ ಸೃಷ್ಟ್ಯಾದಿ ಲಕ್ಷಣ ಸಾಮರ್ಥ್ಯವು ಜ್ಞಾನಾಂ. ನದಾದಿ ಸ್ವರೂಪವು ಸರ್ವೋತ್ತಮತ್ವಾದಿ ಲಕ್ಷಣಗಳು ಸರ್ವಗತತ್ವಾದಿ ವಿಶಿಷ್ಟ ಪರಿಮಾಣವು ದೇಶತಃ ಕಾಲತಃ ಮತ್ತು ಗುಣತಃ ವ್ಯಾಪ್ತಿಯೂ ಇತ್ಯಾದಿ ಮೂಲತಃ ಸ್ವರೂಪಗಳೂ ಅವುಗಳೇ ಸ್ವರೂಪಾಂಶಗಳು ಅಣುಮಾತ್ರವು ವ್ಯತ್ಯಾಸ ರಹಿತವು ಇವು ವರಾಹಾದಿ ಸ್ವಾಂಶರೂಪಗಳು.

ವಿಭಿನ್ನಾಂಶ ಲಕ್ಷಣಗಳು ಅಲ್ಪಮಾತ್ರ ಸಾದೃಶ್ಯಯೋಗವುಳ್ಳವು, ಪರಮೇಶ್ವರನ ಚಿತ್ವಾದಿ ರೂಪದಿಂದ ಕಿಂಚಿತ್ಸಾದೃಶ್ಯವುಳ್ಳವು ಪರಮಾತ್ಮನಿಂದ ಸತ್ತಾದಿಗಳೆಲ್ಲವುಗಳು ಅಭೇದ ಭೇದಾಭೇಧವುಳ್ಳ ವಗಳು ಪ್ರಕಾರ ಪ್ರಮಾಣವು

19 **ನ ತ್ವತ್ಸಮೋಽಸ್ತ್ಯ ಭ್ಯಧಿಕಃ ಕುತೊಽನ್ಯ ಇತಿ ಚ ॥**

(ಗೀತಾ 11-43) ಇತಿ ಚ

ಸ್ವರೂಪಾಂಶತ್ವ ಲಕ್ಷಣ ಕೃಷ್ಣಾದ್ಯವತಾರ ವರ್ಣನ ರೂಪವು-ಶ್ರೀಕೃಷ್ಣನೇ ನಿನಗೆ ಸಮಾನರಾದ ಇನ್ನೊಬ್ಬನು ಯಾರೂ ಇಲ್ಲ ನಿನಗಿಂತ ಅಧಿಕನು ಹೇಗೆತಾನೆ ಸಾಧ್ಯ ಹೀಗೆ ಜೀವರಲ್ಲಿ ಸಾಕ್ಷೀ ಅನುಭವವು ಸ್ವತಃ ಸಿದ್ಧವು

## ಸೂ ಓಂ॥ ಅನುಜ್ಞಾಪರಿಹರೌ ದೇಹ ಸಂಬಂಧಾತ್ ಜ್ಯೋತಿರಾದಿವತ್ ॥ಓಂ॥ 48

ಜ್ಯೋತಿರಾದಿಗಳಂತೆ ಕಣ್ಣಿನ ಗೋಲಕದಲ್ಲಿರುವ ಅಲ್ಪ ದೇವತೆಗಳಂತೆ ಆ ದೇಹ ಸಂಬಂಧದಿಂದ ಸೂರ್ಯ ವರುಣಾದಿಗಳ ಅನುಜ್ಞಾಯಿಂದ ಅವುಗಳ ಪ್ರವೃತ್ತ್ಯಾದಿಗಳು ಹೇಗೊ ಹಾಗೆಯೇ ಜೀವರುಗಳಿಗೂ ದೇಹ ಸಂಬಂಧದಿಂದಲೇ ಪರಮಾತ್ಮನು ಜ್ಞಾನಾಧೀನ ಪ್ರವೃತ್ತಿ ಸಂಬಂಧದಿಂದಲೇ ಪರಮಾತ್ಮನ ಜ್ಞಾನಾಧೀನ ಪ್ರವೃತ್ತಿ ಸಂಬಂಧವು.

ಪರಾನುಜ್ಞಯಾ ಪ್ರವೃತ್ತಿಃ ಪರತೋಽ ಬಂಧ ನಿವೃತ್ತಿಶ್ಚ ಜೀವಸ್ಯ ಪ್ರತೀಯತೆ ಅಂಶತ್ವೇಪಿ ದೇಹ ಸಂಬಂಧಾತ್ ॥

ಜ್ಯೋತಿರಾದಿಗಳಂತೆ ಸೂರ್ಯಪ್ರಭಾದಭಿಮಾನಿಗಳು ಪರಮಾತ್ಮಾಧೀನತ್ವವು ಪ್ರವೃತ್ತ್ಯಾದಿಗಳುಳ್ಳವರೋ ಹಾಗೆಯೇ ಜೀವರು ಈಶಾಧೀನ ಪ್ರವೃತ್ತಿಯುಳ್ಳವರು ಆದ್ದ

ರಿಂದ ಭಿನ್ನಾಂಶರು ಮತ್ಸ್ಯಾದಿಗಳು ಅಭಿನ್ನಾಂಶಗಳೇ ಜೀವರಿಗೆ ಸರ್ವಕರ್ಮಗಳಲ್ಲಿ ಪ್ರವೃತ್ತಿಯೂ ಬಂಧ ನಿವೃತ್ತಿರೂಪ ಮುಕ್ತಿಯೂ ಶ್ರೀ ಪರಮಾತ್ಮಾನುಜ್ಞೆಯಿಂದಲೆ

21. **"ಯ ಆತ್ಮಾನ ಮಂತರೋ ಯಮಯತಿ"** (ಮಾಧ್ಯಂದಿನಶಾಖಾ) **ತಮೇವಂ ವಿದ್ವಾನ್** (ತೈ-ಆ-3-12) **ಇತ್ಯಾದಿನಾ । ನತುಪ ರಸ್ಯ ॥**

ಈ ಶೃತಿಗಳಲ್ಲಿ ಜೀವರಿಗೆ ಪರಮಾತ್ಮನಿಂದ ಅನುಜ್ಞಾಪರಿಹಾರವು. ಮತ್ಸ್ಯಾದಿ ಸ್ವರಕ್ತಿಯಿಂದಲೇ

22 **ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನೋನಿರುದ್ಧೋಹಂ ಮತ್ಸ್ಯಃ ಕೂರ್ಮೋ ವರಾಹೋ ನಾರಸಿಂಹೋ ವಾಮನೋ ರಾಮ ರಾಮಃ ಕೃಷ್ಣೋ ಬುದ್ಧಃ ಕಲ್ಕಿರಹಂ ಶತಧಾಹಂ ಸಹಸ್ರಧಾಹಮ ಮಿತೋಹಮನಂತೋಹಂ ನೈವೈತೇ ಜಾಯಂತೇ ನಮ್ರಿಯಂತೆ ನೈಷಾಮನುಜ್ಞಾನ ಬಂಧೋ ನಮುಕ್ತಿಃ ಸರ್ವ ಏವ ಹ್ಯೇತೇ ಪೂರ್ಣಾ ಅಜರಾ ಅಮೃತಾಃ ಪರಮಾಃ ಪರಾನಂದಾ ಇತಿ ಚತುರ್ವೇದಶಿಖಾಯಾಂ ॥**

ಈ ಮೇಲಿನ ರೂಪಗಳಲ್ಲಿ ಜೀವಾತ್ಮರಲ್ಲಿರುವ ಜನನಾದಿ ದೋಷಗಳಿರುವುದಿಲ್ಲ ಆದ್ದರಿಂದ ಇವು ಜೀವರ ಅಂಶಗಳಂತೆ ಅಲ್ಲ. ಇವರು ಪೂರ್ಣರು ನಿತ್ಯರು ನಿತ್ಯ ಮುಕ್ತರು ಪರನಿಂದ ಪರನಿಗೆ ಅನುಜ್ಞಾ ಪರಿಹಾರವು ಇಲ್ಲವಷ್ಟೇ? ಸ್ವತಂತ್ರರು.

23 **ಯುಜ್ಯತೇ ಚ ಜ್ಯೋತಿರಾದಿವತ್ । ಯಥಾದಿತ್ಯೋ ವಿಯದ್ಗತಸ್ತತ್ಪ್ರಕಾಶಃ ಶ್ಚೈಕ ಪ್ರಕಾರಃ ॥**

ಅಂತರಿಕ್ಷದಲ್ಲಿರುವ ಸೂರ್ಯ ಮಂಡಲಾಭಿಮಾನಿ ಸೂರ್ಯನು ಅಂಶಿ ಅದರ ಪ್ರಕಾಶವೂ ಸೂರ್ಯ ಪ್ರಕಾಶಾಭಿಮಾನಿ ಸೂರ್ಯಾಂಶವೂ ಒಂದೆ ವಿಧವಾದುದು ಎರಡೂ ಒಂದೆ ಲಕ್ಷಣವುಳ್ಳದ್ದು ಆದ್ದರಿಂದ ಅಂಶವು ಅಂಶಾಧೀನ ಅನುಜ್ಞಾನ ನಿರತನು ಹೀಗೆ ದೃಷ್ಟಾಂತದಿಂದ ಪರಮಾತ್ಮನೂ ಮ ತ್ಸ್ಯಾದಿಗಳು ಏಕ ಪ್ರಕಾರರು

24. **ಶುಕ್ಲಂ ಕೃಷ್ಣಂ ಕನೀನಿಕಾ । (ಆ-3-1-5) ಇತಿ ತದಂಶಸ್ಯಾ**

**ಕ್ಷ್ಣೋ ದೇಹ ಸಂಬಂಧಾನ್ನತಾದೃಶೀ ಶಕ್ತಿ, । ತದನು ಗ್ರಾಹ್ಯತ್ವಂ ತೇನೈವಾವೃತಿಪರಿಹಾರಶ್ಚ ॥**

ಸೂರ್ಯಮಂಡಲಾಭಿಮಾನಿ ಸೂರ್ಯನು ಹೀಗ ತನ್ನ ಅಂಶನಾದ ಗೋಲಕದ ಅವಭೃಷ್ಟ ಅಭಿಮಾನಿ ದೇವತಗಿಂತ ಅಧಿಕ ಶಕ್ತಿಯುಳ್ಳವನೋ ಹಾಗೆಯೇ ಜೀವ ತದಭಿಮಾನಿ ಈಶ್ವರ ಶಕ್ತಿಯು ಮಹತ್ವವುಳ್ಳದ್ದು ಜೀವನಿಗೆ ದೇಹ ಸಂಬಂಧದಿಂದ ಅಲ್ಪಶಕ್ತಿ

25 **ಯಥಾ ಬಾಹ್ಯಾ ಮೃತಜಲಸಾಮೃತಸಮುದ್ರಸ್ಯ ಚೈಕತ್ವಂ ತದಂಶಸ್ಯಾಪಿ ಶ್ಲೇಷ್ಮಣಸ್ತದನು ಗ್ರಾಹ್ಯತ್ವಂ ತೇನೈವಾವೃತಿ ಪರಿಹಾರಶ್ಚ ॥**

ಹೇಗೆ ಅಮೃತ ಜಲಾಭಿಮಾನು ವರುಣನು ತ್ರಂದ ಅಭಿಮಾನಾಂಶ ಶ್ಲೇಷ್ಮ ಅವ ಭ್ರಷ್ಟ ದೇವತೆಗಿಂತ ಅತ್ಯಂತ ಶ್ರೇಷ್ಟಶಕ್ತಿಯುಳ್ಳವನೊ ಹಾಗೆಯೆ.

26. **ಮೋಕ್ಷ ಧರ್ಮೇಚ ಯತ್ಕಿಂಚಿದಿಹಲೋಕೇಸ್ಮಿನ್ದೇಹಬದ್ಧಂ ವಿಶಾಂಪತೇ । ಸರ್ವಂ ಪಂಚಭಿರಾವಿಷ್ಟಂ ಭೂತೈರೀಶ್ವರ ಬುದ್ಧಿಜೈಃ । ಈಶ್ವರೋಹಿ ಮಹದ್ಭೂತಂಪ್ರಭುರ್ನಾರಾಯಣೋ ವಿರಾಟ್ ಭೂತಾಂತರಾತ್ಮಾ ವರದಃ ಸಗುಣೋ ನಿರ್ಗುಣೋಪಿ ಚ । ಭೂತಪ್ರಲಯಮವ್ಯಕ್ತಂ ಶುಶ್ರೂಷು-ರ್ನೃಪಸತ್ತಮ ಇತಿ ॥**

ಹೇ ಪ್ರಜೆಗಳ ಪತಿಯೇ ಜಗತ್ತಿನಲ್ಲಿ ಯಾವ ಅಲ್ಪ ಜೀವ ಜಾತಿಗಳೂ ಕೂಡ ದೇಹದಿಂದ ಬದ್ಧವಾಗಿವೆಯೋ ಅವು ಈಶ್ವರ ಸಂಬಂಧ ಭೂತಗಳಿಂದ ಬಂಧಿಸಲ್ಪಟ್ಟಿದ ಈಶ್ವರನು ನಿರ್ವಿಕಾರನಾಗಿ ಭೂತಗಳಿಗಂತ ಪೂಜ್ಯನು ಜಗತ್ತನ್ನು ಸೃಷ್ಟಿ ಮಾಡುವನು ಶ್ರೀಮನ್ನಾರಾಯಣನೇ ಮುಕ್ತಾಶ್ರಯನು. ವಿಶೇಷ ಪ್ರಕಾಶಮಾನವಾದ ವಿಷ್ಣುವು ನಿತ್ಯಾಭಿವ್ಯಕ್ತಿರೂಪನು ಸರ್ವ ಜೀವಾಂತರ್ಯಾಮಿಯು ಮೋಕ್ಷದಾತನು ಐಶ್ವರ್ಯಾದಿ ಗುಣ ರಹಿತನು ಭೂತಗಳನ್ನು ಪ್ರಲಯ ಹೊಂದಿಸುವನು. ಅವ್ಯಕ್ತನು ಇಂದ್ರ ಮಹಿಮೋಪೇತ ವಸ್ತು ಶ್ರೀಮನ್ನಾರಾಯಣನೇ ಮುಖ್ಯ ಆಶ್ರಯವು.

27. ವಾರಾಹೇ ಚ ಅಂಶಾಶ್ಚ ದೇಹಯೋಗ್ಯತ್ವಾಜ್ಜೀವಾ ಬಂಧಾದಿ ಸಂಯುತಾಃ । ಅನುಗ್ರಾಹ್ಯಾಶ್ಚೇಶ್ವರೇಣ ನ ತು ಮತ್ಸ್ಯಾದಿಕೋ ಹರಿಃ । ಅದೇಹಬಂಧಯೋಗ್ಯತ್ವಾದ್ಯಥಾ ಸೂರ್ಯಪ್ರಭಾಕ್ಷಿಣೀ । ಯಥಾಽಮೃತ ಸಮುದ್ರಸ್ಯ ಶ್ಲೇಷ್ಮಾದೇಶ್ಚ ದ್ವಿ (ವಿ)ರೂಪತಾ । ಅನುಗ್ರಾಹ್ಯತ್ವಮನ್ಯಸ್ಯ ತೇನೈವಾವ್ಯತಿಕೋದನಂ ಇತಿ

ಪರಮಾತ್ಮನ ಅಂಶಾಂಶಗಳಾದ ಜೀವರು ಬಾಹ್ಯ ದೇಹವನ್ನು ಹೊಂದಲು ಯೋಗ್ಯತೆಯಿಂದ ಸೃಷ್ಟಿ ಸ್ಥಿತಿ ಸಂಹಾರ ಮೋಕ್ಷ ಫಲಗಳನ್ನು ಈಶ್ವರನಿಂದ ಅನುಗ್ರಹ ಪೂರ್ವಕ ಹೊಂದುವರು ಸ್ವಾಂಶರಾದ ಮತ್ಸ್ಯಾದಿಗಳು ದೇಹಬಂಧವಿಲ್ಲದ್ದರಿಂದ ಜೀವ ಸಾಮ್ಯರಲ್ಲ. ಸೂರ್ಯ ಪ್ರಭೆಗೂ ಕಣ್ಣಿಗೂ ಅಮೃತಕ್ಕೂ ಸರೂ ಪರ ಶ್ಲೇಷ್ಮಕ್ಕೂ ಇರುವ ಅಂಶ ಭಿನಾಂಶಗಳಂತೆ ವ್ಯತ್ಯಸ್ತ ಶಕ್ತಿಯುಳ್ಳವುಗಳು ಜೀವನು ಅಲ್ಪಶಕ್ತಿಯುಳ್ಳವನು ಮತ್ಸ್ಯಾದಿ ರೂಪಗಳು ಅಚಿಂತ್ಯಾದ್ಭುತ ಶಕ್ತಿಯಿಂದ ಅಣುಮಾತ್ರವೂ ಭೇದವಿಲ್ಲದ ಪರಮಾತ್ಮರೂಪಗಳೇ

## ಸೂ ಓಂ॥ ಅಸಂಕತೇಶ್ಚಾವ್ಯತಿಕರಃ ॥ಓಂ। 49

ಅಪೂರ್ಣ ಶಕ್ತಿತ್ವಾಚ್ಚ ಜೀವಸ್ಯ ನ ಮತ್ಸ್ಯಾದಿ ಸಾಮ್ಯಂ ॥

ಜೀವರಿಗೆ ಪೂರ್ಣ ಶಕ್ತಿಯಿಲ್ಲದ್ದರಿಂದಲೂ ಮತ್ಸ್ಯಾದಿಗಳಿಗೆ ಪೂರ್ಣ ಶಕ್ತಿತ್ವವಿರುವುದರಿಂದಲೂ ಅವರುಗಳಿಗೆ ಅತ್ಯಂತ ವ್ಯತ್ಯಾಸವು ಸಾಧುವೆ

29 ತಥಾ ಚ ಚತುರ್ವೇದ ಶಿಖಾಯಾಂ ॥

ತಸ್ಯ ಹವಾ ಏತಸ್ಯ ಪರಮಸ್ಯ ತ್ರೀಣಿ ರೂಪಾಣಿ ಕೃಷ್ಣೋ ರಾಮಃ ಕಪಿಲ ಇತಿ । ತಸ್ಯಹವಾ ಏತಸ್ಯ ಪರಮಸ್ಯ ಪಂಚ ರೂಪಾಣಿ ದಶರೂಪಾಣಿ ಸಹಸ್ರ ರೂಪಾಣ್ಯಮಿತ ರೂಪಾಣಿ । ತಾನಿಹವಾ ಏತಾನಿ ಸರ್ವಾಣಿ

ಪೂರ್ಣಾನಿ ಸರ್ವಾಣ್ಯನಂತಾನಿ ಸರ್ವಾಣ್ಯಮಿತಾನಿ ಸರ್ವಾಣ್ಯಮಿತಾನಿ। ಅಥಾ ಪರಾಸ್ಯ ಸರ್ವ ಏವಾಪೂರ್ಣ ಸರ್ವ ಬಧ್ಯಂತೆ ಅಥಮುಚ್ಯಂತೆ ಚ ಕೇಚನ। ಇತಿ

ಪ್ರಕೃತ ಪರಮಾತ್ಮ ರೂಪಗಳು ಮೂರು ಕೃಷ್ಣ, ರಾಮ, ಕಪಿಲನೆಂದು ಪಂಚ ರೂಪಗಳು ನಾರಾಯಣ, ವಾಸುದೇವ ಸಂಕರ್ಷಣ, ಪ್ರದ್ಯುಮ್ನ ಅನಿರುದ್ಧರೂಪಗಳು ನಾರಾಯಣಾದಿ ಅಷ್ಟೋತ್ತರ ಶತರೂಪಗಳು, ವಿಶ್ವಾದಿ ಸಹಸ್ರ ರೂಪಗಳು ಅಜಿತಾದಿ ಅನಂತರೂಪಗಳು. ಇವುಗಳೆಲ್ಲಾ ಪೂರ್ಣಗಳು ದೇಶಕಾಲಗಳಿಂದ ಅನಂತಗಳು ಅನವಾನ ಗುಣವುಳ್ಳವುಗಳು. ಈ ರೂಪಗಳಿಂದ ಕಡಿಮೆ ಶಕ್ತಿಯುಳ್ಳವು ಜೀವ ಚೇತನಗಳು ದೇಶಕಾಲ ಗುಣಗಳಿಂದ ಅಪೂರ್ಣರು ಪಂಚಭೂತಗಳಿಂದ ಬದ್ಧರು ಮತ್ತು ಮುಕ್ತರಾಗಲು ಅರ್ಹರು ಕೆಲವರು ಮಾತ್ರ.

## ಸೂ|| ಓಂ ಅಭಾಸ ಏವ ಚೆ ಓಂ || 50

"ರೂಪಂ ರೂಪಂ ಪ್ರತಿರೂಪೊ ಬಭೂವ" ಋ (6-47-18) ಇತಿ ಪ್ರತಿ ಬಿಂಬ ತ್ವಾಚ್ಚ ನ ಸಾಮ್ಯಂ।

ಜೀವರುಗಳು ಪರಮಾತ್ಮಪ್ರತಿಬಿಂಬದು ಮತ್ಸ್ಯಾದಿಗಳಾದರೂ ಸ್ವರೂಪಾಂಶರು ಆದ್ದರಿಂದ ಮೇಲೆ ಹೇಳಿದ ವ್ಯತ್ಯಾಸವು ಯುಕ್ತವೇ.

ತ್ರಿವಿಧ ಜೀವಸಮುದಾಯವು ಪರಮೇಶ್ವರನಿಗೆ ಪ್ರತಿಬಿಂಬದು ಈ ಬಿಂಬರೂಪವು ಪ್ರತಿಬಿಂಬರಾದ ಯೋಗ್ಯಜೀವರುಗಳಿಗೆ ಸಾಕ್ಷಾತ್ಕಾರಕ್ಕೆ ವಿಷಯುವು ಪರಮೇಚ್ಛಾ ರೂಪ ಮಾಯೆಯಿಂದ ಅನೇಕ ಜೀವಬಿಂಬರೂಪವಾಗಿ ತಿಳಿಯಲ್ಪಡುವರು ಈಶ್ವರನ ಪರಿನಾಮಕ ಬಹುರೂಪಗಳ ಈವ್ಯೂಹವು ಇರುವುದು.

31. ವಾರಾಹೆ ಚ **ದ್ವಿರೂಪಾಂಶಕೌ ತಸ್ಯ ಪರಮಸ್ಯ ಹರೇರ್ವಿಭೋಃ**
**ಪ್ರತಿಬಿಂಬಾಂಶಕಶ್ಚಾಥ ಸ್ವರೂಪಾಂಶಕ ಏವ ಚ||**
**ಪ್ರತಿಬಿಂಬಾಂಶಕೋಃ ಜೀವಾಃ ಪ್ರಾದುರ್ಭಾವ್ಯಾಃ**
**ಹರೇಸ್ಮೃತಾ । ಪ್ರತಿಬಿಂಬೇಷ್ವಲ್ಪ ಸಾಮ್ಯಂ**
**ಸ್ವರೂಪಾಣೇತರಾಣಿತು||** ಇತಿ

ಶ್ರೀ ಪರಮಾತ್ಮನಿಗೆ ಎರಡು ರೀತಿ ಅಂಶರೂಪಗಳು ಜೀವರು ಪ್ರತಿಬಿಂಬಾಂಶ ಗಳು ಅಲ್ಪಸಾಮ್ಯವುಳ್ಳವು ಅನ್ಯವು ಸ್ವರೂಪಾಂಶಗಳು ಪ್ರಾದುರ್ಭಾವ ರೂಪಗಳು ಅತ್ಯಂತ ಶಕ್ತಿಯುಳ್ಳವು

**32 ಸೋಪಾಧಿರನುಪಾಧಿಶ್ಚ ಪ್ರತಿಬಿಂಬೋದ್ವಿಧೇಯತೇ ।**

**ಜೀವಃ ಈಶಸ್ಯಾನುಪಾಧಿರಿಂದ್ರ ಚಾಪೋ ಯಥಾ ರವೇಃ ॥ ಇತಿ ಪೈಂಗಿ ಶ್ರುತಿ**

ಪ್ರತಿಬಿಂಬಗಳು "ಸೋಪಾಧಿ" "ನಿರುಪಾಧಿ" ಎಂದು ಎರಡು ವಿಧವು ಜೀವನ ಈಶ್ವರನಿಗೆ ಅನುಪಾಧಿಯು ಇಂದ್ರಚಾಪವು (ಕಾಮನಬಿಲ್ಲು) ಸೂರ್ಯನದಂತೆಯೋ

**33 ಯಥೈಷಾ ಪುರುಷೇ ಛಾಯಾ ಏತಸ್ಮಿನ್ನೇ ತದಾತತಮಿತಿ ಚ ಶ್ರುತಿಃ**

ಪುರುಷನ ದೇಹದ ನೆರಳು ಪುರುಷನ ದೇಹದಲ್ಲಿ ಆಸರೆ ಹೊಂದಿದಂತೆ ಅಂದರೆ ಅಧೀನ ಮತ್ತು ಪ್ರತಿರೂಪವು ಹಾಗೆ ಜೀವರೂಪಗಳು ಪರಮಾತ್ಮನ ಪ್ರತಿಬಿಂಬ ರೂಪಗಳು ಮತ್ತು ಸರ್ವವಿಷಯದಲ್ಲಿಯೂ ಅಧೀನವು.

–ಇತ್ಯಂಶಾಧಿಕರಣವು–

–ಅದೃಷ್ಟಾಧಿಕರಣಂ–

ಈ ಅಧಿಕರಣದಲ್ಲಿ ಜೀವರುಗಳಿಗೆ ಈಶ್ವರ ಪ್ರತಿಬಿಂಬ ವಿಷಯ ವಿರೋಧ ಪರಿಹರಿಸಲ್ಪಡುತ್ತದೆ

**1. ಪ್ರತಿಬಿಂಬಾನಾಂ ಮಿಥೋ ವೈಚಿತ್ರ್ಯೇ ಕಾರಣಮಾಹ।**

ರೂಪಂ ರೂಪಂ ಎಂಬ ಶ್ರುತಿಯು ಪ್ರತಿಬಿಂಬಗಳಿಗೆ ಏಕ ವಿಧತ್ವವನ್ನು ಹೇಳು ವುದು ನೈವಾಂಶೋನ ಸಂಬಂಧ ಎಂಬ ವಾಕ್ಯವು ಪ್ರತಿಬಿಂಬತ್ವ ವಿರೋಧವು ಆದ್ದ ರಿಂದ ಜೀವರು ಪರಮಾತ್ಮನ ಪ್ರತಿಬಿಂಬವೆಂಬ ವಿಷಯಕ್ಕೆ ಅನುಮಾನವು

ಪ್ರತಿಬಿಂಬಗಳಿಗೆ ಪರಸ್ಪರ ವೈಚಿತ್ರ್ಯವೂ, ಸುರನರತಿರ್ಯಗಾದಿ ರೂಪ ಭೇದ

ಗಳಿಗೆ ಕಾರಣವು ಪರಮಾತ್ಮನ ಸರ್ವಸ್ವತಂತ್ರ ಶಕ್ತಿ ಆತನ ಇಚ್ಛೆಯೂ ಅನ್ಯ ಕಾರಣವು (ಅದೃಷ್ಟವು)

## ಸೂ|| ಓಂ|| ಅದೃಷ್ಟ ನಿಯಾಮಾತ್ ಓಂ|| 51

**ಅನಾದಿ ವಿದ್ಯಾ ಕರ್ಮಾದಿ ವೈಚಿತ್ರ್ಯಾದ್ವೈಚಿತ್ರ್ಯಂ।**

ಅದೃಷ್ಟೋಪಲಕ್ಷಿತ ವಿದ್ಯಾಕರ್ಮ ಸಂಸ್ಕಾರಗಳು ಅನಿಯಮಗಳಾದ್ದರಿಂದ (ಒಂದೇ ಪ್ರಕಾರಗಳಾಗದ ಅನೇಕ ಪ್ರಕಾರಗಳಾದ್ದರಿಂದ) ಪ್ರತಿಬಿಂಬ ಭೂತ ಜೀವ ಗಳಿಗೂ ದೇವದಾನ ವೈಚಿತ್ರ್ಯವು

ಒಂದೇ ಈಶ್ವರ ಭಾವವು ಜೀವದ ಅದೃಷ್ಟನಿಯಮದಿಂದ ದೇವ ದಾನವಾದಿ ವೈಚಿತ್ರ್ಯವು ಉಂಟಾಗುವುದು ಆದ್ದರಿಂದ ಒಬ್ಬನೇ ಜ್ಞಾನಿಗೆ ಪ್ರತಿಬಿಂಬತ್ವವು ಅನ್ಯರಿಗೆ ಅದಲ್ಲವೆಂಬ ಭಾವವು ಯುಕ್ತವಲ್ಲ ಎಲ್ಲಾ ಜೀವರುಗಳು ಪರಮಾತ್ಮನ ಆಭಾವಗಳು

## ಸೂ|| ಓಂ|| ಅಭಿಸಂಧ್ಯಾದಿಷ್ಟಪಿಚೈವಂ ಓಂ|| 52

**ಇಚ್ಛಾದ್ವೇಷಸುಖದುಃಖಾದಿ ವೈಚಿತ್ರ್ಯಂ ಚಾದೃಷ್ಟಾದೇವ॥**
**ಚಶಬ್ದೇನ ಪ್ರತಿಕ್ಷಣವೈಚಿತ್ರ್ಯಂ ಚ।**

ಜೀವರುಗಳಲ್ಲಿರುವ ಕಾಮ ಕ್ರೋಧಾದಿ ವೈಚಿತ್ರ್ಯಗಳು ಅದೃಷ್ಟಕಾರಣವುಳ್ಳವುಗಳೇ ಆದ್ದರಿಂದ ಜೀವರಿಗೆ ವೈಚಿತ್ರ್ಯಗಳು ದ್ವೇಷಾದಿಗಳು

ಕೇವಲ ಅಭಿಸಂಧಿವಾಚಕರಾಗ ದ್ವೇಷಾದಿಗಳು ಅನಿಯಮಗಳು ಮತ್ತು ದೋಷಗಳ ವೈಚಿತ್ರ್ಯವಿಲ್ಲದಿದ್ದರೂ ಪ್ರತಿಕ್ಷಣವು ವ್ಯತ್ಯಸ್ಥತ್ವದಿಂದ ಅದೃಷ್ಟವನ್ನು ಅವಶ್ಯಕವಾಗಿ ಅಂಗೀಕರಿಸಬೇಕು. ಆದ್ದರಿಂದ ಜೀವಿ ವೈಚಿತ್ರ್ಯಕ್ಕೂ ಅದೃಷ್ಟವೇ ಕಾರಣವು

ಸೂ||ಓಂ || ಪ್ರದೇಶಾದಿತಿ ಚೇನ್ನಾಂತರ್ಭಾವಾತ್ ಓಂ|| 53

**ನ ಸ್ವರ್ಗಭೂವ್ಯಾದಿ ಪ್ರದೇಶ ವೈಚಿತ್ರ್ಯದ್ವೈಚಿತ್ರ್ಯಂ।**
**ತತ್ಪ್ರಾಪ್ತೇರಪ್ಯದೃಷ್ಟಾಪೇಕ್ಷತ್ವಾತ್ ॥ ಏಕದೇಶಸ್ಥಿತಾ**
**ನಾಮೇವ ವೈಚಿತ್ರ್ಯದರ್ಶನಾಚ್ಚ**

ಸ್ವರ್ಗ ಭೂವ್ಯಾದಿಸ್ಥಾನ ವೈಚಿತ್ರ್ಯದಿಂದಲೇ ಸುರನರಾದಿ ಜನ ವೈಚಿತ್ರ್ಯವು ಅದೃಷ್ಟವು ಅನಾವಶ್ಯಕವೆಂದರೆ ಹಾಗಲ್ಲ ಸ್ಥಾನವೈಚಿತ್ರಕ್ಕೆ ಅದೃಷ್ಟವೇ ಕಾರಣವಾಗುವುದರಿಂದಲೇ ಅಂತರ್ಭಾವವು ಆದ್ದರಿಂದ ಅದೃಷ್ಟವೇ ಜೀವರಿಗೆ ವೈಚಿತ್ರ್ಯ ಕಾರಣವು

ಒಂದೇ ಸ್ಥಳ ವಾಸಿಗಳಾದ ಜೀವರುಗಳಿಗೂ ಪರಸ್ಪರ ವೈಚಿತ್ರ್ಯಗಳು ಕಾಣುವುದರಿಂದ ಸ್ಥಾನವ್ಯತ್ಯಾಸಕ್ಕೂ ಅದೃಷ್ಟವೇ ಕಾರಣವು

–ಇತಿ ಅದೃಷ್ಟಾಧಿಕರಣಂ–

ದ್ವಿತೀಯಾಧ್ಯಾಯದ ತೃತೀಯ ಪಾದವು ಮುಕ್ತಾಯವು

ಶ್ರೀ ಕೃಷ್ಣಾರ್ಪಣಮಸ್ತು

## -ಪ್ರಾಣೋತ್ಪತ್ತ್ಯಧಿಕರಣಂ-

1 **ಯುಕ್ತಿ ಸಹಿತಶ್ರುತಿವಿರೋಧಂ ಶ್ರುತೀನಾಮುಪಾಕರೋತ್ಯನೇನ ಪಾದೇನ**

ಈ ಪಾದದಲ್ಲಿ ಶೃತಿಗಳಲ್ಲಿ ಯುಕ್ತಿ ಸಹಿತ ಶೃತಿಗಳ ವಿರೋಧವನ್ನು ಪರಿಹರಿಸುವರು.

**ಪ್ರಾಣಾ ಏವೇದ ಮಗ್ರ ಆಸುಸ್ತೇಭ್ಯೋ ಭೂತಾನಿ ಜಜ್ಞಿರೇ । ಭೂತೇಭ್ಯೋಂಡಮಂಡಸ್ಯಾಂತಸ್ತ್ವಿಮೇ ಲೋಕಾಃ। ಅಥಪ್ರಾಣಾ ಏವಾನಾದಯಃ ಪ್ರಾಣಾ ನಿತ್ಯಾ ಇತಿ ಕಾಷಾಯಣಶ್ರುತೌ ಪ್ರಾಣಾನಾಮನುತ್ಪತ್ತಿಃ ಶ್ರೂಯತೇ।**

ಈ ಜಗತ್ತಿನ ಪ್ರಳಯ ಕಾಲದಲ್ಲಿ ಇಂದ್ರಿಯಗಳೇ (ಪ್ರಾಣಾಃ) ಇದ್ದವು ಅವುಗಳಿಂದ ಪಂಚಭೂತಗಳುತ್ಪನ್ನವು ಅನಂತರ ಬ್ರಹ್ಮಾಂಡನು ಅದರ ಒಳಗೆ ಈ ಹದಿನಾಲ್ಕು ಲೋಕಗಳು ಉತ್ಪನ್ನವು ಹೀಗೆ ಸರ್ವಕಾರಣತ್ವೇನ ಪ್ರಳಯ ಕಾಲದಲ್ಲಿರುವುದರಿಂದ ಪ್ರಾಣಾ ಅನಾದಿಗಳು ಮತ್ತು ಉತ್ಪತ್ತಿಶೂನ್ಯಗಳು

2 **ನೋಪಾದಾನಂ ಹೀಂದ್ರಿಯಾಣಾಮತೋನುತ್ಪತ್ತಿರಿಷ್ಯತೇ। ಉಪಾದಾನಕೃತಾ ಸೃಷ್ಟಿಃ ಸರ್ವಲೋಕೇಷು ದೃಶ್ಯತ ? ತಿ ಭವಿಷ್ಯತ್ಪರ್ವಣಿ । ಏತಸ್ಮಾಜ್ಜಾಯತೇ ಪ್ರಾಣೋ ಮನಸರ್ವೇಂದ್ರಿಯಾಣಿ ಚೇತಿ** (ಮು-2-1-3) ಇತಿಚ

ಮೇಲಿನ ಸ್ಮೃತಿಯಿಂದ ಉಪಾದಾನ ಕಾರಣವಿಲ್ಲದ್ದರಿಂದ ಇಂದ್ರಿಯಗಳು ಪರಬ್ರಹ್ಮನಂತೆ ಅನಾದಿಗಳು ಲೋಕದಲ್ಲಿ ಘಟಾದಿಕಾರ್ಯಗಳು ಉಪಾದಾನ ಕಾರ್ಯವಾಗಿ ಕಂಡಿದೆ ಆದರೆ ಮುಂದಿನ ವಾಕ್ಯದಿಂದ ಇಂದ್ರಿಯ ಪ್ರಾಣಗಳಿಗೆ ಉತ್ಪತ್ತಿಯು ಶೃತಿಯು ಹೇಳುತ್ತದೆ ವಿರೋಧವೆಂದರೆ

## ಸೂ ಓಂ॥ ತಥಾ ಪ್ರಾಣಾಃ ಓಂ॥ 1

ಯಥಾ ಕಾಶಾದಯ ಪರಮಾತ್ಮನ ಉತ್ಪದ್ಯಂತೆ ತಥಾ ಪ್ರಾಣಾ ಅಪಿ॥

ಆಕಾಶಾದಿಗಳು ಶ್ರೀ ವಿಷ್ಣುವಿನಿಂದ ಉತ್ಪತ್ತಿ ಹೊಂದುವಂತೆ ಪ್ರಾಣ ಇಂದ್ರಿಯಾದಿಗಳೂ ಶ್ರೀ ಪರಮಾತ್ಮನಿಂದ ಉತ್ಪತ್ತಿಯನ್ನು ಹೊಂದುವುವು ಪ್ರಾಣಾದಿಗಳಿಗೆ ಪರಾಧೀನ ವಿಶೇಷಾ ವ್ಯಾಪ್ತಿ ರೂಪ ಉತ್ಪತ್ತಿಯು ಶ್ರೀ ಪರಮಾತ್ಮನಿಂದ ಸಿದ್ಧವು

## ಸೂ ಓಂ॥ ಗೌಣ್ಯ ಸಂಭವಾತ್ ಓಂ॥ 2

ಪ್ರಾಣಾದಿ ಇಂದ್ರಿಯಗಳಿಗೆ ಅನಾದಿತ್ವವನ್ನು ಹೇಳುವ ಶೃತಿಗಳು (ಗೌಣೀ) ಅಮುಖ್ಯವು ಸೂಕ್ಷ್ಮರೂಪದಿಂದ ಉತ್ಪತ್ತಿಯುಳ್ಳವು ಯಾಕೆಂದರೆ ಇಂದ್ರಿಯಗಳಿಗೆ ಮುಖ್ಯವಾಗಿ ಅನಾದಿತ್ವ ಪ್ರಯುಕ್ತವಲ್ಲ "ಏತಸ್ಮಾತ" ಎಂಬ ಶೃತಿಯಿಂದ ಮುಖ್ಯವಾಗಿ ಉತ್ಪತ್ತಿವುಳ್ಳವುಗಳೇ

॥ಅ॥ ಅನಾದಿತ್ವಶೃತಿಗೌಣಾನಾದಿತ್ವಾಪೇಕ್ಷಯಾ॥ ಮುಖ್ಯಾಸಂಭವಾತ್
ನಿತ್ಯಾನ್ಯೇತಾನಿ ಸೌಕ್ಷ್ಮ್ಯೇಣ ಹೀಂದ್ರಿಯಾಣಿ ತು ಸರ್ವಶಃ ।
ತೇಷಾಂ ಭೂತೈರುಪಚಯಃ ಸೃಷ್ಟಿಕಾಲೇ ವಿಧೀಯತೇ। ಪರೇಣ
ಸಾಮ್ಯಸಂಪ್ರಾಪ್ತೇಃ ಕಸ್ಯಸ್ಯಾನ್ಮುಖ್ಯನಿತ್ಯತೇತಿ ಹಿ ಭವಿಷ್ಯತ್ಪರ್ವಣಿ

ಸರ್ವೇಂದ್ರಿಯಗಳೂ ಸೂಕ್ಷ್ಮರೂಪಗಳಿಂದ ಅನಾದಿಗಳು ಅವುಗಳಿಗೆ ಭೂತಗಳಿಂದ ಬಿಡಲ್ಪಟ್ಟು ಪ್ರತಿ ಸೃಷ್ಟಿಕಾಲದಲ್ಲಿ ಪರಮಾತ್ಮನಿಂದ ಉಪಚಯವನ್ನು ಹೊಂದಿ ಸಾಮರ್ಥ್ಯತೆಯನ್ನು ಹೊಂದುವುದು, ಸಾಮರ್ಥ್ಯ ಅಧಿಕೃತತ್ವದಿಂದ ಪರಮಾತ್ಮನೇ ಸ್ವತಂತ್ರನು ಆದ್ದರಿಂದ ಇಂದ್ರಿಯಾದಿಗಳಿಗೆ ಗೌಣ ಅನಾದಿತ್ವವೇ ಮುಖ್ಯತಃ ಅಲ್ಲ

ತೈಜಸಾತ್ತು ವಿಕುರ್ವಾಣಾ ದಿಂದ್ರಿಯಾಣಿ ದಶಾ ಭವನ್ ।
ತೈಜಸಾನೀಂದ್ರಿಯಾಣ್ಯಾಹುಃ ॥
ತಥಾವಿಶಿಷ್ಟ ಕಾರ್ಯತ್ವಾದ್ದೇವಾ ವೈಕಾರಿಕಾ ಸ್ಮೃತಾ ।
ಅತಿಜಾಜ್ಯಲ್ಯಮಾನತ್ವಾತ್ತೈಜಸಾನೀಂದ್ರಿಯಾಣ್ಯಪಿ।
ತಾಮಸಾನಿ ತುಭೂತಾನಿ ತತಸ್ತಾವದಭೂತ್ರಯಂ॥ ಇತಿವಾದ್ಮೆ

ಅಹಂಕಾರದಿಂದುತ್ಪನ್ನವಾದ ಭೂತಗಳಿಗೆ ಸೂಕ್ಷ್ಮರೂಪ ಪ್ರಾಣಗಳಿಂದೋಪೆ ಚಯುವು ಭೂತಗಳಿಗಿಂತ ಪೂರ್ವದಲ್ಲಿ ಉತ್ಪನ್ನವಾದ ಮಹದಾದಿತತ್ವಾಬಿಮಾನಿ ದೇವತೆಗಳ ಇಂದ್ರಿಯಾದಿ ಭೂತಗಳುತ್ಪತ್ತಿಯು ತತ್ಸರೂಪೇಂದ್ರಿಯುಗಳಲ್ಲಿ ತಾತ್ವಿಕ ಜೇಷ್ಠತ್ರಮರುಗಳು ಪ್ರಾಕೃತ ದೇಹಾಧಿಷ್ಟಿತ ಇಂದ್ರಿಯ ವ್ಯಾಪಾರಗಳ ಪೂರ್ವ ವಲ್ಲಿಯೇ ಭೂತಕಾರಣದವುಕ್ಷತ್ತಿಯು ಆದ್ದರಿಂದ ಪ್ರಾಣ ಮತ್ತು ಯಂದ್ರಿಯಗಳು ಉತ್ಪತ್ತಿ ಅನುತ್ಪತ್ತಿವುಳ್ಳವೇ

## ಸೂ ಓಂ॥ ಪ್ರತಿಜ್ಞಾನುಪರೋಧಾಚ್ಚ ಓಂ॥ 3

**ಸ ಇದಂ ಸರ್ವಮುಸೃಜತೇತಿ** (ತೈ 2-6) ಇತಿ

ಮೇಲಿನ ಶೃತಿಯಲ್ಲಿ ಸರ್ವವೂ ಶ್ರೀ ಪರಮಾತ್ಮನ ಸೃಷ್ಟಿ ಎಂದು ಹೇಳಿರುವುದ ರಿಂದ ಈ ಪ್ರತಿಜ್ಞಾನುಸಾರ ಪ್ರಾಣಾಧಿಗಳು ಉತ್ಪತ್ತಿವುಳ್ಳವುಗಳೇ

–ಇತಿ ಪ್ರಾಣೋತ್ಪತ್ಯಧಿಕರಣಂ–

–ತತ್ಪ್ರಾಗಧಿಕರಣಂ–

ಈ ಅಧಿಕರಣದಲ್ಲಿ ಮನೆ ಜನ್ಮ ವಿಷಯ ಶೃತಿವಿರೋಧವು ಪರಿಹರಿಸಲ್ಪಡುತ್ತದೆ

1 **ದ್ವಿಧಾ ಹ್ಯೇವೇಂದ್ರಿಯಾಣಿ ನಿತ್ಯಾನಿ ಚಾನಿತ್ಯಾನಿ ಚ ತತ್ರ ನಿತ್ಯಂ ಮನೋನಾದಿತ್ವಾನ್ನ ಹ್ಯೇಮುನಾಃ ಪುಮಾಂಸ್ತಿಷ್ಠತ್ಯನಿತ್ಯಾನ್ಯನ್ಯಾನೀತಿ ಗೌಪವನಶ್ರುತೌ ಮನಸೋನುತ್ಪತ್ತಿಃ ಸಯುಕ್ತಿಕಾ ಶ್ರೂಯತೇ**

ಮೇಲಿನ ಗೌಪವನ ಶೃತಿಯಲ್ಲಿ ಮನಸ್ಸಿಗೆ ಪೂರ್ವೋತ್ಪತ್ತಿ, ರೂಪ ನಿತ್ಯತ್ವವ ನ್ನು ಹೇಳಿ ಇತರ ಇಂದ್ರಿಯುಗಳಿಗೆ ಅನಿತ್ಯತ್ವವನ್ನು ಹೇಳಿರುವುದರಿಂದ ಅನಾದಿತ್ವ ಶೃತಿ ಪ್ರಾಬಲ್ಯವು ಉತ್ಪತ್ತಿ ಶೃತಿಯ ಅಪ್ರಾಮಾಣ್ಯದಿಂದ ಮನಸ್ಸಿಗೆ ಅನುತ್ಪತ್ತಿಯೇ

## ಸೂ|| ಓಂ ತತ್ಪ್ರಾಕ್‌ಶ್ರುತೇಶ್ಚ ಓಂ|| 4

||ೞ ಮನಃ ಸರ್ವೇಂದ್ರಿಯಾಣಿ ಚ (ಮು 2-1-3) ಇತಿ ಪೂರ್ವೋಕ್ತತ್ವಾತ್ಸುತ್ಪತ್ತಿ: ಮನಸೋಯುಜ್ಯತೇ|

ಮನಸ್ಸಿನ ಜತೆಯಲ್ಲಿಯೇ ಸರ್ವೇಂದ್ರಿಯ ಉತ್ಪತ್ತಿಯನ್ನು ಪೂರ್ವದಲ್ಲಿ ಹೇಳಿ ಈ ಅನುತ್ಪತ್ತಿಯು ಅನಂತರದಲ್ಲಿ ಬಂದಿರುವುದರಿಂದ ಮನಸ್ಸು ಉತ್ಪತ್ತಿವುಳ್ಳದ್ದೇ

3 ವಾಯು ಸೂಕ್ತವಚನವು-**ಪೂರ್ವಂ ಮನಃ ಸಮುತ್ಪನ್ನಂ ತತೋ ನ್ಯೇಷಾಂ ಸಮುದ್ಭವಃ| ತದನುತ್ಪತ್ತಿ ವಚನಮಲ್ಪೋಪಚಯ ಕಾರಣಾದಿತಿ**

**ಇತಿವಾಯುಪ್ರೋಕ್ತವಚನ ಮಲ್ಪೋಪಚಯಕಾರಣಂ**

ಮನಸ್ಸು ಪೂರ್ವದಲ್ಲಿ ಹುಟ್ಟಿತು ಅನಂತರ ಮಿಕ್ಕ ಇಂದ್ರಿಯಗಳು ಈ ಅನುತ್ಪತ್ತಿ ಶಂಕಿತ ವಚನವು ಅಲ್ಪ ಉಪಚಯ ಕಾರಣವು. ಇತರೇಂದ್ರಿಯಗಳಂತೆ ಮನೇಂದ್ರಿಯಕ್ಕೆ ಭೂತಗಳ ಬಹುಭಾಗ ಉಪಚಯವು ಇಲ್ಲವಾಗಿ ಹೀಗೆ ಹೇಳಿದೆ.

– ಇತಿ ಪ್ರಾಣಾಧಿಕರಣಂ –

–ತತ್ಪೂರ್ವಕತ್ವಾಧಿಕರಣಂ–

ಈ ಅಧಿಕರಣದಲ್ಲಿ ವಾಕ್ ಉತ್ಪತ್ತಿ ಶೃತಿಗೆ ಅನುತ್ಪತ್ತಿ ಶೃತಿ ವಿರೋಧದ ಪರಿಹಾರವು

1 **ನಿತ್ಯಯಾ ನಿತ್ಯಯಾಸ್ತೌಮಿ ಪರಮಾತ್ಮಾನಮಚ್ಯುತಂ । ಇತಿ**

ವಾಗ್ವಾನ ನಿತ್ಯಾನ ಹ್ಯೇಷೊತ್ಪದ್ಯತೇ ಎಂಬ ಪೌಷ್ಯಾಯಣ ಶೃತಿಯು 'ವಾಕ್' ಗೆ ಅನುತ್ಪತ್ತಿಯನ್ನು ಹೇಳುವುದು ಮೇಲಿನ ಪೈಂಗೀ ಶೃತಿಯು 'ವಾಕ್‌ಗೆ' **ಉತ್ಪತ್ತಿ** ಅನುತ್ಪತ್ತಿಯನ್ನು ಹೇಳಿದೆ

ವಾಗ್ವಾ ನ ನಿತ್ಯಾ ನ ಹ್ಯೇಷೋತ್ಪದ್ಯತೇऽ ಸ್ಯಾಂ ಹಿ ಶ್ರುತಿರವತಿಷ್ಠಿತೆ ಇತಿ ಸಯುಕ್ತಿಕ ಪೌಷ್ಯಾಯಣಶ್ರುತೌ ವಾಚೋऽನುತ್ಪತ್ತಿರುಚ್ಯತೇ–

–ಶೃತಿಯು ಅನುತ್ಪತ್ತಿಯನ್ನು ಹೇಳಿದೆ

## ಸೂ|| ಓಂ ತತ್ಪೂರ್ವಕತ್ವಾದ್ವಾಚಃ ಓಂ|| 5

ತಸ್ಮಾನ್ಮನ ಏವ ಪೂರ್ವರೂಪಂ ವಾಗುತ್ತರರೂಪಮಿತಿ ಮನಃ ಪೂರ್ವ
ಕತ್ವಾದ್ವಾಚೊನಾನುತ್ಪತ್ತಿಃ ||

ವಾಗಿಂದ್ರಿಯಕ್ಕಿಂತ ಪೂರ್ವದಲ್ಲಿಯೇ ಮನಸ್ಸು ಕಾರಣತ್ವದಿಂದ ಹೇಳಲ್ಪಟ್ಟಿರುವುದರಿಂದ ವಾಗಿಂದ್ರಿಯವು ಉತ್ಪತ್ತಿವುಳ್ಳದ್ದೆ. "ಮನಸಾ ವಾ ಅಗ್ರೆ ಸಂಕಲ್ಪಯತಿ ಅಥವಾ ಬಾವ್ಯವ ಹರತಿ" ಎಂಬ ಶೃತಿಯು ಹೇಳುತ್ತದೆ

3 **ವಾಗಿಂದ್ರಿಯಸ್ಯ ನಿತ್ಯತ್ವಂ ಶೃತಿ ಸನ್ನಿಧಿ ಯೋಗ್ಯತಾ** ||

ಈ ಉತ್ಪತ್ತಿರ್ಮನಸೊ ಯಸ್ಮಾತ್ ? ನ್ನನಿತ್ಯತ್ವಂ ಕುತಶ್ಚನ ಇತಿ ವಾಯು ಪ್ರೊಕ್ತೇ ನಿತ್ಯತ್ವವು ಅಮುಖ್ಯವೇ ಮನೋ ಇಂದ್ರಿಯದಿಂದ ವಾಗಿಂದ್ರಿಯಕ್ಕೆ ಉತ್ಪತ್ತಿಯನ್ನು ಹೇಳಿರುವುದರಿಂದ ನಿತ್ಯತ್ವವು ಸುತರಾಂ ನಿಷಿದ್ಧವು.

– ಇತಿ ತತ್ಪೂರ್ವಕತ್ವಾಧಿಕರಣಂ –

### – ಸಪ್ತಗತ್ಯಧಿಕರಣಂ –

ಈ ಅಧಿಕರಣದಲ್ಲಿ ಪ್ರಾಣಸಂಖ್ಯಾ ವಿಷಯ ಶೃತಿ ವಿರೋಧವು ಪರಿಹಾರವು

1 **ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್** (ಮು 2-1-8)ಶೃತಿ ಇತಿಃ।
**ಸಪ್ತೈವ ಮಾರುತಾ ಬಾಹ್ಯೆ ಪ್ರಾಣಾಃ ಸಪ್ತ ತಥಾತ್ಮನಿ।**
**ಅಧಿದೈವೇ ತಥಾಧ್ಯಾತ್ಮೇ ಸಂಖ್ಯಾ ಸಾಮ್ಯಂ ವಿದೋವಿದುರಿತಿ ಚ ಸ್ಕಾಂದೇ ।**

ಅಥರ್ವಣೀಯ ಶೃತಿಯು ಶ್ರೀ ಪರಮಾತ್ಮನಿಂದ ಏಳು ಇಂದ್ರಿಯಗಳು ಹುಟ್ಟಿ ದವು ಎಂದು ಹೇಳುವುದು ದೇಹದಿಂದ ಹೊರಗೆ "ಮರುತ"ಗಳೆಂಬ ಏಳು ಇಂದ್ರಿ ಯಾಭಿಮಾನಿ ದೇವತೆಗಳು (ಅಧಿದೇವತೆಗಳು) ಉತ್ಪನ್ನರಾದರು ಆದ್ದರಿಂದ ದೇಹದಲ್ಲಿ ಇರುವವರು ಏಳು ಸಂಖ್ಯಾ ಇಂದ್ರಿಯ ಪ್ರಾಣಗಳು

ಸ್ಕಾಂದ ಪುರಾಣದಲ್ಲಿ ದೇಹದ ಹೊರಗೆ ಏಳು "ಮರುತ" ಗಳು ಮತ್ತು ಒಳಗೆ ಏಳು "ಮರುತ" ಪ್ರಾಣಗಳು ಅಧಿದೈವ ಮತ್ತು ಆಧ್ಯಾತ್ಮಗಳಲ್ಲಿ ಹೀಗೆ ಸಂಖ್ಯಾ ಸಾಮ್ಯವೆಂದು ಜ್ಞಾನಿಗಳು ಹೇಳುವರು

2 **ದ್ವಾದಶ ವಾ ಏತೇ ಪ್ರಾಣಾ ದ್ವಾದಶಮಾಸಾ ದ್ವಾದಶಾದಿತ್ಯಾ ದ್ವಾದಶಾರಾಶಯೋ ದ್ವಾದಶಗ್ರಹಾ ಇತಿ ಕೌಂಡಿನ್ಯಶ್ರುತೌ ದ್ವಾದಶ ಪ್ರಾಣಾ ದೃಶ್ಯಂತೇ ।**

ಕೌಂಡಿನ್ಯ ಶೃತಿಯು ಪ್ರಾಣಗಳು 12 ಎಂದು ರಾಶಿ ಮತ್ತು ಗ್ರಹಗಳ ಸಾಮ್ಯ ಸಂಖ್ಯೆಯಿಂದ ಹೇಳಿದೆ ಆದ್ದರಿಂದ ಸಂಶಯವು

**ಅತೋವಕ್ತಿ,**

## ಸೂ॥ ಓಂ॥ ಸಪ್ತಗತೇರ್ವಿಶಿತ ತ್ವಾಚ್ಚ ಓಂ॥ 6

ಜ್ಞಾನೇಂದ್ರಿಯಾಪೇಕ್ಷಯಾ ಸಪ್ತತ್ವಂ। ಗುಹಾಶಯಾಂ ನಿಹಿತಾಃ ಸಪ್ತ ಸಪ್ತ ಇತಿ ವಿಶೇಷಣಾತ್"

ಜ್ಞಾನ ಜನಕ ಇಂದ್ರಿಯಗಳು ಏಳು ಮಾತ್ರ ವೆಂದು ನಿರ್ಣಯವು "ಸಪ್ತ ಪ್ರಾಣಾ" ಎಂದು ಶರೀರದ ಹೃದಯಾಕಾಶದಲ್ಲಿ ಬುದ್ಧಿ ಸೂಚಿತವಾಗಿ ವಿಶೇಷ ಯುಕ್ತಿಯಿಂದ ನಿರ್ದಿಷ್ಟವಾಗಿರುವುದು ಶ್ರೋತ್ರ ಚಕ್ಷುಃ, ಸ್ಪರ್ಶನ, ರಸನ, ಘ್ರಾಣ್ಯ

ಮನಸ್ಸು ಬುದ್ಧಿ ಇವುಗಳು ಏಳು ಮಾತ್ರ ಜ್ಞಾನಾರ್ಥಗಳಾಗಿ ದೇಹದಲ್ಲಿ ಪ್ರತಿಷ್ಠಿತ ನಾಗಿರುವುವು ಬುದ್ಧೀಂದ್ರಿಯವು ಹೃದಯದಲ್ಲಿ ಪ್ರತಿಷ್ಠಿತವು

4 **ಸಪ್ತಪ್ರಾಣಾಸ್ತ್ವವಗತೇಃ ಪಂಚಪ್ರಾಣಾಶ್ಚ ಕರ್ಮಣಃ॥ ಏವಂ ಪ್ರಾಣದ್ವಾದಶಕಂ ಶರೀರೇ ನಿತ್ಯಸಂಸ್ಥಿತಮಿತಿ ಭವಿಷ್ಯತ್ಪರ್ವ ವಚನಂ ಚಶಬ್ದಾತ್ ॥**

ಜ್ಞಾನಸಂಬಂಧ ಇಂದ್ರಿಯಗಳು ಏಳಾದರೂ ಕ್ರಿಯಾರೂಪಕರ್ಮಗಳ ಸಂಬಂಧ ದಿಂದ ಅವುಗಳ ಜನಕತ್ವಕ್ಕೆ ಐದು ಪ್ರಾಣಗಳು ಹೀಗೆ ಪ್ರತಿಶರೀರದಲ್ಲಿಯೂ ಒಟ್ಟು 12 ಪ್ರಾಣಗಳು ಸ್ಥಿತರು

ಭವಿಷ್ಯತ್ಪರ್ವ ವಚನವು

## ಸೂ ಓಂ॥ ಹಸ್ತಾದಯಸ್ತುಸ್ಥಿತೇಽತೋ ನೈವಂ ಓಂ॥ 7

ಹಸ್ತಾದೀನಾಂ ಕರ್ಮವಿಷಯತ್ವಾನ್ನ ಸಹಪಾಠಃ

ಹಸ್ತ ಮುಂತಾದ ಐದು ಕರಣಗಳಲ್ಲಿ ಕರ್ಮಕರಣಕ್ಕಾಗಿ ಜ್ಞಾನದಿಂದ ವಿಲಕ್ಷಣಗಳಾದ ಐದು ಪ್ರಾಣಗಳು ಹೀಗೆ ಪ್ರತಿ ಶರೀರದಲ್ಲಿಯೂ ಹನ್ನೆರಡು ಪ್ರಾಣಗಳು ಸ್ಥಿತರು

6 **ಸಂಸಾರ ಸ್ಥಿತಿಹೇತುತ್ವಾತ್ಸಿದ್ಧಂ ಕರ್ಮವಿದೋ ವಿದುಃ । ತಸ್ಮಾದುದ್ಗತಿಹೇತುತ್ವಾತ್ ಜ್ಞಾನಂ ಗತಿರಿಹೋಚ್ಯತ ಇತಿ ವಾಯು ಪ್ರೋಕ್ತೇ ॥**

ಜ್ಞಾನಿಗಳು ಸಂಸಾರ ಸ್ಥಿತಿಗೋಸ್ಕರ ದೇಹದಲ್ಲಿ ಕರ್ಮೇಂದ್ರಿಯಗಳು ಇರುವುವು ಮತ್ತು ಜ್ಞಾನದಿಂದ ಮುಕ್ತಿ ಹೇತುತ್ವಕ್ಕಾಗಿ ಜ್ಞಾನೇಂದ್ರಿಯಗಳು ಇರುವುವು ಎಂದು ತಿಳಿಯುವರು.

–ಇತಿ ಸಪ್ತಗತ್ಯಧಿಕರಣಂ–

## -ಅಣ್ವಧಿಕರಣಂ-

ಈ ಅಧಿಕರಣದಲ್ಲಿ ಪ್ರಾಣಪರಿಮಾಣ ವಿಷಯ ಶ್ರುತಿ ವಿರೋಧದ ಪರಿಹಾರವು

1 **ದಿವೀವ ಚಕ್ಷುರಾತತಂ (ಋ-1-22-20) ಇತಿ ವ್ಯಾಪ್ತಿಃ ಪ್ರತೀಯತೇ ದೂರಶ್ರವಣದರ್ಶನಾದಿಯುಕ್ತಿಶ್ಚ ॥**

ಶ್ರೀ ವಿಷ್ಣುವಿನ ವ್ಯಾಪ್ತತ್ವಕ್ಕೆ ದೃಷ್ಟಾಂತವಾಗಿ ಚಕ್ಷುರಿಂದ್ರಿಯ ಲಕ್ಷಿತ ಸರ್ವೇಂದ್ರಿಯ ವ್ಯಾಪ್ತಿಯು ಹೇಳಿರುವುದರಿಂದ ಇಂದ್ರಿಯ ಪ್ರಾಣಾದಿಗಳು ವ್ಯಾಪ್ತಿಗಳು ಹೇಗೆ ಚಕ್ಷುರಿಂದ್ರಿಯವು ಆಕಾಶದಲ್ಲಿ ವ್ಯಾಪ್ತವಾಗಿ ಕಾಣದಿದ್ದರೂ ವಿಷಯ ಗ್ರಹಣ ಲಕ್ಷಣ ಫಲದಿಂದ ವ್ಯಾಪ್ತತ್ವವು ಅನುಮಾನಿಸಲು ಸಾಧ್ಯವೋ ಹಾಗೆ ಪರಮೇಶ್ವರನ ಸ್ವರೂಪವು ಎಲ್ಲಾ ಕಡೆ ವ್ಯಾಪ್ತತ್ವವು ಕಾಣದಿದ್ದರೂ ಅಸ್ವತಂತ್ರ ಪದಾರ್ಥಗಳ ಸತ್ತಾ ಪ್ರತೀತಿ ಪ್ರವೃತ್ತಿ ಜ್ಞಾನದಿಂದ ಆತನ ವ್ಯಾಪ್ತಿಯಲ್ಲಿ ವ್ಯಾಪ್ತ್ಯನುಮಾನವು ಸಾಧ್ಯವು ಹಾಗೆ ಪ್ರಾಣಿಗಳೂ ವ್ಯಾಪ್ತಗಳೇ ಎಂದು ಅನುಮಾನ ಸಾಧ್ಯವು ದೂರದಿಂದ ಕೇಳುವುದು ನೋಡುವುದು ಇತ್ಯಾದಿ ಯುಕ್ತಿಯು.

2. **ಅಣುಭಿಃ ಪಶ್ಯತ್ಯಣುಭಿಃ ಶೃಣೋತಿ ಪ್ರಾಣಾ ವಾ ಅಣವಃ ಪ್ರಾಣೈರ್ಹ್ಯೇತದ್ಭವತೀತಿ ಕೌಂಡಿನ್ಯ ಶ್ರುತಿಃ ॥**

ಪುರುಷನು ಅಣುಗಳಾದ ಜ್ಞಾನೇಂದ್ರಿಯದಿಂದ ಆ ಆ ಇಂದ್ರಿಯಗಳ ಯೋಗ್ಯ ವಸ್ತುಗಳನ್ನು ತಿಳಿಯುವನು ಹಾಗೆಯೇ ಆ ಆ ಇಂದ್ರಿಯಗಳ ಕರ್ಮಗಳನ್ನು ಮಾಡುವನು ಪ್ರಾಣಗಳು ಅಣುಗಳೇ ಎಂದು ಕೌಂಡಿನ್ಯ ಶ್ರುತಿಯು.

3 ಅತೋವಕ್ತಿ- ಅದಕ್ಕಾಗಿ ಹೇಳಿದೆ,

**ಸೂ॥ ಓಂ॥ ಅಣವಶ್ಚ ಓಂ ॥ 8**

ತದ್ಯ ಧಾಹ್ಯಣು ನಶ್ಚಕ್ಷುಪಃ ಪ್ರಕಾಶೋ ವ್ಯಾತತ ಏವ ಮೇವಾಸ್ಯ ಪುರುಷಸ್ಯ ಪ್ರಕಾಶೋ ವ್ಯಾತತೋ "ಣು ಹೇವ್ಯೈಷ ಪುರುಷೋ ಭವತಿ" ಇತಿ ಶಾಂಡಿಲ್ಯ ಶೃತಿಃ||

ಪ್ರಾಣ ವಾಚ್ಯ ಇಂದ್ರಿಯಗಳು ಸ್ವರೂಪತಃ ಅಣುಗಳೇ. ಆದರೆ ತೇಜಸ್ಸಿನಂತೆ ವ್ಯಾಪ್ತ ವ್ಯಾಪಾರವುಳ್ಳವುಗಳು ಪ್ರಕಾಶ ವ್ಯಾಪ್ತಿ ಸಾಧಕ ಅಣುತ್ವ ಇಂದ್ರಿಯ ವ್ಯಾಪಾರವುಳ್ಳ ಜೀವನು ಸ್ವರೂಪತಃ ಅಣುವೇ.

– ಇತಿ ಅಣ್ವಧಿಕರಣಂ –

– ಶ್ರೇಷ್ಠಾಧಿಕರಣಂ –

ಈ ಅಧಿಕರಣದಲ್ಲಿ ಶ್ರೀಮುಖ್ಯ ಪ್ರಾಣನ ಜನ್ಮ ವಿಷಯ ಶೃತಿ ವಿರೋಧವು

1. **ನೈಷ ಪ್ರಾಣ ಉದೇತಿ ನಾಸ್ತಮೇತ್ಯೇಕಲ ಏವ ಮಧ್ಯೇ ಸ್ಥಾತಾ ಅಥೈನ ಮಾಹುರ್ಮಧ್ಯಮಃ ಇತೀತಿ ಮುಖ್ಯ ಪ್ರಾಣಸ್ಯ ಶ್ರೂಯತೆ ||**

ಈ ಮುಖ್ಯ ಪ್ರಾಣನು ಉತ್ಪತ್ತಿ ಹೊಂದುವುದಿಲ್ಲ ನಾಶವನ್ನು ಹೊಂದುವುದಿಲ್ಲ ಏಕ ಪ್ರಕಾರವಾಗಿ ಜನನ ಮರಣಗಳ ಮಧ್ಯಾವಸ್ಥೆಯಾದಂತಾವನಾವಸ್ಥೆಯಿಂದ ಮಧ್ಯ ದೇಹದಲ್ಲಿರುವವನು ಅಥವಾ ಸೃಷ್ಟಿ, ಸ್ಥಿತಿ, ಮಧ್ಯಕಾಲ ಪ್ರಲಯ ಕಾಲದಲ್ಲಿ ಸ್ಥಿತನಾದ್ದರಿಂದ ಮಧ್ಯಮನೆಂದು ನಾಮವು ಆದ್ದರಿಂದ ಮುಖ್ಯ ಪ್ರಾಣನಿಗೆ ಅನುತ್ಪತ್ತಿಯು

2. **ಯತ್ಪ್ರಾಪ್ತಿರ್ಯತ್ಪರಿತ್ಯಾಗ ಉತ್ಪತ್ತಿರ್ಮರಣಂ ತಥಾ ।**

ತಸ್ಯೋತ್ಪತ್ತಿರ್ವರ್ತಿಶ್ಚೈವ ಕಥಂ ಪ್ರಾಣಸ್ಯಯುಜ್ಯತೆ ॥
ಇತಿ ವಾಯುಪ್ರೋಕ್ತೇ । ಆತ್ಮನಃ ಏಷ ಪ್ರಾಣೋ ಜಾಯತೆ
(ಪ್ರ 3-3) ಇತಿ ಚ ॥

ಯಾವ ವಸ್ತುವು ದೇಹವನ್ನು ಹೊಂದಲು ಸರ್ವಶಕ್ತಿಗಳೂ ಶಾಂತವಾಗುವುವೋ ಅಂತಹ ಅಖಿಲ ಜೀವರ ಉತ್ಪತ್ತಿ ಮಾರಣಗಳು ಹೇಗೆ ತಾನೆ ಪ್ರಾಪ್ತವು ? ಇಲ್ಲವೆ ಇಲ್ಲ ಆದರೂ ಷಟ್ಪ್ರಶ್ನ ಶೃತಿಯಲ್ಲಿ ಮುಖ್ಯ ಪ್ರಾಣನು ಶ್ರೀ ಪರಮಾತ್ಮನಿಂದ ಹುಟ್ಟುವನು ಎಂದು ಹೇಳಿದೆ

3 ಅತ ಆಹ

## ಸೂ॥ ಓಂ॥ ಶ್ರೇಷ್ಠಶ್ಚ ಓಂ॥ 39

ಹೇಗೆ ಇತರ ಪ್ರಾಣಗಳು ಉತ್ಪತ್ತಿವುಳ್ಳವುಗಳೋ ಹಾಗೆಯೇ ಶ್ರೀ ಮುಖ್ಯ ಪ್ರಾಣನೂ ಉತ್ಪತ್ತಿವುಳ್ಳವನೇ

> ಸೌಕ್ಷ್ಮ್ಯೇಣ ಹ ವಾ ಏಷೋ "ವತಿಷ್ಟತೆ ಸ್ಥೂಲತ್ವೇನೋ ದೇತಿ ಸೂಕ್ಷ್ಮಶ್ಚಾಥೊ ಸ್ಥೂಲಶ್ಚ । ಪ್ರಕೃತಿತಃ ಸೂಕ್ಷ್ಮೋನ್ಯತಃ ಸ್ಥೂಲೋ "ಧೈನಮಾಹುಃ ನಾದಿರನಾದಿರಿತಿ "ಗೌಪರನಶೃತೇಃ ॥

ಗೌಪವನ ಶೃತಿಯು. ಈ ಮುಖ್ಯ ಪ್ರಾಣನು ಸೂಕ್ಷ್ಮ ರೂಪದಿಂದ ಸರ್ವದಾ ಇರುವವನು ಸ್ಥೂಲ ಭಾವದಿಂದ ಉತ್ಪನ್ನನು. ಆದ್ದರಿಂದಲೇ ಮುಖ್ಯ ಪ್ರಾಣನನ್ನು ಸೂಕ್ಷ್ಮನು ಮತ್ತು ಸ್ಥೂಲನು ಎಂದು ಹೇಳುವರು ಯದ್ಯಪಿ ಶ್ರೀ ಮುಖ್ಯ ಪ್ರಾಣನು ಇತರ ಜೀವ ಸಾಧಾರಣದಿಂದ ವಿಶೇಷವಿಲ್ಲದಿದ್ದರೂ ಶರೀರಾದಿಗಳಲ್ಲಿ ಸ್ಥೂಲನಾಗಿದ್ದರೂ ಸ್ವರೂಪತಃ ಸೂಕ್ಷ್ಮನು. ಆದ್ದರಿಂದ ಸ್ವರೂಪತಃ ಉತ್ಪತ್ತಿಯಲ್ಲದವನು ಸ್ಥೂಲ ರೂಪದಿಂದ ಉತ್ಪತ್ತಿವುಳ್ಳವನು. ಆದ್ದರಿಂದ ಜ್ಞಾನಿಗಳು ಆತನನ್ನು ಸಾದಿ ಅನಾದಿ ಎಂದು ಕರೆಯುವರು.

## ಸೂ॥ ಓಂ॥ ನವಾಯುಕ್ರಿಯೇ ಪೃಥಗುಪದೇಶಾತ್ ಓಂ 10

"ಏಕಸ್ಮಾತ್" ಎಂಬ ಪ್ರಾಣೋತ್ಪತ್ತಿ ಶೃತಿಯಲ್ಲಿ ಮುಖ್ಯ ವಾಯುವಿನ ಉತ್ತ್ತಿಯು ಹೇಳಲ್ಪಟ್ಟಿದೆ "ಸ ಪ್ರಾಣಮಸೃಜತ" ಎಂಬ ಶೃತಿಯು ಮುಖ್ಯ ಪ್ರಾಣೋತ್ಪತ್ತಿಯನ್ನು ವಾಯು ಕ್ರಿಯೋತ್ಪತ್ತಿಗಿಂತ ಮುಂದೆಯೇ ಹೇಳಿರುವುದು ಬಾಹ್ಯ ವಾಯುಕ್ರಿಯೋತ್ಪತ್ತಿಗಿಂತ ಮುಂದೆಯೇ ಹೇಳಿರುವುದು ಬಾಹ್ಯ ವಾಯು ಚೇಷ್ಟಾಖ್ಯ ಕರ್ಮವು ಅನಂತರ ಉತ್ಪತ್ತಿಯು

ಚೇಷ್ಟಾಯಾಂ ಬಾಹ್ಯ ವಾಯೌ ಚ ಮುಖ್ಯ ಪ್ರಾಣೇಚ ಗೀಯತೆ ।
ಪ್ರಾಣ ಶಬ್ದ ಸ್ತ್ರಿಷು ಹ್ಯೇಷು ಮುಖ್ಯೇ ಮುಖ್ಯಃ ಪ್ರಕೀರ್ತಿತಃ ॥
ಇತಿ ವಾಯುಕ್ರಿಯಯೋರಪಿ ವ್ಯಪದೇಶಾದುತ್ಪತ್ತಿ ಶೃತಯೋರ್ನನ್ಯಾತ್ ॥

ಪ್ರಾಣ ಶಬ್ದವು ಅಲುಗಾಡುವಿಕೆ (ಸ್ಪಂದನ) ಬಾಹ್ಯ ವಾಯು ಮತ್ತು ಮುಖ್ಯ ಪ್ರಾಣ ಈ ಮೂರರಲ್ಲಿಯೂ ಉಪಯೋಗಿಸಲ್ಪಡುವುದು ಈ ಮೂರರಲ್ಲಿ ಮುಖ್ಯ ಪ್ರಾಣನು ಮುಖ್ಯವಾಗಿ ಹೇಳಿರುವುದರಿಂದ ಮಿಕ್ಕ ಎರಡು ವಿಷಯಗಳೂ ಮುಖ್ಯ ವಾಗಿಯಲ್ಲ

**5 ಸಪ್ರಾಣಮಸ್ಯಜತ್ ಖಂವಾಯುಜ್ಯೋರಿತಿ ... _ ತಪೋ ಮಂತ್ರಾಃ ಕರ್ಮ (ಪ್ರ-6-4) ಇತಿ ಪ್ರಥಗುಪದೇಶಾತ್ ।**

ಪರಮಪುರುಷ ಶ್ರೀ ಪರಮಾತ್ಮನು "ಪ್ರಾಣಂ" ಜೀವ ಕಲಾಭಿಮಾನಿಯನ್ನು ಸೃಷ್ಟಿಸಿದನು ಅವನ ನಿಮಿತ್ತದಿಂದ ಜೀವನಿಗೆ ಆಸ್ತಿಕ್ಯ ನಿಷ್ಠತೆಯುಳ್ಳ ಶ್ರೀ ಭಾರತಿ ದೇವಿಯನ್ನು ಸೃಷ್ಟಿ ಮಾಡಿದನು ಅನಂತರ ಆಕಾಶ, ವಾಯು, ತೇಜಸ್ಸು, ಆಪ, ಪೃಥಿವೀ ಎಂಬ ಶರೀರೋಪಾದನ ಪಂಚ ಭೂತಗಳನ್ನು ಮತ್ತು ಜೀವರಿಗೆ ಪ್ರವೃತ್ತಿ ಕಾರಣವಾದ ಚಕ್ಷುರಾದಿಯಿಂದ್ರಿಯಗಳನ್ನು ಪ್ರಧಾನ ಕಾರಣ "ರೇತ" ವನ್ನು ಜ್ಞಾನಾದಿ ಹೇತು ಸಾಧಕ "ತಪ" ವನ್ನು ಸುಖಾದಿ ನಿಮಿತ್ತ ಪುಣ್ಯಾಪಾಪ ಫಲ ಲಕ್ಷಣ "ಕರ್ಮ"ವನ್ನು ಇಂದ್ರಿಯಾಶ್ರಯ ಭೂತ "ಲೋಕ" ಗೋಲಕಗಳನ್ನು ಸೃಷ್ಟಿಸಿದನು ಈ ಲೋಕ ಸೃಷ್ಟಿಯ ನಂತರ ಅದನ್ನು ನಿಮಿತ್ತೀಕರಿಸಿ ದೇವದತ್ತಾದಿ ನಾಮಗಳನ್ನು ಪ್ರಾಣಾತದಿ ಶಬ್ದಿರಷೋಡಶರ ಕಲಾ ಕಲಾಭಿಮಾನಿ ಮುಖ್ಯ ಪ್ರಾಣ ವಾಚಗಳನ್ನು ಸೃಷ್ಟಿಸಿದನು. ಪೂರ್ವ ಪೂರ್ವೋತ್ಪನ್ನ "ಕಲಾ"ಗಳಿಗೆ ಹಾದಿರವು ನಿಮಿತ್ತೀಭೂತಗಳು

ವಿಷ್ಣೋಃ ಪ್ರಾಣಸ್ತತಃ ಶ್ರದ್ಧಾ ತಸ್ಯಾ ರುದ್ರೋಮನೋಭಿಧಃ ।
ತತಸ್ತ್ವಿಂದ್ರಿಯಾತ್ಮಾ ತಸ್ಯಸೋಮೋನ್ನದೇವತಾ ।

6. **ಭೂತಾನಿ ಚೇಷ್ಟಾ ಮಂತ್ರಾಶ್ಚ ಮುಖ್ಯ ಪ್ರಾಣಾದಿದಂ ಜಗತ್ ।
ಮುಖ್ಯ ಪ್ರಾಣಃ ಪರಸ್ಮಾಚ್ಚನಪರಃ ಕಾರಣಾನ್ವಿತ ಇತಿ ವಾಯು
ಪ್ರೋಕ್ತೇ ॥**

ಭೂತಗಳು, ಚೇಷ್ಟಾ ಮಂತ್ರಗಳೂ ಈ ಸರ್ವ ಜಗತ್ತೂ ಮುಖ್ಯ ಪ್ರಾಣನಿಂದಲೆ ಶ್ರೀ ಮುಖ್ಯ ಪ್ರಾಣನು ಪರಮಾತ್ಮನಿಂದ ಸೃಷ್ಟನು ಶ್ರೀ ಪರಮಾತ್ಮನೇ ಕಾರಣಾಂತರ ರಹಿತನು. ಹೀಗೆ ಮುಖ್ಯ ಪ್ರಾಣನಿಗೆ ಶ್ರೀ ಪರಮಾತ್ಮನಿಂದ ಉತ್ಪತ್ತಿಯು ಮತ್ತು ಆತನಿಗೆ ತನ್ನಿಂದ ನಿಯಮ್ಯವಾದ ಸರ್ವ ವಸ್ತುಗಳ ಸಮೋತ್ಪಾದಕತ್ವವು ಮಾತ್ರವೇ

– ಇತಿ ಶ್ರೇಷ್ಠಾಧಿಕರಣಂ –

## – ಚಕ್ಷುರಾದ್ಯಧಿಕರಣಂ –

ಈ ಅಧಿಕರಣದಲ್ಲಿ ಶ್ರೀಮುಖ್ಯ ಪ್ರಾಣನ ಸ್ವಾತಂತ್ರ್ಯ ಅಸ್ವಾತಂತ್ರ್ಯ ಶೃತಿ ವಿರೋಧವು ಪರಿಹರಿಸಲ್ಪಡುವುದು.

1. **ಪ್ರಾಣಾದಿದಮಾವಿರಾಸೀತ್ಪ್ರಾಣೋ ಧತ್ತೇ ಪ್ರಾಣೇ ಲಯಮು
ಮಭ್ಯುಪೈತಿ ನ ಪ್ರಾಣಃ ಕಿಂಚಿದಾಶ್ರಿತಃ ಇತ್ಯಾಗ್ನಿ ವೇಶ್ಯಶೃತೌ॥**

**ಮುಖ್ಯ** ಪ್ರಾಣನಿಂದ ವ್ಯತಿರಿಕ್ತವಾದ ಸರ್ವಜಗತ್ತೂ ಹುಟ್ಟಿತು. ಆತನಿಂದಲೇ ಧರಿಸಲ್ಪಡುವುದು. ಮತ್ತು ಆತನಲ್ಲಿಯೇ ಲಯವನ್ನು ಹೊಂದುವುದು. ಆ ಮುಖ್ಯ ಪ್ರಾಣನು ಯಾರನ್ನು ಆಶ್ರಯವುಳ್ಳವನಲ್ಲ ಸರ್ವ ಸ್ವತಂತ್ರನು.

2 **ಯದಾಶ್ರಯಾದಸ್ಯ ಚೇಷ್ಟಾ ಸೋನ್ಯಂಕಥಮುಪಾಶ್ರಯೇತ್ ।
ಯಥಾ ಪ್ರಾಣಃ ತಥಾ ರಾಜಾ ಸವಸ್ಯೈಕಾಶ್ರಯೋ ಭವೇತ್
ಇತಿಯುಕ್ತಿರ್ಭಾರತೇ ॥**

2 **ಯದಾಶ್ರಯಾದಸ್ಯ ಚೇಷ್ಟಾ ಸ ನಾನ್ಯಂಕಿಥಮುಪಾಶ್ರಯೇತ್ ।**
**ಯಥಾಪ್ರಾಣಃ ತಥಾರಾಜಾ ಸರ್ವಸ್ಯೈಕಾಶ್ರಯೋ ಭವೇತ್॥**
**ಇತಿಯುಕ್ತಿ ಭಾರತೇ**

ಸರ್ವ ಚೇಷ್ಟೆಗಳೂ ಯಾವಾತನನ್ನು ಆಶ್ರಯಿಸಿಕೊಂಡಿರುವುದೋ ಅಂಥ ಮುಖ್ಯ ಪ್ರಾಣನು ಅನ್ಯರ ಆಶ್ರಯವಾಗಿ ಉಳ್ಳವನಲ್ಲ ಲೋಕದಲ್ಲಿ ಸರ್ವ ಪ್ರಜೆಗಳೂ ರಾಜನನ್ನು ಆಶ್ರಯಿಸಿಕೊಂಡಿರುವ ಹಾಗೆಯೇ ಮುಖ್ಯಪ್ರಾಣನು ಸರ್ವಕ್ಕೂ ಆಶ್ರಯನು

3 **ಪ್ರಾಣಸ್ಯೈತದ್ವಶೇ ಸರ್ವಂ ಪ್ರಾಣಃ ಪರವಶೇಸ್ಥಿತಃ ।**
**ನ ಪರಃ ಕಂಚಿದಾಶ್ರಿತ್ಯ ವರ್ತತೇ ಪರನೋಯತಃ ॥**
ಇತಿ ಪೈಂಗಿಶೃತಿಯು

ಸರ್ವವೂ ಮುಖ್ಯ ಪ್ರಾಣನ ನ್ನು ಆಶ್ರಯಿಸಿಕೊಂಡಿರುವವು. ಆತನು ಶ್ರೇಷ್ಠನಾದ್ದರಿಂದಲೇ ಮತ್ಯಾರನ್ನೂ ಆಶ್ರಯಿಸಿ ಕೊಂಡಿರುವುದಿಲ್ಲ.

4 ಅತ ಆಹ—ಆದಕಾ ಹೇಳಿದೆ

## ಸೂ ಓಂ॥ ಚಕ್ಷುರಾದಿವತ್ತುತತ್ಸಹಶಿಷ್ಟ್ಯಾದಿಭ್ಯಃ ಓಂ॥ 11

ಚಕ್ಷುರಾದಿವನ್ಮುಖ್ಯ ಪ್ರಾಣೋಪಿ ಪರಮಾತ್ಮವಶ ಏವ ।
"ಸರ್ವಂ ಹ್ಯೇವೈತತ್ಪರ ಮೇವತಿಷ್ಠತೆ ಪ್ರಾಣಶ್ಚ ಪ್ರಾಣಾಶ್ಚ ಪ್ರಾಣಿನಶ್ಚ ।
ಸಹ್ಯೇಕ ಏವೈತಾನ್ನಯತ್ಯನ್ನಯತಿವಶೀಕರೋತಿ । ಇತಿ ಗೌಪವನ ಶೃತೌ
ಚಕ್ಷುರಾದಿಭಿ ಸಹತದ್ವಶತ್ವೇನೈವಶಾಸನಾತ್ ।

ಮುಖ್ಯ ಪ್ರಾಣನೂ "ಚಕ್ಷುಃ" ಮುಂತಾದುವಂತೆ ಶ್ರೀ ಪರಮಾತ್ಮಾಧೀನವೇ ಸ್ವತಂತ್ರನಲ್ಲ. "ಸರ್ವಂ ಹ್ಯೇವತತ್" ಎಂಬ ಗೌಪವನ ಶೃತಿಯಲ್ಲ ಚಕ್ಷುರಾದಿಗಳ ಸಹಿತ ಮುಖ್ಯ ಪ್ರಾಣನೂ ಪರಮಾತ್ಮಾಧೀನನೆಂದು ಹೇಳುವುದು ಸರ್ವ ಕರ್ತೃತ್ವಾದಿ ಧರ್ಮಗಳನ್ನು ಶ್ರೀ ಪರಮಾತ್ಮನಲ್ಲಿ ಯೇ ಮುಖ್ಯವಾಗಿ ಹೇಳುವುದು. ಶ್ರೀಮುಖ್ಯ ಪ್ರಾಣನು ಪ್ರಾಣಾದಿ ಇಂದ್ರಿಯಗಳು ಮತ್ತು ಎಲ್ಲಾ ಜೀವಗಳೂ ಪರಮಾತ್ಮನಿಂದ ಸೃಷ್ಟಿ ಸ್ಥಿತಿ ಲಯ ಮೋಕ್ಷಗಳನ್ನು ಹೊಂದುತ್ತಾರೆ ಶ್ರೀ ಪರಮಾತ್ಮನೇ ಸರ್ವ

ವಸ್ತುಗಳ ಚೇಷ್ಟಕತ್ವವನ್ನು ಹೊಂದಿರುವುದರಿಂದ ವಿರೋಧವಿಲ್ಲ

5 **ಸರ್ವ ಕರ್ತಾಽಪಿ ಸನ್ಪ್ರಾಣಃ ಪರಮಾಧಾರತಃ ಸ್ಥಿತಃ ।**
**ಕಥಮೇವಾನ್ಯಥಾ ಸ ಸಾದ್ಯತೋ ನೈವೇಶ್ವರದ್ವಯಂ ॥**

ಪ್ರಾಣನು ಸರ್ವಕರ್ತನಾದರೂ ಪರಮಾತ್ಮನಾಧಾರತ್ವವುಳ್ಳವನು ಹೀಗಿಲ್ಲದಿದ್ದರೆ ಇಬ್ಬರು ಈಶ್ವರರು ಹೇಗೆ ಸಾಧ್ಯವು. ಆದ್ದರಿಂದ ಪ್ರಾಣನು ಪರಮಾತ್ಮಾಧೀನನೇ

6 **ಅವಾಂತರೇಶ್ವರತ್ವೇನ ತಶ್ವೇಚ್ಚೆರವಚೋ ಭವೇತ್ ।**
**ಅಧೋ ಮಧ್ಯಮತಾಮಾಹುಸ್ತಸ್ಯ ವೇದೇಷು ವೇದಿನಃ ॥**

ಜ್ಞಾನಿಗಳು ಮುಖ್ಯ ಪ್ರಾಣನಿಗೆ ಅವಾಂತರೇಶ್ವರತ್ವವನ್ನು ಹೇಳಿ ಮಧ್ಯಪ್ರಾಣನೆಂದು ಈತನನ್ನು ತಿಳಿಯುವರು.

7 **ಅನನ್ಯೇಶ್ವರತಾ ಪ್ರಾಣೇ ತದನ್ಯೇಶ್ವರ ವರ್ಜನಾ।**
**ಯತೋ ವಿಶೇಷವಾಕ್ಯೇನ ಕ್ರಿಯತೇ ಸಮತಾವಚಃ ॥**

ಅನನ್ಯೇ ಶರಣನಾದ ಶ್ರೀ ಮುಖ್ಯಪ್ರಾಣನು ಶ್ರೀ ಪರಮಾತ್ಮನ ವಿನಹ ಮತ್ತಾವನನ್ನೂ ಈಶ್ವರನನ್ನಾಗಿ ಹೊಂದಿರುವುದಿಲ್ಲ ಹೀಗೆ ಸಮಾಧಾನವು

8 **'ನಾನ್ಯೋ' ತೋ'ಸ್ತಿದ್ರಷ್ಟಾ' (ಬೃ 5-8-11) ನಾನ್ಯದತೋಽಸ್ತಿ ದೃಷ್ಟೃ (ಬೃ5-8-11)ಇತ್ಯಾದಿ ವಚನಯುಕ್ತ್ಯಶ್ಚಾದಿ ಶಬ್ದೋಕ್ತಾಃ ।**

ಇಬ್ಬರು ಸರ್ವೋತ್ತಮರಾಗಿರಲು ಸಾಧ್ಯವಲ್ಲವಾಗಿ ಮಧ್ಯಮೇಶ್ವರತ್ವಯುಕ್ತಿಯಿಂದ ಶ್ರೀ ಪರಮಾತ್ಮನು ಮುಖ್ಯ ಪ್ರಾಣನದ್ವಾರ ಸರ್ವರನ್ನು ನಿಯಮಿಸುವನು.

**ಸೂ॥ ಓಂ॥ ಅಕರಣತ್ವಾಚ್ಚ ನ ದೋಷಸ್ತಥಾಹಿ ದರ್ಶಯತಿ ಓಂ॥ 12**

10 ಮೊಂಡೆವ್ಯ ಶೃತಿಶ್ಚ ತಾನಿ ಹನಾ ಏತಾನಿ ಸರ್ವಾಣಿ ಕರಣಾನ್ಯಥ
ಪ್ರಾಣ ಏವಾ ಕರಣತಂಸ್ಮಾನ್ಮುಖ್ಯಸ್ತಸ್ಮಾನ್ಮುಖ್ಯ ೯ತ್ಯಾ ಚಕ್ಷತೆ।

ಇತರೇಷಾಂ ಪ್ರಾಣಾನಾಂ ಕರಣತ್ವಾನ್ಮುಖ್ಯಸ್ಯಾನ್ಯೇಭ್ಯಃ ಉತ್ತಮತ್ವವೂ ಮತ್ತು ಮಧ್ಯಮೇಶ್ವರತ್ವವು ದೋಷವಲ್ಲ ಸಿದ್ಧವೇ.

ಚಕ್ಷುರಾದಿ ಸರ್ವೇಂದ್ರಿಯಗಳೂ ಕರ್ತೃಪ್ರಯೋಜ್ಯಕರಣಗಳು ಮಾತ್ರ ಶ್ರೀ ಮುಖ್ಯ ಪ್ರಾಣನು ಕರ್ತೃ ಪ್ರಯೋಜ್ಯನು ಸ್ವತಃ ಕರಣವರ್ಜಿತನು ಆದ್ದರಿಂದಲೆ ಮುಖ್ಯನು ಇತರೇಂದ್ರಿಯಗಳಿಂದ ಉತ್ತಮನು

ಇತಿ ಚಕ್ಷುರಾಧಿಕರಣವು

- ಪಂಚವೃತ್ಯಧಿಕರಣಂ -

1 ಈ ಅಧಿಕರಣದಲ್ಲಿ ಪ್ರಾಣಾಪಾನಾದಿ ಪಂಚ-ಪ್ರಾಣಗಳ ಮುಖ್ಯ ಪ್ರಾಣ ಸ್ವರೂಪತ್ವ ಮತ್ತು ಆತನ ದಾಸತ್ವಾದಿ ವಿಷಯದಲ್ಲಿ ಶೃತಿ ವಿರೋಧ ಪರಿಹಾರವು.

ಸರ್ವೇವಾ ಏತೆ ಮುಖ್ಯ ದಾಸಾಃ ಪ್ರಾಣೋ' ಪಾನೋ ವ್ಯಾನ ಉದಾನ್ಯ ಸಮಾನ ಇತ್ಯಥ ಪ್ರಾಣೋ ವಾವ ಸಾಮ್ರಾಟ್" ಎಂದು ಕೌಂಡಿನ್ಯ ಶೃತಿಯು.

2 ಪ್ರಾಣಾಪಾನಾದಯಃ ಸರ್ವೇ ಮುಖ್ಯ ದಾಸಾಯತೋನಿಶಂ।
ಅತಃ ತದಾಜ್ಞಯಾ ನಿತ್ಯಂ ಸ್ವಾನಿ ಕರ್ಮಾಣಿ ಕುರ್ವತೆ॥
ಇತಿ ಯುಕ್ತಿ ವಾಯು ಪ್ರೋಕ್ತೇ

ಪ್ರಾಣಾ ಪಾನಾದಿ ಪಂಚಪ್ರಾಣಗಳು ಮುಖ್ಯ ಪ್ರಾಣನ ದಾಸರಾಗಿ ಸರ್ವ ಕಾಲಗಳಲ್ಲಿಯೂ ಆತನ ಆಜ್ಞೆಯಂತೆ ತಮ್ಮ ತಮ್ಮ ಕರ್ಮಗಳನ್ನು ಮಾಡುವರು

ಪ್ರಾಣಃ ಪ್ರವೃತ್ತಿ ಹೇತುಸ್ಸ್ಯಾದಪಾನಃ ತನ್ನಿವರ್ತನೇ। ವನಕರ್ಮಾತಥಾವ್ಯಾನ ಉದಾನೋಽಯೋಗಕರ್ಮತಃ ದೇಹೇಂದ್ರಿಯ ಮನೋನೇತಾಸಮಾನೋಽಂತಃ ಸ್ಸ್ಥಿತಿಪ್ರದಃ ॥ ಇತಿ ಸ್ಮೃತಿಃ

ಗೋಪನವಶ್ಯತೌ

3 **ಮುಖ್ಯಸ್ಯೈವ ಸ್ವರೂಪಾಣಿಪ್ರಾಣಾದ್ಯಾಃ ಪಂಚವಾಯವಃ।**
**ಸ ಏವ ಪ್ರಾಣಿನಾಂ ದೇಹೇ ಪಂಚಧಾವರ್ತತೇನಿಶಮ್॥**

ಪ್ರಾಣಾದಿ ಪಂಚವಾಯುಗಳು ಶ್ರೀ ಮುಖ್ಯ ಪ್ರಾಣನ ಸ್ವರೂಪಗಳು. ಆ ಮುಖ್ಯ ಪ್ರಾಣನೆ ಪ್ರಾಣಿಗಳ ದೇಹದಲ್ಲಿ ಯಾವಾಗಲೂ ಪಂಚರೀತಿಯಲ್ಲಿರುವನು

4 ಅತೋವಕ್ತಿ ಅದಕ್ಕಾಗಿ ಹೇಳಿದೆ

## ಸೂ ಓಂ॥ ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ ಓಂ॥ 13

"ಮನೋ" ಇಂದ್ರಿಯವು ಮನಃ ಬುದ್ಧಿ, ಅಹಂಕಾರ ಚಿತ್ತ ಚೇತನ ಪ್ರಕಾರ ದಿಂದ ಪಂಚವಿಧ ವೃತ್ತಿಯುಳ್ಳದ್ದು ಹಾಗೆಯೇ ಮುಖ್ಯ ಪ್ರಾಣನೂ ಪಂಚ ರೂಪ ಗಳಿಂದ ಪಂಚ ವೃತ್ತಿಯುಳ್ಳವನು. ಕೌಂಡಿಣ್ಯ ಶೃತಿಯು ಹಾಗೆ ಹೇಳುವುದು

ಅಥ ಪಂಚವೃತ್ತ್ಯೈತತ್ಪ್ರವರ್ತತೆ । ಪ್ರಾಣೋವಾವ ಪಂಚವೃತ್ತಿಃ । ಪ್ರಾಣೊ ಅಪಾನೋ ವ್ಯಾನ ಉದಾನ ಸಮಾನ ಇತಿ। ತೇಭ್ಯೋವಾ ಏತೇಭ್ಯೋ ಪಂಚ ದಾಸಾಃ ಪ್ರಜಾಯಂತೆ । ಪ್ರಾಣಾದ್ವಾವ ಪ್ರಾಣೋ ಪಾನಾದಪಾನೋ ವ್ಯಾನಾಧ್ವ್ಯಾನ ಉದಾನಾದುದಾನಃ ಸಮಾನಾದೇವ ಸಮಾನಃ ॥

ಪಂಚ ಪ್ರಾಣಗಳೂ ಮುಖ್ಯ ಪ್ರಾಣನ ಸ್ವರೂಪಗಳೇ. ಈ ಪ್ರಾಣಾದಿ
ಪಂಚ ಪ್ರಾಣಗಳೂ ಮುಖ್ಯ ಪ್ರಾಣನ ಸ್ವರೂಪಗಳೇ. ಈ ಪ್ರಾಣಾದಿಪಂಚ

ಗಳು ದೇವತಾ ನರಗಳು ಜತ ಪರಗಳಲ್ಲಿ ಈ ಪಂಚ ದೇವತೆಗಳಿಂದ ಪಂಚದಾಸರು ಉತ್ಪನ್ನರಾದರು. ಪ್ರಾಣನಿಂದ ಪ್ರಾಣನು, ಅಪಾನನಿಂದ ಅಪಾನನು, ವ್ಯಾನನಿಂದ ವ್ಯಾನನು, ಉದಾನದಿಂದ ಉದಾನನು, ಸಮಾನನಿಂದ ಸಮಾನನು ಈ ಉತ್ಪನ್ನ ಪ್ರಾಣರು ಶ್ರೀ ಮುಖ್ಯ ಪ್ರಾಣರ ದಾಸರು.

5 **ಯಥಾ ಹ ವೈ ಮನಃ ಪಂಚಧಾವ್ಯಪದಿಶ್ಯತೆ ಮನೋಬುದ್ಧಿ ರಹಂಕಾರಶ್ಚಿತ್ತಂ ಚೇತನೇತಿ ತೇಭ್ಯೋ ವಾ ಏತೇಭ್ಯಃ ಪಂಚದಾಸಾಃ ಪ್ರಜಾಯಂತೇ ಮನಸೋ ಮನೋ ಬುದ್ಧೇರ್ಬುದ್ಧಿ ರಹಂಕಾರ ಚಿತ್ತಾಚ್ಚಿತ್ತಂ ಚೇತನಾಯಾ ಏವ ಚೇತನೈವಮಿತೀತಿ** ॥ ಇತಿ

"ಮನೋ" ಇಂದ್ರಿಯವು ಐದು ರೀತಿಯಲ್ಲಿ ವ್ಯಾಪಾರ ಮಾಡುವುದು ಮನಸ್ಸು ಬುದ್ಧಿ ಅಹಂಕಾರ ಚಿತ್ತ ಚೇತನವೆಂಬ ಮನಸ್ಸಿನ ಸ್ವರೂಪ ದೇವತೆಗಳು ಪಂಚದಾಸರುಗಳನ್ನು ಆ ಆ ಅಂಶಗಳಿಂದ ಹುಟ್ಟಿಸಿ ಕಾರ್ಯವನ್ನು ಅವರುಗಳಿಂದ ನಿರ್ವಹಿಸುವರು.

ಮನಸ್ಸು ಸಂಕಲ್ಪ ವಿಕಲ್ಪಾತ್ಮಕವು, ಸಂಕಲ್ಪವು-ಹೀಗೆ ಮಾಡುವುದು ಎಂದು ನಾನಾರ್ಥ ವಿಷಯವು ವಿಕಲ್ಪವು ನಿಶ್ಚಯ ರೂಪವು ಬುದ್ಧಿಯು ಅಭಿಮಾನವು ಅಹಂ ಕಾರವು ಸ್ಮರಣ ಹೇತುವು ಚೇತನವು. ಸ್ವರೂಪ ದಾಸತ್ವ ವಿಷಯ ವಚನಗಳು ಭಿನ್ನವ್ಯಕ್ತಿಗಳು

ಪ್ರಾಣಾದ್ಯಾಸ್ತ್ರಿವಿಧಾಃ ಪಂಚಪ್ರಧಾನೋ ವಾಯರೇವಚ ।
ಮುಖ್ಯ ಪಂಚಕ ರೂಪಸ್ಸನ್ ಗರುಡೋ ಮಧ್ಯ ಪಂಚಕಃ ।
ಅವರಾಃ ಪಂಚಕಾಸ್ತ್ವನ್ಯೇ ಪ್ರಾಣಾದ್ಯಾಸ್ತಸ್ಯ ಸೂನವಃ ।
ಇತಿತ್ರೇ ಧಾವಿಭಾಗೋಯಂ ವಿಭಾಗೋನ್ಯಶ್ಚತುರ್ಥಕಂ ।
ಪ್ರಾಣಾ ಪಾಣೌಶೇಷವೀಂದ್ರೌ ತಥೋದಾನ ಸಮಾನಕೌ ।
ರುದ್ರೇಂದ್ರೌ ತತ್ಪರಶ್ರೇಷ್ಠೌ ವಾಯುರ್ವ್ಯಾನ ಉದಾಹೃತಃ ॥ ಇತಿ

– ಇತಿ ಪಂಚವೃತ್ತ್ಯಧಿಕರಣಂ –

## ಅಶ್ವಾಧಿಕರಣಂ

ಈ ಆಧಿಕರಣದಲ್ಲಿ ಶ್ರೀ ಮುಖ್ಯ ಪ್ರಾಣನಿಗೆ ಪರಮಾಣು ವಿಷಯ ಶೃತಿ ವಿರೋಧವು ಪರಿಹರಿಸಲ್ಪಡುತ್ತದೆ

1 **ಪ್ರಾಣ ಏವಾದಸ್ತಾತ್ಪ್ರಾಣ ಉಪರಿಷ್ಟಾತ್ಪ್ರಾಣೋ ಮಧ್ಯತಃ ಪ್ರಾಣಃ ಸರ್ವತಃ ಪ್ರಾಣ ಏವೇದಂ ಸರ್ವಮಿತಿ ಪ್ರಾಣಸ್ಯ ವ್ಯಾಪ್ತಿಃ ಪ್ರತೀಯತೆ।**

ಹಿಂದೆ ಪ್ರಾಣನ ಚೈತನ್ಯ ಪರಿಮಾಣವು "ಅಣು'' ವೆಂದು ಸಮರ್ಥನೆ ಮಾಡಿದೆ. ಈ ಅಧಿಕರಣದಲ್ಲಿ ರೂಪ ವಿಷಯಕ ವಿಚಾರಿತವು ಮುಖ್ಯ ಪ್ರಾಣನು ಜೀವನಾದ್ದರಿಂದ ಅಣುತ್ವವನ್ನು ಹೇಳಿದೆ ಆದರೆ ಮೇಲಿನ ಶೃತಿಯಲ್ಲಿ ಬಹಿ ವ್ಯಾಪ್ತತ್ವವು ಹೇಳುವುದರಿಂದ ಮುಖ್ಯ ಪ್ರಾಣನು ಸರ್ವ ದಿಕ್ಕುಗಳಲ್ಲಿಯೂ ಇರುವನು ಸರ್ವಸತ್ತಾಪ್ರದನು ಹೀಗೆ ವ್ಯಾಪ್ತತ್ವದಿಂದ ಸಂದೇಹವು

2 **ಯತ ಸರ್ವಜಗದ್ವ್ಯಾಪ್ಯತಿಷ್ಠತಿ ಪ್ರಾಣ ಏವತು ।**
**ಅತೋ ಧೃತಂಜಗತ್ಸರ್ವ ಮನ್ಯಥಾಕೇನಧಾರ್ಯತೇ ॥**

ವಾಯು ಪುರಾಣದಲ್ಲಿ ಪ್ರಾಣನು ಸಮಸ್ತ ಜಗತ್ತನ್ನು ವ್ಯಾಪಿಸಿಕೊಂಡಿರುವನು ಆದ್ದರಿಂದಲೆ ಸರ್ವಜಗತ್ತನ್ನು ಧರಿಸಿರುವನು. ಇನ್ಯಾರಿಂದಲೂ ಅದು ಸಾಧ್ಯವಲ್ಲ ಎಂದು ವ್ಯಾಪ್ತತ್ವವು ಹೇಳಿದೆ.

3. **ಅಣು ನೈತತ್ಸೃಜ್ಯತೆ ಅಣುನೈತದ್ಧಾರ್ಯತೆ ಅಪಾಲಯ ಮಭ್ಯುಪೈತಿ ಪ್ರಾಣೋವಾ ಅಣುಃ ಪ್ರಾಣೈರ್ಹ್ಯೇಶದ್ಭವತಿ 'ಇತಿ ಚ ಸೌತ್ರಾಯಣ ಶೃತಿಃ ॥**

ಮೇಲಿನ ಶೃತಿಯು ಶ್ರೇಷ್ಠ ಪ್ರಾಣನು ಈ ಜಗತ್ತನ್ನು ಶರೀರವನ್ನೂ ಧರಿಸುವನು. ಎಂದು ಹೇಳುವುದು

## ಸೂ ಓಂ॥ ಅಣುಶ್ಚ ಓಂ॥ 14

ಶ್ರೀ ಮುಖ್ಯ ಪ್ರಾಣನು ಪ್ರಾಣರೂಪದಿಂದ ಅಣುಪ್ರ ವಾಯು ರೂಪದಿಂವ ವ್ಯಾಪ್ತನು

"ನವಾ ಏಷ ಪ್ರಾಣೋऽಣುರ್ಮಹಾನ್ ನಾಪೂಸ್ತ್ವರ್ಾ ಅಣುರ್ಬಹಿರ್ಮಹಾನ್ । ಪ್ರಾಣೋವಾ ಈಶಿತವ್ಯೇಶ ಈಶೋ ಹ್ಯಸೌ ಸರ್ವಸ್ಯೇಶಿತವ್ಯಸ್ಯ ಪರಸ್ಯ ಇತಿ ಕೌಂಡಿನ್ಯ ಶ್ರುತಿಃ ॥

ಶ್ರೀ ಮುಖ್ಯ ಪ್ರಾಣನು ಅಣುರೂಪನೇ ಆದರೆ ದೇಹದ ಹೊರಗಿರುವ ವಾಯುವು ಮುಖ್ಯ ಪ್ರಾಣರೂಪದಿಂದ ಅಂಡಾದಿಗಳನ್ನು ವ್ಯಾಪಿಸಿರುವನು ಆದ್ದರಿಂದ ಮುಖ್ಯ ಪ್ರಾಣನು ಅಣು ಮತ್ತು ಮಹಾನ್ (ವ್ಯಾಪ್ತನು) ಆಧ್ಯಾತ್ಮಗತ ಪ್ರಾಣ ರೂಪದಿಂದ ಅಣುವು ಅಧಿ ದೈವಗತ್ ವಾಯು ರೂಪದಿಂದ ಮಹಾನ್ (ವ್ಯಾಪ್ತನು) ಈ ಮುಖ್ಯ ಪ್ರಾಣನು ಸ್ವ ಮತ್ತು ಪರಮಾತ್ಮಾತಿರಿಕ್ತ ಜಗತ್ತಿಗೆ ಸ್ವಾಮಿಯು ಶ್ರೀ ಪರಮಾತ್ಮನಿಗೆ ಭೃತ್ಯನು.

– ಇತಿ ಅಣ್ವಧಿಕರಣಂ –

## – ಜ್ಯೋತಿರಧಿಕರಣಂ –

ಈ ಅಧಿಕರಣದಲ್ಲಿ ಇಂದ್ರಿಯ ವಿಷಯ ಶ್ರುತಿ ವಿರೋಧದ ಪರಿಹಾರವು

1. **ಕರಣತ್ವಂ ಚ ಪ್ರಾಣಾನಾಮುಕ್ತಮ್ ।**
   **ಜೀವಸ್ಯ ಕರಣಾನ್ಯಾಹುಃ ಪ್ರಾಣಾನೇತಾಂಸ್ತು ಸರ್ವಶಃ ।**

**ಯಸ್ಮಾತ್ತ್ವಾದ್ಯಶಗಾಪಿತೆ ದೃಶ್ಯಂತೆ ಸರ್ವದೇಹಿಷು ॥**
**ಇತಿ ಸೌತ್ರಾಯಣ ಶೃತೌಸಯುಕ್ತಿಕಂ ಜೀವಸ್ಯಾಣತ್ವಂ ಪ್ರತೀಯತೆ**

ಇಂದ್ರಿಯಗಳಿಗೆ ಕರಣತ್ವವು ಹೇಳಿದೆ ಆದರೆ ಈ ಮೇಲಿನ ಶೃತಿಯಲ್ಲಿ ಜೀವರಿಗೆ ಕರಣತ್ವವು ಹೇಳುವುದು ಜ್ಞಾನಿಗಳು ಎಲ್ಲಾ ಇಂದ್ರಿಯಗಳನ್ನು ಜೀವರ ಕರಣಗಳನ್ನಾಗಿ ಹೇಳುವರು ಸರ್ವ ದೇಹಗಳಲ್ಲಿಯೂ ಆ ಆ ಪ್ರಾಣಗಳ ಪ್ರವರ್ತಿಗಳು ಇದು ಅನುಭವಸಿದ್ಧವು ಹೀಗೆ ಪೂರ್ವಪಕ್ಷಯುಕ್ತಿಯು

2 **ಬ್ರಹ್ಮಣೋವಾ ಏತಾನಿ ಕರಣಾನಿ ಚಕ್ಷುಃ ಶ್ರೋತ್ರಂ ಮನೋವಾಗಿತಿ ತದ್ಧ್ಯೇತ್ತೈಃಕಾರಯತೀತಿ ಕಾಶಾಯಣಶ್ರುತಿಃ**

ಮೇಲಿನ ಶೃತಿಯು ಬ್ರಹ್ಮನೇ ಇಂದ್ರಿಯಗಳಿಂದ ಕರ್ಮಗಳನ್ನು ಮಾಡಿಸುವವನು ಹೀಗೆ ಕರಣಗಳಲ್ಲಿ ಈ ಕೃತ್ಯವು ಔಪಚಾರಿಕವು ಬ್ರಹ್ಮನೇ ಕರ್ತೃವೆಂದು ಹೇಳಿದೆ

## ಸೂ ಓಂ॥ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಓಂ॥ 15

ಜೋತಿರಾಧ್ಯಧಿಷ್ಠಾನವು ಅಗ್ನ್ಯಾದಿಭೂತ ಪ್ರೇರಕನೂ ಬ್ರಹ್ಮನೇ, ಜ್ಯೋತಿರಧಿಷ್ಠಾನನೂ ಚಕ್ಷುರಾದಿಪ್ರೇರಕನೂ ಜೀವನಲ್ಲ ಯಶ್ಚಕ್ಷುಷಿತಿಷ್ಠನ್ ಎಂಬ ಶೃತಿಯು ಈ ರೀತಿಯಲ್ಲಿ ಹೇಳುವುದು.

ಯ ಜ್ಯೋತಿ ರಾದ್ಯದಿಷ್ಠಾನಂಬ್ರಹ್ಮತದೆವೈತ್ತೈಃ ಕಿರಣೈಃ ಪ್ರವರ್ತಯತೀ
'ಯಃ ಪ್ರಾಣೆಷು ತಿಷ್ಠನ್ (ಬೃ 5-7-16) ಇತ್ಯಾದಿ ತದಾಮನನಾತ್ ।

ಜ್ಯೋತಿರಾಧ್ಯಧಿಷ್ಠಾನನು ಬ್ರಹ್ಮನೇ ಜೀವನಲ್ಲ. ಬ್ರಹ್ಮಜ್ಯೋತಿ ರೂಪ ಚಕ್ಷುರಾದಿ ನಿಯಾಮಕನು ಜೀವನವಲ್ಲವೆಂದು ಬೃಹದಾರಣ್ಯಕ ಶೃತಿಯಲ್ಲಿ ಬ್ರಹ್ಮನಿಗೆ ನಿಯಾಮಕತ್ವವು ಹೇಳಿದೆ ಹಾಗೆಯೇ ವಾಜಸನೇಯ ವಾಕ್ಯದಲ್ಲಿಯೂ ಬಹ್ಮನಿಗೆ ಸರ್ವೇಂದ್ರಿಯ ಪ್ರೇರಕತ್ವವು ಹೇಳಿದೆ.

4 ಕಥಂ ಜೀವಕರಣತ್ವ ಶ್ರುತಿ ರಿತ್ಯತೋವಕ್ತಿ

## ಸೂ ಓಂ॥ ಸ್ವಪ್ರಾಣವತಾ ಶಬ್ದಾತ್ ಓಂ॥ 16

ಜೀವೇನೈವ ಸ್ವಕರಣೈಃ ಕಾರಯತಿ ಪರಮಾತ್ಮಾತೋ ನ ವಿರೋಧಃ ॥

ಶ್ರೀಪರಮಾತ್ಮನು ತನ್ನ ಆಜ್ಞಾಧಾರಕರಾದ ಚಕ್ಷುರಾದಿ ಕರಣಗಳಿಂದ ಪ್ರಾಣಧಾರಕ ಜೀವನ ಕರಣಗಳಿಂದಲೇ ದರ್ಶನಾದಿಗಳನ್ನು ಮಾಡಿಸುವನು ಎಂದು ಆದ್ದರಿಂದ ವಿರೋಧವಿಲ್ಲ

5 ಏಷಹ್ಯೇನೇನಾತ್ಮನಾ ಚಕ್ಷುಷಾ ದರ್ಶಯತಿ ಶ್ರೋತ್ರೇಣ ಶ್ರಾವಯತಿ ಮನಸಾ ಮನಯತಿ ಬುಧ್ಯಾ ಬೋಧಯತಿ ತಸ್ಮಾತ್ಃದೇತಾ ಮಾಹುಃ ಸ್ವೃತಿರಸ್ಮರಿತಿ ಭಾಲ್ಲವೇಯಂ ಶ್ರುತಃ ॥

ಶ್ರೀಪರಮಾತ್ಮನು ಜೀವರಿಗೆ ಅವರ ಇಂದ್ರಿಯಗಳ ಮೇಲೆ ಅಲ್ಪಸ್ವಾಮಿತ್ವತ್ವವನ್ನು ಕೊಟ್ಟು ಆತನ ಅಮುಖ್ಯ ಕರ್ತೃತ್ವದಿಂದಲಿ ತನ್ನ ತನ್ನ ಮುಖ್ಯ ಕರ್ತೃತ್ವದಿಂದಲೇ ಇಂದ್ರಿಯಗಳಿಂದ ಕರ್ಮಗಳನ್ನು ಮಾಡಿಸುವನು ಆದ್ದರಿಂದ ಶ್ರೀ ಪರಮಾತ್ಮ ಮತ್ತು ಜೀವರನ್ನು ಸ್ವಾತಂತ್ರ್ಯ ಪ್ರವೃತ್ತಿವುಳ್ಳವರೆಂದು ಹೇಳುವರು

6. ಕರಣೈಃ ಕಾರಣಂ ಬ್ರಹ್ಮ ಪುರುಷಾಪೇಕ್ಷಯಾಖಿಲಂ ।
ಶ್ರೋತ್ರಾದಿಭಿಃ ಕಾರಯತಿ ಕರಣಾನಿತ್ಯತೋ ವಿದುಃ ॥

ಕಾರಣ ಬ್ರಹ್ಮನು ಪನ್ಯುತಃ ಪರಮ ಪುರುಷಾಪೇಕ್ಷಯಾ ಜೀವಪ್ರಯತ್ನಾಪೇಕ್ಷೆಯಿಂದಲೂ ಕರಣಗಳಿಂದ ಅಖಿಲ ಕರ್ಮಗಳನ್ನು ಜೀವನ ಜ್ಞಾನಾಪೇಕ್ಷಕ್ಕೆ ಅನುಸಾರವಾಗಿ ಮಾಡಿಸುವನು ಈ ವಿವಕ್ಷೆಯಿಂದಲೇ ಜೀವನಿಗೆ ಕರಣತ್ವವು ಮುಖ್ಯವಾಗಿಯಲ್ಲ.

7 ನ ಜೀವಾಪೇಕ್ಷಯಾ ಮುಖ್ಯಂ ಕಾರಯೇತ್ಸರಮೇಶ್ವರಃ ।
ಕೇವಲಾತ್ಮೇಚ್ಛಯಾ ತಸ್ಮಾನ್ಮುಖ್ಯತ್ವಂ ತಸ್ಯ ನಿಶ್ಚಿತಮಿತಿ ಮಾರಾಹೇ ॥

ಶ್ರೀ ಪರಮೇಶ್ವರನು ಸರ್ವ ಕರ್ಮಗಳನ್ನು ಜೀವಾ ಪೇಕ್ಷೆಯಂತೆ ಮುಖ್ಯವಾಗಿ ಮಾಡಿಸುವುದಿಲ್ಲ. ಆದರೆ ತನ್ನಪೇಕ್ಷೆಯಂತೆಯೇ ಆತನಿಂದ ಮಾಡಿಸುವನು.

**ಸೂ ಓಂ॥ ತಸ್ಯ ಚ ನಿತ್ಯತ್ವಾತ್ ಓಂ॥ 17**

ಇಂದ್ರಿಯಗಳು ಭಗವಂತನ ಅಧೀನಗಳಾದರೂ ಅಸ್ವತಂತ್ರ ಜೀವನಿಂದ ಕರ್ಮವು ಸಾಧಿಸಲ್ಪಡುವುದರಿಂದ ಜೀವ ಕರ್ತೃವು ಅಮುಖ್ಯವು. ಅನ್ಯ ಸ್ವಾಮಿಯ ಆಯುಧಗಳಿಂದ ಕರ್ಮ ಸಾಧಿಸಲ್ಪಡುವಂತೆ ಜೀವರಿಗೆ ಅಲ್ಪಸ್ವಾತಂತ್ರ್ಯವು.

ಅನಾದಿ ನಿತ್ಯತ್ವಾಜ್ಜೀವಕರಣಂ ಸಂಬಂಧಸ್ಯಯುಜ್ಯತೆ ತತ್ಕರಣತ್ವತ್ವಶೃತಿಃ ॥

ಜೀವಕರಣತ್ವಗಳ ಪರಸ್ಪರ ಸಂಬಂಧವು ಅನಾದಿ ನಿತ್ಯಗಳಾದ್ದರಿಂದ ಬಹುಕಾಲ ಸಂಬಂಧದಿಂದ ಜೀವರಿಗೆ ಅಲ್ಪಸಂಬಂಧವು ಯುಕ್ತವು.

**9. ಅಥಾಪಿ ಯೋಗಿನಿ । ಕರಣೈರ್ವಾವ ನವಿಯುಜ್ಯತೆದೇಹೇ ನೈವ ವಿಯುಜ್ಯತೆ । ಇತ್ಯೇತ ದ್ವಾವ ಕರಣಾನಾಂ ಕರಣತ್ವಂ ಯದ್ವಾಯಂ ನ ವಿಯುಜ್ಯತ ಇತಿ ॥ ಗೌಪವನ ಶೃತಿಃ ॥**

ಇಂದ್ರಿಯಗಳಿಗೆ ಜೀವಕರಣತ್ವವು ಅನಾದಿನಿತ್ಯ ಸಂಬಂಧದಿಂದ ವ್ಯಾವಹಾರಿಕ ಮಾತ್ರವೇ ಮುಖ್ಯವಾಗಿ ಅವುಗಳು ಪರಮಾತ್ಮನ ಕರಣಗಳೇ ಎಲ್ಲಾ ವ್ಯವಹಾರಗಳೂ ಆತನ ಆಜ್ಞೆಯಂತೆಯೇ ಜೀವನ ನಿಮಿತ್ತ ಮಾತ್ರ.

**10. ಚಶಬ್ದಃ ಕರಣ ಸಂಬಂಧಗ್ರಾಹೀ ॥**

ಜೀವನು ಪ್ರಾಣತ್ವ ಪದದಿಂದ ಪ್ರವೃರ್ತವಾಗಿರುವುದರಿಂದ ಆ ಶಬ್ದ ಪ್ರಾಧಾನ್ಯ ದಿಂದ ಜೀವರ ಪರಾಮರ್ಶ ಮಾತ್ರವೇ ವಿನಹ ಸರ್ವಸ್ವತಂತ್ರವೂ ಶ್ರೀಪರಮಾತ್ಮನದೇ.

– ಇತಿ ಜ್ಯೋತಿರಧಿಕರಣವು –

ಈ ಅಧಿಕರಣದಲ್ಲಿ ಶ್ರೀಮುಖ್ಯ ಪ್ರಾಣನಿಗೆ ಇಂದ್ರಿಯತ್ವಾನಿಂದ್ರಿಯತ್ವ ಶೃತಿ ವಿರೋಧದ ಪರಿಹಾರವು.

1. "ಅಥೇಂದ್ರಿಯಾಣಿ ಪ್ರಾಣಾವಾ ಇಂದ್ರಿಯಾಣಿ ಪ್ರಾಣಾಹೀದಂ ||
ದ್ರವಂತೀತಿ ಸಂಯುಕ್ತಿಕಾ ಪೌತ್ರಾಯಣ ಶೃತಿಃ ಸಾಮಾನ್ಯೇನ
ಪ್ರಾಣಾನಾಮಿಂದ್ರಿಯತ್ವಂವಕ್ತಿ । ದ್ವಾದಶೈವೇಂದ್ರಿಯಾಣ್ಯಾ
ಹುರ್ಮನೋಬುದ್ಧೀತು ದಾದಶೇತಿ ಚ ಕಾಷಾಯಣ ಶೃತಿಃ
ಅತಃ ಕಸ್ಯೇಂದ್ರಿಯತ್ವಂ ನಿವಾರ್ಯಮಿತ್ಯತೋ ವಕ್ತಿ ॥

ಪೌತ್ರಾಯಣ ಶೃತಿಯಲ್ಲಿ ದ್ವಾದಶ ಇಂದ್ರಿಯಗಳಿಂದ ಕೂಡಿದ ಮುಖ್ಯ ಪ್ರಾಣನೂ ಸೇರಿ ಇಂದ್ರಿಯಗಳ ಸಂಖ್ಯೆಗಳು ತ್ರಯೋದಶ ಸಂಖ್ಯಾಕವು. ವಿಷಯಗಳನ್ನು ಹೋಗುವುದರಿಂದ ಸಾಮಾನ್ಯಗಳು. ಕಾಷಾಯಣ ಶೃತಿಯಲ್ಲಿಯಾದರೋ ಇಂದ್ರಿಯ ಸಂಖ್ಯೆಯು ದ್ವಾದಶ ಮಾತ್ರವೆಂದು ಹೇಳಿದೆ. ಹೀಗೆ ಸಂಖ್ಯಾಬೇದವು. ಸಾಮಾನ್ಯವಾಗಿ ಇಂದ್ರಿಯಗಳು ದ್ವಾದಶಗಳು ದ್ರವಣತ್ವ ಸ್ವಭಾವದಿಂದ ಅಂಗೀಕರಿಸಿದಲ್ಲಿ ಒಂದು ಜಾಸ್ತಿ ಸಂಖ್ಯೆಯಲ್ಲಿ ಹೇಳಿದ ಇಂದ್ರಿಯವು ಯಾವುದು ಎಂದು ಪ್ರಶ್ನೆಯು

2 ಅತೋವಕ್ತಿ—ಅದಕ್ಕಾಗಿ ಹೇಳಿದೆ.

## ಸೂ|| ಓಂ|| ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್ ಓಂ|| 18

ಮುಖ್ಯ ಪ್ರಾಣವ್ಯತಿ ತ ಏವೇಂದ್ರಿಯಾಣಿ ।

ಶ್ರೀ ಮುಖ್ಯ ಪ್ರಾಣನನ್ನು ಬಿಟ್ಟು ಮಿಕ್ಕ ಯಾವ ಪ್ರಾಣೇಂದ್ರಿಯಗಳೋ ಅವುಗಳು ದ್ರವಣ ಶಕ್ತಿಯುಳ್ಳ ದ್ವಾದಶಗಳು ಮಾತ್ರ

3 ದ್ವಾದಶೈವೇಂದ್ರಿಯಾಣ್ಯಾಹುಃಪ್ರಾಣೋಮುಖ್ಯಸ್ತ್ವನಿಂದ್ರಿಯಂ ಶ್ರವಣಾಮಿಂದ್ರಿಯಾಣಾಂಹಿ ನಿಯಂತಾ ಪ್ರಾಣ ಏಕರಾದಿತಿ ಪೌತ್ರಾಯಣಶ್ರುತಿಃ

ಶ್ರವಣಶಕ್ತಿಯುಳ್ಳ ಇಂದ್ರಿಯಗಳು ದ್ವಾದಶಗಳು ಮಾತ್ರ ಶ್ರೀ ಮುಖ್ಯ ಪ್ರಾಣನು ಇಂದ್ರಿಯ ಗಣದಲ್ಲಿ ಸೇರುವುದಿಲ್ಲ ಆತನು ಅನಿಂದ್ರಿಯನು ಆತನು ಮಿಕ್ಕ ಇಂದ್ರಿಯಗಳಿಗೆ ಸ್ವಾಮಿಯಾಗಿ ಅವುಗಳನ್ನು ನಿಯಮಿಸುವವನು

4 ಶ್ರೋತ್ರಾದೀನಿ ತು ಪಂಚೈವ ತಥಾ ನಾಗಾದಿ ಪಂಚಕಂ ।

ಮನೋಬುದ್ಧಿ ಸಹಾಯಾನಿ ದ್ವಾದಶೈವೇಂದ್ರಿಯಾಣಿ ತು।
ವಿಷಯಶ್ರವಣಾತ್ತೇಷಾಮಿಂದ್ರಿ ಯತ್ವ ಮುದಾಹೃತಂ
ತೇಷಾಂ ನಿಯಾಮಕಃ ಪ್ರಾಣಃ ಸ್ಥಿತ ಏವಾಖಿಲಪ್ರಭುರಿತಿ
ಬೃಹತ್ಸಂಹಿತಾಯಾಂ

ಶ್ರೋತ್ರಾದಿ ಪಂಚಕಗಳೂ ನಾಗಾದಿ ಪಂಚಕಗಳೂ ಮನಸ್ಸು ಬುದ್ಧಿ ಈ ಇಂದ್ರಿಯಗಳಿಗೆ ಸಹಾಯಕರಾಗಿ ದ್ವಾದಶ ಸಂಖ್ಯಾತರೇ ವಿಷಯಗಳನ್ನು ಕುರಿತು ಹೋಗುವ ಇಂದ್ರಿಯಗಳಲ್ಲಿ ಸ್ಥಿರವಾಗಿದ್ದು ನಿಯಾಮಕನಾಗಿ ಮುಖ್ಯ ಪ್ರಾಣನು ಅವುಗಳ ಯಜಮಾನನು

## 5. ಸೂ । ಓಂ ಭೇದ ಶ್ರುತೇಃ ಓಂ ॥ 19

"ಸ್ಥಿತ ಏವ" ಎಂಬ ಶ್ರುತಿಯಲ್ಲಿ ಶ್ರೀ ಮುಖ್ಯ ಪ್ರಾಣನಿಗೆ ಸರ್ವ ಕರ್ತೃತ್ವ ಕಾರ್ಯ ಯತೃತ ರೂಪ ಭೇದ ಕರ್ಮಗಳು ಹೇಳಿ ಮಿಕ್ಕವುಗಳಲ್ಲಿ ಈ ಧರ್ಮಗಳ ಅಭ್ಯಾಸ ದಿಂದ ಶ್ರೀ ಮುಖ್ಯ ಪ್ರಾಣನು ಶ್ರೇಷ್ಠನೆ ಚಕ್ಷುರಾದಿಗಳಿಗೆ ವಿಶೇಷವಿಲ್ಲ.

ಸ್ಥಿತ ಏವ ಹೀದಂ ಮುಖ್ಯಪ್ರಾಣಃ ಕರೋತಿ ಕಾರಯತಿ ಬಲತಿ ಬಾಲಯತಿ ಧತ್ತೇ ಧಾರಯತಿ ಪ್ರಭುಂ ವಾ ಏನಮಾಹುರಥೇಂದ್ರಿಯಾಣಿ ನ ಸ್ಥಿತಾನಿ ನ ಕುರ್ವಂ ನ ಕಾರಯಂತಿ ನ ಬಲಂತಿ ನ ಬಾಲಯಂತಿ ನ ದಧತೇ ನ ಧಾರಯಂತಿ ತಾನಿ ಹವಾತಿ ಏತಾನ್ಯಬಲಾನಿ ತಸ್ಮಾದಾಹುರಿಂದ್ರಿಯಾಣಿ ಕರಣಾ ನೀತಿ ಪೌತ್ರಾಯಣಶುತ್ರೇಃ ।-ಗ

ಶ್ರೀ ಮುಖ್ಯ ಪ್ರಾಣನು ಸ್ವಸ್ಥಾನದಲ್ಲಿದ್ದು ಸರ್ವಕಾರ್ಯವನ್ನು ಮಾಡುವನು ಮಾಡಿಸುವನು ತಾನು ಬಲಯುಕ್ತನು ಮತ್ತು ಬಲಪ್ರದನು ಸರ್ವವನ್ನು ಧರಿಸಿ ಧಾರಣ ಶಕ್ತಿ ಪ್ರದನು ಇತ್ಯಾದಿ ಆದ್ದರಿಂದಲೇ ಈತನನ್ನು ಸರ್ವಕರ್ತೃತ್ವ ಕಾರಯಿತೃತ್ವ ವಿಶೇಷ ವ್ಯಕ್ತಿಯಿಂದ ಈಶ್ವರನ ಸೌಮ್ಯತ್ವವು ಹೇಳಿದೆ. ಈತನ ನಿಯಮನದಿಂದಲೇ ಮುಕ್ಕ ಇಂದ್ರಿಯಗಳ ಕಾರ್ಯಗಳ ಕರಣ ಕರ್ತೃತ್ವವು ಶ್ರೀ ಮುಖ್ಯ ಪ್ರಾಣನೇ ಶ್ರೇಷ್ಠನು.

## ಸೂ।। ಓಂ।। ವೈಲಕ್ಷಣ್ಯಾಚ್ಚ ಓಂ।। 20

ಶ್ರೀ ಮುಖ್ಯ ಪ್ರಾಣನಿಗೆ ಶ್ರೀ ಪರಮಾತ್ಮನ ಅಧೀನತ್ವವು ಮಾತ್ರ ಇದರ ಇಂದ್ರಿಯಗಳಿಗೆ ಶ್ರೀ ಪರಮಾತ್ಮ ಮತ್ತು ಜೀವರುಗಳ ಉಭಯಕ್ಕ ಅಧೀನಕೃತ್ವ ಹೇಳಿದೆ. ಆದ್ದರಿಂದ ಮುಖ್ಯ ಪ್ರಾಣನಿಗೆ ಈ ವೈಲಕ್ಷಣ್ಯದಿಂದಲೇ ಇಂದ್ರಿಯತ್ವವು ಇಲ್ಲ

ಪುರುಷಾಪೇಕ್ಷಯಾ ಪ್ರವೃತ್ತಿರಿಂದ್ರಿಯಾಣಾಂ ದೃಶ್ಯತೆ ನ ಮುಖ್ಯಸ್ಯ ।
ಪ್ರಾಣಾಗ್ನಯ ಏವೈತಸ್ಮಿನ್ ಪುರೆ ಜಾಗ್ರತಿ । (ಪ್ರ-4।3) ಇತಿ ಚ ಶೃತೇಃ

ಜೀವನ ಪ್ರಯತ್ನದಂತೆ ಪ್ರವೃತ್ತಿಯು ಇತರ ಇಂದ್ರಿಯಗಳಲ್ಲಿ ಕಂಡಿದೆ ಶ್ರೀ ಮುಖ್ಯ ಪ್ರಾಣನ ವಿಷಯದಲ್ಲಿ ಹಾಗಲ್ಲ.

ಜೀವನ ಸ್ವಾಪ ಕಾಲದಲ್ಲಿ ದಶೇಂದ್ರಿಯ ವ್ಯಾಪಾರಗಳ ಅಭಾವವನ್ನು ಹೇಳಿ ಆ ಕಾಲದಲ್ಲಿ ಪ್ರಾಣಾಗ್ನಿಗಳು ಮಾತ್ರ ಶರೀರ ಧಾರಣ ವ್ಯಾಪಾರ ಮಾಡುವುವೆಂದು ಶೃತಿಯು

– ಇತಿ ಇಂದ್ರಿಯಾಧಿಕರಣಂ –

### – ಸಂಜ್ಞಾಧಿಕರಣಂ –

ಈ ಅಧಿಕರಣದಲ್ಲಿ ನಾಮರೂಪ ವಿಷಯ ಶೃತಿ ವಿರೋಧದ ಪರಿಹಾರವು ರೂಪ

ಶಬ್ದವು ದೇಹಾರ್ಥಕ ನಾಮ ಶಬ್ದವು ತದ್ವಾಚಿಕ ಶಬ್ದಪರವು ಈ ವ್ಯಾವಹಾರಿಕ ಶರೀರವು ಶ್ರೀ ಪರಮಾತ್ಮಸೃಷ್ಟವೋ, ಚತುರ್ಮುಖ ಸೃಷ್ಟವೋ ಎಂದು ಸಂಶಯವು

1 **ವಿರಿಂಚಿರ್ನಾಮ ಇದಂವಿರೇಚಯತಿ ವಿದಧಾತಿ ಬ್ರಹ್ಮಾನಾಮವಿರಿಂಚ ಏತಸ್ಮಾದ್ಧೀಮೇ ರೂಪ ನಾಮನಿ**' ಇತಿ ಗೌಪವನ ಶೃತಿಃ

ಈ ನಾಮ ರೂಪಾತ್ಮಕ ವಿಶ್ವವನ್ನು ಚತುರ್ಮುಖ ಬ್ರಹ್ಮನು ಸೃಷ್ಟಿಸುವನು ವಿಶೇಷವಾಗಿ ಧರಿಸುವನು ನಿಯೋಗಿಸುವನು. ಹೀಗೆ ವಿರಿಂಚ ಶಬ್ದವಾಚ್ಯ ಚತುರ್ಮುಖ ಬ್ರಹ್ಮನಿಂದ ನಾಮ-ರೂಪಗಳ ಸೃಷ್ಟಿಯು ಹೇಳಿದೆ ಆಯೋಗಿ ಪ್ರಕೃಪರಿಂದ ಕಲಿಯಲ್ಪಡುವ ಈ ಶರೀರಗಳು ಮತ್ತು ಅವುಗಳ ವ್ಯವಹಾರ ನಾಮಗಳೂ ಸೃಷ್ಟಿಯನ್ನು ಹೇಳುವುದು.

2 . **ಯಸ್ಮಾದ್ವಿರೇಚಯೇತ್ಸರ್ವಂ ವಿರಿಂಚಸ್ತೇನ ಭಣ್ಯತೇ** ।

ವಿರೋಹಿಕರ್ತಾಜಿನರೇ ಬ್ರಹ್ಮೈವಹಿ ಚತುರ್ಮುಖಃ । ಇತಿ ಚ ದಕ್ತಿ ಬ್ರಾಹ್ಮೇ ಯಾವ ಕಾರಣದಿಂದ ಎಲ್ಲವನ್ನೂ ಸೃಷ್ಟಿಮಾಡುವನೋ ಆದ್ದರಿಂದಲಿ ವಿರಿಂಚ ಶಬ್ದ ನಾಮಕನು ಆತನೇ ಬ್ರಹ್ಮನು ಚತುರ್ಮುಖನು. ಹೀಗೆ ಚತುರ್ಮುಖನಿಗೆ ನಾಮ ರೂಪತ್ವಾದಿ ಸೃಷ್ಟಿಯು ಶೃತಿಗಳಲ್ಲಿ ಹೇಳದೆ.

3 **ಅಥ ಕಸ್ಮಾದುಚ್ಯತೇ ಪರಮ ಇತಿ ಪರಮಾದ್ಧ್ಯತೇ ನಾಮರೂಪೇ ವ್ಯಾಕ್ರಿಯೇತೇ ತಸ್ಮಾದೇನ ಮಾಹುಃ ಪರಮ ಇತಿ ।**
**ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹತ್ವಾದ್ಬೃಂಹಿತತ್ವಾಚ್ಚ**
**ಇತ್ಯಾಗ್ನಿವೇಶ್ಯ ಶೃತಿಃ ॥**

ಪರಬ್ರಹ್ಮ ವಾಚ್ಯನಾದ ಶ್ರೀ ಪರಮಾತ್ಮನಿಂದಲೇ ನಾಮ ರೂಪಗಳ ಸೃಷ್ಟಿಯು ಆತನನ್ನ ಪರಮನೆಂದು ಹೇಳುವರು (ಶ್ರೇಷ್ಟ) ಬ್ರಹ್ಮನೆಂದು ಕರೆಯುವರು. ಆತನು ಎಲ್ಲರಿಗಿಂತಲೂ ಶ್ರೇಷ್ಟನು. ಈ ನಾಮ ರೂಪಾತ್ಮಕ ಪ್ರಪಂಚವನ್ನು ಉತ್ಪನ್ನ ಮಾಡುವವನು ಹೀಗೆ ತಿಳಿದವನು ಮುಕ್ತನಾಗುವನು.

4 ಅತ ಆಹ — ಆದಕ್ಕಾಗಿ ಹೇಳಿದೆ

**ಸೂ ಓಂ॥ ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್ ಓಂ॥ 21**

ನಾಮ ರೂಪಾತ್ಮಕ ದೇಹೇಂದ್ರಿಯ ಪ್ರಪಂಚೋತ್ಪತ್ತಿಯು ಪೃಥಿವಿ, ಆಪ್ಸ ತೇಜಸೀ ಇವುಗಳ ವಿಮಿಶ್ರೀ ಭಾವದಿಂದ ಶ್ರೀಪರಮಾತ್ಮನಿಂದಲೇ ಮಾಡಲ್ಪಡುವದು, ಸರ್ವಾಣಿ ರೂಪಾಣಿ ವಿಚಿಂತ್ಯಧೀರ'. ಎಂಬ ಶೃತಿಯು ಹೇಳುವುದು,

ನಾಮ ರೂಪ ಕ್ಲೃಪ್ತಿಃ ಪರಾದೇವ ಸರ್ವಾಣಿ ರೂಪಾಣಿ ವಿಚತ್ಯಧೀರಃ ।
ನಾಮಾನಿ ಕೃತ್ವಾಭಿವದನ್ಯದಾಸ್ತೆ (ತ್ಶೈ ಲ 3-12) ಇತಿಶೃತೇಃ

ತೈತ್ತಿರೀಯ ಪುರುಷ ಸೂಕ್ತಮಂತ್ರದಲ್ಲಿ ಹೇಳಿಕೆಯು ಧೈರ್ಯಶಾಲಿಯಾದ ಶ್ರೀ ಪರಮಾತ್ಮನು ಸರ್ವರೂಪಗಳನ್ನು ಸೃಷ್ಟಿಮಾಡಿ ಅವುಗಳಿಗೆ ವಾಚಕ ನಾಮ ಗಳನ್ನು ಮಾಡಿ ಅವುಗಳಿಂದ ವ್ಯವಹರಿಸುತಾನು ಹೀಗೆ ತಿಳಿದವನು ಮೋಕ್ಷ ಹೊಂದುವನು.

5 **ತ್ರಿವೃತ್ಕುರ್ವತ ಇತಿ ಹೇತುಗರ್ಭಃ ।**
**ತ್ರಿವೃತ್ಕರಣಾಪೇಕ್ಷತ್ವಾನ್ನಾಮರೂಪಯೋಃ ॥**

ಶ್ರೀ ವಿಷ್ಣುವು ಅನಿರುದ್ಧರೂಪದಿಂದ ತೇಜೋಬನ್ನಾಖ್ಯತಾ ಪರಗಳಾದ ಮೂರು ದೇವತೆಗಳನ್ನು ಪ್ರವೇಶಿಸಿ ಏಕೀಸವಾಗಿ ಮಾಡಿಸಿದನು

6 **ಸರ್ವನಾಮ್ನಾಂಚ ರೂಪಾಣಾಂ ವ್ಯವಹಾರೇಷು ಕೇಶವಃ ।**
**ಏಕ ಏವ ಯತಃ ಸೃಷ್ಟಾ ಬ್ರಹ್ಮಾದ್ಯಾಸ್ತದವಾಂತರಾಃ ॥**
**ಇತಿ ಪಾದ್ಮೆ**

ಶ್ರೀ ಪರಮಾತ್ಮನೊಬ್ಬನೇ ವ್ಯವಹಾರಕ್ಕೋಸ್ಕರ ಎಲ್ಲ ನಾಮರೂಪಗಳನ್ನು ಸೃಷ್ಟಿಸಿದನು ಬ್ರಹ್ಮಾದಿ ದೇವತೆಗಳು ದ್ವಾರತ್ವೇನ ಕಾರಣರು. ಏಕ ಏವಸ್ರಷ್ಟಾ ಎಂಬಶೃತಿಯು ಸರ್ವಕರ್ತೃತ್ವ ಶಕ್ತಿ ರೂಪಗಳೂ ಶ್ರೀಪರಮಾತ್ಮನಿಂದಲಿ ಇತರರು ದ್ವಾರಮಾತ್ರ-ಪಾದ್ಮೇ

7 ತ್ರಿವೃತ್ಕ್ರಿಯಾ ಯತೋ ವಿಷ್ಣೋರೂಪಂ ಚ ತದಪೇಕ್ಷಯಾ
ರೂಪಾಪೇಕ್ಷಂ ತಥಾ ನಾಮ ವ್ಯವಹಾರಸ್ತದಾತ್ಮಕಃ

ಅತೋ ನಾಮ್ನಶ್ಚ ರೂಪಸ್ಯ ವ್ಯವಹಾರಸ್ಯ ಚೈಕರಾಟ್ ।
ಹರಿರೇವ ಯತಃ ಕರ್ತಾऽಪಿತಾಕೋ ಭಗವಾನ್ ಪ್ರಭುಃ ॥
ಇತಿ ಚ ಬ್ರಂಹ್ಮಾಂಡೇ.

ಪೃಥಿವಿ ಅಪತೇಜಗಳ ವಿಶ್ರೀಭಾವಕರಣವು ಶ್ರೀ ವಿಷ್ಣುವಿನಿಂದಲೇ. ರೂಪ ನಾಮಗಳಿಗೆ ವ್ಯವಹಾರಕ್ಕಾಗಿ ಶ್ರೀ ಹರಿಯು ಕರ್ತನು. ಅವನೇ ಸರ್ವಜಗತ್ತಿಗೆ ಶ್ರೇಷ್ಠನು.

— ಇತಿ ಸಂಜ್ಞಾಧಿಕರಣಂ —

## —ಮಾಂಸಾಧಿಕರಣಂ—

ಈ ಅಧಿಕರಣವಲ್ಲಿ ಶರೀರ ಕಾರಣ ಶೃತಿಗಳಲ್ಲಿ ವಿರೋದವು ಪರಿಹರಿಸಲ್ಪಡುವುದು.

1 ಅದ್ಭ್ಯೋಹೀದಮುತ್ಪದ್ಯತೇ ಆಪೋ ವಾವ ಮಾಂಸುವಸ್ಥಿ ಚ
ಭವಂತ್ಯಾಪಃ ಶರೀರಮಾಪ ಏವೇದಂ ಸರ್ವಂ ಇತಿ ಕೌಂಡಿನ್ಯ ಶೃತಿಃ।

ಸರ್ವ ಶರೀರಗಳೂ ಅಪಃವೇಕಾರಣವಾಗಿರುವುದೆಂದು ಹೇಳಿದೆ. ಇದು ಒಂದು ಪೂರ್ವಪಕ್ಷವು.

2 ಅಮ್ಮಯೋ ತು ಯತೋ ಮಾಂಸಮುತಸ್ತೃಪ್ತಿಶ್ಚ ಮಾಂಸತಃ।
ಇತಿ ಚ ಭಾರತೇ.

ಮಾಂಸವು ಅಪಃ ಮಯುವಾದ್ದರಿಂದಲೇ ತೃಪ್ತಿಯು ಮಾಂಸದಿಂದಲೇ. ಭಾರತ

3 ಪೃಥಿವೀಂ ಶರೀರಮಾಕಾಶಮಾತ್ಮಾ (ಬೃ 5-2-13) ಇತಿ ಚ ಶ್ರುತಿಃ

ಬೃಹದಾರಣ್ಯಕ ಶ್ರುತಿಯಲ್ಲಿಯಾವರೋ ಪುರುಷನು ಮೃತನಾದ ಮೇಲೆ ಅವನ ಶರೀರ ಭೂತಗಳು ವಾಕ್ ಅಗ್ನಿಯನ್ನು ಹೊಂದುವುದು. ಶರೀರವು ಪೃಥಿವಿಯನ್ನು ಹೊಂದುವುದು ಮತ್ತು ದೇಹಾಂತರ್ಗತ ಹರಿಯು ಆಕಾಶವನ್ನು (ಮೂಲ ರೂಪ ಪರಮಾತ್ಮನನ್ನು) ಹೊಂದುವುದು ಹೀಗೆ ಶರೀರವು ಪಾರ್ಥಿವವು ಎಂದು ಬೇರೆ ಸಿದ್ಧಯು

4 ಅತೋ ಬ್ರವೀತಿ—ಅದಕ್ಕಾಗಿ ಹೇಳುತ್ತಾರೆ

## ಸೂ ಓಂ॥ ಮಾಂಸಾದಿಭೌಮಂ ಯಥಾಶಬ್ದಮಿತರ ಯೋಶ್ಚ ಓಂ॥ 22

ಶರೀರದಲ್ಲಿ ಯಾವುದು ಯಾವುದು ಕಠಿಣವೋ ಆ ವಸ್ತುವು ಪೃಥಿವಿಯ ಸರ್ವ ಶರೀರವೂ ಅಲ್ಲ ಇತರ ಅಪ ತೇಜಸ್ಸುಗಳು ರಕ್ತಮಜ್ಜಾದಿ ರೂಪ ಕಾರ್ಯಗಳು ಆದ್ದರಿಂದ ಶರೀರವು ಪೃಥಿವಿ ಅಪ ತೇಜಸ್ಸು ಇವುಗಳಿಂದ ಮಿಳಿತವಾಗಿ ಕಾರ್ಯವು ಶರೀರವು ಕೇವಲ ಮಾಂಸದಿಂದಲೇ ಅಲ್ಲ

ಯತ್ಕಠಿನಂಸಾ ಪೃಥಿವೀ ಯದ್ದ್ರವಂಶದಾಪೋಯದುಷ್ಣಂತತ್ತೇಜಃ॥
(ಗರ್ಭ-3)ಇತಿಶ್ರುತೇಃ ಮಾಂಸಾದ್ಯೇವ ಭೌಮಂ ನಸರ್ವಶರೀರಂ।
ಅಪ್ತೇಜಸೋಶ್ಚ ಕಾರ್ಯಂಯಥಾಶಬ್ದಮಂಗೀಕರ್ತವ್ಯಂ॥

ಶರೀರದಲ್ಲಿ ಯಾವುದು ಕಠಿಣವಸ್ತುಗಳೊ ಅವು ಪೃಥವಿ ಸಂಬಂಧವು ಯಾವುದು ದ್ರವರೂಪವೊ ಅದು ಅಪಃಸಂಬಂಧವುಳ್ಳದ್ದು. ಯಾವುದು ಉಷ್ಣ (ಶಾಖ) ವೊ ಅದು ತೇಜಃ ಸಂಬಂಧಉಳ್ಳದ್ದು ಹೀಗೆ ಶರೀರವು ಅನೇಕ ಬೂತತತ್ತ್ವಮಿಶ್ರವು

5 **ಯದ್ವಾವಾಥೋ ವಿಮಿಶ್ರಂ ಮಿಶ್ರಾದ್ಧ್ಯೈತಪ್ಪವತಿ ಮಿಶ್ರಾಣಿ ಹಿ ಭೂತಾನಿ ತಸ್ಮಾದೇವೈವಮಾಚಕ್ಷತೇಭೂತಾನಿ** ಇತಿ ಹಿಕಾಶಾಯಣ ಶೃತಿಯು.

ಭೂತಗಳ ಮಿಶ್ರಣದಿಂದಲೇ ಶರೀರೋತ್ಪತ್ತಿಯು. ಪೃಥಿವಿ ಅಪ್ ತೇಜಸ್ಸು ಗಳ ಮಿಶ್ರಣಹೊಂದಿ ಶರೀರೋತ್ಪತ್ತಿಯನ್ನು ಕಾಷಾಯಣ ಶೃತಿಯುಹೇಳಿದೆಯು

6 ಪಂಚ ಭೂತಾತ್ಮಕಂ ಸರ್ವಂ ತದನ್ಯೈಕವಿವಕ್ಷಯಾ ।
ಏಕ ಭೂತಾತ್ಮಕತ್ವೇನ ವ್ಯವಹಾರಸ್ತು ವೇದಿಕೇ ॥

ಶರೀರವು ಪಂಚ ಭೂತಾತ್ಮಕಗಳಾದಾಗ್ಯೂ ಏಕಭೂತಸಂಭಂಧವಿದಕ್ಷಯಿಂದ ಏಕಭೂತಕಾರ್ಯಗಳಂತೆ ವೇದಗಳಲ್ಲಿ ವ್ಯವಹಾರವು.

7 ಭೌಮಮಿತ್ಯೇವ ಕಾಠಿನ್ಯಾಛೌಕ್ಲ್ಯಾದಾದವಕಮಿತ್ಯಪಿ ।
ತೇಜಿಷ್ಠತ್ವಾತ್ತೈಜಸಂ ಚ ಯಥಾಸ್ಥಾಂ ವಚನಂ ಶೃತೌ ॥
ಇತಿ ವಾಯುಪ್ರೋಕ್ತೇ.

ಕಾಠಿಣ್ಯಾದಿ ನಿಮಿತ್ತಚಾಮಕ್ಷಮಾವಹಾರವು ಶುಕ್ಲತ್ವ ನಿಮಿತ್ತ ಅಪ್ ಸಂಬಂಧವು ಮತ್ತು ಅಗ್ನಿಸಂಬಂಧದಿಂದ ತೇಜಸ್ಸು. ಹೀಗೆ ಭೂತಗಳ ಮಿಶ್ರಣ ದಿಂದಲೇ ಶರೀರವು.

8 ಕಥಂ ತರ್ಹಿ ವಿಶೇಷವಚನಮಿತ್ಯತ ಆಹ

ಭೂತಾನಾಂತು ವಿಶೇಷ ಸಂಯೋಗಾದೇವ ವಿಶೇಷ ವ್ಯವಹಾರಃ ।

ಹಾಗಾದರೆ ವಿಶೇಷ ವಚನಗಳ ಪ್ರಯೋಜನವೇನು ಎಂದರೆ

ಈ ಶರೀರದಲ್ಲಿ ಪೃಥಿವಿ ಸಂಬಂದವು ಅಪ್ ಸಂಬಂದವು. ಮತ್ತು ತೇಜ. ಸಂಬಂದವೂ ಬಹು ಪ್ರಮಾಣದಲ್ಲಿ ಇತರಭೂತಗಳಿಂದ ಮಿಶ್ರವಾಗಿರುವುದರಿಂದಲೇ ಶರೀರದ ವಿಶೇಷ ಸಂಬಂದವನ್ನಪೇಕ್ಷಿಸಿಯೇ ವಿಶೇಷೋಕ್ತಿಯು ಆದ್ದರಿಂದ ವಿರೋಧ-ವಿಲ್ಲ.

ಸರ್ವಂಚ ಬೌತಿಕಂ ಮಿಶ್ರಂ ಮಿಸ್ರತ್ವೇಪಿ ವಿಶೇಷಿತಂ ।
ಭೌಮಂ ಮಾಂಸ ಮಸೃಗ್ವಾರಿ ತೇಜೋಮಜ್ಜಾವಿಶೇಷತಃ ॥

ಸರ್ವ ಪದಾರ್ಥಗಳೂ ಪಂಚಭೂತಗಳ ಮಿಶ್ರಣದಿಂದಲಾದರೂ ಆ ಬಹುಭಾಗ ಮಿಶ್ರಣದಿಂದ ಆ ಮೂಲಭೂತಗಳ ಮಿಶ್ರಣದಿಂದ ಆ ಆ ಭೂತಗಳೇ ಅವಾವವಸ್ತುಗಳಲ್ಲಿ ಪ್ರಾಧಾನ್ಯ ಹೇಳಿದೆ

9 ಪಾರ್ಥಿವಾನಾಂ ಶರೀರಾಣಾಮರ್ಧೇನ ಪೃಥಿವೀಸ್ಮೃತಾ ।
ಇತರೇರ್ಧೆ ತ್ರಿಭಾಗಿನ್ಯ ಅಪಸ್ತೇಜಸ್ತು ಭಾಗತಃ ॥
ಇತಿ ಸಾಮಾನ್ಯತೋ ಜ್ಞೇಯಂ ಭೇದಶ್ಚ ಪ್ರತಿಪೂರುಷಂ ।
ಸ್ವರ್ಗಸ್ಥಾನಾಂ ಶರೀರಾಣಾಮರ್ಧಂ ತೇಜಉದಾಹೃತಃ ॥
ಇತಿ ಚ ಬೃಹತ್ಸಂಹಿತಾಯಾಂ

ಈ ಜಗತ್ತಿನ ಸಂಬಂಧಶರೀರಗಳಲ್ಲಿ ಅರ್ಧಪರಿಮಾಣವು ಪೃಥಿವಿಯು ಮಿಕ್ಕಾರ್ಧದಲ್ಲಿ ಮೂರು ಪಾಲು ಎಂದರೆ ¾ ಪೂರ್ಣಭಾಗವು ಅಪಃ ಮಿಕ್ಕ ¼ ಭಾಗವು ತೇಜಸ್ಸು ಹೀಗೆ ಸಾಮಾನ್ಯವಾಗಿ ಪ್ರತಿ ಪುರುಷ ಶರೀರದಲ್ಲಿ ತಿಳಿಯುವುದು. ಸ್ವರ್ಗಸರಾದ ಪುರುಷಶರೀರಗಳಲ್ಲಿ ಅರ್ಧಭಾಗವು ತೇಜಸ್ಸು. ಹೀಗೆ ವ್ಯವಸ್ಥೆಯು

10 ಸರ್ವಾರ್ಥಾಧ್ಯಾಯಾರ್ಥಾವಧಾರಣಾರ್ಥಾಧ್ಯಾಯಾಂತೇ ದ್ವಿರುಕ್ತಿಃ
ಸರ್ವ ಅಧ್ಯಾಯೋಕ್ತಿಗಳ ಅರ್ಥಸಮರ್ಥನ ರೂಪವಾಗಿ ಅಧ್ಯಾಯದ ಕೊನೆಯು ದ್ವಿರುಕ್ತಿಯು.

11 ಗಾರುಡೆ ಚ—

ಅಧ್ಯಾಯಾಂತೇ ದ್ವಿರುಕ್ತಿಃ ಸ್ಯಾದ್ವೇದೇವಾ ವೈದಿಕೇಪಿ ವಾ।
ವಿಚಾರೋ ಯತ್ರ ಸಚ್ಯೇತ ಪೂರ್ವೋಕ್ತಸ್ಯಾವಧಾರಣೇ ॥

ಈ ಅಧ್ಯಾಯ ಮೊದಲು ಕೊನೆಯವರೆವಿಗೂ ಹೇಳಿರುವ ಅರ್ಥ ವಿವರಣೆಗಳು ವೇದೋಕ್ತಿ ಸಿದ್ಧಾಂತ ರೀತಿಯಲ್ಲಿಯೇ ಎಂದು ಧೃಢತೆಗೋಸ್ಕರ ದ್ವಿರುಕ್ತಿಯು.

12 ಅನುಕ್ತಾನಾಂ ಪ್ರಮಾಣಾನಾಂ ಸ್ವೀಕಾರತಾ ಕೃತೋ ಭವೇಂತ್ ।
ವಿನಿಂದ್ಯ ಚೇತರಾನ್ಮಾರ್ಗಾನ್ಸಂಪೂರ್ಣಫಲತಧಾ ॥

ಈ ದ್ವಿರುಕ್ತಿಯು ಜ್ಞಾನಪ್ರಯೋಗಶಾಸ್ತ್ರಗಳಲ್ಲಿ ಇತರ ವ್ಯಾಖ್ಯಾನೋಕ್ತಿಗಳನ್ನು ಸಾದಿಸಿ ಪ್ರಮಾಣ ಸೂಕ್ತ ವಿಷಯಗಳಿಗೂ ಕೂಡ ಸಮರ್ಥನವು

ಇತಿ ಮಾಂನಾಧಿಕರಣಂ

ದ್ವಿತೀಯಾಧ್ಯಾಯಃ ಸಂಪೂರ್ಣಂ

ಶ್ರೀ ಕೃಷ್ಣಾರ್ಪಣಮಸ್ತು

ಶ್ರೀ ಗುರುಭ್ಯೋ ನಮಃ

ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ

# ಶ್ರೀಮದ್ ಬ್ರಹ್ಮಸೂತ್ರಾಣಿ

## ಶ್ರೀ ಜಗನ್ನಾಥಯತಿ ಕೃತ ದೀಪಿಕಾನುಸಾರಿಣಿ

ಶ್ರೀಮನ್ಮಧ್ವಭಾಷ್ಯಸ್ಯ ಕರ್ನಾಟ ಭಾಷಾ—ವಿವೃತಿಃ

## ತೃತೀಯೋಽಧ್ಯಾಯಃ ಪ್ರಾರಂಭಃ

ಶ್ರೀ ಗುರುಭ್ಯೋನಮಃ

# ಬ್ರಹ್ಮಸೂತ್ರ ಭಾಷ್ಯ=ತೃತೀಯಾಧ್ಯಾಯಃ

## ಪ್ರಥಮ ಪಾದವು

ಹಿಂದಿನ ಎರಡು ಅಧ್ಯಾಯಗಳಲ್ಲಿ ಶೃತಿಗಳ ಸಮನ್ವಯ ಮತ್ತು ವಿರೋಧ ಪರಿಹಾರ ರೂಪವಿಚಾರಗಳಿಂದ ಬ್ರಹ್ಮವಸ್ತುವು ಪೂರ್ಣಗುಣಉಳ್ಳದ್ದು. ಮತ್ತು ದೋಷರಹಿತವು ಎಂದು ಸಪ್ರಮಾಣಗಳಿಂದ ನಿರ್ಧರಿಸಲ್ಪಟ್ಟಿತು. ಇನ್ನು ಮುಂದೆ ಈ ಅಧ್ಯಾಯದಲ್ಲಿ ಮೋಕ್ಷಾಪೇಕ್ಷಿಯಾದ ಅಧಿಕಾರಿಯು ಮಾಡಬೇಕಾದ ಸಾಧನವು ವಿಚಾರಿಸಲ್ಪಡುವುದು.

—ತದಂತರಾಧಿಕರಣಂ—

1 **ಸಾಧನ ವಿಚಾರೋsಯಮಧ್ಯಾಯಃ ।**
**ವೈರಾಗ್ಯಾರ್ಥೇ ಗತ್ಯಾದಿನಿರೂಪಣಾ ಪ್ರಥಮಂಪಾದೇ ॥**

ಬ್ರಹ್ಮವಿಷಯವಲ್ಲದ ಭೋಗವಿಷಯಕ ಇಚ್ಛೆಯು ದುಃಖರೂಪವೇ ಆದ್ದರಿಂದ ಅವುಗಳಿಂದ ವೈರಾಗ್ಯವನ್ನು ಹೊಂದುವ ದೃಷ್ಟಿಯಿಂದ ಸ್ವರ್ಗಸ್ಥಜೀವನಗತ್ಯಾದಿ ವಿಷಯಗಳ ವಿಚಾರವಾಗುತ್ತದೆ. ಜಿಜ್ಞಾಸುರಿಗಳಿಗೆ ಸ್ವರ್ಗಾದಿ ಪ್ರಾಪ್ತಸುಖವು ಅಲ್ಪ ಎಂದೂ, ಅನಿತ್ಯವೆಂದೂ, ದುಃಖರೂಪವೆ ಎಂದೂ, ನೈಜಸುಖವಲ್ಲವೆಂದು ತಿಳಿದು ಅತ್ಯಂತಿಕ ಸುಖರೂಪಮೋಕ್ಷಫಲವನ್ನು ಹೊಂದಲಪೇಕ್ಷೆಯಿಂದ ವೈರಾಗ್ಯಸಂಪತ್ತನ್ನು

ಹೊಂದಲು ಪ್ರಯತ್ನವನ್ನು ಹೇಳಿದೆ ಗತ್ಯಾದಿಗಳ ತಿಳಿವಳಿಕೆಯಿಂದ ವೈರಾಗ್ಯ ಸಂಪಾದನವು ಸಾಧ್ಯವೆಂದು ಈ ಪಾದಸಂಗತಿಯು.

2 **ಭೂತ ಬಂಧೋಹಿ ಬಂಧಃ ।**
**ಭೂತ ಬಂಧಸ್ತು ಸಂಸಾರೋ ಮುಕ್ತಿಸ್ತೇಭ್ಯೋ ವಿಮೋಚನಂ ॥**

ಜೀವರಿಗೆ ಭೂತಗಳಿಂದ ಬಂಧವೇ ಸಂಸಾರ ಕಾರಣವು. ಈ ಪಂಚಭೂತಗಳಿಂದ ವಿಮೋಚನೆಯೇ ಮುಕ್ತಿಯು. ಸಂಸಾರ ನಿವೃತ್ತಿರೂಪ ಅತ್ಯಂತಿಕವಿಮೋಚನೆಯು ಅತ್ಯುತ್ತಮ ಪುರುಷಾರ್ಥವು.

3 ತಚ್ಚ ಮರಣೇ ಭವತಿ
**ಭೂತಾನಾಂ ವಿನಿವೃತ್ತಿಸ್ತು ಮರಣಂ ಸಮುದಾಹೃತಂ ।**
**ಭೂತಾನಾಂ ಸಂಪ್ರಯೋಗಶ್ಚ ಜನಿರಿತ್ಯೇವ ಪಂಡಿತೈಃ ॥**

ಇತಿ ಭಾರತೇ ಅತಃ ಕಿಂ ಸಾಧ್ಯನ್ನೈರಿತಿ ।

ಪಂಚ ಮಹಾಭೂತಗಳ ಸಂಪ್ರಯೋಗವೇ ಜನ್ಮವು. ಅವುಗಳ ನಿವೃತ್ತಿಯೇ ಮರಣವು ಈ ಜನಿಮೃತ್ಯುಗಳು ಜೀವನಿಗೆ ಸಿದ್ಧವೇ ಆದ್ದರಿಂದ ಅದಕ್ಕಾಗಿ ಜಿಜ್ಞಾಸಾವಶ್ಯಕತೆಯಿಲ್ಲ.

ಅತ ಆಹ—

## ಸೂ॥ಓಂ॥ ತದಂತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನ-ನಿರೂಪಣಾಭ್ಯಾಂ ಓಂ॥ 1

ಶರೀರಾಂತರ ಪ್ರಾಪ್ತ್ಯರ್ಥ್ಯವಾಗಿ ಜೀವನು ಪ್ರಥಿವ್ಯಾದಿ ಭೂತಗಳನ್ನು ಹೊಂದಿಸಿಕೊಂಡೇ ಈ ದೇಹವನ್ನು ಬಿಟ್ಟು ಬೇರೆ ಲೋಕವನ್ನು ಹೊಂದುವನು. ಪ್ರವಹಣ ರಾಜನು ಶ್ವೇತಕೇತು ಋಷಿಯನ್ನು ವೇತ್ಥಯಥಾ ಎಂಬ ಪ್ರಶ್ನೆಯನ್ನು ಮಾಡಿ ಅದಕ್ಕೆ ಉತ್ತರವಾಗಿ "ಇವೆತ್ವೆತಿ" ಎಂಬ ಪರಿವಾಕ್ಯದಿಂದ ತಿಳಿದುಬರುವುದು.

ಶರೀರಾಂತರ ಪ್ರತಿಪತ್ತೌ ಭೂತಸಂಪರಿಕ್ಷಕ್ತ ಏವ ಗಚ್ಛತಿ॥

ಬೇರೆ ಶರೀರವನ್ನು ಹೊಂದಲು ಭೂತ ಸಂಪರ್ಕದಿಂದಲೇ ಸ್ವರ್ಗಸ್ಥನಾಗುವನು. ಮರಣ ಮಾತ್ರದಿಂದಲೇ ಭೂತಗಳ ಅತ್ಯಂತಿಕ ವಿಯೋಗವಿಲ್ಲ.

**5 ವೇತ್ಥ ಯಥಾ ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿತೀ ಪ್ರಶ್ನಪರಿಹಾರಾಭ್ಯಾಂ ।**

ಛಾಂದೋಗ್ಯದಲ್ಲಿ ಈ ಉಪಕಥೆಯನ್ನು ಹೇಳಿದೆ. ಶ್ವೇತಕೇತುವೆಂಬ ಋಷಿಯು ತನ್ನ ತಂದೆ ಉದ್ದಾಲಕದಲ್ಲಿ ವಿದ್ಯಾಭ್ಯಾಸ ಮಾಡಿ ಪಾಂಚಾಲ ದೇಶದ ರಾಜನಾದ ಪ್ರವಹಣ ರಾಜನಲ್ಲಿ ಹೋದನು. ಆ ರಾಜನು ಈತನನ್ನು ಪರೀಕ್ಷಾರ್ಥವಾಗೆ ಪ್ರಶ್ನಿಸುವನು. ಸ್ವರ್ಗಲೋಕ, ವಾಯು ಭೂಮಿ ಪುರುಷಸ್ತ್ರೀ ಎಂಬ ಪಂಚಾಗ್ನಿಗಳಲ್ಲಿ ಹೋಮಿಸಲ್ಪಟ್ಟ "ಅಭಿಃ" ಆಪದಿಂದ ಯುಕ್ತನಾಗಿ ಜೀವನು ದೇಹವನ್ನು ಹೊಂದಿ ಪುರುಷನೆಂದಾಗುವನೋ ಆಪ್ರಕಾರವನ್ನು ತಿಳಿದಿರುವೆಯೋ ಎಂಬ ಪ್ರಶ್ನೆಗೆ ತನಗೆ ಇದರ ಪರಿಚಯವಿಲ್ಲವೆಂದು ಉತ್ತರಿಸಲು ಆತನು ಹಿಂತಿರುಗಿ ತನ್ನ ಪಿತೃವಿನಲ್ಲಿ ಬಂದು ಈ ಪ್ರಶ್ನೆಗೆ ಉತ್ತರ ಕೇಳಲು ಆತನಿಗೂ ಅದು ತಿಳಿಯದೆ ತಂದೆ ಮಕ್ಕಳಿಬ್ಬರೂ ಪುನಃ ರಾಜನಲ್ಲಿ ಬಂದು ಉತ್ತರವನ್ನು ಅಪೇಕ್ಷಿಸಿದರು ಆಗ ಆ ರಾಜನ ಉತ್ತರವು "ಹಿಂದೆ ಹೇಳಿದ ರೀತಿಯಲ್ಲಿ ಏಕೋರೂಪ ಮೋಕ್ಷಾಖ್ಯ ಅಗ್ನಿಯಲ್ಲಿ ಸೂಚಿಸಲ್ಪಟ್ಟ ಜೀವನ ಸಹಿತ ಹೊರಟ ಆತನ ಪುನಸ್ಸಂಬಂಧದಿಂದಲೇ ಭೂತತ್ರಯಾತ್ಮಕವಾದ ಆಪ ಪುರುಷ ಶಬ್ದವಾಚ್ಯರಾಗಿ ಹುಟ್ಟುವರು ಎಂದು ಉತ್ತರವು ಜೀವನು ಮರಣಾನಂತರ ಭೂತಗಳ ಸಂಬಂಧದಿಂದಲೇ ಪುನಃ ಹುಟ್ಟುವುದರಿಂದ ಮರಣ ಮಾತ್ರದಿಂದಲೆ ಪೂರ್ಣವಾಗಿ ಭೂತವಿಯೋಗವಿಲ್ಲ ಪುನ ಸಂಬಂಧವೇ ಉಂಟು

ಇತಿ ತದಂತರಾಧಿಕರಣಂ

## ತ್ರ್ಯಾತ್ಮಕಾಧಿಕರಣಂ

ಈ ಅಧಿಕರಣದಲ್ಲಿ ಭಗವತ್ಪ್ರಾಪ್ತಿ ಸಾಧನ ವೈರಾಗ್ಯಕ್ಕಾಗಿ ಜೀವರುಗಳಿಗೆ ಸಮಸ್ತ ಭೂತಗಳಿಂದ ಕೂಡಿ ಗತಿಯು ಎಂದು ಸಮರ್ಥನೆಯು

## ಸೂ॥ ಓಂ॥ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ॥ 2

ಅಪ್ಶಬ್ದ ಸ್ತು ತ್ರ್ಯಾತ್ಮಕಸ್ಯಾಭ್ಯುದ್ಯೃಜ್ಯತೆ ಭೂಯಸ್ತ್ವಾಚ್ಚಾಪಾಂ ||

ಜೀವನ ಸರ್ವ ಭೂತಗಳಿಂದಲೂ ಯುಕ್ತನಾಗಿಯೇ ಹೋಗುವನು "ಅಪ್" ಎಂಬ ಒಂದು ಭೂತದಿಂದಲೇ ಅಲ್ಲ "ಅತಃ" ಎಂದು ವಿಶೇಷೋಕ್ತಿಯು ಕ್ಷತ್ರಿ ಸಲಿಲ ಅನಲಾತ್ಮಕ ಭೂತಗಳಲ್ಲಿ ಆಪ್" ಭೂತದ ಭಾಹುಳ್ಯವುಳ್ಳದ್ದರಿಂದ ಒಂದೆ ಭೂತೋಕ್ತಿಯು

ಆದಿಕಾಲದಲ್ಲಿ ಮಿಶ್ರಣದಿಂದ ಸೃಷ್ಟಿಸಲ್ಪಟ್ಟ ಭೂತಗಳ ತ್ರಿವಾತ್ಕಾರಣವು ಕ್ಷತ್ರಿ ಸಲಿಲ್ಲ, ಅನಲಭೂತಗಳ ವಿಮಿಶ್ರಣವಾದ್ದರಿಂದ ಮತ್ತು ಶರೀರೋತ್ಪತ್ತಿಯಲ್ಲಿ ತ್ರಿವೃತ್ಕರಣದ ಜಾತಿಯುಕ್ತವಾದ್ದರಿಂದಲೂ ಶೃತಿಯಲ್ಲಿ "ಅಪಾಂ" ಎಂಬ ಒಂದೇ ಭೂತವು ಹೇಳಿರುವುದು ಈಮೂರು ಭೂತಗಳಲ್ಲಿಯೂ "ಆಪ್" ಭ್ರೂತವೇ ಅಧಿಕವಾಗಿರುವುದರಿಂದಲೇ ಅದರ ಉಕ್ತಿಯು ಎಲ್ಲಾ ಭೂತಗಳ ಪರವಾಗಿ ಎಂದೇ ತಿಳಿಯಬೇಕು

2 **ತಾಪಾಪನೋದೋ ಭೂಯಸ್ತ್ವಮಂಭಸೋ ವೃತ್ತಯಸ್ತ್ವಿಮಾ ಇತಿ ಭಾಗವತೇ ||**

ಕ್ಲೇದಸಂ ಪಿಂಡನಂತೃಪ್ತಿಃ ಪ್ರಾಣನಾಪ್ಯಾಯನೋಂದನಂ ತಾಪಾಪದನೋದಃ ಇತಿ

ತೋಯಿಸುವುದು ಪಿಂಡೀಕರಣ, ತೃಪ್ತಿ ಚೇಷ್ಟ ಕಾರಣತ್ವ ಸುಖಕರತ್ವ, ಬಿಂದುಭಾವ್ಯತ್ಸ ನಿವರ್ತಕತ್ವ, ಮಿಕ್ಕ ಭೂತ ಕಾರ್ಯಗಳಲ್ಲಿ ಭಾಗಾಧಿಕ್ಯವು ಹೀಗೆ ಅಪ ಗುಣಗಳು.

ಇತಿ ತ್ರ್ಯಾತ್ಮಕತ್ವಾಧಿಕರಣವು

## ಪ್ರಾಣಗತ್ಯಧಿಕರಣವು

ಈ ಅಧಿಕರಣದಲ್ಲಿ ಜೀವರುಗಳಿಗೆ ಭೂತಗಳಿಂದ ಸಹಗತಿಯು ಸಮರ್ಥನೆಯು

## ಸೂ|| ಓಂ|| ಪ್ರಾಣಗತೇಶ್ಚ ಓಂ|| 3

ಯತ್ರವಾವ ಭೂತಾನಿ ತತ್ರ ಕರಣಾನಿ ನಿತ್ಯಾನಿ ಹವಾ ಏತಾನಿ ಭೂತಾನಿ ಕರಣಾನಿ ನಚೈತಾನಿ ಕದಾಚಿದ್ವಿಯುಜ್ಯಂತೇ ನಲೀಯಂತ ಇತಿ ಭಾಲ್ಲವೇಯ ಶ್ರುತೇಃ|| ಪ್ರಾಣಗತೇರ್ಭೂತಾನ್ಯಪಿ ಸಹಗಚ್ಛಂತೀ ಸಿದ್ಧಂ

ಭೂತಗಳಲ್ಲಿ ವ್ಯಾಪ್ತವಾದ ಪ್ರಾಣಶಬ್ದವಾಚ್ಯ ಇಂದ್ರಿಯಗಳು ಜೀವನ ಜತೆಯಲ್ಲಿಯೇ ಸಹಗಮನವು ಶ್ರುತಿಯಲ್ಲಿ ಹೇಳಿದೆ ಜೀವರು ಭೂತಗಳಿಂದ ಕೂಡಿಕೊಂಡೇ ಹೋಗುವರು ಎಂದು ಭಾಲ್ಲವೇಯ ಶೃತಿಯು ಭೂತಗಳ ಜತೆಯಲ್ಲಿ ಕರಣಗಳು ಅವಿಯೋಗದಿಂದ ಒಂದನ್ನು ಬಿಟ್ಟು ಮತ್ತೊಂದು ಬೇರೆಯಾಗುವುದಿಲ್ಲ ಭೂತೇಂದ್ರಿಯಗಳು ದೇಶಕಾಲಗಳಿಂದಲೂ ವ್ಯಾಪ್ತವಾಗಿ ಮೋಕ್ಷ ಮಾತ್ರದಿಂದಲೇ ಬಿಡುಗಡೆ ಹೊಂದುವುವು.

ಇತಿ ಪ್ರಾಣಗತ್ಯಧಿಕರಣಂ

### ಅಗ್ನ್ಯಾದ್ಯಧಿಕರಣಂ

ಈ ಅಧಿಕರಣದಲ್ಲಿ ಪ್ರಾಣಗಳ ಜತೆಯಲ್ಲಿಯೇ ಜೀವರುಗಳ ಸಹಗಮನದ ಸಮರ್ಥನೆಯು.

## ಸೂ|| ಓಂ|| ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ|| 4

'ಯತ್ರಾಸ್ಯ...ಪ್ರಾಣಃ' ಎಂಬ ಶೃತಿಯಲ್ಲಿ ಪ್ರಾಣಗಳು ಜೀವನ ಜತೆಯಲ್ಲಿ

ಹಮನವನ್ನು ನಿಷೇಧಿಸುತ್ತದೆ. ಮರಣ ಕಾಲದಲ್ಲಿ ಪುರುಷಸಂಬಂಧ ವಾಕ್ ಇಂದ್ರಿಯವು ಅಗ್ನ್ಯಾಯನ್ನು ಶ್ವಾಸಾದಿರೂಪ ಜಡವಾಯುವು ತದಭಿಮಾನಿ ಮುಖ್ಯಪ್ರಾಣನನ್ನು ಶ್ರವಣನು ದಿಗ್ದೇವತೆಯನ್ನು ಜೀವವನ್ನು ಬಿಟ್ಟು ಒಂದಂಶದಿಂದ ಸ್ವಷ್ಟಮೂಲರೂಪವನ್ನು ಹೊಂದುವುವು ಅಂಶಾಂತರಗಳಿಂದ ಜೀವನನ್ನುಅನುಸರಿಸುತ್ತದೆ.

ಯತ್ರಾಸ್ಯ ಪುರುಷಸ್ಯ ಮೃತಸ್ಯಾಗ್ನಿಂ ವಾಗಪ್ಯೇತಿ ವಾತಂ ಪ್ರಾಣಃ ।
(ಬೃ 513)
ಇತ್ಯಾದಿ ಶ್ರುತೇಃ ನ ಪ್ರಾಣಾನಾಂಜೀವೇನ ಸಹ ಗತಿರಿತಿಚೇತ್
ಮ್ರಿಯಮಾಣಮಿಮಂ ಜೀವಂ ವಾಸುದೇವಾಐತರೇಯ ದೇವತಾಃ ।
ತ್ಯಕ್ತ್ವಾ ಭಾಗೇನ ಗಚ್ಛಂತಿ ಭಾಗತೋಽನುವ್ರಜಂತಿ ತಂ ॥

ಬೃಹದ್ಭಾಷ್ಯ— ಆಕಾಶಾಖ್ಯಂ ಸ್ವರೂಪಂತು ವಿಷ್ಣುಸ್ತದ್ಧ್ಯದಿ ಸಂಸ್ಥಿತಃ ।
ಭಾಗತೋಽಭಾಗತಃ ಜ್ಯೈತಾನನುಯಾತಿ ಜನಾರ್ದನಃ ॥

ಮುಖ್ಯಪ್ರಾಣನ ಅಂಶ ಗಮನವು ತೋರದಿದ್ದರೂ ಅನಾವೃತ್ತಿಃ ದೇಹಿನಾಂ ದೇಹಪಾತೇ ಎಂಬ ವಾಕ್ಯಕ್ಕೆ ಅವಿರೋಧವು. ಮುಖ್ಯವಾಯು ಮೋಕ್ಷಪ್ರದವೆಂದು ತಿಳಿಯುವುದು.

2. ನ ಭಾಗತೋ ಅಗ್ನ್ಯಾದಿಪ್ರಾಪ್ತೌ

ಮೇಲಿನ ಶೃತಿಯಲ್ಲಿ ಪ್ರಾಣಗಳಿಗೆ ಜೀವನ ಸಹಗತಿಯ ಸಂಶಯಕ್ಕೆ ಎಡೆಯಿಲ್ಲ ಅಗ್ನ್ಯಾದಿ ದೇವತಾ ಪ್ರಾಪ್ತಿಯು ಭಾಗಶಃ ಹೇಳಿರುವುದರಿಂದ ಜೀವನ ಭಾಗತ ಅನುಸರಣವು ಯುಕ್ತವೇ

3 ಪುರುಷಸ್ಯ ಮೃತೌ ಬ್ರಹ್ಮನ್ಪ್ರಾಣಾ ಭಾಗತ ಏವ ತು
ಅಧಿದೈವಂ ಪ್ರಾಪ್ನುವಂತಿ ಭಾಗತೋಽನು ವ್ರಜಂತಿ ತಂ॥
ಪುನಃ ಶರೀರಸಂಪ್ರಾಪ್ತೌ ತಮೇವಾನುವಿಶಂತಿ ಚೇತಿ ಬ್ರಾಹ್ಮೇ

ಚತುರ್ಮುಖನು ನಾರದರಿಗೆ ಹೇಳಿದ ವಾಕ್ಯವು ಮೃತ ಹೊಂದಿದ ಪುರುಷರ ಪ್ರಾಣಗಳು ಅಧಿದೈವನನ್ನು ಭಾಗಶಃ ಹೊಂದಿ ಜೀವರನ್ನು ಭಾಗಶಃ ಅನುಸರಿಸುವುವು-ಪುನಃಸ್ವರ್ಗಾದಿ ಭೋಗಾನಂತರದಲ್ಲಿ ಭೂಮಿಯನ್ನು ಹೊಂದಲು ಶರೀರಾಂತರ ಪ್ರಾಪ್ತವಾಗಲು ಆ ಪುರುಷ ಶರೀರವನ್ನು ಹಿಂದೆ ಅಧಿ ದೈವನನ್ನು ಹೊಂದಿದ್ದ ಭಾಗ

ಆಪವೇ ಉಪಕ್ರಮದಲ್ಲಿ ಹೇಳಿದ ಆಪವೇ ಶ್ರದ್ಧಾ ಶಬ್ದದಲ್ಲಿ ಹೇಳಿದೆಯಾಗಿಯೂ ಅಪಃ ಏವ ಪುರುಷ ವಚಸೋ ಭವಂತಿ ಎಂಬ ಉಪಸಂಹಾರ ವಾಕ್ಯದಿಂದ ಭೂತಗಳು ಜೀವ ಸಹಿತ ಗಮನವುಳ್ಳವುಗಳೇ

ತಸ್ಮಿನ್ನೇ ತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತೀತಿ ಪ್ರಥಮಾಗ್ನೌ ಶ್ರೂಯತೆ ನ ಭೂತಾನಿ ಜುಹ್ವತೀತಿ। ಅತೋ ನೇತಿ ಚೇನ್ನ । ತಾ ಏವ ಪ್ರಸ್ತುತಾ ಆಪಃ ಶ್ರದ್ಧಾರೂಪೇಣ ಹೂಯಂತ ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷ ವಚಸೋ ಭವಂತೀತ್ಯುಪಸಂಹಾರೋಪಪತ್ತೇಃ

ಪ್ರಥಮದಲ್ಲಿ ಸ್ವರ್ಗಾಖ್ಯ ಅಗ್ನಿಯಲ್ಲಿ ಶ್ರದ್ಧಾ ಸಹಿತ ಜೀವನ ಹೋಮವು ಎಂದು ಹೇಳಿದೆ ಭೂತಗಳನ್ನು ಹೇಳಿಲ್ಲವೆಂದರೆ ಇಲ್ಲಿಉಪಸಂಹಾರ ವಾಕ್ಯದಲ್ಲಿ ಆ ಪದವು ಶ್ರದ್ಧಾರೂಪದಿಂದ ಹೋಮವನ್ನು ಹೇಳಿದೆಯಾಗಿ ಭೂತಗಳ ಹೋಮವೇ ಎಂದು ತಿಳಿಯುವುದು.

– ಇತಿ ಪ್ರಥಮಾಧಿಕರಣಂ

– ಅಶ್ರುತತ್ವಾಧಿಕರಣಂ

ಈ ಅಧಿಕರಣದಲ್ಲಿ ಭೂತಗಳ ಜೀವನ ಸಹಗಮನ ಸಮರ್ಥನವು

## 1 ಸೂ॥ ಓಂ॥ ಅಶ್ರುತತ್ವಾದಿತಿ ಚೇನ್ನೇಷ್ಟಾಕಾರಿಣಾಂ ಪ್ರತೀತೇಃ ಓಂ॥ 6

ಅಗ್ನ್ಯಾದಿಗತಿಃ ಪ್ರತ್ಯಕ್ಷತಃ ಶ್ರೂಯತೇ। ಅತಃ ಪ್ರತ್ಯಕ್ಷಾಶ್ರವಣಾನ್ನಯುಕ್ತಮಿತಿ ಚೇನ್ನ ಅಥೈನಂ ಯಜಮಾನಂ ಕಿಂ ನ ಜಹಾತಿ ಭೂತಾನ್ಯೇವ ಭೂತೈರೇವ ಗಚ್ಛತಿ ಭೂತೈರ್ಭುಂಕ್ತೇ ಭೂತೈರುತ್ಪದ್ಯತೇ ಭೂತೈಶ್ಚರತಿ ಭೂತೈರ್ವಿಚರತೀತಿ ಕೌಂರರವ್ಯ ಶ್ರುತೌ ಪ್ರತೀತೇಃ

ಅಗ್ನಿಂವಾತ್ ಎಂಬ ಶೃತಿಯಲ್ಲಿ ಪ್ರಾಣಗಳು ಅಗ್ನ್ಯಾದಿಗಳನ್ನು ಕುರಿತು ಹೋಗುವುದೆಂದು ಸಾಕ್ಷಾತ್ತಾಗಿ ಹೇಳಿದಂತೆ ಭೂತಗಳು ಹೇಳಲ್ಪಡದಿರುವುದರಿಂದ ಜೀವನ ಜೀವಭೂತಗಳಿಂದ ಗಮನವು ಶಂಕಿತವು ಎಂದರೆ-ಹಾಗಲ್ಲ ಸೂತ್ರಾರ್ಥವು ಕೌಂಡಿಣ್ಯಶೃತಿಯಲ್ಲಿ ಯಾಗ ಹೋಮ ಕರ್ತೃಗಳ ಸಹ ಪ್ರತ್ಯಕ್ಷವಾಗಿಯೇ ಭೂತ ವಿಯೋಗ ಸಹಯೋಗಿ ಗಮನಗಳನ್ನು ಹೇಳಿರುವುದರಿಂದ ಜೀವರ ಭೂತಗಳ ಸಹಗಮನ ಯುಕ್ತವೇ

### ಇತಿ ಅಶ್ರುತತ್ವಾಧಿಕರಣವು

### - ಭಾಕ್ತಾಧಿಕರಣಂ -

ಈ ಅಧಿಕರಣದಲ್ಲಿ ಭಗವತ್ಪ್ರಾಪ್ತಿಗೆ ಕರ್ಮಗಳ ಫಲವು ಅಸ್ಥಿರವಾದ್ದರಿಂದ ವೈರಾಗ್ಯಾದಿಗಳ ಅವಶ್ಯಕ ಸಾಧನವು ಸಮರ್ಥಿತವಾಗಿದೆ.

1 ಮರಣವಾದ ಮಾತ್ರದಿಂದಲೇ ಮೋಕ್ಷಸಿದ್ಧಿ ಅಲ್ಲದ್ದರಿಂದ ಮೋಕ್ಷಫಲ ಹೊಂದಲು ವೈರಾಗ್ಯಾದಿಗಳು ಅನಾವಶ್ಯಕವು ಅಪಾಮನವ್ಮೃತಾ ಇತ್ಯಾದಿಶೃತಿಗಳಲ್ಲಿ ಕರ್ಮ ಮಾಡುವುದರಿಂದಲೇ ಮೋಕ್ಷ ಫಲವೆಂದು ಹೇಳಿರುವುದು ಇಷ್ಟ ಶೇಷನನ್ನು ಕುರಿತು ಅನಂತರ ಸ್ವಕೃತಸಾಧ್ಯ ಅಕ್ಷಯ ಫಲವನ್ನು ಹೊಂದುವೆನು ಎಂದುಶ್ರುತ್ಯರ್ಥವು ಅಪಾಮಸೋಮ ಮಮೃತಂ ಇತ್ಯಾದಿ ಶೃತಿವಿರೋಧಃ ಎಂದರೆ

## ಸೂ|| ಓಂ ಭಾಕ್ತಂ ವಾನಾತ್ಮವಿತ್ತ್ವಾತ್ತಥಾ ಹಿ ದರ್ಶಯತಿ ಓಂ || 7

ಭಾಗತಸ್ತದಮೃತತ್ವಂ ನಾನ್ಯಃ ಪಂಥಾ ಅಯನಾಯ ವಿದ್ಯತ ಇತಿ ಶ್ರುತೇ ರಾತ್ಮವಿದ ಏವ ಹಿ ಮುಖ್ಯಂ ವಾಶಬ್ದಾತ್ಪಾರಂಪರ್ಯೇಣಾತ್ಮವಿದಪೇಕ್ಷಯಾ ವಾ|

ಕಾಮ್ಯಕರ್ಮಗಳ ಫಲವು ಅಲ್ಪಕಾಲವುಳ್ಳದ್ದು ಅಮುಖ್ಯವು ಪರಬ್ರಹ್ಮ ಜ್ಞಾನವಿಲ್ಲವಾದ್ದರಿಂದ ಕಾಮ್ಯಕರ್ಮವು ಸಂಸಾರ ನಿವೃತ್ತಿ ರೂಪ ಮುಖ್ಯ ಮೋಕ್ಷ ಫಲವನ್ನು ಕೊಡಲಾರದು ಆದರೆ ಅಂತಃ ಕರಣ ಶುದ್ಧಿಯಿಂದ ಆನಂದಾತಿಶಯರೂ ನಿರತಿಶಯ ಪರಮ ಮುಖ್ಯ ಮೋಕ್ಷಕ್ಕೆ ಪಾರಂಪರ್ಯವಾಗಿ ವೈರಾಗ್ಯಜನತವಾಗಿ ಅನಂತರ ಶ್ರವಣಾದಿರೂಪಜಿಜ್ಞಾಸಾ ಜ್ಞಾನಸಾಧನಾ ಮತ್ತು ಜ್ಞಾನದಿಂದ ಮೋಕ್ಷವು ಆಗುವುದು

**3 ತಥಾಹಿ ಶ್ರುತಿಃ ಸ! ಏನಮವಿದಿತೋ ನ ಭುನಕ್ತಿ ಯಥಾ ವೇದೋ ವಾನನೂಕ್ತೋsನ್ಯದ್ವಾ ಕರ್ಮಾಕೃತಂ ಯದಿ ಹ ವಾ ಅಪ್ಯನೇವಂ ವಿನ್ಮಹತ್ಪುಣ್ಯಂ ಕರ್ಮ ಕರೋತಿ ಶದ್ಧಾಸ್ಯಾಂತತಃ ಕ್ಷೀಯತ ಏವಾತ್ಮಾನ ಮೇವ ಲೋಕಮುಪಾಸೀತ ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇsಸ್ಮಾದ್ಧ್ಯೇವಾತ್ಮನೋ ಯದ್ಯತ್ಕಾಮಯತೇ ತತ್ತ್ಸೃತ್ಸಜತೆ (ಬೃ-3-4-15)**

ಜೀವನು ಅಗ್ನಿವಿಪ್ರ ಅರ್ಚಕನಾಗಿ ಸರ್ವಸ್ವಾಮಿಯಾದ ಶ್ರೀ ಪರಮಾತ್ಮನನ್ನು ನೋಡದೆ ಈ ಲೋಕದಿಂದ ತೆರಳಿ ಪೂರ್ಣ ಸಂಸಾರ ನಿವೃತ್ತಿರೂಪ ಮೋಕ್ಷಫಲವನ್ನು ಹೊಂದುವನು ಆತನ ಕರ್ಮವು ಸ್ವರ್ಗಫಲ ಸಂಧಾನವುಳ್ಳದ್ದಾದ್ದರಿಂದ ಕಾಲದಿಂದ ಕ್ಷೀಣವಾಗಿ ನಾಶವಾಗುವುದು. ಶ್ರೇಷ್ಠ ಅಶ್ವಮೇಧಾದಿ ಕರ್ಮಗಳೂ ಸಹ ಮೋಕ್ಷವನ್ನ ಕೊಡುವುದಿಲ್ಲ ಆದರೆ ಜ್ಞಾನಿಯಾದವನು ಮಾಡುವ ಕರ್ಮಫಲವು "ಅಕಾಮ" ಕರ್ಮವಾದ್ದರಿಂದ ನಾಶವಾಗಲಾರದು ಕ್ಷೀಣವಾಗುವುದೂ ಇಲ್ಲ. ಜ್ಞಾನಾಭಿವೃದ್ಧಿ ದ್ವಾರಾ ಅತಿಶಯ ಫಲದಾಯಕವಾಗಿ ಮೋಕ್ಷ ಸಾಧಕವು ಜ್ಞಾನೋತ್ತರ ಕರ್ಮಗಳೂ ಮೋಕ್ಷ ಸಾಧನಕ್ಕೆ ಅಂಗವು.

**4 ಅಮೃತೋ ವಾವ ಸೋಮಪ್ರೋ ಭವತಿ ಯಾವದಿಂದ್ರೋ ಯಾವನ್ಮನುರ್ಯಾವದಾದಿತ್ಯಃ**

ಮೇಲಿನ ಶೃತಿಯು ಸೋಮಯಾಜಿಯ ಫಲವು ಕಾಲಾವಧಿಯಿಂದ ಅಮುಖ್ಯವು. ಮತ್ತು ಪುನಃ ಸಂಸಾರವನ್ನು ಹೊಂದುವನು. ಎಂದು

**5 ಕರ್ಮಣಾ ಜ್ಞಾನಮಾತನೋತಿ ಜ್ಞಾನೇನಾಮೃತೀ ಭವತಿ ಅಥಾಮೃತಾನಿ ಕರ್ಮಾಣಿ ಯತ ಏನಮಮೃತತ್ವಂ ನಯಂತಿ ಇತಿ ಚ**

ಅಧಿಕಾರಿಯು ಅಕಾಮಕರ್ಮ ಮಾಡುವುದರಿಂದ ಜ್ಞಾನವನ್ನು ಹೊಂದಿ ಪಾರಂಪರ್ಯವಾಗಿ ಮುಕ್ತಿಯನ್ನು ಹೊಂದುವನು. ಕಾಮ್ಯಕರ್ಮನಾದರೋ ಜ್ಞಾನಾರ್ಜನೆ ಇಲ್ಲದೆ ಅಲ್ಪ ಸ್ವರ್ಗ ಸುಖದಲ್ಲಿ ಪರ್ಯವಸಾನವಾಗುವುದು.

–ಇತಿ ಭಾಕ್ತಾಧಿಕರಣಂ–

## ಕೃತಾತ್ಯಯಾಧಿಕರಣಂ

ಈ ಅಧಿಕರಣದಲ್ಲಿ ವೈರಾಗ್ಯಾದಿ ಸಾಧನ ಅವಶ್ಯಕವಾದ್ದರಿಂದ ಅದರ ಅನುಷ್ಠಾನದ ಸಮರ್ಥನವು.

1 ಕೃತಸ್ಯ ಕರ್ಮಣೋ ಭೋಗೇನ ಕ್ಷಯಾನ್ಮುಕ್ತಿರಿತಿ ।

ಜೀವನು ಮಾಡುವ ಕರ್ಮವು ಫಲಾನುಭವದಿಂದ ಕ್ಷೀಣವಾಗಿ ಮತ್ತು ಅನುಗತ ಕರ್ಮಫಲವೂ ಸುಖಾನುಭವದಿಂದ ಕ್ಷೀಣವಾಗಿ ಕರ್ಮಗಳ ಫಲವಾಗಿ ಬಂದ ಬಂದವು ನಾಶವಾಗಿ ಜೀವನು ಮುಕ್ತನಾಗುವುದರಿಂದ ವೈರಾಗ್ಯಾದಿ ಸಂಪಾದನೆಯು ಅನಾವಶ್ಯಕವು. ಎಂದರೆ

2 ಅತ ಆಹ—ಅದಕ್ಕಾಗಿ ಹೇಳಿದೆ.

**ಸೂ॥ ಓಂ॥ ಕೃತಾತ್ಯಯೇಽನುಶಯವಾನ್ ದೃಷ್ಟ ಸ್ಮೃತಿಭ್ಯಾಂ ಓಂ॥ 8**

ಜೀವನು ಮಾಡುವ ಕರ್ಮಗಳು ಸ್ವರ್ಗಾದಿ ಭೋಗಾದಿಗಳಿಂದ ನಾಶವಾಗಲು

ಪುನಃ ಪುನಃ ಕರ್ಮಗಳಫಲ ವಿಶೇಷದಿಂದಲೇ ತಿರುಗಿ ಈ ಜಗತ್ತನ್ನು ಕುರಿತು ಬರುವನು ಎಂದು ಶೃತಿಯಿಂದಲೂ "ತತಃಶೇಷೇಣ' ಇತಿ ಮತ್ತು ಸ್ಮೃತಿ ವಾಕ್ಯ ದಿಂದಲೂ "ಭುಕ್ತಶೇಷೇತಿ" ಎಂದು ತಿಳಿದು ಬರುವುದು ಆದ್ದರಿಂದ ಕರ್ಮ ಫಲ ನಾಶದಿಂದ ಮೋಕ್ಷವಾಗುವುದಿಲ್ಲ

"ತತಃ ಶೇಷೇಣೇ ಮಂಲೋಕಮಾಯಾತಿ ಪುನಃ ಕರ್ಮ ಕುರುತೆ ಪುನಃ ಗಚ್ಛತಿ ಪುನರಾಗಚ್ಛತಿ" ಇತಿಶ್ರುತೇ – ಸ್ವರ್ಗ ಭೋಗನಂತರದಲ್ಲಿ ಶೇಷಕರ್ಮದಿಂದಲೇ ಪರ ಲೋಕದಿಂದ ಬಂದು ಈ ಲೋಕದಲ್ಲಿ ಪುನಃ ಜನ್ಮವು ಪುನಃ ಕರ್ಮಕರಣವು ಪುನಃ ಸ್ವರ್ಗಾದಿಗಮನ ಮತ್ತು ಕರ್ಮಫಲಾದಿ ಸುಖಗಳ ಅನುಭವವು ಪುನಃ ಕರ್ಮಶೇಷ ದಿಂದಲೇ ಆಗಮನವು ಹೀಗೆ ಹೇಳಿರುವುದರಿಂದ ಮಿಕ್ಕ ಶೇಷ ಪುಣ್ಯ ಪಾಪಗಳಿಂದಲೇ ಪುನಃ ಜನ್ಮವು ಆದ್ದರಿಂದ ಕರ್ಮಫಲದಿಂದ ಪೂರ್ಣ ಬಿಡುಗಡೆಯು ಆಗು ವುದಿಲ್ಲ

ಭೂತ ಶೇಷಾನುಶಯ ಪಾನಿಮಾಂ ಪ್ರಾಪ್ಯಭವಂ ಪುನಃ ।
ಕರ್ಮ ಕೃತ್ವಾ ಪುನರ್ಗಚ್ಛೇತ್ಪುನರಾಯಾತಿ ನಿತ್ಯಶಃ ॥
ಆ ಚತುರ್ದಶಮಾದ್ವರ್ಷಾತ್ಕರ್ಮಾಣಿ ನಿಯಮೇನತು ।
ದಶಾಪರಾಣಾಂ ದೇಹಾನಾಂ ಕಾರಣಾನಿ ಕರೋತ್ಯಯಂ ॥
ಅತಃ ಕರ್ಮಕ್ಷಯಾನ್ಮುಕ್ತಿಃ ಕುತ ಏವ ಭವಿಷ್ಯತಿ ॥ ಇತ್ಯಾದಿಸ್ಮೃತೇಶ್ಚೇ
ಪಪಾನೇವಾಯಾತಿ ॥

ಸ್ವರ್ಗಾದಿಗಳಿಂದ ಕರ್ಮಶೇಷದಿಂದಲೇ ಈ ಲೋಕದಲ್ಲಿ ಪುನರ್ಜನ್ಮವು. ಕರ್ಮ ಮಾಡಿ ಪುನಃ ಸ್ವರ್ಗಾನುಭವವು ಪುನಃ ಕರ್ಮಶೇಷದಿಂದಲೇ ಭೂಲೋಕದಲ್ಲಿ ಜನ ನವು ಇದು ನಿತ್ಯ ನಿಯಮವು. ಜೀವರಿಗೆ ಜನನವಾದ 14 ವರ್ಷಗಳ ನಂತರ ಮಾಡಿದ ಕರ್ಮಗಳು ನಿಯಮವಾಗಿ 10 ಜನ್ಮಗಳಿಗೆ ಕಮ್ಮಿಯಿಲ್ಲದಂತೆ ಅನುಭವ ಫಲದಾಯಕವಾದ್ದರಿಂದ ಕರ್ಮಫಲಕ್ಷಯವು ಪೂರ್ಣವಾಗಿ ಯಾವಾಗಲೂ ಸಾಧ್ಯ ವಿಲ್ಲದ್ದರಿಂದ ಮೋಕ್ಷ ಹೊಂದುವುದು ಅಸಾಧ್ಯವೇ.

–ಇತಿ ಕೃತಾತ್ಯತ್ಯಯಾಧಿಕರಣಂ–

## – ಯಥೇತಾಧಿಕರಣಂ–

ಈ ಅಧಿಕರಣದಲ್ಲಿ ಜೀವನಿಗೆ ಸ್ವರ್ಗಲೋಕದಿಂದ ಹಿಂತಿರುಗಿ ಆಗಮನ ಪ್ರಕಾರ ವನ್ನು ಹೇಳಿದೆ.

1. **ಯಥೇತಮೇವ ಗಚ್ಛತಿ ಯಥೇತಮಾಗಚ್ಛತಿ ಸ ಭುಂಕ್ತೇ ಸ ಕರ್ಮ ಕುರುತೇ ಸ ಪರಿವರ್ತತ ಇತಿ ಗತಿ ಪ್ರಕಾರೇಣಾಽಽಗತಿಃ ಪ್ರತೀಯತೇ ॥**

ಎಲ್ಲಾ ಜೀವಗಳು ಮರಣಾನಂತರ ಯಾವ ಮಾರ್ಗದಿಂದ ಹೋಗುವುದೋ ಆ ಮಾರ್ಗದಿಂದಲೇ ಸ್ವರ್ಗಾದಿ ಫಲವನ್ನನುಭವಿಸಿ ಹಿಂತಿರುಗುವುವು. ಮತ್ತೆ ಹಿಂದೆ ಹೋದ ಮಾರ್ಗದಿಂದಲೇ ಗಮನವು ಮತ್ತು ಪುನರಾಗಮನು ಎಂದು ಹೇಳಿದೆ

ಅತೋ ಅಬ್ರವೀತ್ – ಅದಕ್ಕಾಗಿ ಹೇಳಿದೆ.

### ಸೂ॥ ಓಂ॥ ಯಥೇತ ಮನೇವಂ ಚ ಓಂ॥ 9

ಜೀವನು ಯಾವ ಮಾರ್ಗದಿಂದ ಸ್ವರ್ಗವನ್ನು ಹೊಂದುವನೋ ಆ ಮಾರ್ಗ ದಿಂದಲೇ ಸ್ವಲ್ಪ ದೂರವಾಗಿಯೂ ಅನಂತರ ಬೇರೆ ಮಾರ್ಗವಾಗಿಯೂ ಈ ಲೋಕ ವನ್ನು ಹೊಂದುವನು ಒಂದೇ ರೀತಿಯಾಗಿ ಅಲ್ಲ.

"ಧೂಮಾದಭ್ರಮಭ್ರಾದಾಕಾಶಮಾಕಾಶಾಚ್ಚಂದ್ರ ಲೋಕಂಯಥೇತಮಾಕಾಶ ಮಾಕಾಶಾದ್ವಾಯುಃ ವಾಯುರ್ಭೂತ್ವಾ ಧೂಮೋಭವತಿ ದೂಮೋಭೂತಾ" ಭ್ರಂಭವತ್ಯಭ್ರಂಭೂತ್ವಾ ಮೇಘೋ ಭವತಿ ಮೇಘೋ ಭೂತ್ವಾಪ್ರವರ್ಷತ್ವಿ ಇತಿ ಕಾಷಾಯಣ ಶೃತೇರ್ಯಥಾ ಗತಮನ್ಯಥಾ ಚ ॥

ಕಾಷ್ಣಾಯಣ ಶೃತಿಯಲ್ಲಿ ಗಮನಾಗಮನ ವಿವರಣೆಯನ್ನು ಹೀಗೆಹೇಳಿದೆ. ಧೂಮ ದಿಂದ ಮೋಡವನ್ನೂ ಮೋಡದಿಂದಾಕಾಶವನ್ನೂ ಆಕಾಶದಿಂದ ಚಂದ್ರಲೋಕವನ್ನು ಹೊಂದಿ ಹಿಂತಿರುಗುವಾಗ ಆಕಾಶದ ವತಿವಿಗೂ ಅದೇ ದ್ವಾರದಿಂದ ಬಂದು ಅಲ್ಲಿಂದ ವಾಯುವನ್ನು ವಾಯುವಿನಿಂದ ಧೂಮವನ್ನು ಧೂಮದಿಂದ ಮೋಡವನ್ನು (ಧೂಮಾ ದಿ ದೇವತಾ ಸ್ವಭಾವ ಸದೃಶ ಸ್ವಭಾವವನ್ನು ಹೊಂದಿ) ಮೇಘವಾಗಿ ಮಳೆಯಾಗಿ ಭೂಮಿಯನ್ನು ಸೇರುವುದು ಹೀಗೆ ಹೇಳಿದೆ

-ಇತಿ ಯಥೇತಾಧಿಕರಣಂ-

- ಚರಣಾಧಿಕರಣಂ -

ಈ ಅಧಿಕರಣದಲ್ಲಿ ಹೋಗುವುದು ಮತ್ತೆ ಹಿಂತಿರುಗುವುದಕ್ಕೆ ಕರ್ಮಫಲತ್ವವು ಸಮರ್ಥನೆ ಮಾಡಲ್ಪಡುವುದು

## ಸೂ|| ಓಂ|| ಚರಣಾದಿತಿಚೇನ್ನ ತದುಪಲಕ್ಷಣಾರ್ಥೇತಿ ಕಾಷ್ಣಾರ್ಜಿನಿಃ ಓಂ|| 10

"ತದ್ಯ ಇಹ ರಮಣೀಯ ಚರಣಾ ರಮಣೀಯಾಂ ಯೋನಿಮಾಪದ್ಯಂತೆ ಕಪೂಯ ಚರಣಾ ಕಪೂಯಾಂ" ಇತಿ ಶೃತೇಶ್ಚರಣ ಫಲೂವ ಗಮನಾ ಗಮನಂ ನಯಜ್ಞಾದಿಕೃತಃ ||

ಗತಾಗತ ಯೋಗವು ಯಜ್ಞಾದಿ ಕರ್ಮ ಫಲಗಳಿಂದಲೇ ಆಗುತ್ತವೆ ಚರಣ ಶಬ್ದವು "ಶೃತಿ ಬಲದಿಂದ" ಯಜ್ಞಾಂಗ ಭೂತ ಆಚಾರಾದಿಗಳೆ ಎಂದರೆ ಹಾಗಲ್ಲ.

ಸದಾ ಚಾರ ಪೂರ್ವಕ ಸಾಧು ಯಜ್ಞ ಕರ್ತರು ಉತ್ತಮವಾದ ತ್ರಿವರ್ಣೀಯರ ಯೋನಿಯನ್ನು ಹೊಂದುವರು ಅನಾಚಾರಿಗಳು ಅಸಾಧು ಯಜ್ಞಗಳಿಂದ ಕೀಳು ಯೋನಿಯನ್ನು ಅತಿ ಶೀಘ್ರವಾಗಿ ಹೊಂದುವರು

2 **ಆಚಾರ ಇತಿ ಸಂಪ್ರೋಕ್ತಃ ಕರ್ಮಾಂಗತ್ವೇನ ಶುದ್ಧಿದಃ ।**

**ಅಶುದ್ಧಿದಸ್ತ್ವನಾಚಾರಃ ಚರಣಂತೂ ಭಯಂಮತಂ ಇತಿ ಸ್ಮೃತೇರೀತಿ ರೀತಿ ಚೇನ್ನ ಯಶಜ್ಞಾದ್ಯುಪಲಕ್ಷಣಾರ್ಥಾ ಚರಣಾದಿಶೃತಿರಿತಿ ಕಾಷ್ಣಾರ್ಜಿನಿ-ರ್ಮನ್ಯತೆ.**

ಆಚಾರವೆಂದು ಯಾವುದು ಹೇಳಿದೆಯೋ ಅದು ಕರ್ಮದ ಅಂಗವಾಗಿ ಶುದ್ಧತೆಯನ್ನು ಹೇಳುತ್ತವೆ ಅನಾಚಾರವು ಅಶುದ್ಧಿಯನ್ನು ಹೇಳುತ್ತದೆ ಇವೆರಡೂ ಚರಣಗಳೆಂದು ಸ್ಮೃತಿಯಲ್ಲಿ ಹೇಳಿದೆಯೆಂದರೆ ಹಾಗಲ್ಲ ಯಜ್ಞಾಂಗವಾಗಿ ನಡೆಸಲ್ಪಡುವ ಕರ್ಮವೇ ಚರಣ ಪದಾರ್ಥವೆಂದ ಕಾಷ್ಣಾರ್ಜಿನಿಯರ ಮತವು

## ಸೂ|| ಓಂ|| ಆನರ್ಥಕ್ಯಮಿತಿಚೇನ್ನ ತದಪೇಕ್ಷತ್ವಾತ್ ಓಂ|| 11

ತರ್ಹಿ ರಮಣೀಯಾಃ ಕಪೂಯಾಃ ಇತ್ಯೇವ ಸ್ಯಾತ್ । ಚರಣ ಶಬ್ದಸ್ಯಾನರ್ಥಕ್ಯಮಿತಿ ಚೇತ್ ||

ರಮಣೀಯ ಕಪೂಯ ಪದಗಳಿಂದಲೇ ಕರ್ಮೋಪ ಲಕ್ಷಣವು ತಿಳಿಯುವುದರಿಂದ ಚರಣ ಶಬ್ದದ ಆವಶ್ಯಕತೆಯು ಇಲ್ಲವೆಂದರೆ ಹಾಗಲ್ಲ ಸಾಧು ಅಸಾದು ಯಜ್ಞಗಳಲ್ಲಿ ಆಚಾರ ನಡವಳಿಕೆಗಳ ಅಪೇಕ್ಷಯಿರುವುದರಿಂದ ಚರಣ ಶಬ್ದವು ಸಾರ್ಥಕವೇ

4 **ನ ಚರಣಾಪೇಕ್ಷತ್ವಾತ್ಪ್ರಮಣೀಯತ್ವಾದೇಸ್ತತ್ ಜ್ಞಾಪನಾರ್ಥತ್ವೇನೋಪಪತ್ತೇಃ ||**

ಚರಣ ಶಬ್ದವು ಸಾಧು ಅಸಾಧು ಯಜ್ಞಗಳ ಜ್ಞಾಪನಾರ್ಥವೇ ಹೊರತು ಯಜ್ಞ ಸಂಬಂಧ ಕರ್ಮಗಳ ಆಚಾರಗಳಲ್ಲ.

## ಸೂ। ಓಂ॥ ಸುಕೃದ ಷ್ಕೃ ಕೃತೇ ಏವೇತಿತ ಬಾದರಿಃ ಓಂ॥ 12

ಸಾಧು ಅಸಾಧು ಕರ್ಮಗಳ ಆಚರಣ ವಿಷಯದಲ್ಲಿಯೇ ಶೃತಿಯಲ್ಲಿ ಹೇಳಿರುವ ಚರಣ ಶಬ್ದಾರ್ಥವು. ಯಜ್ಞಾಂಗ ಕರ್ಮಗಳ ಚರಣಗಳಲ್ಲಿ ಇದು ಬಾದರಾಯಣ ಮತವು ಸೂತ್ರಕಾರ ಶ್ರೀ ವೇದವ್ಯಾಸರ ಮತವೂ ಕೂಡ ಇದೇ.

"ಧರ್ಮಂಚರತ ಮಾ ಧರ್ಮಂ" ಇತ್ಯಾದಿ ಪ್ರಯೋಗಾತ್ಸುಕೃತ ದುಷ್ಕೃತೆ ಏವ ಚರಣಶಬ್ದೋಕ್ತೇ ಇತಿ ಬಾದರಿರ್ಮನ್ಯತೆ। ತುಶಬ್ದಾತ್ ಸ್ವಸಿದ್ಧಾಂತೋಽಪಿ ನ ಏವೇತಿ ಸೂಚಯತಿ ತುಶಬ್ದಸ್ತು ವಿಶೇಷೇ ಸ್ಯಾತ್ಸ್ವಸಿದ್ಧಾಂತೆ ವಧಾರಣೇ। ಇತಿ ನಾಮ ಮಹೋದಧೌ॥

ಧರ್ಮದ ಪಥದಲ್ಲಿ ನಡೆಯಿರಿ "ಅಧರ್ಮದಿಂದಲ್ಲ' ಎಂಬ ವಾಕ್ಯದಲ್ಲಿ ಸದಾಚಾರವು ಸರ್ವದಾ ಅನುಷ್ಠೇಯವಾದುದರಿಂದ ಮತ್ತು ಉತ್ತಮ ಫಲದಾತ್ಯವಾದ್ದರಿಂದ ಸದಾಚಾರ ಪೂರ್ವಕವಾಗಿಯೇ ಯಜ್ಞಗಳನ್ನು ಸಾಂಗವಾಗಿ ಮಾಡಲು ಉದ್ದೇಶವು

- ಇತಿ ಚರಣಾಧಿಕರಣಂ -

### - ಅನಿಷ್ಟಾಧಿಕರಣಂ -

ಈ ಅಧಿಕರಣದಲ್ಲಿ ಅನಿಷ್ಟಾಧಿಕಾರಿಗಳಿಗೂ ಗತಾಗತಿ ದುಃಖವು ಉಂಟೆಂದು ಹೇಳಿದೆ.

1 **ಪುಣ್ಯ ಕೃತಾನಾಮೇವ ಗಮನಾಗಮನೇ ನೇತರೇಷಾಮಿತಿ ।**

ಇಷ್ಟಾದಿ ಪುಣ್ಯಕರ್ಮಕಾರರುಗಳಿಗೆ ಗತಾಗತಾದಿಗಳು ಪಾಪ ಕರ್ಮಕಾರಿಗಳಲ್ಲಿ ಎಂದರೆ ಹಾಗಲ್ಲ, ಅವರಿಗೂ ಉಂಟು.

ಅತ ಆಹ—ಆದಕ್ಕಾಗಿ ಹೇಳಿದೆ

## ಸೂ|| ಓಂ|| ಅನಿಷ್ಟಾದಿಕಾರಿಣಾಮಪಿ ಚ ಶ್ರುತಂ ಓಂ|| 13

ಯಜ್ಞಾದಿ ಕರ್ಮ ಮಾಡಿದವರಿಗೆ ಮಾತ್ರ ಗಮನಾದಿ ಗಮನಗಳೆಂದಲ್ಲ ತದ್ವಿರುದ್ಧವಾದ ಪಾಪಕರ್ಮ ಮಾಡಿದವರಿಗೂ ಗತಾನುಗತವು ಉಂಟು ಹೀಗೆ ಶ್ರುತಿ ವಾಕ್ಯವು.

ತದ್ಯ ಇಹ ಶುಭಕೃತೋಯೋ ಚಾಶುಭಕೃತಸ್ತೇ ಶುಭಮನು ಭೂಯಾ
ವರ್ತಂತೆ ಪುನಃ ಕರ್ಮ ಕುರ್ವಂತಿ ಪುನರ್ಗಚ್ಛಂತಿ । ಇತಿ ಭಾಲ್ಲವೇಯ
ಶೃತಿ ॥

ಯಾಗಾದಿ ಪುಣ್ಯ ಕರ್ಮ ಮಾಡಿದವರಿಗೂ ಇದಕ್ಕೆ ವಿರುದ್ಧ ಪಾಪ ಕರ್ಮಗಳನ್ನು ಮಾಡಿದವರಿಗೂ ಲೋಕಾಂತರ ಗತಾಗತವು ಇದೆ ಅಶುಭ ಕರ್ಮಕೃತರೂ ಅಶುಭ ಕರ್ಮ ಫಲವನ್ನನುಭವಿಸಿ ಪುನಃ ಭೂಲೋಕಕಾಮಿಸಿ ಕರ್ಮಮಾಡಿ ಪುನಃ ಪುನಃ ಬೇರೆ ಲೋಕಗಳಿಗೆ ಮತ್ತು ಈ ಲೋಕಕ್ಕೆ ಗಮನಾಗಮನವು

## ಸೂ|| ಓಂ|| ಸಂಯಮನೇತ್ವನು ಭೂಯೋತರೇಷಾಮಾರೋಹಾವರೋಹೌ ತದ್ಗತಿದರ್ಶನಾತ್ ಓಂ|| 14

ಸಂಮ್ಯಗ್ಯಮಶಾಸನವನ್ನು ಅನುಭವಿಸಿ ಇಷ್ಟಾಧಿಕಾರಿಗಳಲ್ಲದ ಇತರ ಕರ್ಮಕರ್ತೃಗಳು ಆರೋಹ ಮಾರ್ಗಗಳುಳ್ಳವರು. ಕೆಲವರಿಗೆ ನರಕಾದಿಸ್ಥಾನಗಳಿಂದ ಉತ್ಥಾನವು ಅನ್ಯರಿಗೆ ಕೆಳ ಲೋಕ ಗಮನವು ಹೀಗೆ ಶೃತಿಯಲ್ಲಿ ಹೇಳಿದೆ. ಕೌಂಠರವ್ಯ ಶೃತಿಯು

ಸಂಯಮ ಮನು ಭೂಯ ಕೇಷಾಂ ಚಿದಾರೋಹಃ ಕೇಷಾಂ ಚಿದವರೋಹಃ ।
ತು ಶಬ್ದೋವ ಧಾರಣೆ । "ಸರ್ವೆವಾ ಏತೆ' ಶುಭ ಕೃತಃ ಸಂಯಮನೆ ಪ್ರಪ
ತಂತಿ ತತ್ರಯೋ ಪರದ್ವಿಷೋ ಗುಕುದ್ವಿಷಃ ಶ್ರುತಿದ್ವಿಷಃ ತದವ ಮಂತಾರಃ
ಮೂರ್ಖಾ ಇತಿ ತೇ ವೈ ತತೋವರುಹ್ಯತಮಸಿ ಪ್ರಪತಂತಿ

ನೈವೇತೆ ಉತ್ತಿಂಷ್ಠತ್ಯೆಪಿಕರ್ಹಿಚಿತ್ ಪಪ್ರಂವಾ ಏತದಿತ್ಯಾಹುರಧಯೋ-
"ಸ್ತೇಬ್ರಹ್ಮದ್ವಿಷಃ ಸ್ತೇನಾಃ ಸುರಾಪಾ ಇತಿ ತೇ ವೈತದನು ಭೂಯೋಮಂ
ಲೋಕಮನುಪ್ರಜಂತಿ. ಇತಿ ಕೌಂರರವ್ಯಶೃತೇಃ ।

ನರಕ ದುಃಖಾನುಭವದ ನಂತರ ಕೆಲವರಿಗೆ ಕೆಳಲೋಕ ಗಮನವು ಅಶುಭ ಕರ್ಮಿಗಳು ನರಕದಲ್ಲಿ ಬಿದ್ದು ದುಖಾಃನುಭವಾನಂತರ ದೇವ ದ್ವೇಷಿಗಳು ಗುರು ದ್ವೇಷಿಗಳು ವೇದ ದ್ವೇಷಿಗಳು ಧೂರ್ತರೂ ಮೂರ್ಖರೂ ಆದ ಅತಿ ಪಾಪಿಗಳೂ ಕೆಳಗಣ ಲೋಕಗಳಲ್ಲಿ ಬಿದ್ದು (ಅಂಧ ತಮಸ್ಸು) ಅಲ್ಲಿಂದ ಉದ್ಗಮನವಿಲ್ಲದೆ ಸ್ಥಿರವಾಗಿ ದುಃಖಾನುಭವವುಳ್ಳವರಾಗಿರುವರು ಮಿಕ್ಕ ಅನ್ಯದುಷ್ಕರ್ಮಿಗಳು ಬ್ರಹ್ಮ ದ್ವೇಷಿಗಳು ಕಳ್ಳರು ಮತ್ತು ಕುಡಿತ ಮುಂತಾದ ದುಷ್ಟವ್ಯಾಪಾರವುಳ್ಳವರು ದುಖಾಃನುಭವಾನಂತರ ಈ ಲೋಕಕ್ಕೆ ಬರುವರು

## ಸೂ|| ಓಂ|| ಸ್ಮರಂತಿ ಚ ಓಂ|| 15

ಗಚ್ಛಂತಿ ಪಾಪಿನಃ ಸರ್ವೇ ನರಕಂ ನಾತ್ರ ಸಂಶಯಃ ।
ತತ್ರ ಭುಕ್ತ್ವಾ ಪತಂತ್ಯೇವ ಯೋ ದ್ವಿಷಂತಿ ಜನಾರ್ದನಂ ||
ಮಹಾ ತಮಸಿ ಮಗ್ನಾನಾಂ ನ ತ್ವೇಷಾ ಮುತ್ಥಿತಿಃಕ್ವಚಿತ್ ।
ಇತರೇಷಾಂತು ಪಾಪಾನಾಂ ಉತ್ಥಾನಂ ವಿದ್ಯತೇಪಿಚ ||
ಸುಖಸ್ಯಾನಂತರಂ ದುಃಖಂ ದುಃಖಸ್ಯಾ ನಂತರಂ ಸುಖಂ ||
ಇತಿ ಸರ್ವತ್ರ ನಿಯಮಃ ಪಂಚಕಷ್ಟೇತು ತತ್ಸದಾ|| ಇತ್ಯಾದಿ

ಪಾಪಿಗಳೆಲ್ಲರೂ ನರಕವನ್ನು ಹೊಂದುವರು ಸಂಶಯವಿಲ್ಲ. ಅಲ್ಲಿ ಫಲವನ್ನನುಭವಿಸಿ ಅತ್ಯಂತ ದ್ವೇಷಗಳು ಮಹಾ ತಮಸ್ಸಿನಲ್ಲಿ ಬೀಳುವರು ಮತ್ತು ಅಲ್ಲಿಂದ ಅವರುಗಳಿಗೆ ಬಿಡುಗಡೆಯೇ ಇರುವುದಿಲ್ಲ. ಮಿಕ್ಕ ಪಾಪಿಗಳಿಗೆ ನರಕಲೋಕಾಗಮನವು ಇದ್ದರೂ ಅವರಿಗೆ ದುಃಖಾನಂತರದಲ್ಲಿ ಸುಖವೂ ಅನಂತರ ದುಃಖವೂ-ಹೀಗೆ ಸಂಸಾರದಲ್ಲಿ ಸರ್ವದಾ ನರಳುತ್ತಿರುವರು

– ಇತಿ ಅನಿಷ್ಟಾದ್ಯಧಿಕರಣಂ –

## – ಅಪಿಸಪ್ತಾಧಿಕರಣಂ –

ಈ ಅಧಿಕರಣದಲ್ಲಿ ಭಗವದ್ವೇಷಿಗಳಿಗೆ ಫಲವು ನಿತ್ಯನರಕವು ಎಂದು ಸಮರ್ಥನೆ

### ಸೂ|| ಓಂ|| ಅಪಿ ಸಪ್ತ ಓಂ|| 16

ಅನೇಕ ನರಕ ವಿಭಾಗಗಳು ಹೇಳಲ್ಪಟ್ಟಿದ್ದರೂ ಮುಖ್ಯವಾದುವು ಏಳು ಮಾತ್ರ

ರೌರವೋ ಥಮಹಾಂಶ್ಚೈವ ವಹ್ನಿರ್ವೈಕತಣೀ ತಥಾ |
ಕುಂಭೀಪಾಕ ಇತಿ ಪ್ರೋಕ್ತಾನ್ಯನಿತನರಕಾಣಿವೈ |
ತಾಮಿಸ್ರಶ್ಚಾಂಧತಾಮಿಸ್ರೋ ದ್ವೌನಿತ್ಯೌ ಸಂಪ್ರಕೀರ್ತಿತೌ |
ಇತಿ ಸಪ್ತಪ್ರಧಾನಾನಿ ಬಲೀಯಸ್ಸ್ರೂತ್ತರೋತ್ತರಂ |
ಏತಾನಿ ಕ್ರಮಶೋಗತ್ವೈವಾರೋಹೊಥಾವರೋಹಣಂ || ಇತಿ ಭಾರತೇ.

ನರಕಗಳು ಅನೇಕ ವಿಧವಿದ್ದಾಗ್ಯೂ ಪ್ರಧಾನವಾಗಿ ಏಳು ಭಾಗಗಳು ಮಾತ್ರ ಮಹಾನ್, ಅಂಧತಾಮಿಶ್ರ, ವೈತರಣೀ, ಕುಂಭೀಪಾ ಹೀಗೆ ಐದು ಭಾಗಗಳು ಅನಿತ್ಯಗಳು ಮತ್ತು ಪುನಃ ಆವೃತ್ತಿವುಳ್ಳವುಗಳು, "ತಾಮಿಸ್ರ' ಅಂಧತಾಮಿಸ್ರ ಈ ನರಕಗಳು ನಿತ್ಯಗಳು ಮತ್ತು ಪುನರಾವೃತ್ತಿ ವರ್ಜಿತಗಳು. ಈ ನರಕಗಳು ಉತ್ತರೋತ್ತರ ಬಲವತ್ತರ ದುಃಖವುಳ್ಳವುಗಳು. ಇವುಗಳನ್ನು ಕ್ರಮವಾಗಿ ಹೊಂದಿ ಪುನರಾವೃತ್ತಿ ಅಪುನರಾವೃತ್ತಿಗಳನ್ನು ಹೊಂದುವರು.

ಇತಿ ಆಪಿಸಪ್ತಾಧಿಕರಣ

## - ತತ್ರಾಪ್ಯಧಿಕರಣಂ -

ಈ ಅಧಿಕರಣದಲ್ಲಿ ನರಕದಲ್ಲಿ ದುಃಖ ಮಾತ್ರವೇ ಎಂದು ಸಮರ್ಥನವು

1. **ಈಶ್ವರಸ್ಯ ನರಕಾಯುಕ್ತೇಃ । ಸರ್ವಂ ವಿಸೃಜತಿ ಸರ್ವಂ ವಿಲಾಪಯತಿ ಸರ್ವಂ ರಮಯತಿ ಸರ್ವಂ ನ ರಮಯತಿ ಸರ್ವಂ ಪ್ರವರ್ತಯತ್ಯಂತರಸ್ಮಿನ್ನಿವಿಷ್ಟ ಇತಿ ಕೌಷಾರವಶ್ರುತಿ ವಿರೋಧ ಇತ್ಯತೋಽವಕ್ತಿ ॥**

ನರಕದಲ್ಲಿಯೂ ಈಶ್ವರನು ಪ್ರೇರಕನಾಗಿ ಇರಬೇಕಾಗಿ ಅವನಿಗೂ ಜೀವರಂತೆ ದುಃಖ ಪ್ರಾಪ್ತಿಯಾಗಿ ಈಶ್ವರತ್ವವು ವಿರೋಧವಾಗುವುದು ಆದ್ದರಿಂದ ನರಕದಲ್ಲಿ ದುಃಖ ಮಾತ್ರವೇ ಅಲ್ಲ ಸುಖವೂ ಇದೆಯೆಂದು ಅಂಗೀಕರಿಸಬೇಕೆಂದು ಪೂರ್ವಪಕ್ಷ. ಶ್ರುತ್ಯರ್ಥವು. ಈಶ್ವರನು ಸರ್ವ ಜಗತ್ತನ್ನು ವಿವಿಧಾಕಾರವಾಗಿ ಸೃಷ್ಟಿಸಿ ನಾಶಮಾಡುವನು ರಮಣ ಯೋಗ್ಯ ಜೀವರಿಗೆ ಸುಖಪಡಿಸುವನು ಅಯೋಗ್ಯರಿಗೆ ದುಃಖ ಕೊಡುವನು. ಸರ್ವದರಲ್ಲಿಯೂ ಅಂತರ್ಯಾಮಿಯಾಗಿ ಪ್ರವೃತ್ತಿಕರನು ಎಂದು ಸರ್ವಪ್ರೇರಕತ್ವವು.

ಅತೋಽವಕ್ತಿ —ಅದಕ್ಕಾಗಿ ಹೇಳಿದೆ.

### ಸೂ॥ ಓಂ॥ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ॥ 17

ಚ ಶಬ್ದಾದದುಃಖಾನುಭವೇನ

ನರಕಾದಿಗಳಲ್ಲಿ ಶ್ರೀಪರಮಾತ್ಮನ ಪ್ರೇರಕ ವ್ಯಾಪಾರವಿದ್ದಾಗ್ಯೂ ಆತನಿಗೆ ದುಃಖಾದಿ ದುಃಖಸ್ಪರ್ಶವಿಲ್ಲ. ಅಲ್ಲಿ ಸ್ವಾಮಿನಿಮಿತ್ತದಿಂದ ನಿಯಂತ್ರತ್ವ ಸ್ವಾತಂತ್ರ್ಯ ಮಾತ್ರವೇ.

3 **ಸ ಸ್ವರ್ಗೇ ಸ ಭೂಮೌ ಸ ನರಕೇ ಸೋಽಂಧೇತಮಸಿ ಪ್ರವೃತ್ತಿಕೃದ್**

ಏಕ ಏವಾಸುಪೀಷ್ಟೋ ನಾಸೌ ದುಃಖಭುಗೀಶ್ವರಃ ಪ್ರಭು
ತ್ವಾತ್ಸರ್ವಂಪಶ್ಯತಿ ಸರ್ವಂ ಕಾರಯತಿ ನಾಸೌ ದುಃಖಭುಗ್ಯ
ಏವಂ ವೇದೇತಿ ಪೌತ್ರಾಯಣ ಶ್ರುತೇರವಿರೋಧಃ ।

ಶ್ರೀ ಪರಮಾತ್ಮನು ಸ್ವರ್ಗದಲ್ಲಿಯೂ ಭೂಮಿಯಲ್ಲಿಯೂ ನರಕದಲ್ಲಿಯೂ ಅಂಧತಮಸ್ಸಿನಲ್ಲಿಯೂ ಮುಖ್ಯ ಪ್ರವೃತ್ತಿ ಕಾರಣಕ್ಕಾಗಿ ಒಳಹೊಕ್ಕು ಇರುವನು ಅವನು ದುಃಖ ಭಾಗಿಯೂ ಈಶ್ವರನು ಸರ್ವಜ್ಞನಾದ್ದರಿಂದ ಸರ್ವವನ್ನು ನೋಡು ವವನು ಸರ್ವವನ್ನು ಮಾಡಿಸುವನು. ಆದರೆ ಅವನು ಸರ್ವಥಾ ದುಃಖ ಭಾಗಿಯಲ್ಲ. ಶೃತಿಯು.

4. ನರಕೇಪಿ ವಸನ್ನೀಶೋ ನಾಸೌ ದುಃಖಭುಗುಚ್ಯತೇ ।
ನೀಚೋಚ್ಚತ್ವೈವ ದುಃಖಾದೇರ್ಭೋಗ ಇತ್ಯಭಿಧೀಯತೇ ।
ನಾಸೌ ನೀಚೋಚ್ಚ ತಾಂ ಯಾತಿ ಪಶ್ಯತ್ಯೇವ ಪ್ರಭುತ್ವತ ಇತಿ
ಭಾಗವತತಂತ್ರೇ ॥

ನರಕದಲ್ಲಿದ್ದರೂ ಈಶನಿಗೆ ದುಃಖಲೇಶವಿಲ್ಲ. ನೀಚೋಚ್ಚ ಭಾವದಿಂದಲೇ ದುಃಖ ಸುಖಗಳ ಭೋಗವು. ಪ್ರಭುವಾದ್ದರಿಂದ ಆತನಿಗೆ ಯಾವ ಭೇದ ಭಾವವು ಇಲ್ಲವಾಗಿ ಉಚ್ಚ ನೀಚ ಭಾವಗಳನ್ನು ನೋಡುವವನು ಅನುಭವವಿಲ್ಲದವನು

ಇತಿ ತತ್ರಾಪ್ಯಧಿಕರಣಂ

## ವಿದ್ಯಾಧಿಕರಣಂ

1. ಅಥೈತಯೋಃ ಪಥೋರ್ನೈಕತರೇಣ ಚ ತಾನೀಮಾನಿ ಕ್ಷುದ್ರ
ಮಿಶ್ರಾಣ್ಯಸಕೃದಾವರ್ತೀನಿ ಭೂತಾನಿ ಭವಂತಿ ಜಾಯಸ್ವ
ಮ್ರಿಯಸ್ವೇತ್ಯೇತತ್ತೃತೀಯಂ ಸ್ಥಾನಮ್ ಇತಿ(ಛಾ-5-10-8)
ಗತಿಸ್ವಾತಂತ್ರ್ಯಂ ಭೂತಾನಾಂ ಪ್ರತೀಯತ ಇತ್ಯತ ಹ ॥

ಛಾಂದೋಗ್ಯ ಶೃತಿಯಲ್ಲಿ ವಿದ್ಯಾ ಕರ್ಮಗಳ ಫಲವಾಗಿ ಅರ್ಚಿ ಧೂಮಾದಿ ಮಾರ್ಗಗಳನ್ನು ಜ್ಞಾನಿ ಕರ್ಮಗಳ ಪ್ರಾಪ್ತಿ ರೂಪವಾಗಿ ಹೇಳಿ ಈ ಎರಡು ಮಾರ್ಗಗಳ ಮಧ್ಯಸ್ವರ್ಗ ಅಪವರ್ಗಗಳ ಬೇರೆ ಸ್ಥಾನ ಪ್ರಾಪ್ತಿಯು ಉಂಟೆಂದು ಜೀವರಿಗೆ ಮೂರನೇ ಮಾರ್ಗವನ್ನು ಹೇಳಿದೆ.

## ಸೂ|| ಓಂ|| ವಿದ್ಯಾಕರ್ಮಣೋರಿತಿತುಪ್ರಕೃತತ್ವಾತ್ ಓಂ||18

ವಿದ್ಯಾ ಕರ್ಮಾಪೇಕ್ಷಯೈ ತದ್ವಚನಂ। ತಯೋರಪಿ ಪ್ರಕೃರತ್ವಾತ್ ।

ಶೃತಿ ವಾಕ್ಯದಲ್ಲಿ ಜ್ಞಾನ ಕರ್ಮಗಳ ಮಾರ್ಗಗಳು ಮಾತ್ರ ಉದ್ದೇಶ್ಯವು (ಧೂಮ ಅರ್ಚಿರಾದಿ ಮಾರ್ಗಗಳು). ಜೀವರಿಗೆ ಸ್ವಾತಂತ್ರ್ಯವಿಲ್ಲ ಇಲ್ಲಿ ಪ್ರಕೃತವಾದುದು "ತದ್ಯ ಇತ್ಥಂ" ಎಂದು ಅವುಗಳಿಗೆ ಸೂಚಿತವು ದೇವಯಾನ ಪಿತೃಯಾನ ರೂಪ ಫಲಗಳಂತೆ ವಿದ್ಯಾಕರ್ಮಾಖ್ಯ ಸಾಧನೆಯಲ್ಲಿಯೂ ಪೂರ್ವವಾಕ್ಯ "ತದ್ಯ ಇತ್ಥಂವಿದು ಎಂಬುದು ಮಾರ್ಗ ರೂಪ ಫಲ ಮಾತ್ರವು ಗತಿ ರೂಪ ಸ್ವಾತಂತ್ರ್ಯವನ್ನು ಹೇಳುವುದಿಲ್ಲ

3 **ವಿದ್ಯಾಪಥ ಕರ್ಮಪಥೋ ದ್ವೌ ಪಂಥಾನೌ ಪ್ರಕೀರ್ತಿತೌ ।**
**ತದ್ವರ್ಜಿತಸ್ತ್ರಿಥಾಯಾತಿ ತಿರ್ಯಗ್ವಾ ನರಕಂ ತಮ ಇತಿ ಭಾರತೇ**

ವಿದ್ಯಾಮಾರ್ಗ ಕರ್ಮ ಮಾರ್ಗಗಳ ಸಾಧನ ಮಾತ್ರವನ್ನು ಹೇಳಿದೆ "ಆತ್ಮಾವಾ ಅರೇ ದ್ರಷ್ಟವ್ಯಃ" ತದ್ವಿಜಿಜ್ಞಾಸಸ್ವ" "ಜ್ಯೋತಿಷ್ಟೋಮೇನಯಜೇತ್" ಈ ವಾಕ್ಯಗಳಂತೆ ವಿಹಿತವು ಈ ಎರಡು ಪಥಗಳನ್ನು ತೊರೆದು ಬೇರೆ ಪ್ರಕಾರದಿಂದ ಗತಾಗತಿ ಫಲವು ಪ್ರಾಪ್ತವಾಗಿ "ಜ್ಯಾಯಸ್ವಮ್ರಿಯಸ್ವ" ಎಂದು ನಿತ್ಯ ಸಂಸಾರಿ ಸೂಚಕವು ಈ ಎರಡು ಪಥವನ್ನು ಬಿಟ್ಟು ತಿರ್ಯಗ್ಜಂತುತ್ವ ಅಥವಾ ನರಕವನ್ನು ಹೊಂದುವರು.

- ಇತಿ ವಿದ್ಯಾಧಿಕರಣಂ -

## - ನ ತೃತೀಯಾಧಿಕರಣಂ -

ಈ ಅಧಿಕರಣದಲ್ಲಿ ಅಂಧ ತಮಸ್ಸಿನಲ್ಲಿ ದುಃಖ ಮಾತ್ರವೆಂದು ಸಮರ್ಥನೆಯು

1. ಯತ್ರದುಃಖಂ ಸುಖಂ ತತ್ರ ಸರ್ವತ್ರಾಪಿ ಪ್ರತೀಯತೇ ।
ಅಪಿ ನೀಚಗತೌ ಕಿಂಚಿತ್ಕಿಮು ಮಾನುಷದೇಹಿನ ಇತಿ
ವಚನಾನ್ಮಹಾತಮಸ್ಯಪಿ ಸುಖಪ್ರಾಪ್ತಿರಿತ್ಯತ ಆಹ ॥

ಈ ಲೋಕದಲ್ಲಿ ದುಃಖವಿದ್ದ ಕಡೆಯಲ್ಲೆಲ್ಲಾ ಸುಖವು ಇರುವುದು ಕಂಡಿದೆ. ದುಃಖ ಅಪಾರವಾದ ನರಕದಲ್ಲಿಯೂ ಅಲ್ಪಸುಖವಿದೆಯೆಂದ ಮೇಲೆ ಮನುಷ್ಯರಿಗೆ ಅಂಧತಮಸ್ಸಿನಲ್ಲಿಯೂ ಅಲ್ಪ ಸುಖವಾದರೂ ಇರಲು ಸಾಧ್ಯ ಆದ್ದರಿಂದ ಪೂರ್ಣ ದುಃಖವೇ ಎಂದು ಹೇಳಲಾಗದೆಂದು ಪೂರ್ವಪಕ್ಷವು

2 ಅತ ಆಹ—ಅದಕ್ಕಾಗಿ ಹೇಳಿದೆ.

### ಸೂ॥ ಓಂ॥ ನ ತೃತೀಯೇ ತಥೋಪಲಬ್ಧೇಃ ಓಂ॥ 19

ಅಥಾ ವಿದ್ವಾನಕರ್ಮಾವಾಗ್ಗಚ್ಛತಿ ತ್ರಿಧಾಹ ವಾವಾಗ್ಗತಿ-ಸ್ತಿರ್ಯಗ್ಯಾತ ನಾತಮಃ "ಎಂಬ ವಾಕ್ಯದಂತೆ ಅಂಧ ತಮಸ್ಸಿನಲ್ಲಿ ಸುಖಲೇಶವು ಇಲ್ಲ. ಇತಿ । ಧ್ಯೇವಾವ ಸ್ಸುಖಾನುವೃತ್ತಿ ನ ತಮಸುಖಾನು ವೃತ್ತಂ ಕೇವಲಂ ಹ್ಯೇವಾತ್ರ ದುಃಖಂ ಭವತಿ । ಇತಿ ಶ್ರುತೇರ್ನತೃತೀಯಾಯಾಗ್ಗತೌಸುಖಂ ॥

ಮುಕ್ತಿ ಹೇತುಜ್ಞಾನ ರಹಿತನು ಸ್ವರ್ಗಾದ್ಯಾಪಾದಕ ಕರ್ಮ ರಹಿತನು ದುಷ್ಟ ಕರ್ಮನು ಸಾತ್ವಿಕ ತಾಮಸ ರಾಜಸ ಅಧೋಗತಿಯನ್ನು ಹೊಂದುವರು. ಇದು ಮೂರು ವಿಧ. ತಿರ್ಯಕ್ಷೈತಿ. ನಾನಾ ಯೋನಿಗಳಲ್ಲಿ ಜನನ

ಮರಣಗಳು ಮಾತ್ರವೇ ತ್ರಿರ್ಯತ್ ನರಕ ತಮವೆಂದು ಮೂರುವಿಧ ಅವುಗಳಲ್ಲಿ ತಮಸ್ಸಿನಲ್ಲಿ ಸುಖಲೇಶವೂ ಇಲ್ಲ.

## ಸೂ|| ಓಂ|| ತ್ರ್ಯರ್ಯತೇಪಿಚ ಲೋಕೇ ಓಂ|| 20

ತಿರ್ಯಕ್ಷು ನರಕೇ ಚೈವ ಸುಖಲೇಶೋ ವಿಧೀಯತೆ !
ನಾಂಧೆ ತಮಸಿಮಗ್ನಾನಾಂ ಸುಖಲೇಶೋಪಿ ಕಶ್ಚನ। ಇತಿ ಭವಿಷ್ಯತ್ಪರ್ವಣಿ

ತಿರ್ಯಕ್ ನರಕ ಲೋಕಗಳಲ್ಲಿ ಅಲ್ಪ ಸುಖವಾದರೂ ಇರುವುದು. ಆದರೆ ಅಂಧ ತಮಸ್ಸಿನಲ್ಲಿ ಸುಖಲೇಶಾನುಭವವು ಇಲ್ಲ. ಭವಿಷ್ಯತ್ಪರ್ವ

4 ಲೋಕಸಿದ್ಧಂ ಚೈತತ್ । ಚಶಬ್ದಾಲ್ಲೋಕಸಿದ್ದಿರಪಿ
ಸ್ಮಾರ್ತೇತ್ಯಾಹ ।

ಅಂಧ ತಮಸ್ಸಿನಲ್ಲಿ ಸುಖಲೇಶರಾಹಿತ್ಯವು ಲೋಕವ್ಯಾಪಾರದಲ್ಲಿ ಸಿದ್ಧವೆ.

5. ಅತಿಪ್ರಿಯೋ ಯಥಾ ರಾಜಾ ನ ದುಃಖಂ ಸಹತೇ ಕ್ವಚಿತ್ ॥
ಅತ್ಯಪ್ರಿಯೋ ಸುಖಮಪಿ ತಥೈವ ಪರಮೇಶ್ವರ ಇತಿ ಬ್ರಾಹ್ಮೇ॥

ಈ ಲೋಕದಲ್ಲಿಯೂ ರಾಜನಾದವನು ತನ್ನ ಅತಿ ಪ್ರೀತಿ ಪಾತ್ರರಾದವರಿಗೆ ಅಲ್ಪ ದುಃಖವೂ ಇಲ್ಲದೆ ಸುಖ ಪ್ರಾಪ್ತಿಯನ್ನೇ ಕೊಡಲು ಬಯಸುವನು. ಹಾಗೆಯೇ ತನಗೆ ಅತಿ ದ್ವೇಷಿಗಳಿಗೆ ಯಾವ ಸುಖವೂ ಇಲ್ಲದ ಪೂರ್ಣ ದುಃಖವನ್ನೇ ಬಯಸುವನು.

## ಸೂ|| ಓಂ|| ದರ್ಶನಾಚ್ಚ ಓಂ|| 21

ಅಂಧ ತಮಸ್ಸಿನಲ್ಲಿ ಸುಖ ಸಾಹಿತ್ಯವು ಚತುರ್ಮುಖನಿಂದ ಸಾಕ್ಷಾತ್ ದರ್ಶನವೂ ಕೂಡ ಇದೆ.

ನಾರಾಯಣ ಪ್ರಸಾದೇನ ಸಮಿದ್ಧ ಜ್ಞಾನಚಕ್ಷುಷಾ ।
ಅತ್ಯಂತ ದುಃಖಸಂಲೀನಾನ್ನಿ ಶ್ಯೇಷಸುಖವರ್ಜಿತಾನ್ ॥
ನಿತ್ಯಮೇವ ತಥಾಭೂತಾ ನ್ವಿಮಿಶ್ರಾಂಚಾಗುಣಾನ್ ಬಹೂನ್ ।
ನಿರಸ್ತಾಶೇಷ ದುಃಖಾಂಶ್ಚ ನಿತ್ಯಾನಂದ್ಯೆಕ ಭಾಗಿನಃ ॥
ಅಪಶ್ಯತ್ರಿವಿಧಾನ್ಬ್ರಹ್ಮಾ ಸಾಕ್ಷಾದೇವ ಚತುರ್ಮುಖಃ ।
ಇತಿ ದರ್ಶನವಚನಾಚ್ಚಪಾದ್ಮೆ ॥

ಚತುರ್ಮುಖ ಬ್ರಹ್ಮನು ಪರಮಾತ್ಮ ಪ್ರಸಾದ ಪ್ರಾಪ್ತವಾದ ಶ್ರೇಷ್ಠ ಜ್ಞಾನದಿಂದ ಸಾಕ್ಷಾತ್ತಾಗಿಯೇ ಮೂರು ವಿಧ ಜೀವರುಗಳನ್ನು ನೋಡಿದನು ಅನಂತ ದುಃಖದಲ್ಲಿ ಮಗ್ನರಾದವರನ್ನು, ನಿತ್ಯ ಸಂಸಾರಿ ಮಿಶ್ರ ಫಲವುಳ್ಳವರನ್ನೂ ಮತ್ತು ಮೋಕ್ಷಯೋಗ್ಯ ನಿತ್ಯ ಸುಖಾನುಭವರುಗಳನ್ನು ಕೂಡಕಂಡನು

## ಸೂ॥ ಓಂ॥ ತೃತೀಯೋ ಶಬ್ದಾವರೋಧಃ ಸಂಶೋಕಜಸ್ಯ ಓಂ॥ 22

ತೃತೀಯೋ ತೃತೀಯಃತುತಮಸಃ ಶ್ರವಣಾದೇವ ಶಬ್ದಾನುಸಾರೇಣ
ಸಂಶೋಕ ಜಮೋಹ ಪ್ರಾಪ್ತಿಃ ॥

ಅಂಧಂ ತಮಸ್ಸಿನಲ್ಲಿ ಆ ಶಬ್ದ ಮಾತ್ರವೇ ಅತ್ಯಂತ ದುಃಖ ಪ್ರಾಪ್ತ ಜ್ಞಾಪನದಿಂದ ಮೂರ್ಛೆಯನ್ನು ಹೊಂದಿಸುವುದು ಯೋಚಿಸಲು ಕೂಡ ಅಸಾಧ್ಯವಾದ ದುಃಖ ಮಾತ್ರವೇ. ಸುಖ ಲೇಶವೂ ಯೋಚಿಸಲು ಸಾಧ್ಯವಲ್ಲ.

## ಸೂ॥ ಓಂ॥ ಸ್ಮರಣಾಚ್ಚ ಓಂ॥ 23

ಮಹಾ ತಮಸ್ತ್ರಿಧಾಪ್ರೋಕ್ತಮೂರ್ಧ್ವಂ ಮಧ್ಯಂ ತಥಾಧರಂ !
ಶ್ರವಣಾ ದೇವ ಮೂರ್ಛಾದಿರಧರಸ್ಯಯತೋ ಭವೇತ್ ।
ತಸ್ಮಾನ್ನ ವಿಸ್ತರೇಣ್ಯೆತತ್ಕಥ್ಯತೆ ರಾಜ ಸತ್ತಮ ಇತಿ ಕೌರ್ಮೇ ॥

ಅಂಧಂ ತಮಸ್‌ಶಬ್ದಮಾತ್ರದಿಂದಲೇ ಜೀವನು ಮೂರ್ಛೆ ಹೊಂದುವನು. ಅಲ್ಲಿ

ಅಷ್ಟು ತೀವ್ರದುಃಖವು ಎಂದು ಕೂರ್ಮ ಪುರಾಣ ವಾಕ್ಯವು ಮಹಾ ತಮಸ್ಸು ಮೂರು ವಿಧ ಊರ್ಧ್ವ, ಮಧ್ಯಮ, ಅಧರವೆಂದು ಕೊನೆಯದರ ಶಬ್ದ ಶ್ರವಣ ಮಾತ್ರ ದಿಂದಲೇ ಮೂರ್ಛೆಯಾಗುವುದರಿಂದ ಅದರ ವಿಸ್ತಾರವನ್ನು ಹೇಳಲಸಾಧ್ಯವು

– ಇತಿ ನ ತೃತೀಯಾಧಿಕರಣಂ –

– ತತ್ಸ್ವಭಾವ್ಯಾಧಿಕರಣಂ –

ಈ ಅಧಿಕರಣದಲ್ಲಿ ಧೂಮಾದಿಭಾವವು ಕರ್ಮಗಳಿಗೆ ನಿವಾರಣೆ ಮಾಡಲ್ಪಡು ವುದು

1. ಧೂಮೋಭೂತ್ವಾಽಭ್ರಂಭವತೀತ್ಯಾದ್ಯನ್ಯಭಾವಃ ಶ್ರೂಯತೇ **ಸತಥಮಿತಿ ||**

ಮೇಲಿನ ಛಾಂದೋಗ್ಯ ಶೃತಿಯಲ್ಲಿ ಧೂಮಾದಿ ದೇವತಾ ಭಾವವು ಹೇಳಿದೆ. ಅದು ಯಾವ ಪ್ರಕಾರದ್ದು. ಧೂಮದೇವತಾ ಐಕ್ಯವೋ ಅಥವಾ ಆಪದಪ್ರಾಪ್ತಿಯೋ ಎಂದು ಪೂರ್ವಪಕ್ಷವು. ಜೀವನಿಗೆ ಅನ್ಯಭಾವವು ಯುಕ್ತವಲ್ಲ ಪದ ಪ್ರಾಪ್ತಿಯೂ ಸರಿಯಲ್ಲ.

2. ಅತೋಽಬ್ರವೀತ್–ಅದಕ್ಕಾಗಿ ಹೇಳಿದೆ

**ಸೂ|| ಓಂ|| ತತ್ಸ್ವಭಾವ್ಯಾಪತ್ತಿರುಪಪತ್ತೇಃ ಓಂ|| 24**

## ಸೂ|| ಓಂ|| ತತ್ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ|| 24

ಧೂಮಾದಿಷು ಪ್ರವಿಶ್ಯ ತದ್ಗತೌ ಗತಿಸ್ತತ್ಸ್ಥಿತಿರಿತ್ಯಾದಿರೇವ ತದ್ಭಾವಾಪತ್ತಿಃ ||
ನ ಹಿ ಅನ್ಯಸ್ಯಾನ್ಯಭಾವೋಯುಜ್ಯತೆ ನ ಚ ತತ್ಪದಪ್ರಾಪ್ತಿಃ ||

ಜೀವ ಕರ್ಮಿಗೆ ಆ ಧೂಮಾದಿ ದೇವತೆಯ ಸ್ವಭಾವ ಸದೃಶ ಸ್ವಭಾವ ಪ್ರಾಪ್ತಿ ಮತ್ತೆ ಆ ದೇವತೆಯ ಐಶ್ವರ್ಯವಾಗಲಿ ಪದಪ್ರಾಪ್ತಿಯಾಗಲಿ ಅಲ್ಲ ಮತ್ತೆ ಆ ದೇವತೆಯಲ್ಲಿ ಐಕ್ಯ ಮತ್ತು ಪದ ಪ್ರಾಪ್ತಿಯೂ ಬೇರೆ ಎಂಬುದು ಆಯುಕ್ತವು.

ಧೂಮಾದಿ ದೇವತೆಗಳನ್ನು ಪ್ರವೇಶಿಸಿ ಅವರ ಜತೆಯಲ್ಲಿ ಗಮನವೂ ಇರುವಿಕೆಯೂ ಆದ ಭಾವವನ್ನು ಹೊಂದುವುದು ಮಾತ್ರ ಐಕ್ಯವೂ ಅಲ್ಲ ಪದ ಪ್ರಾಪ್ತಿಯೂ ಅಲ್ಲ.

3 ಗಾರುಡೇಚ – **ಧೂಮಾದಿ ಭಾವ ಪ್ರಾಪ್ತಿಶ್ಚ ತದ್ಗತೌ ಗತಿರೇವ ತಂ । ಸ್ಥಿತೌ ಸ್ಥಿತಿ ಪ್ರವೇಶಶ್ಚ ಲಘುತ್ವಾದಿಸ್ತಥೈವ ಚ । ನ ಹ್ಯನ್ಯಸ್ಯಾನ್ಯಥಾಭಾವೋ ನ ಚ ತತ್ಪದ ಮಿಷ್ಯತೇ । ವಿದ್ಯಾಗಮ್ಯಂ ಪದಂ ಯಸ್ಮಾನ್ನ ತತ್ಪ್ರಾಪ್ಯಂ ಹಿ ಕರ್ಮಣಾ ।**

ಧೂಮಾದಿ ಭಾವ ಪ್ರಾಪ್ತಿಯೆಂದರೆ ಆ ದೇವತೆಯನ್ನು ಪ್ರವೇಶಿಸಿ ಅದರ ಗಮನಾನುಸಾರ ಗಮನವು ಇರುವವಿಕೆಯು ಮತ್ತು ಲಘುತ್ವಾದಿ ಧರ್ಮಗಳು ಮಾತ್ರ. ಅನ್ಯ ಜೀವರಿಗೆ ಅನ್ಯರ ಭಾವವು ಇಲ್ಲ ಮತ್ತು ಅವರ ಪದ ಪ್ರಾಪ್ತಿಯೂ ಇಲ್ಲ. ಏಕೆಂದರೆ ವಿದ್ಯೆಯಿಂದಲೇ ಆಪದ ಪ್ರಾಪ್ತಿಯು ಕರ್ಮಗಳಿಂದ ಅಪ್ರಾಪ್ಯವು.

**4. ಏಕದೇಶಸ್ವಭಾವೇನ ವಾಗಭೇದಾಪಿ ಯುಜ್ಯತೇ ।
ಯಥಾ ಜೀವಃ ಪರಂ ಬ್ರಹ್ಮ ಬ್ರಹ್ಮೇದಂ ಜಗದಿತ್ಯಪೀತಿ ||**

ಹೀಗೆ ಹೇಳಿದರೆ ಶೃತಿ ವಿರೋಧವಿಲ್ಲ ಸ್ವಭಾವ ಏಕ ದೇಶ ಸಾದೃಶ್ಯದಿಂದಿ ಸಿದ್ಧವು ಸಕಲ ಜಗದ್ಗುಣ ಸದೃಶ ಗುಣಾತ್ಮಕತ್ವದಿಂದ ಬ್ರಹ್ಮನನ್ನು ಜಗತ್ತೆಂದು ಹೇಳುವವೆಷ್ಟೆ

**– ಇತಿ ತತ್ ಸ್ವಾಭಾವ್ಯಾಧಿಕರಣಂ –**

ಈ ಅಧಿಕರಣದಲ್ಲಿ ಸ್ವರ್ಗದಿಂದ ಹಿಂತಿರುಗಿದ ಕರ್ಮಿ ಜೀವರು ಸ್ವಲ್ಪ ಕಾಲ ದಲ್ಲಿಯೇ ಗರ್ಭವಾಸವನ್ನು ಹೊಂದುವರೆಂದು ಸಮರ್ಥನವು.

1. ಬಹುಸ್ಥಾನಗಮನಾತ್ಕಲ್ಪಾಂತಮ ಸ್ಯೈವಂ ಸ್ಯಾದಿತಿ ||

ಜೀವರು ಸ್ವರ್ಗದಿಂದ ಹಿಂತಿರುಗಿ ಬರುವಾಗ ಅನೇಕ ಸ್ಥಾನ ಪ್ರಾಪ್ತಿಗಳು ಹೇಳಿ ರುವ್ರದರಿಂದ ಮತ್ತು ಆ ಉತ್ತಮ ಸ್ಥಾನಗಳಲ್ಲಿ ಮಹಾಸೌಖ್ಯವು ಪ್ರಾಪ್ತವಾದ್ದ ರಿಂದಲೂ ಕಾಲ ವಿಳಂಬದಿದಲೇ ಈ ಭೂಲೋಕಾಗಮನವು (ಕಲ್ಪಾಂತರದಲ್ಲಿ) ಎಂದು ಪೂರ್ವ ಪಕ್ಷವು ಕಲ್ಪಾಂತರದಲ್ಲಿ ಸರ್ವ ದೇವತೆಗಳೂ ಲಯ ಹೊಂದುವುದರಿಂದ ಅನಂತರ ಆಗಮನವೂ ಸಾಧುವಲ್ಲ. ಎಂದರೆ.

2 ಅತ ಆಹ ಆದಕ್ಕಾಗಿ ಹೇಳಿದೆ.

**ಸೂ॥ ಓಂ॥ ನಾತಿಚಿರೇಣ ವಿಶೇಷಾತ್ ಓಂ॥ 25**

ತದ್ಯ ಇಹ ರಮಣೀಯ ಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿ ಮಾಪದ್ಯಂತೆ” (ಛಾ 5-10) ಇತಿ ವಿಶೇಷಾನ್ನಾತಿ ಚಿರೇಣ

ಸ್ವರ್ಗದಿಂದ ನಿರ್ಗತನಾದ ಕರ್ಮಿ ಜೀವಿಯು ಬೇಗನೆ ಭೂಮಿಗೆ ಬಂದು ಬ್ರಾಹ್ಮಣಾದಿ ಯೋನಿಗಳನ್ನು ಹೊಂದುವನು. “ತದ್ಯ ಇಹೇತಿ” ಎಂಬ ವಿಶೇಷ ವಚನವು ಹಾಗೆ ತಿಳಿಸುವುದು.

3. ಸ್ವರ್ಗಾಲ್ಲೋಕಾದವಾಕ್ ಪ್ರಾಪ್ತೋ ವತ್ಸರಾತ್ಪೂರ್ವಮೇವ ತು। ಮಾತುಃ ಶರೀರಮಾಪ್ನೋತಿ ಪರ್ಯಟನ್ಯತ್ರ ತತ್ರ ಚೇತಿ ನಾರದೀಯೇ ||

ಸ್ವರ್ಗಲೋಕದಿಂದ ಹಿಂತಿರುಗುವ ಕರ್ಮ ಜೀವನು ಒಂದು ಮಾನುಷ ವರ್ಷದ ಒಳಗಾಗಿಯೇ ಅಲ್ಲಲ್ಲಿ ಸೂಕ್ತ ಸ್ಥಳಗಳಲ್ಲಿ ಅಲೆದಾಡಿ ಮಾತೃಶರೀರವನ್ನು ಹೊಂದು ವನು.

ಇತಿ ನಾತಿಚಿರೇಣಾಧಿಕರಣಂ

## – ಅನ್ಯಾಧಿಕರಣಂ –

ಈ ಅಧಿಕರಣದಲ್ಲಿ ಕರ್ಮಿ ಜೀವರಿಗೆ ವ್ರೀಹ್ಯಾದಿ ಭಾವ ನಿಮಿತ್ತಕ ದುಃಖಾದಿ ಗಳ ಅಭಾವವು ಹೇಳಲ್ಪಡುತ್ತದೆ.

1. **ತ ಇಹ ವ್ರೀಹಿಯವಾ ಓಷಧಿ ವನಸ್ಪತಯಸ್ತಿಲಾ ಮಾಷಾ ಇತಿ ಜಾಯಂತ (ಛಾ–5–10–6) ಇತಿ ಶ್ರವಣಾದನರ್ಥಫಲತ್ವಂ ಯಜ್ಞಾದೇರಿತಿ ॥**

ಕರ್ಮಿ ಜೀವಿಗಳು ಮಾತೃ ಯೋನಿ ಪ್ರವೇಶ ಪೂರ್ವದಲ್ಲಿಯೇ ಸ್ಥಾವರ ಜಾತಿ ನಿಮಿತ್ತದಿಂದ ಆ ವಸ್ತುಗಳ ಚ್ಛೇದನ ಭೇದನಾದಿಗಳ ದುಃಖಗಳಿಂದಾನುಭವವುಂಟಾಗಿ ದುಃಖ ಪ್ರಾಪ್ತಿಯನ್ನು ಹೇಳುವುದರಿಂದ ಶ್ರೇಷ್ಠ ಕರ್ಮ ಪ್ರಾಪ್ತ ವೈರಾಗ್ಯಾ ಪೇಕ್ಷೆಯೂ ನಿಷ್ಫಲವು ಎಂದು ಪೂರ್ವ ಪಕ್ಷವು.

2. ಅತೋವಕ್ತಿ—ಅದಕ್ಕಾಗಿ ಹೇಳಿದೆ.

**ಸೂ॥ ಓಂ॥ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ॥ 26**

ಅನ್ಯಾಧಿಷ್ಠಿತೆ ವ್ರೀಹ್ಯಾದಿ ಶರೀರೆ ಪ್ರವೇಶಃ । ನತು ಭೋಗೋಸ್ಯ ॥

ಕರ್ಮಿ ಜೀವಗಳು ಅನ್ಯ ಜೀವಾಧಿಷ್ಠಾನಾಭಿ ಮನ್ಯ ಮಾನ ಶರೀರ ಪ್ರವೇಶದಿಂದ ಅವುಗಳ ಭಾವೋಕ್ತಿಯು ಪ್ರಾಪ್ತಿ ಮಾತ್ರವೇ ಸ್ವರೂಪದಿಂದಲ್ಲವೆಂದು ಶೃತಿಯು ಹೇಳುವುದು ಹಾಗೆಯೇ ಇತರ ವಿಷಯದಲ್ಲಿಯೂ ಆ ಜೀವ ಪ್ರವೇಶ ಮಾತ್ರವೇ ದುಃಖಾನುಭವವಿಲ್ಲ

'ಧೂಮೋಭೂತ್ವಾಭ್ರಂಭವತಿ" ಇತ್ಯಾದಿ ಪೂರ್ವೋಕ್ತಿವತ್
(ಛಾ-5-10-5)

3. ಸೋವಾಗ್ಗತಃ ಸ್ಥಾವರಾನ್ಪ್ರವಿಶ್ಯಾಭೋಗೇನ್ಯೈವ ವ್ರಜನ್ ಸ್ಥೂಲಂ ಶರೀರಮೇತಿ ಸ್ಥೂಲಾಚ್ಛರೀರಾದ್ಭೋಗಾನನುಭುಂಕ್ತ ಇತ್ಯಭಿ ಲಾವಾತ್ಕೌಷಾರವಶ್ರುತೌ ॥

ಕರ್ಮಿ ಜೀವನು ಕೆಳಗೆ ಗತಿಯನ್ನು ಹೊಂದಿ ಸ್ಥಾವರಾದಿಗಳನ್ನು ಪ್ರವೇಶಿಸಿ ಅವುಗಳ ಭೋಗಗಳನ್ನು ಅನುಭವಿಸದೆಯೇ ಹೊರ ಹೊರಟು ಸ್ಥೂಲ ಶರೀರವನ್ನು ಹೊಂದಿ ನಂತರ ಭೋಗಗಳನ್ನು ಹೊಂದುವನು ಕೌಷಾರವ ಶೃತಿಯು

4. ಸ್ವರ್ಗಾದವಾಗ್ಗತೋ ದೇಹೀ ವ್ರೀಹ್ಯಾದೀತರದೇಹಗಃ ॥ ಅಭುಂಜಂಸ್ತು ಕ್ರಮೇಣೈವ ದೇಹಮಾಪ್ನೋತಿ ಕಾಲತ ಇತಿ ನಾರಾಹೇ ॥

ಸ್ವರ್ಗದಿಂದ ಹಿಂತಿರುಗಿದ ಕರ್ಮಿ ಜೀವನು ಇತರ ದೇಹವನ್ನು ಹೊಂದಿ ಆ ಆ ಭೋಗಗಳನ್ನು ಹೊಂದದೆಯೇ ಕ್ರಮವಾಗಿ ನಿಯತ ಕಾಲದಲ್ಲಿ ದೇಹವನ್ನು ಹೊಂದುವನು

## ಸೂ॥ ಓಂ॥ ಅಶುದ್ಧಮಿತಿಚೇನ್ನ ಶಬ್ದಾತ್ ಓಂ॥ 27

ಹಿಂಸಾ ರೂಪತ್ವಾತ್ಪಾಪಸ್ಯಾಪಿ ಸಂಭವಾದ್ದುಃಖಂ ಚ ಭವತ್ವಿತಿ ಚೇನ್ನ ಶಬ್ದ ವಿಹಿತತ್ವಾತ್ ॥

ಹಿಂಸಾದಿ ರೂಪ ಯಜ್ಞರೂಪದಿಂದ ಕರ್ಮ ಸಿದ್ಧಿಯು ದುಃಖ ಸಾಧನವೇ ಎಂದರೆ ಅಲ್ಲ ಆ ಯಜ್ಞಗಳು ಶೃತಿವಾಕ್ಯ ವಿಹಿತಗಳಾಗಿ ಸುಖ ಪ್ರಾಪ್ತಗಳೇ.

6. **ಹಿಂಸಾತ್ವವೈದಿಕೀ ಯಾ ತು ತಯೋಽನರ್ಥೋ ಧ್ರುವಂ ಭವೇತ್ ವೇದೋಕ್ತಯಾ ಹಿಂಸಯಾ ತು ನೈವಾನರ್ಥಃ ಕಥಂಚನೇತಿ ನಾರಾಹೇ ॥**

ಯಜ್ಞಗಳು ಹಿಂಸಾರೂಪ ಕರ್ಮ ಪರವಾದ್ದರಿಂದ ಅಶುದ್ಧವು ಮತ್ತು ಪಾಪ ಜನಕವು ದುಃಖ ಸಾಧನವೆಂದರೆ ಹಾಗಲ್ಲ ಶೃತಿಗಳಿಗೆ ಅನುಸಾರವೆಂದರೆ ಹಾಗಲ್ಲ ಶೃತಿಗಳಿಗೆ ಅನುಸಾರವಾಗಿ ಕರ್ಮವು ವಿಹಿತವಾದಲ್ಲಿ ತಾಪ ಸಾಧನವಲ್ಲ ಕೇವಲ ಪುಣ್ಯ ಸಾಧನವೇ.

ಅವೈದಿಕ ಹಿಂಸಾ ಯಜ್ಞಾದಿಕರ್ಮಗಳು ಅನರ್ಥಕಾರಿಗಳೆ ವೇದೋಕ್ತ ಯಜ್ಞ ಹಾಗಲ್ಲ

– ಇತ್ಯನ್ಯಾಧಿಕರಣಂ –

## – ರೇತೋಽಧಿಕರಣಂ –

ಈ ಅಧಿಕರಣದಲ್ಲಿ ಸ್ವರ್ಗದಿಂದಿಳಿದು ಬಂದ ಜೀವನಿಗೆ ಪಿತೃ ಪ್ರವೇಶವು.

1. **ಸ್ವರ್ಗಾದವಾಗ್ಗ ತಶ್ಚಾಪಿ ಮಾತುರೀವ್ರೋದರಂ ವ್ರಜೇತ್ ಇತಿ ವಚನಾದ್ಯ ಏವ ಗೃಹೀ ಭವತಿ ಯೋಽವಾ ರೇತಸಿಸಿಂಚತಿ ತ್ರಮೋಽವಾನು ವಿಶತೀತಿ ಶೃತಿಃ ಕಂಥವಿುತಿ ॥**

ಸ್ವರ್ಗ ನರಕಾದಿ ಲೋಕಗಳಿಂದ ಹಿಂತಿರುಗುವ ಕರ್ಮಿಯು ಮಾತ್ರ ದೇಹವನ್ನು ಹೊಂದುವನು ಎಂದು ಸ್ಮೃತಿಯಲ್ಲಿಯೂ ಶ್ರುತಿಯಲ್ಲಿ "ಯೋ ಯೋಹ್ಯನ್ನಮತ್ತಿ ಯೋವಾ ರೇತಃ ಸಿಂಚತಿ ತದ್ಭೂಯ ಏವ ಭವತಿ" ಮತ್ತು "ಯ ಏವ ಗೃಹೀ ಭವತಿ ಯೋವಾರೇತಃ ಸಿಂಚತಿ ತಮೇವಾನು ವಿಶತಿ" ಎಂಬಲ್ಲಿ ಪಿತೃ ಶರೀರ ಪ್ರಾಪ್ತಿಯು ಹೇಳಿದೆ. ಯಾವ ಗೃಹಸ್ಥಾಶ್ರಮಿ ಪುರುಷನು ರೇತಸ್ಸನ್ನು ಸಿಂಪಡಿಸುವನೋ ಅಂಥ ಪುರುಷನನ್ನೇ ಜೀವನು ಸೇರುವನು ಎಂದು ಶ್ರುತ್ಯರ್ಥವು ಆದ್ದರಿಂದ ಸಂದೇಹವು.

2. ಅತ ಆಹ ಅಪಕ್ಕಾಗಿ ಹೇಳಿದೆ.

## ಸೂ॥ ಓಂ॥ ರೇತಃಸಿಗ್ಯೋಗೋಥ ಓಂ॥ 28

ಕರ್ಮಿ ಜೀವರುಗಳಿಗೆ ಪ್ರಥಮತಃ ರೇತೋ ಸಿಂಚನ ಕರ್ತೃವಾದಪಿತ ನಿಂದಸಂಬಂಧವು, ಅನಂತರ ಮಾತೃಶರೀರ ಪ್ರವೇಶವು ಮೊದಲೇ ಮಾತೃ ಶರೀರ ಪ್ರವೇಶವಿಲ್ಲ.

ತತೋ ರೇತಸ್ಸಿ ಚಮೇವಾನು ಪ್ರವಿಶ್ಯತ್ಯಥ ಮಾತರ ಮಥ ಪ್ರಸೂಯತಿ
ಸಕರ್ಮ ಕುರುತೆ' ಇತಿ ಕೌಂರರವ್ಯಶ್ರುತೇ ಪಿತರಮೇವ ಪ್ರಥಮತಃ
ಪ್ರವಿಶತಿ । ಮಾತೃಪ್ರಾಪ್ತೇಃ ಪಶ್ಚಾದಪಿ ಭಾವ್ಯತ್ವಾತ್ ॥

ಮೊದಲು ಪಿತೃಶರೀರ ಪ್ರವೇಶವು ನಂತರ ಮಾತೃ ದೇಹ ಪ್ರವೇಶವು.

– ಇತಿ ರೇತೋಧಿಕರಣಂ –

### ಯೋನ್ಯಧಿಕರಣಂ

ಈ ಅಧಿಕರಣದಲ್ಲಿ ಜೀವನಿಗೆ ಪಿತೃದ್ವಾರ ಯೋನಿಯನ್ನು ಹೊಂದಿ ಶರೀರ ಪ್ರಾಪ್ತಿಯು ಸಮರ್ಥನೆಯು.

1. **ದೇಹಂ ಗರ್ಭಸ್ಥಿತಂ ಕ್ವಾಪಿ ಪ್ರವಿತೇತ್ಸ್ವರ್ಗತೋಗತಃ ಇತಿ** ವಚ **ನಾತ್ಪಶ್ಚಾದೇವ ಪ್ರವಿಶತೀತಿ ॥**

ಸ್ವರ್ಗದಿಂದ ಹಿಂತಿರುಗಿದ ಶರ್ಮಿ ಜೀವನು ಪಿತೃ ಶರೀರವನ್ನು ಪ್ರವೇಶಿಸಿ ಮಾತೃ ದ್ವಾರ ಮಾತೃ ಶರೀರವನ್ನು ಹೊಂದಿ ಅಲ್ಲಿ ತಾನೇ ಬೇರೆ ಶರೀರವನ್ನು ಹೊಂದುವನು.

2 ಅತ ಆಹ ಅದಕ್ಕಾಗಿ ಹೇಳಿದೆ

## ಸೂ॥ ಓಂ॥ ಯೋನೇಃ ಶರೀರಂ ಓಂ॥ 29

ಪಿತೃ ಶರೀರಾನ್ಮಾತೃ ಯೋನಿಂ ಪ್ರವಿಶ್ಯ ತತ ಏವ ಶರೀರಮಾಪ್ನೋತಿ ॥

ಪಿತೃ ಶರೀರದಿಂದ ಮಾತೃ ಯೋನಿ ದ್ವಾರ ಮಾತೃ ದೇಹವನ್ನು ಪ್ರವೇಶಿಸಿ ಅಲ್ಲಿ ಬೇರೆ ಶರೀರ ಪ್ರಾಪ್ತಿಯು ಇದು ವಿದ್ಯಾಕಪ ಆದಿ ವಿಶೇಷ ಕಾರಣವಲ್ಲದ ಸಾಧಾರಣ ಜನ್ಮೋತ್ಪತ್ತಿಯು.

3 **ದಿವಃ ಸ್ಥಾಸ್ನೂನ್ಗಚ್ಛತಿ ಸ್ಥಾಸ್ನುಭ್ಯಃ ಪಿತರಂ ಪಿತುರ್ಮಾತರಂ ಮಾತುಃ ಶರೀರಂ ಶರೀರೇಣ ಜಾಯತ ಇತಿ ಸಂಮಿತಂ ॥ ಅಥಾಸಂಮಿತಂ ಸ್ಥಾಸ್ನುಭ್ಯೋ ಜಾಯತೇ ಪಿತುರ್ಮಾತು ರಂತರೇ ವಾ ಗರ್ಭೇ ವಾ ಬಹಿರ್ವೇತಿ ಪೌಷ್ಯಾಯಣ ಶ್ರುತೇಃ ॥**

ಅಸಾಧಾರಣ ಜನ್ಮವಾದರೋ ಉತ್ತಮಾಧಿಕಾರಿಗಳಿಗೆ ಮಾತ್ರ ಲಭ್ಯವು. ಅವು ಸ್ಥಾವರುಗಳಿಂದಲೇ ಜನ್ಮವು ಶುಕಾದಿಗಳಿಗೆ ಅರಣಿಯಲ್ಲಿಯೋ, ಮಾಂಧಾತಾದಿ ಪ್ರಮು ಖರು ತಂದೆಯಿಂದಲೇ ಆಸ್ತಿಕಾದಿಗಳು ವಿಶೇಷ ಅನುಗ್ರಹದಿಂದಲೇ ಮಾತೃವಿನಿಂದ ಲೇ ಪದಾದ್ಯುಮ್ನಾದಿಗಳು ಅಗ್ನಿಯಲ್ಲಿಯೋ ಮತ್ತು ಅನ್ಯರು ಮಾತಾ ಪಿತೃಗಳ ದರ್ಶನ ಮಾತ್ರದಿಂದಲೇ ದ್ರುಪದಾದಿಗಳು ಹೀಗೆ ನಾನಾ ವಿಧದ ದೇಹೋತ್ಪತ್ತಿ ನಂತರ ಪ್ರವೇಶ ಮಾತ್ರವು.

4 **ಸ್ಥಾವರಾಣಿ ದಿವಃ ಪ್ರಾಪ್ತಃ ಸ್ಥಾವರೇಭ್ಯಶ್ಚ ಪೂರುಷಂ ಪುರುಶಾ ತ್ಸ್ತ್ರಿಯಮಾಪನ್ನಸ್ತತೋ ದೇಹಂ ಯಥಾಕ್ರಮಂ । ದೇಹೇನ ಜಾಯತೇ ಜಂತುರಿತಿ ಸಾಮಾನ್ಯತೋ ಜನಿಃ**

**ವಿಶೇಷಜನನಂ ಚಾಪಿ ಪ್ರೋಚ್ಯಮಾನಂ ನಿಬೋಧ ಮೇ ।**
**ಸ್ಥಾಣುಷ್ವಥಾಪಿ ಪುರುಷೇ ಪ್ರಮದಾಯಾಮಥಾಪಿ ವಾ ಗರ್ಭೇ**
**ವಾ । ಬಹಿರೇ ವಾಥ ಕ್ವಚಿತ್ಸ್ಥಾನಾಂತರೇಷು ಚೇತಿ ಬ್ರಾಹ್ಮೇ ॥**

ಸ್ವರ್ಗದಿಂದ ಹಿಂತಿರುಗಿದ ಕರ್ಮಿ ಜೀವನು. ಸ್ಥಾವರ ವಸ್ತು ದ್ವಾರ ಪುರುಷ ಶರೀರವನ್ನು ಹೊಂದಿ ಸ್ತ್ರೀ ಶರೀರವನ್ನು ನಂತರ ಪ್ರವೇಶಿಸಿ ದೇಹದಿಂದ ಹುಟ್ಟುವನು ಇದು ಸಾಮಾನ್ಯ ಜನ್ಮವು ಅಲ್ಲದೆ ಮಹಾತ್ಮರಿಗೆ ವಿಶೇಷ ಜನ್ಮ ರೀತಿಯೂ ಉಂಟು. ಸ್ಥಾವರಲ್ಲಿಯೂ, ಪುರುಷರಲ್ಲಿಯೂ ಸ್ತ್ರೀಯರಲ್ಲಿಯೂ ಗರ್ಭದಿಂದ ಹೊರಗೂ ಬೇರೆ ಸ್ಥಾನಗಳಲ್ಲಿಯೂ ದೇಹ ಪ್ರಾಪ್ತಿಯುಉಂಟು.

ಇತಿ ಯೋನ್ಯಧಿಕರಣಂ

ತೃತೀಯೋಧ್ಯಾಯಸ್ಯ ಪ್ರಥಮ ಪಾದಃ ಸಮಾಪ್ತಃ

ಶ್ರೀ ಕೃಷ್ಣಾರ್ಪಣಮಸ್ತು

## – ಸಂಧ್ಯಾಧಿಕರಣಂ –

ಪೂರ್ವಪಾದದಲ್ಲಿ ವೈರಾಗ್ಯಾವಶ್ಯಕತೆಯನ್ನು ಹೇಳಿ ಈ ಪಾದದಲ್ಲಿ ಉಪಾಸನಾಂಗ ಭಕ್ತಿಯು ಹೇಳಲ್ಪಡುವುದು. ಮಹಾತ್ಮ ಜ್ಞಾನ ಪೂರ್ವಕ ಸ್ನೇಹ ದೃಡತೆಯೇ ಭಕ್ತಿಯು. ಭಕ್ತ್ಯೈಕ ದೇಶ ಪುಪಾಯ ಜ್ಞಾನ ವಿಷಯ ಮಾಹಾತ್ಮ್ಯೆಯು ಹೇಳಲ್ಪಡುವುದು.

ಈ ಅಧಿಕರಣದಲ್ಲಿ ಭಕ್ತಿ ಪ್ರಾಪ್ತಿಗಾಗಿ ಅರ್ಧ ಜ್ಞಾನಾತ್ಮಕ ಸ್ವಪ್ನ ಪ್ರಪಂಚದ ಭಗವದಧೀನತ್ವ ಮಹಾತ್ಮೆಯು ಹೇಳಲ್ಪಟ್ಟಿದೆ

1. **ಭಕ್ತಿರಸ್ಮಿನ್ಪಾದ ಉಚ್ಯತೇ । ಭಕ್ತ್ಯರ್ಥಂ ಭಗವನ್ಮಹಿ ಸ್ನೋಕ್ತಿಃ ॥**

ಜಾಗೃತ ಸುಷುಪ್ತಿ ಸಂಧಿ ಕಾಲವು ಸ್ವಪ್ನವು. ಜಾಗ್ರದಾದ್ಯವಸ್ಥೆ ಮಾತ್ರವೇ ಅಲ್ಲ. ಸ್ವಪ್ನಾವಸ್ಥೆಯೂ ಪರಮಾತ್ಮನಿಂದಲೇ ಅವನ ಅಧೀನವೇ. ಆತನಲ್ಲಿ ದೃಢ ಭಕ್ತಿ ಹೊಂದಲು ಆತನ ಮಹಿಮೋಕ್ತಿಯು.

## ಸೂ॥ ಓಂ॥ ಸಂಧ್ಯೇಸೃಷ್ಟಿರಾಹಿ ಓಂ॥ 1

ನ ಸ್ವಪ್ನೋಽಪಿ ತಂವಿನಾ ಪ್ರತೀಯತೆ

ಅಥ "ರಥಾನ್" ಇತಿ ಶ್ರುತಿಯು ಜಾಗ್ರತ ಸುಷುಪ್ತಿ ಅವಸ್ಥಾಮಧ್ಯ ಸಂಧಿ ಕಾಲವಾದ ಸ್ವಪ್ನಾವಸ್ಥೆಯೂ ಶ್ರೀ ಭಗವಂತನಿಂದಲೇ ಸೃಷ್ಟಿಯು ಸ್ವಪ್ನ ಪದಾರ್ಥಗಳ ಸೃಷ್ಟಿಯೂ ಆತನಿಂದಲೇ

2. ನ ತತ್ರ ರಥಾ ನ ರಥಯೋಗಾನ ಪಂಥಾನೋ ಭವಂತ್ಯಥ ರಥಾ ನ್ರಥಯೋಗಾ್ ಪಥಃ ಸೃಜತ (ಬೃ 6-3-10)ಇತ್ಯಾದಿಶ್ರುತೇಃ ||

ಸ್ವಪ್ನಾವಸ್ಥೆಯಲ್ಲಿ ಅಂತರಿಕ್ಷ ಸ್ವರ್ಗ ಮತ್ತು ಮೋಕ್ಷದಲ್ಲಿಯೂ ಎಲ್ಲಾ ಸ್ಥಳಗಳ ಲ್ಲಿಯೂ ರಥಗಳು ಅಶ್ವಗಳು ಮಾರ್ಗಗಳು ಹಿಂದೆ ಇಲ್ಲದಿದ್ದುದನ್ನು ಪರಮಾತ್ಮನು ಜೀವರ ಅವರವರ ಕರ್ಮಾನುಸಾರ ಸೃಷ್ಟಿ ಮಾಡುವನು ಹಾಗೆಯೇ ವಾಸ ಸ್ಥಳ ಗಳನ್ನು ಸರಸ್ಸುಗಳನ್ನು ಮತ್ತು ನದಿಗಳನ್ನು ಮಾಡುವನು ಆತನೇ ಸರ್ವ ಜಗತ್ತಿಗೆ ಸರ್ವಕರ್ತನು.

## ಸೂ|| ಓಂ|| ನಿರ್ಮಾತಾರಂಚೈಕೇ ಪುತ್ರಾದಯಶ್ಚ ಓಂ|| 2

ಕೆಲವು ಶಾಖೆಗಳಲ್ಲಿ ಶ್ರೀ ಭಗವಂತನನ್ನು ಸ್ವಪ್ನ ಪದಾರ್ಥ ನಿರ್ಮಾಣ ಮಾಡು ವವನಾಗಿ ಹೇಳುವರು ಮತ್ತೆ ಕೆಲವರು ಪುತ್ರಾದಿಗಳನ್ನು ಕೊಡುವವನೂ ಅವನೇ ಎಂದು ಹೇಳುವರು. ಆದ್ದರಿಂದ ಶ್ರೀವಿಷ್ಣುವಿನಿಂದಲೇ ಸರ್ವ ಸೃಷ್ಟಿಯು ಅವನೇ ಸ್ವಪ್ನವನ್ನೂ ಸೃಷ್ಟಿಸುವನು

"ಯ ಯೇಷು ಸುಪ್ತೇಷು ಜಾಗರ್ತಿಕಾಮಂ ಕಾಮಃ ಪುರುಷೋನಿರ್ಮಿಮಾಣಃ (ಕರ 5-8) ಇತಿ ಚ । ಏತಸ್ಮಾಧ್ಯೇವ ಪುತ್ರೋಜಾಯತೆ ಏತಸ್ಮಾದ್ಭ್ರಾತ್ರೈ ತಸ್ಮಾದ್ಭಾರ್ಯಾಯದ್ವೈನಂ ಪುರುಷಮೇವ ಸ್ವಪ್ನೇ ನಾಭಿಹಂತಿ" ಇತಿ ಗೌಪವನ ಶೃತಿಶ್ಚ ।

ಶ್ರೀ ಪರಮಾತ್ಮನು ಕರ್ತೃವಲ್ಲವಾದ್ದರಿಂದ ಜೀವನು ಸುಪ್ತನಾಗಿ ಕರ್ತೃತ್ವ ವಲ್ಲದ್ದರಿಂದಲೂ ಸ್ವಪ್ನ ಕಾಲಗಳಲ್ಲಿ ಇವರುಗಳಿಗೆ ಉತ್ಪತ್ತಿ ನಾಶಗಳು ಕೊಡುವುದಿಲ್ಲ ವಾಗಿ ಕರ್ತೃವು ಯಾರು ಎಂದರೆ. ಮೇಲಿನ ಶೃತಿಯಂತೆ ಪೂರ್ಣ ಷಡ್ಗುಣನಾದ ಪರ ಮಾತ್ಮನು ಜೀವ ಸುಪ್ತಿ ಕಾಲದಲ್ಲಿ ಸ್ವೇಚ್ಛಾನುಸಾರ ಕಾಮ್ಯ ಸ್ವಪ್ನ ಪದಾರ್ಥಗಳನ್ನು ನಿರ್ಮಿಸಿ ಜಾಗೃತನಾಗಿದ್ದು ಆತನೇ ಶೋಕ ರಹಿತನು ಪೂರ್ಣನು ಮತ್ತು ನಿತ್ಯ ಮುಕ್ತನು ಕಂಠಶೃತಿಯು.

4. ಕೇನ ಸಾಧವೇನ-ಯಾವ ಸಾಧನದಿಂದಲೆಂದರೆ

## ಸೂ॥ ಓಂ॥ ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿ ವ್ಯಕ್ತ ಸ್ವರೂಪತ್ವಾತ್ ಓಂ॥ 3

ಅನಾದಿ ಮನೋಗತಾನ್ ಸಂಸ್ಕಾರಾನ್ ಸ್ವೇಚ್ಛಾ ಮಾತ್ರೇಣ ಪ್ರದರ್ಶಯತಿ ನಾನ್ಯೇನ ಸಾಧನೇನ ಸಮ್ಯಗನಭಿ ವ್ಯಕ್ತತ್ವಾತ್ ॥

ಸ್ವಪ್ನವು ಇಚ್ಛಾವಾಸನಾ ನಿಮಿತ್ತವೇ ಉಪಾದಾನವಾಗಿ ನಿರ್ಮಿತವು ಬಾಹ್ಯ ಕಾರಣವಿಲ್ಲ ಬಾಹ್ಯ ನಿರ್ಮಿತ ವಸ್ತುವಂತೆ ಸ್ಪಷ್ಟಾಭಿವ್ಯಕ್ತ ಸ್ವರೂಪವುಳ್ಳದ್ದೂ ಅಲ್ಲ

ಪೂರ್ವಾನು ಭೂತ ವಸ್ತು ವಿಷಯ ವಾಸನಾ ಸಂಸ್ಕಾರವೇ ಉಪಾದಾನವು. ಶ್ರೀ ಪರಮಾತ್ಮನೇ ತನ್ನಿಚ್ಛೆಯಿಂದಲೇ ಮನಸ್ಸಿನಲ್ಲಿ ಸ್ವಪ್ನವನ್ನು ಸೃಷ್ಟಿಸುವನು. ಜೀವ ಪ್ರಜ್ಞಾ ಸಂಸ್ಕಾರವೇ "ಮಾಯಾ"

ತ್ರಿಗುಣಾತ್ಮಿಕಾಥ ಜ್ಞಾನಂಚ ವಿಷ್ಣು ಶಕ್ತಿಸ್ತಥೈವಚ ।
ಮಾಯಾಶಬ್ದೇನ ಭಣ್ಯಂತೆ ಶಬ್ದ ತತ್ವಾರ್ಥವೇ ದಿಭಿಃ ॥

ಶ್ರೀ ಪರಮಾತ್ಮನ ಇಚ್ಛೆಯೇ ಮಾಯಾ ಶಬ್ದ ವಾಚ್ಯವು.

ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ ।
ಪ್ರಕೃತಿರ್ವಾಸ ನೇತ್ಯೇವಂ ತವೇಚ್ಛಾನಂತ ತವೇ ಚ್ಛಾನಂತ ಕಥ್ಯತೇ ।

ಸ್ವಪ್ನಕ್ಕೆ ಶ್ರೀ ಪರಮಾತ್ಮನೇ ಕರ್ತೃವಾದ್ದರಿಂದ ಸತ್ಯವೇ.

5. ಬ್ರಹ್ಮಾಂಡವೇ - ಮನೋಗತಾಂಸ್ತು ಸಂಸ್ಕಾರಾನ್ ಸ್ವೇಚ್ಛಯಾ
ಪರಮೇಶ್ವರಃ । ಪ್ರದರ್ಶಯತಿ ಜೀವಾಯ ಸಸ್ವಪ್ನ
ಇತೀರ್ಯತೇ॥ ಯದನ್ಯಥಾತ್ವಂ ಜಾಗ್ರತ್ವಂ ಸಾಭ್ರಾಂತಿ
ಸ್ತತ್ರತತ್ಯತಾ । ಅನಭಿವ್ಯಕ್ತರೂಪತ್ವಾನ್ನಾನ್ಯ
ಸಾಧನಜಂಭವೇತ್ ॥ ಇತಿ

ಶ್ರೀ ಪರಮೇಶ್ವರನು ಜೀವನ ಮನೋಗತ ಸಂಸ್ಕಾರಾದಿಗಳನ್ನು ಸ್ವೇಚ್ಛೆಯಿಂದ ಆತನ ಸ್ವಪ್ನ ಸ್ಥಿತಿಯನ್ನಾಗಿ ಸೃಷ್ಟಿಸುವನು ಜಾಗೃದವಸ್ಥೆಯಿಂದ ಇದು ಬೇರೆಯಾದ್ದರಿಂದ ಭ್ರಾಂತಿಯಿಂದ ಉಂಟಾಗುವುದು. ಪೂರ್ಣ ವ್ಯಕ್ತಿ ಸ್ವರೂಪವಲ್ಲದ್ದರಿಂದ ಯಾವ ನಿಜವಾದ ಸಾಧನವುಳ್ಳದ್ದಲ್ಲ.

## ಸೂ॥ ಓಂ॥ ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ ಓಂ॥ 4

ಸ್ವಪ್ನ ಪದಾರ್ಥವು ಶುಭಾಶುಭ ಸೂಚಕವಾಗಿ ಸತ್ಯವೇ ಸರ್ವಜ್ಞರಾದ ವೇದವ್ಯಾಸಾದಿ ಜ್ಞಾನಿಗಳು ಸ್ವಪ್ನ ವಿಷಯಗಳು ಅರ್ಥ ಕ್ರಿಯಾಕಾರಕ ಸೂಚಕಗಳೆಂದು ತಿಳಿಯುವರು

ಸಾಧನಾಂತರಾಭಾವೇಪಿ ಭಾವಾಭಾವ ಸೂಚಕತ್ವೇನೇಶ್ವರೋದರ್ಶಯತಿ ॥

ಬಾಹ್ಯ ಕಾರಣ ಜನ್ಯತ್ವವಿಲ್ಲದಿದ್ದರೂ ಸ್ವಪ್ನಾದಿಗಳು ಭಾವಾಭಾವ ಸೂಚಕತ್ವದಿಂದ ಶುಭಾ ಶುಭ ಸೂಚಕವು ಈಶ್ವರನಿಂದ ಜೀವನಿಗೆ ಈ ಅವಸ್ಥೆಯಾದ್ದರಿಂಗ ಉಪಯೋಗವಿಲ್ಲದ್ದೆಂದಲ್ಲ

7 **ಯದಾ ಕರ್ಮಸು ಕಾಮ್ಯೇಷು ಸ್ತ್ರೀಯಂ ಸ್ವಪ್ನೇಽಭಿಪಶ್ಯತಿ ।**
**ಸಮೃದ್ಧಿಂ ತತ್ರ ಜಾನೀ ಯಾತ್ತಸ್ಮಿ್ ಸ್ವಪ್ನ ನಿದರ್ಶನ ಇತಾದಿ**
**ಹಿ ಶಬ್ದಾದ್ ದರ್ಶಚನ್ನಾ ಶೃತೇಃ ॥**

ಕಾಮ್ಯಕರ್ಮಗಳಲ್ಲಿ ಸ್ತ್ರೀಯನ್ನು ಸ್ವಪ್ನದಲ್ಲಿ ಕಂಡರೆ ಸಮೃದ್ಧಿಯನ್ನು ತಿಳಿಸಿಕೊಡುವುದೆಂದು ಶೃತಿಯು ತಿಳಿಸುವುದು ಈ ಶಬ್ದದಿಂದ ಕಂಡಿದೆ ಎಂದೂ ತಿಳಿಸಲಾಗಿದೆ

8 **ಸ್ವಪ್ನಾದಿಬುದ್ಧಿ ಕರ್ತಾ ಚ ತಿರಸ್ಕರ್ತಾ ಸ ಏವ ಚ । ತದಿಚ್ಛಯಾ**
**ಯತೋ ಹ್ಯಸ್ಯ ಬಂಧ ಮೋಕ್ಷೌ ಪ್ರತಿಷ್ಠಿತಾವಿತಿಕೌರ್ಮೇ ॥**

ಬ್ರಾಹ್ಮಣನಾಗಲೀ ದೇವತೆಯಾಗಲೀ ರುದ್ರ ದೇವತೆಯಾಗಲಿ ರಾಜನಾಗಲಿ ಸ್ವಪ್ನಸ್ಥಿತಿಯು ಜೀವನಿಗೆ ಹೇಳಿದುದು ಸತ್ಯವು. ಹೀಗೆ ಸ್ವಪ್ನಾರ್ಥ ವೇದಿಗಳಾದ ವ್ಯಾಸರಮತವು.

ಇತಿ ಸಂಧ್ಯಾಧಿಕರಣಂ

## - ಪರಾಭಿಧ್ಯಾನಾಧಿಕರಣಂ -

ಈ ಅಧಿಕರಣದಲ್ಲಿ ಭಗವಂತನಿಗೆ ಸ್ವಪ್ನಾತಿರೋಧಾಯಕತ್ವ ಮಹಿಮೆಯೂ ಹೇಳಲ್ಪಡುತ್ತದೆ.

**ಸೂ॥ ಓಂ॥ ಪರಾಭಿಧ್ಯಾನಾತ್ತು ತಿರೋಹಿತಂ ತತೋಹ್ಯಸ್ಯ ಬಂಧವಿಪರ್ಯಯೌ ಓಂ॥ 5**

ಯಾವ ಪರಮಾತ್ಮನಿಂದ ಜೀವನಿಗೆ ಸಂಸಾರ ಬಂಧ ಮೋಕ್ಷಗಳು ಆಗುವುವೋ ಆ ಪರಮಾತ್ಮನ ಇಚ್ಛೆಯೊ ಸ್ವಪ್ನವಸ್ಥೆಯಿಂದ ನಿವಾರಣಕ್ಕೂ ಕಾರಣವು ಬೇರೆ ಯಾವುದು ಅಲ್ಲ

ಬಂಧಮೋಕ್ಷ ಪ್ರದತ್ವಾತ್ಸ ಏವ ಸ್ವಪ್ನ ತಿರಸ್ಕರ್ತಾ ।

ಜೀವರಿಗೆ ಬಂಧಮೋಕ್ಷ ಪ್ರದನಾದ ಶ್ರೀ ಪರಮಾತ್ಮನೇ ಸ್ವಪ್ನಾವಸ್ಥೆಯಿಂದ ನಿವಾರಕನೂ ಹೌದು.

2 **ಸ್ವಪ್ನಾದಿ ಬುದ್ಧಿ ಕರ್ತಾ ಚ ತಿರಸ್ಕರ್ತಾ ಸ ಏವ ಚ । ತದಿಚ್ಛಯಾ ಯತೋ ಹ್ಯಸ್ಯ ಬಂಧ ಮೋಕ್ಷೌಪ್ರತಿಷ್ಠಿತಾವಿತಿ ಕಾರ್ಮೇ ॥**

ಸ್ವಪ್ನಾವಸ್ಥೆಯನ್ನುಂಟು ಮಾಡುವ ಶ್ರೀ ಪರಮಾತ್ಮನೇ ತನ್ನ ಇಚ್ಛೆಯಿಂದಲೇ ಅದರ ಬಿಡುಗಡೆಯನ್ನು ಮಾಡುವನು. ಅನಾದಿ ಬಂಧ ಮೋಕ್ಷಗಳೇ ಅವನಿಚ್ಛೆಯಿಂದಾಗಲು ಅವನಿಂದಲೇ ಸ್ವಪ್ನತಿರೋಹರಣವೂ ಕೂಡ.

- ಇತಿ ಪರಾಭಿಧ್ಯಾನಾಧಿಕರಣಂ -

## – ದೇಹಯೋಗಾಧಿಕರಣಂ –

ಈ ಅಧಿಕರಣದಲ್ಲಿ ಶ್ರೀ ವಿಷ್ಣುವಿಗೆ ಜಾಗ್ರತ್ಪ್ರವರ್ತಕತ್ವ ಮಹಿಮೆಯು ಹೇಳಲ್ಪಡುವುದು.

## ಸೂ॥ ಓಂ॥ ದೇಹಯೋಗಾದ್ವಾಸೋಽಪಿ ಓಂ॥ 6

ಜಾಗರಣಕ್ಕೆ ಕಾಲಾಧೀನವು ಕಂಡಿರುವುದರಿಂದಲೂ ಮತ್ತು ಅದು ಭ್ರಾಂತಿಯಿಲ್ಲದ್ದರಿಂದಲೂ ಈಶ್ವರಾಧೀನವಲ್ಲವೆಂದು ಪೂರ್ವಪಕ್ಷವು ಆದರೆ ಸ್ವದೇಹಾಭಿಮಾನದಿಂದ ಅದರಲ್ಲಿ ಪ್ರವೇಶಿಸಿ ವಾಸ ಮಾಡುವುದರಿಂದ ಜಾಗ್ರದವಸ್ಥೆಯು ಶ್ರೀಪರಮಾತ್ಮನ ಇಚ್ಛೆಯಿಂದಲೇ.

ದೇಹಯೋಗೇನವಾಸೋ ಜಾಗ್ರದಿ ಪಿ ತತ ಏವ ।

ದೇಹದ ಒಳಗೆ ವಾಸವಾಗಿರುವುದರಿಂದ ದೇಹಾಭಿಮಾನ ಸ್ಥಿತಿರೂಪ ಜಾಗ್ರದವಸ್ಥೆಯಲ್ಲಿಯೇ ಶ್ರೀ ಪರಮಾತ್ಮನ ಇಚ್ಛೆಯಿಂದಲೇ ಕಾಲ ಜೀವಾದಿಗಳ ಅವಸ್ಥೆಯು ಆತನ ಇಚ್ಛೆಯಿಂದಲಾದ್ದರಿಂದ ಸ್ವಪ್ನ ಸುಷುಪ್ತಿ ಜಾಗ್ರದವಸ್ಥೆಗಳೆಲ್ಲವೂ ಅವನ ಇಚ್ಛೆಯಿಂದಲೇ

"ಸ ಏವ ಜಾಗರಿತೇ ಸ್ಥಾಪಯತಿ ಸ ಸ್ವಪ್ನೇಸ ಪ್ರಭುಸ್ತುರಾಷಾಟ್ ಏಕೋ ಬಹು ಧಾಭವತಿ ॥ ಇತಿ ಕೌಂರರವ್ಯ ಶ್ರುತೇ ॥

ಮೇಲಿನ ಶೃತಿಯು ಈಶ್ವರನೇ ಜಾಗ್ರದಾದಿ ಅವಸ್ಥಾಪ್ರದನು ಅದಕ್ಕೆ ಅವನೇ ಸಾಮರ್ಥ್ಯನೆ ಕಾರಣ "ತುರ" ಶಬ್ದ ವಾಚ್ಯನಾದ ವಾಯುವಿನ ಜತೆಯಲ್ಲಿ ವಿಶ್ವ ತೈಜಸಾದಿ ರೂಪದಿಂದ ದೇಹದಲ್ಲಿ ಆತನ ಸ್ಥಿತಿಯು.

– ಇತಿ ದೇಹಯೋಗಾಧಿಕರಣಂ –

ಈ ಅಧಿಕರಣದಲ್ಲಿ ಈಶ್ವರನಿಗೆ ಸುಪ್ತಿಪ್ರಾಪ್ಯತ್ವ ಮಹಿಮೆಯು ಹೇಳಲ್ಪಡು ವುದು.

## ಸೂ|| ಓಂ|| ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ|| 7

ಜಾಗ್ರತ್ಸ್ವಪ್ನಾಭಾವಃ ಸುಪ್ತಿಃ ನಾಡೀಸ್ಥೇ ಪರಮಾತ್ಮನಿ ।

ಜೀವನಾಡಿಗಳಲ್ಲಿ ಪರಮಾತ್ಮನ ಜತೆಗೆ ಇರುವದು ಜಾಗ್ರತ ಸ್ವಪ್ನಗಳ ಅಭಾವ ರೂಪ ಸುಷುಪ್ತಿಯು ಶೃತಿಯು ಹಾಗೆ ಹೇಳುವುದು.

ಸರ್ವೇಂದ್ರಿಯ ವ್ಯಾಪಾರಗಳ ಉಪರತಿಯು ಸುಪ್ತಿ ಸ್ವರೂಪ ನಿರ್ವಚನ ಸೂಚಕವು ಅದು ಪರಮಾತ್ಮನಲ್ಲಿಯೇ ಸ್ಥಿತಿಯು. ಹೀಗೆ ಶೃತಿದ್ವಯದ ಅರ್ಥವು

**2. ಆಸು ತದಾ ನಾಡೀಷು ಸುಪ್ತೋ ಭವತಿ (ಛಾ-8-6-3) ಸತಾ ಸೋಮ್ಯ ತದಾ ಸಂಪನ್ನೋ ಭವತೀತಿ ಶ್ರುತೇಃ ||**

ಸ್ವಪ್ನ ಕಾಲದಲ್ಲಿ ಪ್ರಾಜ್ಞನಾಮಕ ಪರಮಾತ್ಮನಲ್ಲಿ ಜೀವನು ಸುಪ್ತನು ಸರ್ವೇಂ ದ್ರಿಯಗಳ ವ್ಯಾಪಾರಗಳೋಪಸಂಹಾರದಿಂದ ಸ್ವರೂಪಾನುಭವವನ್ನು ಅನುಭವಿಸುವ ಜೀವನು ಜಾಗೃತ ಸ್ವಪ್ನಾವಸ್ಥೆಗಳನ್ನು ತಿಳಿಯುವುದಿಲ್ಲ. ಆ ಕಾಲದಲ್ಲಿ ಜೀವನು ಪರ ಮಾತ್ಮನಿಂದ ಸಂಗತನಾಗಿರುತ್ತಾನೆ

ಅಂಗುಷ್ಟ ಮಾತ್ರ ಪುರುಷೆ ಕರ್ಣಿಕಾಗ್ರಸ್ಥಿತೇ ಹಕೌ ।
ಪ್ರವಿಶಂತಿ ಸುಷುಪ್ತೌತು ಪ್ರಭುಧ್ಯಂತೆ ತತಃಸ್ತಥಾ ॥

ಅಚಿಂತ್ಯಾದ್ಭುತ ಶಕ್ತಿಯಿಂದ ಈಶ್ವರನಲ್ಲಿ ಇದು ಸಾಧ್ಯವು.

ಇತಿ ತದಭಾವಾಧಿಕರಣಂ

- ಅಥ ಪ್ರಬೋಧಾಧಿಕರಣಂ -

ಈ ಅಧಿಕರಣದಲ್ಲಿ ಸುಪ್ತಿ ಪ್ರಬೋಧಕ ಮಹಾತ್ಮೆಯು ಶ್ರೀ ಹರಿಯಲ್ಲಿ ಹೇಳಲ್ಪಡುವುದು.

**ಸೂ॥ ಓಂ॥ ಅತಃ ಪ್ರಬೋಧೋಽಸ್ಮಾತ್ ಓಂ॥ 8**

ಯತ ತಸ್ಮಿನ್ಸುಪ್ತಿಃ

ಭೇರೀ ತಾಡನಾದಿಗಳಿಂದಲೇ ಸುಪ್ತಿ ಪ್ರಭೋದನವು ಕಂಡಿರುವುದರಿಂದ ಈಶ್ವರನಿಂದಲ್ಲವೆಂದು ಪೂರ್ವ ಪಕ್ಷವು ಉತ್ತರವು ಜೀವರಿಗೆ ಪರಮಾತ್ಮನ ಇಚ್ಛೆಯಿಂದಲೇ ಪ್ರಭೋಧನವೂ ಕೂಡ ಮಿಕ್ಕ ಕಾರಣಗಳಿಂದಲಲ್ಲ

ದೇಹಾದ್ದೇಹಾಂತರಗತೋ ಪ್ರವಿಶೇತ್ಪ್ರಾಣಮೇವತು ।
ಜೀವಃ ಪ್ರಾಣಃ ಪರಾತ್ಮಾನಾ ಮೇವಂಸುಪ್ತಾ ॥

ಮುಖ್ಯ ಪ್ರಾಣ ದ್ವಾರಾ ತನ್ನಒಳಗೆ ನಿವೇಶನ ಹೊಂದಿರುವ ಜೀವನಿಗೆ ಪರಮೇಶ್ವರನ ಪ್ರೇರಣದ ವಿನಹ ತಾನೇ ಸುಪ್ತೋದ್ಬೋದನ ಶಕ್ತಿಯಿಲ್ಲವಾದ್ದರಿಂದ ಆತನೇ ಸುಪ್ತಿ ಪ್ರಭೋದಕನೂವೆ.

2 **ಏಷ ಏವ ಸುಪ್ತಂ ಪ್ರಬೋದಯತ್ಯೇತಸ್ಮಾಜ್ಜೀವ ಉತ್ತಿಷ್ಠತ್ಯೇಷ ಪ್ರಮಾತ್ಮೈಷ ಪರಮ ಇತಿ ಕೌಂಡಿನ್ಯ ಶ್ರುತಿಃ ॥**

ಶ್ರೀ ಪರಮಾತ್ಮನೆ ಸುಪ್ತ ಜೀವನನ್ನು ಅದರಿಂದ ಪ್ರಭೋದ ಪಡಿಸುವನು. ಈ ಶ್ರೀ ಪರಮಾತ್ಮನೇ ಶ್ರೇಷ್ಠನು.

– ಇತಿ ಪ್ರಬೋದಾಧಿಕರಣಂ –

## ಕರ್ಮಾನುಸ್ಮೃತ್ಯಧಿಕರಣಂ

ಈ ಅಧಿಕರಣದಲ್ಲಿ ಸರ್ವ ಜೀವರ ಸರ್ವ ಕಾಲಿಕ ಸರ್ವಾವಸ್ಥಾನಗಳು ಶ್ರೀ ಪರಮಾತ್ಮನಾಧೀನಗಳೇ ಎಂದು ಸಮರ್ಥನವು.

## ಸೂ॥ ಓಂ॥ ಸ ಏವ ಚ ಕರ್ಮಾನುಸ್ಮೃತಿ ಶಬ್ದವಿಧಿಭ್ಯ ಓಂ॥ 9

ನ ತು ಕೇಷಾಂಚಿತ್ಸ್ವಪ್ನಾದಿ ಕರ್ತಾ ನತು ಸರ್ವೇಷಾಮಿತಿ । "ಏಷ ಹ್ಯೇವ ಸಾಧುಕರ್ಮ ಕಾರಯಿತಿ (ಕೌ-3–8) ಇತಿ ಕರ್ಮಣ್ಯವಧಾರಣಾತ್ ।

**ಆತ್ಮಾನಮೇವ ಲೋಕಮುಪಾಸೀತೇತಿಚ ವಿಧಿಃ । ಏಷ ಸ್ವಪ್ನಾಸ್ಪ್ರದರ್ಶ ಯತೇ ಷ ಏವ ಪರಮ ಆನಂದಃ ಇತಿ ಚ ಶೃತಿಃ ॥**

ಈಶ್ವರನೇ ಸರ್ವ ಜೀವರಿಗೂ ಸರ್ವಾವಸ್ಥಾ ಪ್ರೇರಕನು ದೇಶ ಕಾಲಾಂತರಗಳಲ್ಲಿಯೂ ಬೇರೆ ಯಾರೂ ಇಲ್ಲ. "ಏಷಹ್ಯೇವ" ಎಂಬ ಶೃತಿಯು ಸರ್ವಕರ್ಮಗಳೂ ಈಶ್ವರಾಧೀನವೆಂದು ಹೇಳುವುದು ಸ್ಮೃತಿ ಸಮರ್ಥನವೂ ಇರುವುದು

**2. ಪ್ರದರ್ಶಕಸ್ತು ಸರ್ವೇಷಾಂ ಸ್ವಪ್ನಾದೇರೇಕ ಏವ ತು ।**
**ಪರಮಃ ಪುರುಷೋ ವಿಷ್ಣುಸ್ತತೋಽನ್ಯೋ ನಾಸ್ತಿ ಕಶ್ಚನೇತ್ಯನು**
**ಸಾರಿಸ್ಮೃತೇಶ್ಚಃ ।**

ಶ್ರೀವಿಷ್ಣುವೇ ಮುಖ್ಯ ಮುಖ್ಯತಃ ಸರ್ವದಾ ಸರ್ವ ಜೀವರಿಗೂ ಸರ್ವ ಅವಸ್ಥೆಗಳಿಗೂ ಪ್ರೇರಕನು ಇತರರಲ್ಲ. ಆತನೇ ಪರಮಶ್ರೇಷ್ಠ ಪುರುಷನು

ಶೃತಿಯಲ್ಲಿ-ಜೀವರುಗಳಿಗೆ ಸ್ವಪ್ನಾದಿ ಸರ್ವ ಅವಸ್ಥೆಗಳನ್ನು ಯೋಜಿಸುವ ಶ್ರೀ ಪರಮಾತ್ಮನೇ ಸರ್ವೋತ್ತಮನು ಮತ್ತು ಪೂರ್ಣನು. ಆತನನ್ನು ಜೀವರು ಉಪಾಸನದಿಂದ ಆಶ್ರಯವನ್ನು ಹೊಂದಲು ಪ್ರಯತ್ನಿಸಬೇಕು.

– ಇತಿ ಕರ್ಮಾನುಸ್ಮೃತ್ಯಧಿಕರಣಂ –

– ಸಂಪತ್ತ್ಯಧಿಕರಣಂ –

ಈ ಅಧಿಕರಣದಲ್ಲಿ ಜೀವರಿಗೆ ಮೋಹಾವಸ್ಥೆಯಲ್ಲಿ ಪರಮೇಶ್ವರನಲ್ಲಿ ಅರ್ಧ ಪ್ರಾಪ್ತಿಯನ್ನು ಸಮರ್ಥನೆ ಮಾಡಿದೆ.

## ಸೂ ಓಂ॥ ಮುಗ್ಧೇರ್ಧಸಂಪತ್ತಿಃ ಪರಿಶೇಷಾತ್ ಓಂ॥ 10

**ಮೋಹಾವಸ್ಥಾಯಾಂ ಪರಮೇಶ್ವರೇರ್ಧ ಪ್ರಾಪ್ತಿರ್ಜೀವಸ್ಯ ।**

ಮೋಹಾವಸ್ಥೆಯಲ್ಲಿ ಜೀವರಿಗೆ ಶ್ರೀ ಪರಮಾತ್ಮನಲ್ಲಿ ಅರ್ಧಪ್ರವೇಶವು ಪ್ರಸಕ್ತ

ಪ್ರತಿಷೇಧ ಪೂರ್ವಕ ಅನುಮಾನದಿಂದ ತಿಳಿಯಲ್ಪಡುವುದು ಮೋಹಾವಸ್ಥೆಯಲ್ಲಿ ಈಶ್ವರನನ್ನು ಹೊಂದುವುದಿಲ್ಲ ಮತ್ತೆ ಮಿಕ್ಕ ಯಾರಲ್ಲಿಯೂ ಆಶ್ರಯವನ್ನು ಹೊಂದುವುದಿಲ್ಲವೆಂಬ ಅನುಮಾನದಿಂದಲೇ ಪರಮಾತ್ಮನಲ್ಲಿ ಅರ್ಧ ಪ್ರವೇಶವು ಹೀಗೆ ಸೂತ್ರಾರ್ಥವು.

2. **ಹೃದಯಸ್ಥಾತ್ಪರಾಜ್ಜೀವೋ ದೂರಸ್ಥೋಜಾಗ್ರದೇಷ್ಯತಿ ।**
**ಸಮೀಪಸ್ಥಸ್ತಥಾ ಸಸ್ವಪ್ನಂ ಸ್ವಪಿತ್ಯಸ್ಮಿನ್ ಲಯಂವ್ರಜನ್**
**ಯತ ಏವಂ ತ್ರಯೋವಸ್ಥಾ ಮೋಹಸ್ತು ಪರಿಶೇಷತಃ**
**ಅರ್ಧಪ್ರಾಪ್ತಿರಿತಿಜ್ಞೇಯೋ ದುಃಖಮಾತ್ರ ಪ್ರತಿಸ್ಮೃತೇಃ ॥**
**ಇತಿ ವಾರಾಹೇ ॥**

ಜೀವನು ಶ್ರೀ ಪರಮಾತ್ಮನಿಂದ ದೂರವಿದ್ದಾಗ ಜಾಗ್ರದವಸ್ಥೆಯು (ಅಕ್ಷಿಸ್ಥ) ಸಮೀಪ ಸ್ಥಕಂಠ ದೇಶವನ್ನು ಹೊಂದಿರುವಾಗ ಸ್ವಪ್ನಾವಸ್ಥೆಯು ಯಾವಾಗ ಶ್ರೀಪರಮಾತ್ಮನನ್ನು ಪ್ರವೇಶಿಸುವನೋ(ಲಯ)ಆಗ ಸುಷುಪ್ತಿಯು ಈಮೂರು ಅವಸ್ಥೆಗಳೂ ಜೀವರಿಗೆ ಶ್ರೀ ಪರಮಾತ್ಮನಿಂದಲೇ. ಮೂರ್ಛಾವಸ್ಥೆಯು ಶ್ರೀ ಪರಮಾತ್ಮನ ಅರ್ಧ ಪ್ರಾಪ್ತಿ ರೂಪವು(ಪರಿಶೇಷಾನುಮಾನದಿಂದ) ಅವಾಂತರಾವಸ್ಥಾ ಸ್ಥಿತಿಯು ಮೋಹವು ಅರ್ಧ ಪ್ರಾಪ್ತಿ ರೂಪವೆಂದು ತಿಳಿಯುವುದು ಈ ಅವಸ್ಥೆಯು ಜೀವನಿಗೆ ದುಃಖಪ್ರದವು.

3 **ಸೋಪಿ ತತ ಏವೇತಿ ಸಿದ್ಧಂ ।**

ಮೋಹಸ್ಥಿತಿ ಪರಮಾತ್ಮನಿಂದಲಾದ್ದರಿಂದ ಬಿಡುಗಡೆಯೂ ಆತನಿಂದಲೇ ಅನ್ಯರಿಂದಲ್ಲ

4 **ಮೂರ್ಛಾ ಪ್ರಬೋಧನಂ ಚೈವ ಯತ ಏವ ಪ್ರವರ್ತತೇ ।**
**ಸ ಈಶಃ ಪರಮೋಜ್ಞೇಯಃ ಪರಮಾನಂದ ಲಕ್ಷಣ ಇತಿ**
**ಕೌರ್ಮೇ ॥**

ಮೂರ್ಛಾ ಸ್ಥಿತಿಯಿಂದಲೂ ಶ್ರೀ ಪರಮೇಶ್ವರನೇ ಮೋಚಕನು ಯಾಕೆಂದರೆ ಆತನಿಂದ ಪ್ರವರ್ತನವು. ಆದ್ದರಿಂದ ಈತನೇ ಸರ್ವಜ್ಞನು ಪರಮಾನಂದ ಸ್ವರೂಪನು.

-ಇತಿ ಸಂಪತ್ಯಧಿಕರಣಂ-

## - ನ ಸ್ಥಾನತೋಪ್ಯಧಿಕರಣಂ -

ಈ ಅಧಿಕರಣದಲ್ಲಿ ಈಶ್ವರನಿಗೆ ಸರ್ವರೂಪಗಳಲ್ಲಿಯೂ ಯನಿರ್ದೋಷಾಶೇಷ ಗುಣತ್ವವು ಸಮರ್ಥನ ಮಾಡಲ್ಪಡುವುದು

1 **ಸ್ಥಾನಾಪೇಕ್ಷೆಯಾ ಪರಮಾತ್ಮನೋ ಭೇದಾನುಗ್ರಾಹ್ಯಗ್ರಾಹಕ ಭಾವ ಇತ್ಯತ ಆಹ ||**

ಸುರನರಾದಿ ಸರ್ವ ಶರೀರಗಳಲ್ಲಿಯೂ ತಥಾ ವಿಧ ಬೇಧ, ಸ್ಥಾನಾ ಪೇಕ್ಷಯಾ ಭೇದವಿರುವುದರಿಂದ ಆತನು ಅನುಗ್ರಾಹ್ಯ ಅನುಗ್ರಾಹಕ ಭೇದ ಗುಣ ಗಳಿಂದ ಆ ಆ ಸ್ಥಾನಗಳಲ್ಲಿರುವಿಕೆಯು ಯುಕ್ತವು ಎಂದು ಪೂರ್ವ ಪಕ್ಷಃ।

2 ಅತ ಅಹ-ಅದಕ್ಕಾಗಿ ಹೇಳಿದೆ.

## ಸೂ|| ಓಂ|| ನಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ|| 11

ಶ್ರೀ ಪರಮಾತ್ಮನು ಅಕ್ಷಾದಿ ಭೇದ ಸ್ಥಾನಗಳಲ್ಲಿದ್ದರೂ ಭಿನ್ನರೂಪಗಳಿಂದಲ್ಲ. ಸರ್ವಸ್ಥಾನಗಳಲ್ಲಿಯೂ ಸರ್ವತ್ರವಿರುವ ರೂಪಗಳು ಒಂದೇ "ಸರ್ವೇ ,,ಷು" ಶೃತಿಯು ಹೇಳಿರುವುದು.

ಸ್ಥಾನಾಪೇಕ್ಷೆಯಾಪಿ ಪರಮಾತ್ಮನ ಭಿನ್ನರೂಪಗಳನ್ನು ತಿಳಿಯಬಾರದು.

3. **ಸರ್ವೇಷು ಭೂತೇಷ್ವೇತ ಮೇವ ಬ್ರಹ್ಮೇತ್ಯಾಚಕ್ಷತ** (ಐ. ಆ-3-2-3) **ಇತಿ ಶ್ರುತಿಃ** ।

ಸುರನರಾದಿ ಸರ್ವದೇಹಗಳಲ್ಲಿಯೂ ಚಕ್ಷುರಾದಿ ಸ್ಥಾನಗಳಲ್ಲಿಯೂ ಒಬ್ಬನೇ ಪೂರ್ಣನಾದ ಶ್ರೀ ಪರಮಾತ್ಮನು ಬ್ರಹ್ಮಶಬ್ದ ವಾಚ್ಯ ಪೂರ್ಣಗುಣನು ಇರುವನು ಎಂದು ಜ್ಞಾನಿಗಳು ತಿಳಿಯುವರು. ಆತನಿಗೆ ಸ್ಥಾನ ಬೇಧದಿಂದ ಬೇರೆ ಬೇರೆ ರೂಪ ಗಳೆಂದು ತಿಳಿಯಲಾಗದು.

**4. ಏಕರೂಪಃ ಪರೋ ವಿಷ್ಣುಃ ಸರ್ವತ್ರಾಪಿ ನ ಸಂಶಯಃ ।**
**ಐಶ್ವರ್ಯಾದ್ರೂಪಮೇಕಂ ಚ ಸೂರ್ಯವದ್ಬಹುಧೇಯತ**
**ಇತಿಮಾತ್ಸ್ಯೇ ।**

ಶ್ರೀ ವಿಷ್ಣುವು ಸರ್ವತ್ರ ಸರ್ವಸ್ಥಾನಗಳಲ್ಲಿಯೂ ಗುಣಾದಿಗಳಿಂದಲೂ ಅವತಾರ ಭೇದಗಳಿಂದಲೂ ಅಭಿನ್ನರೂಪನೇ, ಭಿನ್ನರೂಪವೂ ಅಲ್ಲ ಹೀನಾಧಿಕ ರೂಪವು ಅಲ್ಲ ಆತನು ತನ್ನ ಐಶ್ವರ್ಯದಿಂದಲೇ ಬಹುಧಾ ಅನೇಕಸ್ಥಳಗಳಲ್ಲಿ ಸಮಗ್ರವಾಗಿ ಸೂರ್ಯ ನೋಪಾದಿಯಲ್ಲಿ ಸ್ಥಿತನು.

**ತಮಿಮಮಹಮಜಂ ಶರೀರ ಭಾಜಾಂ ಪ್ರತಿಪೃಶಮಿವ ನೈಕಧಾರ್ಕ**
**ಮೇಕಂ ಸಮಧಿಗತೋಸ್ಮಿ ವಿಧೂತ ಭೇದ ಮೋಹಃ ।**
**ಇತಿಚ ಭಾಗವತೇ ॥**

ಹೃದಯಗಳಲ್ಲಿಯೂ ಸಮಸ್ತ ರೂಪವೈವಿಧ್ಯದಿಂದಿರುವ ಈಶ್ವರನಾದ ಶ್ರೀ ಕೃಷ್ಣನನ್ನು ಅಭಿನ್ನನಾಗಿಯೂ ಕಲ್ಮಷ ವಿದೂರರಾದ ಜ್ಞಾನಿಗಳು ತಿಳಿಯುವರು. ನಾನಾ ಸ್ಥಾನಗಳಲ್ಲಿರುವ ಪ್ರತಿಬಿಂಬಿತ ಸೂರ್ಯನೋಪಾದಿಯಲ್ಲಿ ಏಕತ್ವದಂತೆ ಸರ್ವ ಸ್ಥಳಗಳಲ್ಲಿಯೂ "ದ್ರವ್ಯರೂಪದಿಂದಲೂ" ಒಬ್ಬನೇ ಆಗಿರುವನು.

## ಸೂ॥ ಓಂ॥ ನಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ಓಂ॥ 12

ಸ್ವಪ್ನ ಜಾಗ್ರತಾದಿ ಅನುಭವ ಜನಕ ರೂಪಭೇದಕ ಧರ್ಮ ಹೇಳಿರುವುದರಿಂದ ವಿಶ್ವಾದಿ ರೂಪಗಳಲ್ಲಿ ಅಭೇದವಾಗಲಾರದು. ಭೇದವೇ ಎಂದರೆ ಹಾಗೆ ಹೇಳಲಾಗದು. "ಏಷತೇ ಆತ್ಮಾ" ಎಂಬ ಶೃತಿಯು ಪ್ರತ್ಯೇಕವಾಗಿಯೂ ಪರಸ್ಪರವಾಗಿಯೂ ಸರ್ವ ಸ್ಥಳ ರೂಪಗಳೂ ಅಬೇಧವೆಂದೇ ಹೇಳುವುದು. ಪರಮಾತ್ಮ ರೂಪಗಳಿಗೆ ಭೇದವಿಲ್ಲ ವಲ್ಲ.

ಕಾರ್ಯ ಕಾರಣ ಬದ್ಧೌತಾ ವಿಶ್ವೇತೆ ವಿಶ್ವತೈಜಸೌ ।
ಪ್ರಾಜ್ಞಃ ಕಾರಣಬದ್ಧಸ್ತು ದ್ವೌ ತು ತುರ್ಯೇನ ಸಿಧ್ಯತಃ । ಮಾ (2-16)
ಇತಿ ಭೇದವಚನಾನ್ನೇತಿ ಚೇತ್ ।

ಕಾರ್ಯ ಕಾರಣ ಭೇದ ಧರ್ಮಗಳು ಹೇಳಿರುವುದರಿಂದ ವಿಶ್ವಾದಿ ರೂಪಗಳು ಪರಸ್ಪರ ಅನುಗ್ರಾಹಕ ಅನುಗ್ರಾಹ್ಯ ಸಂಬಂಧದಿಂದ ಅಭೇಧ, ನಿರ್ದೋಷ ಗುಣಪೂರ್ಣತ್ವವೂ ಯುಕ್ತವಲ್ಲವೆಂಬ ಪೂರ್ವಪಕ್ಷವು.

7 **ನ ಏಷತ ಆತ್ಮಾಂತರ್ಯಾಮ್ಯಮೃತಃ । ಅಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಂ ಸರ್ವಂ । ಅಯಂ ವೈ ಹರಯೋಽಯಂ ವೈ ದಶ ಚ ಸಹಸ್ರಾಣಿ ಚ ಬಹೂನಿ ಚಾನಂತಾನಿ ಚ । ತದೇತದ್ಬ್ರಹ್ಮಾ ಪೂರ್ವಮನ ಪರಮನಂತರಮಬಾಹ್ಯಮಯಮಾತ್ಮಾ ಬ್ರಹ್ಮ ಸರ್ವಾನುಭೂರಿತ್ಯನುಶಾಸನಮಿತಿ ಪ್ರತ್ಯೇಕಮಭೇದ ವಚನಾತ್ ॥**

ಮೇಲಿನ ಪೂರ್ವ ಪಕ್ಷವು ಯುಕ್ತವಲ್ಲ "ಏಷತ ಆತ್ಮಾ ಅಯಮೇವಸ : ಮುಂತಾದ ಮೇಲೆ ಹೇಳಿದ ಶೃತಿಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಅಬೇಧ ವಚನವನ್ನು ಹೇಳಿರುವುದರಿಂದ ಈ ಬ್ರಹ್ಮನು ಪೂರ್ಣನು, ಅನಂತನು. ಆತನಿಂದ ಒಳಗೂ ಹೊರಗೂ ಇರುವವನು, ಸರ್ವಜ್ಞನು ವೇದ ವ್ಯಾಖ್ಯಾನ ಸ್ವರೂಪನು ಎಂದು ವೇದಗಳಲ್ಲಿ ಹೇಳಿದೆಯಾಗಿ ಆತನ ಸರ್ವರೂಪಗಳು ಸರ್ವಥಾ ಒಂದೇ. ಅದೇ ಬ್ರಹ ಸ್ವರೂಪವು

## ಸೂ॥ ಓಂ॥ ಅಪಿ ಚೈವಮೇಕೇ ಓಂ॥ 13

ಕೆಲವು ಶಾಖೆಗಳಲ್ಲಿ ಅಬೇಧವನ್ನೂ ಅನಂತ ರೂಪತ್ವವನ್ನೂ ಅನಂತ "ಅಮಾತ್ರ" ಎಂಬ ಶೃತಿಯು ಹೇಳುವುದರಿಂದ ಭೇದೋರೂಪೋಕ್ತಿಯು ಸ್ಥಾನ ಭೇದದಿಂದ ಯುಕ್ತವು ಎಂದರೆ ಅನಂತ ರೂಪತ್ವವು ವಿಶ್ವಾದಿ ರೂಪಗಳ ಅನಂತತ್ವ ಬ್ರಹ್ಮತ್ವವು ಅಭೇದದಿಂದಲೇ ಹೇಳುವರು ಯದ್ಯಪಿ ಅಮಾತ್ರೇ-ಭಿನ್ನಾಂಶವಿಲ್ಲದವನು ಅಭಿನ್ನಾಂಶವುಳ್ಳವನು ವಿಧ್ಯಾಜ್ಞಾನ ನಾಶಕನು. ಪ್ರಮಾಣ ರಹಿತನು

ಅನಂತ ರೂಪನು ಸುಖಾತ್ಮಕನು ಓಂಕಾರ ಸ್ವರೂಪನು ಹೀಗೆ ಪರಮಾತ್ಮನನ್ನು ತಿಳಿದವನು ಮುನಿಯು ಇತರರಲ್ಲ.

ಏವಮಭೇದೇ ನ್ಯೈವ ಚ ಶಬ್ದಾದನಂತರೂಪತ್ವಂ ಚೈಕೆ ಶಾಖಿನಃ ಪಠಂತಿ ।
ಅಮಾತ್ರೋ ಅನಂತ ಮಾತ್ರಶ್ಚ ದ್ವೈತಸ್ಯೋಪ ಶಮಃ ಶಿವಃ ।
ಓಂಕಾರೋ ವಿದಿತೋ ಏನ ಸಮುನಿ ರ್ನೇತರೆ ಜನಾಃ(ಮಾ 4-7) ಇತಿ ಶ್ರುತಿ

ಪಾಠವು ಮೇಲಿನ ವಿಷಯವನ್ನು ತಿಳಿಸುವುದು

**9. ಅಭೇದೇಪಿ ಭೇದವ್ಯಪದೇಶಃ । ಸ್ಥಾನಭೇದಾದ್ಯೈಶ್ವರ್ಯ ಯೋಗಾಚ್ಚ ಯುಜ್ಯತೆ ।**

ಅಭೇದವಾದರೂ ಸ್ಥಾನ ಭೇದವು ಆತನ ಐಶ್ವರ್ಯ ವಿಶೇಷದಿಂದ ಕೂಡುವುದು.

**10. ಬದ್ಧೋ ಬಂಧಾದಿ ಸಾಕ್ಷಿತ್ವಾದ್ಭಿನ್ನೋ ಭಿನ್ನೇಷು ಸಂಸ್ಥಿತೇಃ ।
ನಿರ್ದೋಷಾದ್ವಯರೂಪೋಪಿ ಕಥ್ಯತೇ ಪರಮೇಶ್ವರ ಇತಿ ॥**
**ಬ್ರಹ್ಮತರ್ಕೇ**

ಬಂಧಾದಿಗಳಿಗೆ ಸಾಕ್ಷಿಯಾಗಿ ಬದ್ಧನೆಂದೂ ಭಿನ್ನ ವಸ್ತುಗಳಲ್ಲಿರುವುದರಿಂದ ಭಿನ್ನನೆಂದೂನಿರ್ದೋಷನಾದ್ದರಿಂದ ಅದ್ವಯರೂಪನೆಂದೂ ಈಶ್ವರನು ಹೇಳಲ್ಪಡುತ್ತಾನೆ.

– ಇತಿ ನ ಸ್ಥಾನತೋಽಪ್ಯಧಿಕರಣಂ –

## ಅರೂಪಾಧಿಕರಣಂ

**ಈ ಅಧಿಕರಣದಲ್ಲಿ ಈಶ್ವರನಿಗೆ ಅಪ್ರಾಕೃತರೂಪವನ್ನು ಹೇಳಿದೆ.**

1. ರೂಪವತ್ತ್ವಾದ ನಿತ್ಯತ್ವನಿತ್ಯತೋ ಪಕ್ಷಿ

ಶ್ರೀ ಪರಮಾತ್ಮನಿಗೆ "ಪುರುಷ ವಿಧಂ ಅಪಿ" ಎಂಬ ವಾಕ್ಯದಿಂದ ರೂಪಶಬ್ದಿತ ವಿಗ್ರಹ ತಿಳಿಯುವುದು ರುಕ್ಮ ವರ್ಣಂ", "ಆದಿತ್ಯವರ್ಣ" ಇತ್ಯಾದಿ ಶೃತಿಗಳು ಹೇಗೆ ಪ್ರಮಾಣವೋ ಹಾಗೆಯೇ "ಅರೂಪಮವ್ಯಯಂ" "ತದರೂಪಮನಾಮಯಂ" ಎಂಬ ರೂಪಗಳು ನಿರಾಕೃತಗಳಾಗಿವೆ ಹೀಗೆ ಪೂರ್ವ ಪಕ್ಷ ರೀತ್ಯ ಅನುಮಾನವು ಪ್ರಮಾಣದಿಂದ ಭಕ್ತ್ಯೋತ್ಪತ್ತಿಗೆ ಬಾಧಕವು

**ಅತೋವಕ್ತಿ—ಅದಕ್ಕಾಗಿ ಹೇಳಿದೆ**

## ಸೂ॥ ಓಂ॥ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ॥ 14

ಪ್ರಕೃತ್ಯಾದಿ ಪ್ರವರ್ತಕತ್ವೇನ ತದುತ್ತಮತ್ವಾನ್ನೈವ ರೂಪವದ್ಬ್ರಹ್ಮ ।

ಶ್ರೀ ಪರಮಾತ್ಮನು ಪ್ರಕೃತಿಗೆ ಪ್ರವರ್ತಕನಾದ್ದರಿಂದಲೂ ಸತ್ರಾ ನಿಯಾಮಕನಾಗಿ ಉತ್ತಮನಾದ್ದರಿಂದಲೂ ಅವನ ರೂಪವು ಪ್ರಾಕೃತ ಭೌತಿಕ ರೂಪದಿಂದ ಭಿನ್ನವು ಮುಕ್ತನಿತ್ಯವು

3 ಹಿ ಶಬ್ದಾದಸ್ಥೂಲಮನಣ್ವಿತ್ಯಾದಿಶ್ರುತೇಶ್ಚ ।

"ಅಸ್ಥೂಲಂ" ಇತ್ಯಾದಿ ಶೃತಿಯಿಂದ ಪರಮಾತ್ಮನ ರೂಪವು ಪ್ರಾಕೃತ ರೂಪ ರಾಹಿತ್ಯಾಖ್ಯ ಅರೂಪವೇ ಪ್ರಕೃತಿಯಿಂದ ಆತನು ಪುತ್ತಮನಾದ್ದರಿಂದ ಪ್ರಕೃತಿ ರೂಪ ಸಂಬಂಧವಿಲ್ಲ,

ಮೇಲಿನ ಶೃತಿಯು ಶ್ರೀ ಪರಮಾತ್ಮನ ಶರೀರಕ್ಕೆ ಜೀವ ಶರೀರದಿಂದ ವಿಶೇಷತ್ವವನ್ನು ಹೇಳುವುದಿಲ್ಲ

4. ಭೌತಿಕಾನಿ ಹಿ ರೂಪಾಣಿ ಭೂತೇಭ್ಯೋಸೌ ಪರೋಯತಃ ॥
ಅರೂಪವಾನತಃ ಪ್ರೋಕ್ತಃ ಕ್ವ ತದವ್ಯಕ್ತತಃ ಪರ ಇತಿ ಮಾತ್ಸ್ಯೇ॥

ಜೀವರ ಶರೀರವು ಭೂತ ಸಂಬಂಧಿಯಾದ್ದರಿಂದ ಅನಿತ್ಯವು ಶ್ರೀ ಪರಮಾತ್ಮ ರೂಪವು ಭೂತಗಳ ಸಂಯೋಗವಿಲ್ಲದ್ದರಿಂದಲೇ ಉತ್ತಮವಾದ್ದರಿಂದಲೂ ಅನಿತ್ಯವಲ್ಲ.

## ಸೂ॥ ಓಂ॥ ಪ್ರಕಾಶವಚ್ಚಾವೈಯ್ಯರ್ಥ್ಯಂ ಓಂ॥ 15

ಲೋಕ ವಿಲಕ್ಷಣತ್ವದಿಂದ ಪ್ರಕಾಶವೆಂದು ಹೇಗೆ ಲೋಕದಲ್ಲಿ ವ್ಯವಹಾರವೋ ಹಾಗೆಯೇ ಶ್ರೀ ಪರಬ್ರಹ್ಮರೂಪ ಲೋಕ ವಿಲಕ್ಷಣತ್ವದಿಂದ ಅರೂಪನೆಂದು ವ್ಯವಹಾರ ಮಾತ್ರ ಆತನ ರೂಪವು ವಿಲಕ್ಷಣವು.

"ಯದಾಪಶ್ಯಃ ಪಶ್ಯತೆ ರುಕ್ಮವರ್ಣಂ" (ಮು 3-1-3) "ಶಾಮಾಚ್ಛ ಬಲಂ ಪ್ರಪದ್ಯೆ (ಛಾ-8-13-1) ಸುವರ್ಣಜ್ಯೋತಿಃ(ಶ್ವ-3-10)ಇತ್ಯಾದಿ ಶ್ರುತೀನಾಂ ಚ ನ ವೈಯ್ಯರ್ಥ್ಯಂ, ವಿಲಕ್ಷಣ ರೂಪತ್ವಾತ್ ।

ಮೇಲಿನ ಶ್ರುತಿಗಳಲ್ಲಿ ಹೇಳಿರುವ ಶ್ರೀ ಪರಮಾತ್ಮನ ವಿಲಕ್ಷಣ ರೂಪಗಳು ವ್ಯರ್ಥವಲ್ಲ ಸತ್ಯವೇ. ಹೃದಯಸ್ಥ ಶ್ರೀ ವಿಷ್ಣುವು "ಶ್ಯಾಮ" ರೂಪನೆಂದೂ ಉಪಾಸನಾಂತರ ವಿಶ್ವರೂಪನಾಗಿ ವ್ಯಾಪ್ತರೂಪ ಹೇಗೆ ಉಪಾಸನೆಯನ್ನು ವಿಧಿಸುವರೋ ಹೇಗೆ ಆತನ ರೂಪವು ಪ್ರಾಕೃತ ಭೌತಿಕ ರೂಪ ವಿಲಕ್ಷಣವು ನಿತ್ಯವು.

6 **ಯಥಾ ಚಕ್ಷುರಾದಿ ಪ್ರಕಾಶೇ ವಿದ್ಯಮಾನೇಪಿ ವೈಲಕ್ಷಣ್ಯಾದ ಪ್ರಕಾಶಾದಿವ್ಯವಹಾರಃ ॥**

ಹೇಗೆ ಚಕ್ಷುರಿಂದ್ರಿಯ ಪ್ರಕಾಶವು ಭಾವವಾದರೂ ವೈಲಕ್ಷಣ್ಯದಿಂದ ಅಪ್ರಕಾಶವೆಂದು ವ್ಯವಹಾರವೋ ಹಾಗೆಯೇ ಈಶ್ವರ ರೂಪಗಳು ಪ್ರಕಾಶ ರೂಪಗಳಾದ್ಯಾಗ್ಯೂ ಅಪ್ರಕಾಶ ರೂಪವೆಂದು ವ್ಯವಹಾರ ಮಾತ್ರವು. ಪರಮಾತ್ಮನ ರೂಪವು ನಿತ್ಯವು ಮತ್ತು ವಿಲಕ್ಷಣವು.

## ಸೂ॥ ಓಂ॥ ಅಹ ಚ ತನ್ಮಾತ್ರಂ ಓಂ॥ 16

"ಏಕಾತ್ಮ್ಯಂ" ಎಂಬ ಶ್ರುತಿಯು ಈಶ್ವರನಿಗೆ ಜ್ಞಾನಾನಂದೈಕ ಸ್ವರೂಪ ದೇಹವನ್ನು ಹೇಳುವುದು. ಅದು ವೈಲಕ್ಷಣ್ಯರೂಪವೇ.

ವೈಲಕ್ಷಣ್ಯಂ ಚೇಚ್ಯತೆ ರೂಪಸ್ಯ ವಿಜ್ಞಾನಾಂದ ಮಾತ್ರತ್ವಂ "ಏಕಾತ್ಮ ಪ್ರತ್ಯಯ ಸಾರಂ (ಮಾ. 2-7) ಇತಿ

ಮಾಂಡೂಕ ಶ್ರುತಿಯು ಶ್ರೀ ಪರಬ್ರಹ್ಮ ರೂಪವನ್ನು ಜ್ಞಾನಾನಂದಾತ್ಮಕ ಮುಖ್ಯ ಸ್ವರೂಪತ್ವವುಳ್ಳದ್ದಾಗಿ ಹೇಳುವುದರಿಂದ ಇತರ ಪ್ರಕೃತ್ಯಾದ್ಯ ರೂಪಗಳಿಂದ ವೈಲಕ್ಷಣ್ಯವು

ಪ್ರಧಾನನಾದ ಪೂರ್ಣನಾದ ಆತ್ಮ ಶಬ್ದ ವಾಚ್ಯನಾದ ಶ್ರೀ ಪರಮಾತ್ಮನು ಜ್ಞಾನಾನಂದಾದಿ ಸಾರಸ್ವರೂಪನು "ಐಕಾತ್ಮ್ಯಪ್ರತ್ಯಯಸಾರಂ" ಲೋಕ ವಿಲಕ್ಷಣನು

ಏಕಃ ಪ್ರಧಾನ ಉದ್ದಿಷ್ಟ ಆತ್ಮಾ ಪೂರ್ಣತ್ವತಶ್ಶ್ರುತಃ
ತದೇವಾಸ್ಯ ಸ್ವರೂಪಂ ಯದ್ಧೈಕಾತ್ಮ್ಯಂ ತೇನಕೀರ್ತಿತಂ ।
ಪ್ರತ್ಯಯೋ ಜ್ಞಾನರೂಪತ್ವಾತ್ಸಾರ ಆನಂದ ರೂಪತಃ ॥

**8. ಆನಂದ ಮಾತ್ರ ಮಜರಂ ಪುರಾಣಮೇಕಂ ಸಂತಂ ಬಹುಧಾ ದೃಶ್ಯಮಾನಂ । ತಮಾತ್ಮಸ್ಥಂ ಯೇನುಪಶ್ಯಂತಿ ಧೀರಾಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಮಿತಿ ಚತುರ್ವೇದ ಶಿಖಾಯಾಂ ॥**

ಆನಂದವೇ ಮುಖ್ಯ ಸ್ವರೂಪವು. ಯಾವಾಗಲೂ ಸ್ಥಿರವು ಅನಾದಿಯಾಗಿ ಸರ್ವೋತ್ಕೃಷ್ಟವು. ಆ ಒಬ್ಬನೇ ಆದ ದೇಹದಲ್ಲಿರುವ ಪರಮಾತ್ಮನನ್ನು ಮತ್ಸ್ಯಾದಿ ನಾನಾ ರೂಪಗಳಿಂದ ಕಾಣಲ್ಪಡುವವನನ್ನಾಗಿ ತಿಳಿದು ಸಾಕ್ಷಾತ್ಕಾರ ಪಡೆಯುವನೊ ಆ ಜ್ಞಾನಿಯೇ ಮೋಕ್ಷ ಹೊಂದುವವನು. ಇತರರು ಅಲ್ಲ.

## ಸೂ॥ ಓಂ ದರ್ಶಯತಿ ಚಾಥೋ ಅಪಿ ಸ್ಮರ್ಯತೇ ಓಂ॥ 17

ಪರ ಬ್ರಹ್ಮನಿಗೆ ಆನಂದಾತ್ಮಕತ್ವವು ಮಾತ್ರವೇ ಅಲ್ಲ. ಮತ್ತೆ ಜ್ಞಾನಕ್ಕೂ ಬ್ರಹ್ಮಾತ್ಮ ಕತ್ವವು ಹೇಳುವುದರಿಂದ ಮತ್ತು ಜ್ಞಾನಿಗಳ ವಿಜ್ಞಾನಕ್ಕೂ ಬಹುರೂಪ ತ್ವವು ಹೇಳುವುದರಿಂದ "ಶುದ್ಧ ಸ್ಫಟಿಕಂ" ಎಂಬ ವ್ಯಾಸಾದಿ ಜ್ಞಾನಿಗಳ ವಾಕ್ಯದಿಂದ ಲೂ ಜ್ಞಾನಾನಂದಾದಿಗಳು ಬ್ರಹ್ಮ ಸ್ವರೂಪವೇ ಕೇವಲಾನಂದ ಮಾತ್ರವೇ ಬ್ರಹ್ಮಾ ತ್ಮಕವಲ್ಲ ಅವನ ಶರೀರತ್ವಕ್ಕೂ ಅನ್ವಯವು.

ದರ್ಶಯತಿ ಚ ಆನಂದ ರೂಪತ್ವಂ "ತದ್ವಿಜ್ಞಾನೇನ" ಪರಿಪಶ್ಯಂತಿ ಧೀರಾಃ
ಆನಂದ ರೂಪಮಮೃತಂ ಯದ್ವಿಭಾತಿ (ಮು-2-2-8)

ಆನಂದರೂಪವಾದ್ದರಿಂದಲೇ ಸ್ವತೋ ನಾಶರಹಿತ. ಭಾಸುವಾಗುವ ದೇಹವು, ಶ್ರವಣಾದಿ ಜನಿತ ಸಾಕ್ಷಾತ್ಕಾರದಿಂದ ಜ್ಞಾನಿಗಳು ವಿಷಯೀಕರಿಸಿಕೊಳ್ಳುತ್ತಾರೆ.

10 **ಶುದ್ಧ ಸ್ಫಟಿಕಸಂಕಾಶಂ ವಾಸುದೇವಂ ನಿರಂಜನಂ ||**
**ಚಿಂತಯೀತ ಯತಿರ್ನಾನ್ಯಂ ಜ್ಞಾನರೂಪಾದೃತೇ ಹರೇರಿತಿ**
**ಚ ಮಾತ್ಸ್ಯೇ ||**

ಶುಕ್ಲವರ್ಣ ನಿರಂಜನ ವಾಸುದೇವನನ್ನು ಪ್ರಧಾನವಾಗಿ ಜ್ಞಾನಕ್ಕಾಗಿ ಧ್ಯಾನ ಮಾಡಬೇಕು ಬೇರೆ ರೂಪಗಳನ್ನು ಶ್ರೇಷ್ಠಗಳೆಂದು ಧ್ಯಾನ ಮಾಡಬಾರದು (ಇತರ ಜೀವದ ರೂಪಗಳು) ಬಹ್ಮ ತಚ್ಛರೀರಗಳ ಅಭೇದದಿಂದ ಜ್ಞಾನಾನಂದಾದಿಗಳು ಶರೀರವೇ ಆಗಿ ಶ್ರೀ ಪರಮಾತ್ಮನು ಆನಂದರೂಪನು.

ಸತ್‌ಜ್ಞಾನಾನಂದ ಶೀರ್ಷೋಽಸೌ ಸಜ್ಞಾನಾನಂದ ಬಾಹುಕಃ
ಸಜ್ಞಾನಾನಂದ ದೇಹಸ್ತು ಸಜ್ಞಾನಾನಂದ ಪಾದವಾನ್ ||
ಬ್ರಹ್ಮಣ ಸ್ತದ್ಗುಣಾನಾಂಚ ಭೇದದರ್ಶೀ ಧರಂತಮಃ ।
ಭೇದಾಭೇದ ಪ್ರದರ್ಶೀ ಚ ತಮ ಏವೋತ್ತರಂ ವಿಶೇತ್ ।
ವಿಜಾನೀ ಯಾತ್ತತೋ ಬ್ರಹ್ಮ ಸದಾಸರ್ವಗುಣಾತ್ಮಕಂ ।
ಗುಣಾನಾಂ ಚ ವಿಶೇಷೋಽಸ್ತಿ ನವಿಶೇಷಃ ಕಥಂಚನ ।
ತೇ ಸರ್ವೇಽಪಿ ಗುಣಾಃ ಪೂರ್ಣಾ ಸ್ತಚ್ಛರೀರಃ ಪರಃ ಸ್ಮೃತಃ ||
ಆನಂದ ಜ್ಞಾನಶಕ್ತ್ಯಾದಿ ದೇಹಂ ವಿಷ್ಣುಂ ತು ಯೇ ಜನಾಃ ।
ಅದೇಹಂ ಭೂತ ದೇಹಂ ವಾ ವಿದುಃ ತೇಚಾಧರಂತಮಃ ।
ತಥಾ ಪ್ರಕೃತಿ ದೇಹಜ್ಞಾಃ ಕರ್ಮದೇಹ ವಿದೋಽಪಿವಾ ।
ತಸ್ಮಾದಾನಂದ ಚಿದ್ದೇಹಂ ಚಿದಾನಂದ ಶಿರೋಮುಖಂ ।
ಚಿದಾನಂದ ಭುಜಂ ಜ್ಞಾನ ಸುಖೈಕ ಪರಮಾಂಗುಲಿಂ ।
ಆದೇಹಾದಾ ನಖಾಗ್ರೇಭ್ಯಃ ಪೂರ್ಣಚಿತ್ಸುಖಶಕ್ತಿಕಂ ।
ಪ್ರತ್ಯೇಕಂ ತು ಗುಣಾಂಸ್ತಾಂಸ್ತು ಸದಾಸರ್ವ ಗುಣಾತ್ಮಕಾನ್ ।
ಜ್ಞಾತ್ವಾ ವಿಮುಚ್ಯತೆ ವಿಷ್ಣೋಃ ಪ್ರಸಾದಾನ್ನಾನ್ಯಥೋಽಪಿಸನ್ || ಪೈಂಗಿ ಶ್ರುತಿಃ

**ಇತ್ಯರೂಪಾಧಿಕರಣಂ**

## ಉಪಮಾಧಿಕರಣಂ

ಈ ಅಧಿಕರಣದಲ್ಲಿ ಈಶ್ವರನಿಗೆ ಜೀವರುಗಳಿಂದ ಭೇದಾಭೇದವು ನಿರಾಕರಿಸ ಲ್ಪಡುವುದು

## ಸೂ॥ ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ॥ 18

ಪರಮೇಶ್ವರ ರೂಪಗಳಿಗೂ ಪರಮೇಶ್ವರನಿಗೂ ಪರಸ್ಪರ ಅನ್ಯೋನ್ಯಾ ಭಾವ ರೂಪ ಹೀನಾಧಿಕಭಾವ ರೂಪ ಮತ್ತು ಅನುಗ್ರಾಹ್ಯಾನುಗ್ರಾಹಕಾಭಾರೂಪ ಬೇದಗಳು ಯಾವುವು ಇಲ್ಲ ಅಭೇದವೆ. ಅದರ ಸಾದೃಶ್ಯದಿಂದ ಜೀವನೂ ಪರ ಮಾತ್ಮನ ಚಿತ್ಸ್ವರೂಪನಾದ್ದರಿಂದ ಜೀವರೂಪ ಪರಮಾತ್ಮ ರೂಪಗಳಿಗೆ ಭೇದವಿಲ್ಲ ವೆಂದರೆ ಹಾಗಲ್ಲ ಸೂರ್ಯಪ್ರತಿಬಿಂಬಕ ಸಾದೃಶ್ಯದಿಂದ ಭೇದವೇ.

ಯಸ್ಮಾದೇವಂ ಪರಮೇಶ್ವರ ರೂಪಾಣಾಂ ಮಿಥೊ ನಕಶ್ಚಿದ್ಭೇದಃ । ಅತಃ ಸಾದೃಶ್ಯಾಜ್ಜೀವಸ್ಯಾಪಿ ತಥಾಸ್ಯಾದಿತಿ ತಸ್ಯ ಪ್ರತಿಬಿಂಬ ತ್ವಮುಕ್ತ್ವಾ ಚ ಶಬ್ದೇನ ಭೇದಂ ದರ್ಶಯತಿ ।

ಈಶ್ವರನ ರೂಪಗಳಿಗೂ ಅಭೇದವನ್ನು ಹೇಳಿರುವುದರಿಂದ ಜೀವನೂ ಚೇತನ ವಾಹನವಾಗಿ ಮತ್ಸ್ಯಾದ್ಯವತಾರ ರೂಪಗಳಿಗೆ ಸಾದೃಶ್ಯ ರೂಪದಿಂದ ಅಭೇದವೆ ಎಂದರೆ ಹಾಗಲ್ಲ. ಜಲದಲ್ಲಿ ಪ್ರತಿಬಿಂಬಿತವಾದ ಸೂರ್ಯಬಿಂಬವು ಸೂರ್ಯನ ಸಾಕ್ಷಾ ತ್ಪ್ರತಿಬಿಂಬದಿಂದ ಭಿನ್ನವೆ ಪರಬ್ರಹ್ಮನ ಮತ್ಸ್ಯಾದ್ಯವತಾರ ರೂಪಗಳಿಗೆ ಜ್ಞಾನಾದಿ ಗುಣಗಳಿಂದ ಸಾಮ್ಯವು ಹೇಳಿದೆ. ಸೂರ್ಯ ಬಿಂಬದ ಪ್ರತಿಭಾ ಉಪಮಾನದಿಂದ ಹೇಗೆ ಸೂರ್ಯಬಿಂಬಕ್ಕೆ ವಿಶೇಷವೊ ಹಾಗೆಯೇ ಜೀವನಿಗೆ ಮತ್ಸ್ಯಾದ್ಯವತಾರದಿಂದ ವಿಶೇಷಗಳು ಇಲ್ಲ. ಉಪಮಾನ ವಾಕ್ಯವು ಜೀವನು ಪರಮಾತ್ಮ ಸಾದೃಶ ಮತ್ತು ಸರ್ವದಾ ಅವನ ಅಧೀನತ್ವ ರೂಪ ಪ್ರತಿಬಿಂಬವೇ ಆದ್ದರಿಂದ ಉಪಾಧ್ಯಧೀನತ

ಮತ್ತು ಉಪದಾನ ನಿವೃತ್ತಿಗಳಿಂದಲೂ ಪ್ರತಿ ಬಿಂಬ ನಿವೃತ್ತಿಯೂ ಅಲ್ಲ

2 **ರೂಪಂ ರೂಪಂ ಪ್ರತಿರೂಪೋ ಬಭೂವ! (ಬೃ-4-5-19) ಬಹವಃ ಸೂರ್ಯಕಾ ಯದ್ವತ್ಸೂರ್ಯಸ್ಯ ಸದೃಶಾ ಜಲೇ । ಏವಮೇವಾತ್ಮಕಾ ಲೋಕೇ ಪರಾತ್ಮಸದೃಶಾ ಮತಾ ಇತ್ಯಾದಿ ॥**

ನೀರಿನಲ್ಲಿ ಪ್ರತಿಬಿಂಬಿತವಾದ ಸೂರ್ಯ ಬಿಂಬಗಳು ಹೇಗೆ ಸೂರ್ಯನ ಸದೃಶ ಮಾತ್ರವೊ ಹಾಗೆಯೇ ಜೀವರು ಪರಮಾತ್ಮ ಪ್ರತಿಬಿಂಬರು ಸಾದೃಶ್ಯರು ಮಾತ್ರ (ಪರಮಾತ್ಮ ಸದೃಶರು ಅಲ್ಪ ಶಕ್ತಿಯುಳ್ಳವರು ಮತ್ತು ಪರಮಾತ್ಮಾಧೀನರು ಎಂದು ಮಾತ್ರ ಸಾದೃಶ್ಯವು. ಮತ್ಸ್ಯಾದಿ ರೂಪಗಳಾದರೂ ಪರಮಾತ್ಮನ ಸ್ವಾಂಶ ರೂಪಗಳು ಮತ್ತು ಸರ್ವಥಾ ಪೂರ್ಣ ಗುಣವುಳ್ಳವುಗಳು.

3. **ಅತ ಏವ ಭಿನ್ನತ್ವತದಧೀನತ್ವತತ್ಸಾದೃಶ್ಯೈರೇವ ಸೂರ್ಯಕಾದ್ಯುಪಮಾ । ನೋಪಾಧ್ಯಧೀನತ್ವಾದಿನಾ ॥**

ಜೀವರುಗಳು ಸೂರ್ಯ ಉಪಮಾನದಿಂದ ಪರಮಾತ್ಮನ ಭಿನ್ನತ್ವ, ಅಧೀನತ ಮತ್ತು ಅಲ್ಪ ಸದೃಶತ್ವಾದಿ ಧರ್ಮವುಳ್ಳವರು ಉಪಾಧ್ಯಧೀನತ್ವದಿಂದಲ್ಲ.

## ಇತ್ಯುಪಮಾಧಿಕರಣಂ

## ಅಂಬುವದಧಿಕರಣಂ

ಈ ಅಧಿಕರಣದಲ್ಲಿ ಈಶ್ವರನಲ್ಲಿ ಭಕ್ತಿಯು ಹುಟ್ಟುವುದಕ್ಕಾಗಿ ಆತನ ಜೀವದ ಸ್ವರೂಪಾಭಿವ್ಯಕ್ತಿ ರೂಪ ಫಲವು ಹೇಳಲ್ಪಡುತ್ತದೆ.

1. **ನಿತ್ಯಸಿಷ್ಣತ್ವಾತ್ಸಾದೃಶ್ಯಸ್ಯ ನಿತ್ಯಾನಂದ ಜ್ಞಾನಾ ದೇರ್ನ ಭಕ್ತಿ ಜ್ಞಾನಾದಿನಾ ಪ್ರಯೋಜನಮಿತ್ಯತೋಽಬ್ರವೀತಿ ॥**

ಮೋಕ್ಷ ಫಲವು ನಿತ್ಯಾನಂದ ಜ್ಞಾನ ಬಲರೂಪವಾದ್ದರಿಂದ ಅವು ಪರಮಾತ್ಮನ ಸಾದೃಶ್ಯದಿಂದ ನಿತ್ಯವೂ ಇರುವುದರಿಂದ ಭಕ್ತಿಜ್ಞಾನಾದಿಗಳ ಅಪೇಕ್ಷೆಯು ಬೇಡ ಯೋಗ್ಯತೆಯ ಅಭಿವ್ಯಕ್ತಿಯು ಯಾವಾಗಲಾದರೂ ಪ್ರಯತ್ನವಿಲ್ಲದೆಯಾ ಸ್ವಪ್ನದಶೆಯಂತೆ ಸಾಧ್ಯವೇ ಎಂದರೆ

## ಸೂ॥ ಓಂ ಅಂಬುವಗದಗ್ರಹಣಾತ್ತು ನ ತಥಾತ್ವಂ ಓಂ॥ 19

ಅಂಬು ಸಾದೃಶ್ಯ ಸ್ನೇಹ ಸಹಿತ ಮಾಹಾತ್ಮ್ಯ ಜ್ಞಾನ ರೂಪ ಭಕ್ತಿಯಿಂದ ವಿನಃ ಸುಖಾದ್ಯಾತ್ಮಕ ಈಶ್ವರ ರೂಪ ಸಾದೃಶ್ಯವು ಸಮ್ಯಕ್ಪ್ರಯೋಜಿಸಲ್ಪಡುವುದಿಲ್ಲವಾದ್ದರಿಂದ ಮತ್ತು ಭಕ್ತಿಯಿಂದಲೇ ಯೋಗ್ಯಸ್ವ ಸ್ವರೂಪಾಭಿವ್ಯಕ್ತ ಜನಕತ್ವವೂ ಆದ್ದರಿಂದ ಭಕ್ತಿ ಮಾಡುವುದಾವಶ್ಯಕವು

2) **ಅಂಬುವತ್ಸ್ನೇಹೇನ ಗ್ರಹಣಂ ಜ್ಞಾನಂ, ಭಕ್ತಿಂ ವಿನಾನ ತತ್ಸಾದೃಶ್ಯಂ ಸಮ್ಯವ್ಯಭಿವ್ಯಜ್ಯತೆ। ಯಮೇವೈಷವೃಣುತೆ ತೇನ ಲಭ್ಯಸ್ತಸ್ಯೈಷ ಆತ್ಮಾವಿವೃಣುತೆ ತನೂಂ ಸ್ವಾಂ (ಕಠ 2-23) ಮಿತಿ ಹಿ ಶೃತಿಃ॥**

ಅಂಬುವಿನ ಸಾದೃಶ್ಯವು ಸ್ನೇಹಾತ್ಮಕತ್ವವು ಮಾನಸ ಲಕ್ಷಣವು. ಶ್ರೀ ಪರಮಾತ್ಮನ ಮಾಹಾತ್ಮ್ಯ ಗ್ರಹಣ ಪೂರ್ವಕ ಜ್ಞಾನಾನಂದಾದಿಗಳಿಂದ ಈಶ್ವರನ ಅಭಿವ್ಯಕ್ತಿಗೆ ಸಾಧನ ಭೂತ ಭಕ್ತಿಯು ಅತ್ಯಾವಶ್ಯಕವು. ಮೇಲಿನ ಶೃತಿಯು ಶ್ರೀ ಭಗವಂತನಿಗೆ ಮಾತ್ರ ತನ್ನ ಸ್ವರೂಪಾನಂದಾದಿ ಜೀವಸ್ವರೂಪವು ಪ್ರಕಾಶಿಸಲ್ಪಡುವುದು.

3 **ಮಹಿತ್ವಬುದ್ಧಿರ್ಭಕ್ತಿಸ್ತು ಸ್ನೇಹಪೂರ್ವಾಭಿಧೀಯತೆ । ತಯೈವ ವ್ಯಜ್ಯತೇ ಸಮ್ಯಗ್ಜೀವರೂಪಂ ಸುಖಾದಿಕಮಿತಿ ಪಾದ್ಮೇ ॥**

ಸ್ಮೃತಿಯಿಂದ ಸಮರ್ಥನವು. ಮಾನಸಿಕ ಸ್ನೇಹ ಸಹಿತ ಶ್ರೀವಿಷ್ಣುವಿನ ಸ

ಮಾಹಾತ್ಮ್ಯಜ್ಞಪ್ತಿಯೇ ಭಕ್ತಿಯು ಆದ್ದರಿಂದ ಆ ಭಕ್ತಿಯಿಂದ ಜೀವನ ಸ್ವರೂಪಾಭಿವ್ಯಕ್ತಿಯನ್ನು ಹೊಂದಲು ಸಾಧ್ಯವು.

ಮಹಾತ್ಮ್ಯ ಜ್ಞಾನ ಪೂರ್ವಸ್ತು ಸುಧೃಡ ಸರ್ವತೋಧಿಕಃ ।
ಸ್ನೇಹೋ ಭಕ್ತಿರಿತಿ ಪ್ರೋಕ್ತಃ ॥

ಜ್ಞಾನ ಜನ್ಯ ಭಕ್ತಿಯಿಂದ ಚೆನ್ನಾಗಿ ಸ್ವರೂಪಾಭಿ ವ್ಯಕ್ತಿಯು ಜ್ಞಾನಾನಂತರ ಪುನಃ ಅನುಷ್ಠಾನ ಮಾಡಿದ ಭಕ್ತಿಯಿಂದ ಕೂಡಿದ ಉಪಾಸನದಿಂದ ನಿವೃತ್ತಿಕರ್ಮ ಜನ್ಯ ಈಶ್ವರ ಪ್ರಸಾದದಿಂದ ಹಿಂದೆ ಅಭಿವ್ಯಕ್ತವಾಗದ ಆನಂದಾದಿ ಅಭಿವ್ಯಕ್ತಿ ರೂಪ ವಿಚಿತ್ರಾನುಭವ ಆನಂದ ವೈಚಿತ್ಯವು ಹೊಂದಲ್ಪಡುವುದು

ಉಪಾಸಯಾ ಕರ್ಮಭಿಶ್ಚ ಭಕ್ತ್ಯಾಚಾನಂದ ಚಿತ್ರತಾ-ಪಾದ್ಮ

ಇತ್ಯಂಬುವದಧಿಕರಣಂ

## ವೃದ್ಧಿಹ್ರಾಸಾಧಿಕರಣಂ

ಈ ಅಧಿಕರಣದಲ್ಲಿ ಭಗವನ್ಮಹಿಮೋಪೇತ ಭಕ್ತಿಯು ಪುರುಷರ ತಾರತಮ್ಯಾನುಸಾರೆ ಜನ್ಯವು ಮತ್ತು ಪರಮಾತ್ಮನು ತಾರತಮ್ಯಾನುಸಾರ ಜ್ಞಾನ ಫಲ ಮಾತ್ರವನ್ನೇ ಅನುಗ್ರಹಿಸುವನು ಎಂದು ಸಮರ್ಥನವು. ಸಾಧಕ ಜೀವರಲ್ಲಿ ಭಕ್ತಿಯೂ ಅದರ ಫಲವೂ ಏಕ ಪ್ರಕಾರವಾಗಿಲ್ಲ.

ಜ್ಞಾನ ಶಬ್ದವು ಪರೋಕ್ಷ ಜ್ಞಾನಾತ್ಮಕವು. ಭಕ್ತಿಯು ಅಪರೋಕ್ಷ ಜ್ಞಾನ ಸಾಧನವು. ಸ್ನೇಹದಂತೆ ಬಹುಮಾನಾತ್ಮಕ ಭಾವವು ಅಪರೋಕ್ಷ ಜ್ಞಾನ ಸಾಧನವು.

**ಸೂ॥ ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸ
ಸಾಮಂಜಸ್ಯಾದೇವಂ ಓಂ॥ 20**

ಭಕ್ತ್ಯಾದಿ ಗುಣಗಳ ವೃದ್ಧಿ ಹ್ರಾಸ ಫಲಗಳಿಗೆ ಸಾಧಕ ಜೀವರ ಭಕ್ತ್ಯಾಧಿಕ್ಯ ಅಲ್ಪತ್ವಗಳೇ ಕಾರಣಗಳಲ್ಲ ಮಹದಲ್ಪ ಫಲಗಳು ಭಕ್ತಿಯಲ್ಲಿ ಅಂತರ್ಭಾವವನ್ನು ಹೊಂದಿರುವುದರಿಂದ ಬ್ರಹ್ಮ ಮತ್ತು ಇತರ ಜೀವರುಗಳಲ್ಲಿ ಭಕ್ತಿಯ ಅವರ ತಾರ ತಮ್ಯಾನು ಗುಣವಾಗಿಯೇ ಇರುತ್ತವೆ ಫಲದಾತೃತ್ವದಲ್ಲಿ ಬ್ರಹ್ಮಾದಿ ಜೀವರುಗಳ ಮಹದಲ್ಪ ಫಲಸಾಧನವು ಜೀವ ತಾರತಮ್ಯಾನುಸಾರ ಫಲದಾತೃತ್ವದಿಂದ ಶ್ರೀ ಪರ ಮಾತ್ಮನಿಗೆ ವೈಷಮ್ಯ ದೋಷವಿರುವುದಿಲ್ಲ. ಭಕ್ತಿಯು ಜೀವಂ ತಾರತಮ್ಯಾನುಸಾರ ವಾಗಿಯೇ ಫಲದಾಯಕವು

2. **ತಸ್ಯ ಚ ಭಕ್ತಿಜ್ಞಾನಾದೇರ್ವೃದ್ಧಿಹ್ರಾಸಭಾಕ್ತ್ವಂ ವಿದ್ಯತೆ ಬ್ರಹ್ಮಾದೀನಾಮುತ್ತಮಾನಾಂ ಸರ್ವೇಷಾಂ ಭಕ್ತ್ಯಾತ್ವೇಂತ ರ್ಭಾವಾತ್ ॥**

ಏವಂ ಭಕ್ತ್ಯಾದಿ ವಿಶೇಷಾಂಗೀಕಾರಾ ದೇವೇಶ್ವರಸ್ಯ ಬ್ರಹ್ಮಾದೀನನ್ಯಾನ್ ಪ್ರತಿ ಚ ಸಾಮಂಜಸ್ಯಂಭವತಿ ।

ಜೀವರ ಭಕ್ತಿಗಳ ವಿಶೇಷವು ಅವರುಗಳ ತಾರ ತಮ್ಯಗಳನ್ನು ಅನುಸರಿಸುವುದ ರಿಂದ ಫಲವೂ ತಾರತಮ್ಯಾನುಸಾರವಾಗಿ ಈಶ್ವರನಿಗೆ ಯುಕ್ತವೇ

3. **ಸಾಧನಸ್ಯೋತ್ತಮತ್ವೇನ ಸಾಧ್ಯಂ ಚೋತ್ತಮಮಾಪ್ನುಯುಃ । ಬ್ರಹ್ಮಾದಯಃ ಕ್ರಮೇಣೈವ ಯಥಾನಂದ ಶ್ರುತೌ ಶ್ರುತಾ ಇತಿ ಬ್ರಾಹ್ಮೇ ॥**

ಬ್ರಹ್ಮಾದಿ ಜೀವರಾಶಿಯ ಜೀವರುಗಳು ಉತ್ತಮ ಸಾಧನಾನುಷ್ಠಾನದಿಂದಲೇ ತಮ್ಮ ತಮ್ಮ ತಾರತಮ್ಯ ಯೋಗ್ಯತೆಗೆ ತಕ್ಕಂತೆ ಸಾಧ್ಯವಾದ ಉತ್ತಮ ಫಲವನ್ನು ಹೊಂದುವರು. ಈ ಫಲಗಳು ಆನಂದ ಶೃತಿಯಿಂದ ಭೇದವುಳ್ಳವುಗಳೇ

4 **ಕುತಃ**

ಫಲದ ವೃದ್ಧಿಹ್ರಾಸ ವ್ಯತ್ಯಾಸವು ಯಾವ ಕಾರಣದಿಂದ ಎಂಬ ಪ್ರಶ್ನೆಗೆ ಉತ್ತರವು "ಅಥಾತ್" ಎಂಬ ತೈತರೀಯ ಶೃತಿಯಲ್ಲಿಯೂ "ಯಥೇತಿ" ಸ್ಮೃತಿಯಲ್ಲಿಯೂ ಫಲಗಳಲ್ಲಿ ತಾರತಮ್ಯವನ್ನು ಹೇಳಿರುವುದರಿಂದ ವೃದ್ಧಿ ಹ್ರಾಸ ಫಲಗಳ ವ್ಯತ್ಯಾಸವು ಯುಕ್ತವೇ.

ಕುತಃ–ಏಕೆಂದರೆ

## ಸೂ॥ ಓಂ ದರ್ಶನಾಚ್ಚ ಓಂ॥ 21

"ಅಥಾತಃ ಆನಂದಸ್ಯ ಮೀಮಾಂಸಾ ಭವತಿ (ತೈ 2-8) ಇತ್ಯಾರಭ್ಯ ಬ್ರಹ್ಮ ಪರ್ಯಂತೇಷು ಸುಖ ವಿಶೇಷ ದರ್ಶನಾತ್

ಮನುಷ್ಯೋತ್ತಮರನ್ನಾರಂಭಿಸಿ ಬ್ರಹ್ಮ ಪರ್ಯಂತ ಸರ್ವ ಜೀವರುಗಳಲ್ಲಿಯೂ ತಾರತಮ್ಯಾನುಸಾರ ಆನಂದಜ್ಞಾನಾದಿಗಳ ಹ್ರಾಸ ವೃದ್ಧಿಯನ್ನೂ ಕ್ರಮವಾಗಿ ಹೇಳುವುದರಿಂದ ಮನುಷ್ಯೋತ್ತಮರು ಮನುಷ್ಯ ಗಂಧರ್ವರು, ದೇವಗಂಧರ್ವರು ಅಪ್ರಮುಖ ದೇವತೆಗಳು, ಅಜಾನಜ ಕರ್ಮ ದೇವತೆಗಳು, ತತ್ವಾಭಿಮಾನಿ ದೇವತೆಗಳು ಈ ಕ್ರಮ ತಾರತಮ್ಯಾಭಿವೃದ್ಧಿ ಪೂರ್ವಕ ಅಧಿಕ ಫಲವುಳ್ಳವರುಗಳು ಚತುರ್ಮುಖನು ಅತ್ಯಧಿಕ ಫಲವುಳ್ಳವನು

5. ಚ ಶಬ್ದಾತ್ ಸ್ಮೃತಿ ಯಥಾಭಕ್ತಿ ವಿಶೇಷೋತ್ರ ದೃಶ್ಯತೇ
ಪುರುಷೋತ್ತಮೇ ತಥಾಮುಕ್ತಿ ವಿಶೇಷೋಪಿ ಜ್ಞಾನಿನಾಂಲಿಂಗ
ಭೇದನೆ ॥ ಇತಿ

ಸಂಸಾರದಲ್ಲಿ ಪರಮಾತ್ಮನಲ್ಲಿ ಭಕ್ತಿ ವಿಶೇಷವೇ ಮುಕ್ತಿಯಲ್ಲಿ ಫಲ ವಿಶೇಷಕ್ಕೆ ಕಾರಣವು ತಾರತಮ್ಯಾನುಗುಣವಾಗಿ ಪೂರ್ಣಫಲ ಪ್ರಾಪ್ತಿಯು. ವ್ಯತಿರಿಕ್ತವಾಗಿ ಅಲ್ಲ.

ಇತಿ ವೃದ್ಧಿಹ್ರಾಸಾಧಿಕರಣಂ

### – ಪ್ರಕೃತ್ಯಧಿಕರಣಂ –

ಈ ಅಧಿಕರಣದಲ್ಲಿ ಶ್ರೀ ಪರಮಾತ್ಮನಿಗೆ ವಿಶ್ವ ಪಾಲಕತ್ವದ ಸಮರ್ಥನವು.

1 ಸೃಷ್ಟಿ ಸಂಹಾರಕರ್ತೃತ್ವಮೇವಾಸ್ಯ ನ ಪಾಲಕತ್ವಂ ಸ್ವತಃ ಸಿದ್ಧೇರಿತ್ಯತ ಆಹ ॥

ಈ ಜಗತ್ಸೃಷ್ಟಿ ಸಂಹಾರ ಕರ್ತೃತ್ವವು ಈ ಪರಮಾತ್ಮನಿಂದಲೇ ಆದ್ದರಿಂದ ಆತನೇ ಸಂಹಾರ ಕರ್ತೃವು ಆಗಲಾರನು. ಸಂಹಾರಕನು ಪಾಲಕನಾಗಲಾರನೆಂಬ ಅನುಮಾನವು.

2. ಅತ ಆಹ—ಅದಕ್ಕಾಗಿ ಹೇಳಿದೆ.

## ಸೂ॥ ಓಂ॥ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋಽಬ್ರವೀತಿ ಚ ಭೂಯಃ ಓಂ॥ 22

ನೈತಾವದೇನೇತಿ" ಎಂಬ (ಋ-10-31-8) ಶೃತಿಯು ಈಶ್ವರನಿಗೆ ಸೃಷ್ಟಿ ಸಂಹಾರ ಕರ್ತೃತ್ವ ಮಾತ್ರವನ್ನೇ ಹೇಳುವುದಲ್ಲ ಪಾರಿಕ ಶಕ್ತಿಯನ್ನು ಹೇಳುವುದು ಪಾಲಕತ್ವದಿಂದಲೇ ಸೃಷ್ಟಿಯೆಂದು ಸೂಚಿಸಿ ಶ್ರೀ ಪರಮಾತ್ಮನ ಸರ್ವ ಕರ್ತೃತ್ವವು ಸಾಧಿಸಲ್ಪಟ್ಟಿದೆ ಶ್ರೀ ಪರಮಾತ್ಮನು 14 ಲೋಕಗಳನ್ನು ಸೃಷ್ಟಿಸಿ ಅವುಗಳ ಧಾರಣ ಪೋಷಣೆಗಳಿಂದ ಮೋಕ್ಷಾದಿ ಫಲಧಾತೃವು ಸಂಹಾರ ಕರ್ತೃವು ಆತನದೇ ಎಂದು ಹೇಳಿದೆ.

ಉಕ್ತಂ ಸೃಷ್ಟಿ ಸಂಹಾರ ಕರ್ತೃತ್ವಮಾತ್ರಂ ಪ್ರತಿಷಿಧ್ಯ ತತೋಽಧಿಕಂಬ್ರವೀತಿ ।
"ನೈವಾಪದೇನಾ ಪರೋ ಅನ್ಯದಸ್ತ್ಯುಕ್ಷಾ ಸದ್ಯಾವಾ ಪೃಥಿವೀಭಬರ್ತಿ । ಇತಿ (ಋ-10-31-8)

ಸೃಷ್ಟಿ ಸಂಹಾರ ಕರ್ತೃತ್ವಮಾತ್ರ ವಲ್ಲದೆ ಪಾಲನಾಖ್ಯ ಗುಣವನ್ನು ಆತನಲ್ಲಿಯೇ ಹೇಳಿದೆ.

"ಪಾತಾಲಮೇತಸ್ಯ ಹಿ ಪಾದ ಮೂಲಂ ಲೋಮಾನಿವೃಕ್ಷಾದಯಃ"
ಇತಿ ಸ್ಮೃತಿಯು

3 ಸೃಷ್ಟಿಂ ಚ ಪಾಲನಚ್ಚೈವಂ ಸಂಹಾರಂ ನಿಯಮಂ ತಥಾ ।
ಏಕಂ ಏವ ಕರೋತೀರ್ತಿ ಸರ್ವಸ್ಯ ಜಗತೋ ಹರಿರಿತಿ ಬ್ರಹಾಂಡೆ ॥

ಶ್ರೀ ಹರಿಯು ಈ ಪ್ರಪಂಚಕ್ಕೆ ಸೃಷ್ಟಿ, ಸ್ಥಿತಿ ಸಂಹಾರ ನಿಯಮನಾದಿ ಅಷ್ಟ ಕರ್ತೃತ್ವವನ್ನೂ ಒಬ್ಬನೇ ಮಾಡುವನು.

– ಇತಿ ಪ್ರಕೃತ್ಯಧಿಕರಣಂ –

– ಅವ್ಯಕ್ತತ್ವಾಧಿಕರಣಂ –

ಈ ಅಧಿಕರಣದಲ್ಲಿ ಭಗವಂತನಲ್ಲಿ ಭಕ್ತಿ ಮಾಡಲು ಕರ್ತವ್ಯತಾ ಸಮರ್ಥನೆಯನ್ನು ಹೊಂದಲು ಯೋಗ್ಯತ್ವದ ಸಮರ್ಥನವು

1. ಪರವ ತ್ಮಾ ಪರೋಕ್ಷ್ಯಂ ಚ ತತ್ಪ್ರಸಾದೇವ ನ ಜೀವಶಕ್ತ್ಯೇತಿ
ವಕ್ತುಮುಚ್ಯತೇ ॥

ಶ್ರೀ ಪರಮೇಶ್ವನು ಸ್ವತಃ ಅವ್ಯಕ್ತನಾದಾಗ್ಯೂ ಆತನ ಅಪರೋಕ್ಷ ದರ್ಶನವು ಅವನಲ್ಲಿ ಭಕ್ತಿಯಿಂದಸಾಧ್ಯವಾದ ಪ್ರಸಾದದಿಂದ ಮಾತ್ರ ಸಾಧ್ಯವು. ಜೀವನ ಶಕ್ತಿದ್ವಾರ ಸಾಧ್ಯವಲ್ಲ. ಭಕ್ತಿಯೇ ಆತನು ವ್ಯಕ್ತನಾಗುವುದಕ್ಕೆ ಸಾಧನವು.

## ಓಂ ॥ ಓಂ॥ ತದವ್ಯಕ್ತಮಾಹ ಹಿ ಓಂ॥ 23

**ಅವ್ಯಕ್ತಮೇವ ತದ್ಬ್ರಹ್ಮ ಸ್ವತಃ**

ಶ್ರೀ ಪರಮಾತ್ಮನು ಸ್ವತಃ ಅವ್ಯಕ್ತ ಸ್ವರೂಪನಾದ್ದರಿಂದ ಪುರುಷ ಪ್ರಯತ್ನದಿಂದಲೇ ಆತನನ್ನು ಅಪರೋಕ್ಷೀಕರಿಸಲು ಸಾಧ್ಯವಲ್ಲ "ಅವ್ಯಕ್ತಂ ನಿಷ್ಕಲಂ" ಎಂಬ ಶೃತಿಯಲ್ಲಿ ಪರಮಾತ್ಮನ ಅವ್ಯಕ್ತತ್ವವನ್ನು ಹೇಳಿದೆ.

2. **ಅರೂಪಮಕ್ಷರಂ ಬ್ರಹ್ಮ ಸದಾಽವ್ಯಕ್ತಂಚ ನಿಷ್ಕಲಂ ॥**

**ಯತ್ ಜ್ಞಾತ್ವಾ ಮುಚ್ಯತೇ ಜಂತುರಾನಂದಶ್ಚಾಕ್ಷಯೋ ಭವೇದಿತಿ ಕೌಂಠರವ್ಯಶೃತಿಃ ॥**

ಶ್ರೀ ಪರಮಾತ್ಮನು ಸ್ವಭಾವತಃ ಅವ್ಯಕ್ತ ಸ್ವರೂಪವುಳ್ಳವನು ಮತ್ತು ಬಿನ್ನಾಂಶ ಶೂನ್ಯನು ಈ ಧರ್ಮಗಳುಳ್ಳ ಪರಮಾತ್ಮನನ್ನು ಅಪರೋಕ್ಷಕರಿಸಿಕೊಂಡ ಜೀವನು ಅಕ್ಷಯವಾದ ಸ್ವರೂಪ ಭೂತ ಆನಂದವನ್ನು ಹೊಂದುವನು

## ಸೂ॥ ಓಂ॥ ಅಪಿಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಂ ಓಂ॥ 24

ಭಕ್ತಿ ರಹಿತ ಆರಾಧನೆಯಿಂದ ಪರಮಾತ್ಮನನ್ನು ವ್ಯಕ್ತೀಕರಿಸಿಕೊಳ್ಳಲು ಸಾಧ್ಯವಲ್ಲ. ಜ್ಞಾನಿಗಳಿಗೆ ಮಾತ್ರ ದರ್ಶನ ಕೊಡುವ ಸೂಕ್ಷ್ಮತ್ವಕಾರಣಾನುಮಾನದಿಂದ ಇದು ಸಿದ್ಧವು. ಆತನು ಸ್ವಭಾವತಃ ಸೂಕ್ಷ್ಮವಸ್ತುಗಳಿಗಿಂತಲೂ ಅತಿ ಸೂಕ್ಷ್ಮನಾಗಿ ಭಕ್ತಿಪೂರ್ಣ ಸಂಮ್ಯಕ್ಪೂಜೆಯಿಂದ ಜ್ಞಾನಿಗಳಿಗೆ ಪ್ರತ್ಯಕ್ಷ ಎಂದು ಹೇಳಿದೆ ಜ್ಞಾನಿಗಳ ಭಕ್ತಿ ಪೂಜೆಯಿಂದ ಸಂತುಷ್ಟನಾಗಿ ತನ್ನ ಅಚಿಂತ್ಯಾದ್ಭುತ ಶಕ್ತಿ ದ್ವಾರ ವ್ಯಕ್ತನಾಗುವನು.

4. **ನ ತಮಾರಾಧಯಿತ್ವಾಪಿ ಕಶ್ಚಿದ್ವ್ಯಕ್ತೀ ಕರಿಷ್ಯತಿ ॥
ನಿತ್ಯಾವ್ಯಕ್ತೋ ಯತೋ ದೇವಃ ಪರಮಾತ್ಮಾ ಸನಾತನ ಇತಿ ಬ್ರಹ್ಮವೈವರ್ತೇ ।**

ಶ್ರೀ ಪರಮಾತ್ಮನನ್ನು ಪೂಜಿಸಿದಾಗ್ಯೂ ಆತನ ಇಚ್ಛೆಯಿಲ್ಲದೆ ಯಾರೂ ಆತನ ದರ್ಶನವನ್ನು ಹೊಂದಲು ಸಾಧ್ಯವಲ್ಲ ಆತನು ಸ್ವತಃ ಸ್ವತಂತ್ರನು ಶ್ರೇಷ್ಠನು ನಿತ್ಯಾವ್ಯಕ್ತ ಸ್ವರೂಪನು. ಜ್ಞಾನಿಗಳ ಪ್ರತ್ಯಕ್ಷ ಸಿದ್ಧ ವಾಕ್ಯಗಳಿಂದಲೇ ವ್ಯಕ್ತನಾಗುವ

ವಿಷಯುವು ತಿಳಿದುಬರುವುದು

5 ನಿತ್ಯಾವ್ಯಕ್ತರೂಪೇಣ ತಥೈವ ತಿಷ್ಠತಿ । ವ್ಯಕ್ತಂ ಕಿಂಚಿದ್ರೂಪಂ ಗೃಹೀತ್ವಾ ದೃಶ್ಯತೇ । ಯಥಾಗ್ನ್ಯಾದಯಸ್ತನ್ಮಾತ್ರಾರೂಪೇಣಾ ದೃಶ್ಯಾ ಅಪಿ ಸ್ಥೂಲ ರೂಪೇಣ ದೃಶ್ಯಂತೇ ಏವಮಿತಿ ಚೇನ್ನ ॥

ನಿತ್ಯಾವ್ಯಕ್ತ ರೂಪನಾದರೂ ಯಾವುದೋ ಒಂದು ರೂಪದಿಂದ ಕಾಣಿಸಿಕೊಳ್ಳುವನು ಅಗ್ನ್ಯಾದಿ ದೇವತೆಗಳು ಮೂಲರೂಪದಿಂದ ಅದೃಶ್ಯರಾದರೂ ಸ್ಥೂಲರೂಪ ಪ್ರದರ್ಶನ ಕೊಡುವಂತೆ ದರ್ಶನವಾಗಬಹುದಲ್ಲವೆ ಅಂದರೆ ಹಾಗಲ್ಲ

## ಸೂ॥ ಓಂ॥ ಪ್ರಕಾಶವಚ್ಚಾವೈಶೇಷ್ಯಂ ಓಂ॥ 25

ಅಗ್ನ್ಯಾದಿವತ್ಸ್ಥೂಲಸೂಕ್ಷ್ಮತ್ವ ವಿಶೇಷಾಭಾವಾತ್ ।

ಅಗ್ನಿ ದೇವತೆಯು ಪ್ರಕಾಶದಿಂದ ಸ್ಥೂಲ ರೂಪದಿಂದ ವ್ಯಕ್ತನೂ ಸೂಕ್ಷ್ಮ ರೂಪದಿಂದ ಅವ್ಯಕ್ತತ್ವನು ಹಾಗೆ ಶ್ರೀ ಪರಮಾತ್ಮನ ಸ್ವಭಾವವಲ್ಲ ಆತನು ಸ್ವಭಾವತಃ ಅವ್ಯಕ್ತನೆ ಸ್ಥೂಲ ಸೂಕ್ಷ್ಮತ್ವವು ಆತನಲ್ಲಿಲ್ಲ.

7. ನಾಸೌ ಸೂಕ್ಷ್ಮೋ ನ ಸ್ಥೂಲಃ ಪರ ಏವ ಸ ಭವತಿ ತಸ್ಮಾದಾಹುಃ ಪರಮ ಇತೀತಿ ಮಾಂಡವ್ಯಶೃತೇಃ ॥

ಶ್ರೀ ಪರಮಾತ್ಮನು ಯಾವ ರೂಪದಿಂದಲೂ ಸೂಕ್ಷ್ಮ ಸ್ಥೂಲನಲ್ಲ ಮತ್ತೆ ಸರ್ವ ರೂಪಗಳಿಂದಲೂ ಪರಮ ಸೂಕ್ಷ್ಮನೇ ಆದ್ದರಿಂದಲೇ ಆತನನ್ನು ಪರಮನೆಂದು ಜ್ಞಾನಿಗಳು ಹೇಳುವರು.

8. ಸ್ಥೂಲಸೂಕ್ಷ್ಮ ವಿಶೇಷೋತ್ರ ನ ಕ್ವಚಿತ್ಪರಮೇಶ್ವರೇ । ಸರ್ವತ್ರೈಕ ಪ್ರಕಾರೋಽಸೌ ಸರ್ವರೂಪೇಷ್ವಜೋ ಯತ ಇತಿ ಗಾರುಡೇ ॥

ಪರಮಾತ್ಮನ ಯಾವ ರೂಪಗಳೂ ಸ್ಥೂಲಸೂಕ್ಷ್ಮವೆಂದು ವಿಭಾಗಿಸಲು ಸಾಧ್ಯ

ವಲ್ಲ ಆತನು ಸರ್ವ ರೂಪಗಳಲ್ಲಿಯೂ ನಿತ್ಯನೂ ಅವ್ಯಕ್ತನು, ಮತ್ತು ಜನನ ರಹಿತನು

9 ಅವ್ಯಕ್ತ ವ್ಯಕ್ತ ಭಾವೌ ಚ ನ ಕ್ವಚಿತ್ಪರಮೇಶ್ವರೇ ।
ಸರ್ವತ್ರವ್ಯಕ್ತರೂಪೇಯಂ ಯತ ಏವ ಜನಾರ್ದನ ಇತಿ ಚ
ಕೌರ್ಮೇ ।

ಪರಮೇಶ್ವರನಲ್ಲಿ ವ್ಯಕ್ತಾವ್ಯಕ್ತ ಭಾವಗಳಾವುವು ಹೊಂದುವುದಿಲ್ಲ ಆದ್ದರಿಂದಲೇ ಜನಾರ್ಧನ ನಾಮಧೇಯನು ಸರ್ವ ಜೀವರಿಗೂ ಸಂಸಾರವನ್ನು ಹೊಂದಿಸುವನು

10 ತರ್ಹಿ ಕಿಂ ಯತ್ನೇನೇತ್ಯತತ ಆಹ ।

## ಸೂ॥ ಓಂ॥ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ಓಂ॥ 26

ವಿಷಯಭೂತೇ ತಸ್ಮಿನ್ನೇವ ಶ್ರವಣಾದ್ಯಭ್ಯಾಸಾತ್ಪ್ರಕಾಶಶ್ಚ ಭವತಿ ।

ಹಾಗಾದರೆ ವ್ಯಕ್ತತ್ವವು ಯಾವ ಪ್ರಯತ್ನದಿಂದ ಸಾಧ್ಯವು ಎಂದರೆ ಬ್ರಹ್ಮನನ್ನೇ ವಿಷಯೀಕರಿಸಿದ ಶ್ರವಣಾದಿಗಳ ಅಭ್ಯಾಸದಿಂದ ಸಾಧ್ಯವು. ಶ್ರೀ ಪರಮಾತ್ಮನನ್ನೆ ವಿಷಯವಾಗಿ ಶ್ರವಣ. ಮನನ, ಆವರ್ತನಾದಿಗಳನ್ನು ಭಕ್ತಿ ಪೂರ್ವಕವಾಗಿ ಮಾಡಿದಲ್ಲಿ ತನ್ನ ವಿಷಮುಕಾಪರೋಕ್ಷವನ್ನು ಕರುಣಿಸುವನು.

11. ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ
ನಿದಿಧ್ಯಾಸಿತವ್ಯ ಇತಿ ಶ್ರುತೇಃ ॥ (ಬೃ-4-4-5)

ಮೇಲಿನ ಶೃತಿಯು ಬ್ರಹ್ಮನ ಉಪಾಸನವು ನಿಧಿಧ್ಯಾಸನಾದಿ ಕರ್ಮಪೂರ್ವಕ. ಆತನ ಪ್ರತಿಮಾಧಾರ ಉಪಾಸನೆಯು ಯುಕ್ತವು.

12. ನಿತ್ಯಾವ್ಯಕ್ತಸ್ಯ ಕಥ ಪ್ರಕಾಶ ಇತ್ಯತ ಉಚ್ಯತೆ ॥

ನಿತ್ಯಾವ್ಯಕ್ತನಿಗೆ ಪ್ರಕಾಶವು ಹೇಗೆ ಸಾಧ್ಯವು ಎಂದರೆ

**ಸೂ|| ಓಂ|| ಅತೋಽನಂತೇನ ತಥಾಹಿ ಲಿಂಗಂ ಓಂ|| 27**

ಅವ್ಯಕ್ತತ್ವ ಪ್ರತ್ಯಕ್ಷತ್ವ ಧರ್ಮಗಳೆರಡರಲ್ಲಿಯೂ ಪ್ರಮಾಣವಿರುವುದರಿಂದ ಈ ಗುಣಗಳಿಗೆ ಅನುಗುಣವಾಗಿ ಅಧಿಕಾರಿ ಜೀವನಿಗೆ ಸಾಧನ ಸಾಮರ್ಥ್ಯವನ್ನು ಪರಬ್ರಹ್ಮ ಪ್ರಸಾದ ರೂಪವಾಗಿ ದೊರತು ಅಪರೋಕ್ಷವಾಗುವುದು. ಶ್ರೀ ಪರಮಾತ್ಮನಿಗೆ ಅಪರಿಮಿತ ಸಾಮರ್ಥ್ಯದ್ಯೋತಕವಾಗಿ ಸಾಧ್ಯವು.

ಉಭಯತ್ರ ಪ್ರಮಾಣಾಭಾವಾತ್ ತತ್ರಸಾದಾ ದೇವ ಪ್ರಕಾಶೋಭವತಿ ।
"ತಸ್ಯಾಭಿಧ್ಯಾ ನಾಽದ್ಯೋಜನಾತ್ತತ್ವ ಭಾವಾದ್ಭೂಯಶ್ಚಾಂತೆ ವಿಶ್ವಮಾಯಾ ನಿವೃತ್ತಿಃ (ಶ್ವೇ–1–10) ಇತಿ ಲಿಂಗಾತ್ ॥

ಶೃತಿ–ಸಂಸಾರ ಬಂಧ ರೂಪ ಮೋಕ್ಷವು ಶ್ರೀ ಪರಮಾತ್ಮನ ಪ್ರಸಾದ ಸಾಧ್ಯವಾದ್ದರಿಂದ ಜೀವರಿಗೆ ಉಪಸನಾಜನಿತ ಪ್ರಸಾದದಿಂದಲೇ (ಪಾರಂಪರ್ಯವಾಗಿ) ದರ್ಶನವು.

13. **ಯುಜ್ಯತೆ ಚ ತಸ್ಯಾನಂತಶಕ್ತಿತ್ವಾತ್ ।**

14. **ನಿತ್ಯಾವ್ಯಕ್ತೋಽಪಿ ಭಗವಾನೀಕ್ಷ್ಯತೇ ನಿಜಶಕ್ತಿತಃ ।**
**ತಮೃತೇ ಪರಮಾತ್ಮಾನ ಕಃ ಪಶ್ಯೇತಾಮಿತಂ ಪ್ರಭುಮಿತಿ**
**ನಾರಾಯಣಾಧ್ಯಾತ್ಮೇ ॥**

ಶ್ರೀ ಭಗವಂತನೂ ನಿತ್ಯಾವ್ಯಕ್ತ ಸ್ವರೂಪನಾದಾಗ್ಯೂ ಅಪರಿಮಿತಾನಂದ ಶಕ್ತಿಯಿಂದಲೇ ಗೋಚರನಾಗುವನು ಆತನ ಪ್ರಸಾದವಿಲ್ಲದೆ ಹೇಗೆ ತಾನೆ ಆತನ ದರ್ಶನವು ಸಾಧ್ಯ? ಆತನು ಸರ್ವಶಕ್ತ ಸರ್ವಶ್ರೇಷ್ಠ ಸ್ವಾಮಿಯು.

ಇತಿ ಅವ್ಯಕ್ತಾಧಿಕರಣಂ

- ಅಹಿ ಕುಂಡಲಾಧಿಕರಣಂ -

ಈ ಅಧಿಕರಣದಲ್ಲಿ ಭಗವಂತನಿಗೆ ಗುಣಿತ್ವವು ಸಮರ್ಥಿಸಲ್ಪಡುವುದು

1. ಸ್ವರೂಪೇಣಾ ನಂದಾದಿನಾ ಕಥಮಾನಂದಿತ್ವಾದಿರಿತಿ ।

ಶ್ರೀ ಪರಮಾತ್ಮನಲ್ಲ ಸ್ವರೂಪಶಃ ಆನಂದತ್ವಾದಿಗಳು ಕೂಡಲು ಸಾಧ್ಯವಲ್ಲ, ಕೆಂಪರೆ ಬ್ರಹ್ಮನು ಅಗುಣನು. ಆನಂದಾದಿ ಸ್ವರೂಪವೂ ಆನಂದಿತ್ವಾದಿಗುಣಿಯಕ್ಕೂ ಆಗಲು ಸಾಧ್ಯವಲ್ಲ ಪ್ರಪಂಚದಲ್ಲಿ ಗುಣ, ಗುಣಿಗಳಿಗೆ ಭೇದವೇ ಕಾಣುವುದು ಐಕ್ಯವಲ್ಲ. ಗುಣಗಳು ಬೇರೆ ಬೇರೆ, ಗುಣಉಳ್ಳ ವ್ಯಕ್ತಿ ಬೇರೆ

2. ಅತೋ ಉಚ್ಯತೆ ಅದಕ್ಕಾಗಿ ಹೇಳಿದೆ

## ಸೂ॥ ಓಂ॥ ಉಭಯವ್ಯಪದೇಶಾತ್ತ್ವಹಿ ಕುಂಡಲವತ್ ಓಂ॥ 28

ಪರಬ್ರಹ್ಮನು ಆನಂದ ಗುಣವಂತನೂ ಆನಂದ ರೂಪನೂ ಸಹ. ಹೀಗೆ "ಆನಂದೊ ಬ್ರಹ್ಮಾ" ಮತ್ತು "ಆನಂದಂ ಬ್ರಹ್ಮಣಃ" ಎಂಬ ಶೃತಿಗಳು ಬ್ರಹ್ಮನನ್ನು ಗುಣಾತ್ಮಕನೆಂತಲೂ ಗುಣಿಯೆಂತಲೂ ಹೇಳುವುದರಿಂದಲೆ ಸಾಧ್ಯ ಸರ್ಪಕ್ಕೆ ಇಂಡಲ ಸ್ವರೂಪವು ಮತ್ತು ಕುಂಡಲಾಕಾರವು ಹೇಗೋ ಹಾಗೆ ಶ್ರೀ ಪರಮಾತ್ಮನಿಗೆ ಗುಣ ಗುಣಿತ್ವವು.

"ಆನಂದಂ ಬ್ರಹ್ಮಣೋ ವಿದ್ವಾನ್" (ತೈ-2-4) "ಅಥೈಷ ಏವ ಪರಮ ಆನಂದಃ" (ಬೃ-6-3-33) ಇತ್ಯುಭಯ ವ್ಯಪದೇಶಾದ ಹಿ ಕುಂಡಲವದೇವ ಯುಜ್ಯತೆ. ಯಥಾ ಅಹಿಃ ಕುಂಡಲೀ ಕುಂಡಲಂ ಚ ತಚ್ಛಬ್ದಾತ್ತೆ ಪಲಶೃತಿಗವ್ಯತ್ವಂ ದರ್ಶಯತಿ ॥

ಬ್ರಹ್ಮನು ಅನಂತ ಗುಣನಾದ್ದರಿಂದ ಯಾರಿಗೂ ಹೆದರುವುದಿಲ್ಲ ಮತ್ತು ಬ್ರಹ್ಮನು ಆನಂದ ಸ್ವರೂಪನಾದ್ದರಿಂದ ಪೂರ್ಣನು ಎಂದು ಈ ಎರಡು ಶೃತಿಗಳೂ ಬ್ರಹ್ಮನಿಗೆ ಗುಣತ್ವ ಮತ್ತು ತತ್ವ ರೂಪತ್ವವನ್ನು ಹೇಳುವುದು ಸಮಂಜಸವಲ್ಲವೆಂಬ ಶಂಕೆಗೆ ಅಹಿ ಕುಂಡಲದಂತೆ ಕುಂಡಲಾಕಾರವಾದ ಸರ್ಪವು ಕುಂಡಲನಾಮ ಧೇಯವೆಂದು ಹೇಳುವ ಸಾದೃಶ್ಯದಿಂದ ವಿಶೇಷ ಧರ್ಮದಿಂದ ಹೇಳಿದೆ ಸುತ್ತಿ ಕುಳಿತ ಹಾವಿನ ಸುರುಳಿ ಮತು ಹಾವು ಬೇರೆಯಲ್ಲ

## ಸೂ|| ಓಂ|| ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್ ಓಂ|| 29

ಪ್ರಕಾಶಕ್ಕೆ ಆಶ್ರಯನಾದ ಸೂರ್ಯನು ಪ್ರಕಾಶ ರೂಪನೂ ಪ್ರಕಾಶಕ್ಕೆ ಆಶ್ರಯನೂ ಹೇಗೆಯೋ ಹಾಗೆ ಬ್ರಹ್ಮ ಮತ್ತು ಆದಿತ್ಯರು ತೇಜೋ ರೂಪಸದೃಶರು ಎಂದು ಅಭಿಪ್ರಾಯ ದೃಷ್ಟಾಂತವು ಮತ್ತೊಂದು.

ಯಥಾದಿತ್ಯಸ್ಯ ಪ್ರಕಾಶತ್ವಂ ಚ ಏವಂ ವಾ ದೃಷ್ಟಾಂತ ಪ್ರಕಾಶಾಶ್ರಯತ್ವಂ । ತೇಜೋರೂಪತ್ವ ಬ್ರಾಹ್ಮಣಃ ॥

ಪ್ರಕಾಶ ಸ್ವರೂಪವಾದ ಸೂರ್ಯಮಂಡಲವು ಹೇಗೆ ಪ್ರಕಾಶ ಉಳ್ಳದ್ದೋ ಹಾಗೆ ಬ್ರಹ್ಮನಿಗೂ ವಿಶೇಷ ಬಲದಿಂದ ಗುಣ ಗುಣಿಭಾವವು ಸಾಧ್ಯವೆಂದು ತಿಳಿಯುವುದು ಇದು ಮತ್ತೊಂದು ದೃಷ್ಟಾಂತವು (ತೇಜೋರೂಪತ್ವದಿಂದ)

## ಸೂ|| ಓಂ|| ಪೂರ್ವವದ್ವಾ ಓಂ|| 30

ಹೇಗೆ ಕಾಲವು ಪೂರ್ವ ಉತ್ತರ ಕಾಲಗಳಿಂದ ಅಭಿನ್ನವಾದರೂ ಪೂರ್ವಕಾಲ ಮತ್ತು ಉತ್ತರ ಕಾಲವೆಂಬ ಭೇದದಿಂದ ತಿಳಿಯುವುದೊ ಹಾಗೆ ಬ್ರಹ್ಮನು ಆನಂದ ವಿಶಿಷ್ಟನು. (ಸ್ಥೂಲ, ಸೂಕ್ಷ್ಮ ವಿವಕ್ಷೆಯಿಂದ ಈ ದೃಷ್ಟಾಂತವು.

ಯಥೈಕ ಏವ ಕಾಲೇ ಪೂರ್ವ ಇತಿ ಅವಚ್ಛೇದಕೊ ಅವಚ್ಛೇದ್ಯಶ್ಚ ಭವತಿ ।
ಅತಿ ಸೂಕ್ಷ್ಮತ್ರಾಪೇಕ್ಷಯೈವ ದೃಷ್ಟಾಂತಃ । ಸ್ಥೂಲ ಮತೀನಾಂ ಚ
ಪ್ರದರ್ಶನಾರ್ಥಮಹಿಕುಂಡಲ ದೃಷ್ಟಾಂತಃ ।

ಪೂರ್ವ ಕಾಲವೆಂಬ ಪ್ರಯೋಗವು ಪೂರ್ವ ಕಾಲದಿಂದ ಅಭಿನ್ನವಾದರೂ ಕಾಲವು ಪೂರ್ವ ಎಂಬ ವಿಶೇಷ ಬಲದಿಂದ ಒಂದೆ ಕಾಲದಲ್ಲಿ ವಿಶೇಷ್ಯ ವಿಶೇಷ ಭಾವವು ಉಂಟು ಕಾಲ ದೃಷ್ಟಾಂತವು ಸೂಕ್ಷ್ಮಾಪೇಕ್ಷೆಯಿಂದಲಿ ಅಹಿ ಕುಂಡಲ ದೃಷ್ಟಾಂತವು ಸ್ಥೂಲವು

5 **ಪ್ರಕಾಶವತ್ಕಾಲವದ್ವಾ ಯಥಾಂಗೇ ಶಯನಾದಿಕಂ ।**
**ಬ್ರಹ್ಮಣಶ್ಚೈವ ಮುಕ್ತಾನಾಂಮಾನಂದೋ ಭಿನ್ನ ಏವತ್ವಿತಿ**
**ನಾರಾಯಣಾಧ್ಯಾತ್ಮೇ ॥**

ಆದಿತ್ಯನಂತೆ ಪ್ರಕಾಶತ್ವ ಪ್ರಕಾಶಿತ್ವವೂ ಕಾಲದಂತೆ ಪೂರ್ವೋತ್ತರ ಕಾಲಾವಯವದಂತೆಯೂ ಅಂಗದಿಂದ ಭಿನ್ನವಾದ ಶಯನತ್ವವು ಅಂಗದಲ್ಲಿ ಶಯನವೆಂತಲೂ ಹಾಗೆ ಮುಕ್ತರ ಆನಂದಗಳೂ ಬ್ರಹ್ಮನ ಆನಂದಗಳೂ ಭಿನ್ನಗಳೇ "ನಾರಾಯಣಾಧ್ಯಾತ್ಮ"

6 **ಆನಂದೇನ ತ್ವಭಿನ್ನೇನ ವ್ಯವಹಾರಃ ಪ್ರಕಾಶವತ್ ।**
**ಕಾಲವದ್ವಾ ಯಥಾ ಕಾಲಃ ಸ್ವಾವಚ್ಛೇದಕತಾಂ ವ್ರಜೇದಿತಿ**
**ಬ್ರಾಹ್ಮೇ ॥**

ತನ್ನಿಂದ ಭಿನ್ನವಲ್ಲದ ಆನಂದವು ವಿಶೇಷ ಭಾವದಿಂದ ವ್ಯವಹಾರವು ಪ್ರಕಾಶದಂತೆಯೂ ಕಾಲವಿಶೇಷದಂತೆಯೂ ವ್ಯವಚ್ಛೇದವು ಬ್ರಹ್ಮನಲ್ಲಿಯೂ ಸಂಭವವು.

## ಸೂ॥ ಓಂ॥ ಪ್ರತಿಷೇಧಾಚ್ಚ ಓಂ॥ 31

ಬ್ರಹ್ಮನಿಗೂ ಮತ್ತು ಬ್ರಹ್ಮ ಗುಣತ್ವಗಳಿಗೂ "ನೇಹನಾನಾಸ್ತಿ ಕಿಂಚನ'' ಎಂಬ ಶೃತಿಯು ಭೇದವನ್ನು ನಿಷೇಧಿಸುವುದರಿಂದಲೂ ಬ್ರಹ್ಮನು ಗುಣಾತ್ಮಕನೂ ಹೌದು.

"ಏಕಮೇವಾದ್ವಿತೀಯಂ'' (ಛಾ-6-2-3) "ನೇಹನಾನಾಸ್ತಿ ಕಿಂಚನ''
(ಕರ 2-4-11) ಇತಿ ಭೇದಸ್ಯ

ಜ್ಞಾನಾನಂದಾದಿ ಗುಣಗಳಿಂದಲೂ ಅವಯವಗಳಿಂದಲೂ ಭಿನ್ನವಲ್ಲದ ಬ್ರಹ್ಮನು ಮುಖ್ಯವಾಗಿ ಒಬ್ಬನೇ ಅದ್ವಿತೀಯನು ಪರಬ್ರಹ್ಮನಲ್ಲಿ ಗುಣ ಗುಣಿ ಬೇಧವನ್ನು ಮಾಡಲಾಗದು ಬ್ರಹ್ಮಾನಂದಾದಿಕವು ಲೋಕದಲ್ಲಿ ಆನಂದಾದಿಗಳಿಂದ ವಿಲಕ್ಷಣವು ಮತ್ತು ಶ್ರೇಷ್ಠವು ಪರಮೇಶ್ವರನ ರೂಪಗಳಲ್ಲಿಯೂ ಧರ್ಮಗಳಲ್ಲಿಯೂ ಅಪವಾದ ಭೇದವೂ ಇಲ್ಲ

– ಇತಿ ಅಹಿಕುಂಡಲಾಧಿಕರಣಂ –

### ಪರಮತಾಧಿಕರಣಂ

ಈ ಅಧಿಕರಣದಲ್ಲಿ ಶ್ರೀ ಪರಮಾತ್ಮನ ಗುಣಗಳು ಲೋಕ ವಿಲಕ್ಷಣ ಧರ್ಮಗಳುಳ್ಳದೆಂದು ಸಮರ್ಥನೆಯು.

## ಸೂ ಓಂ|| ಪರಮತಃ ಸೇತೂನ್ಮಾನ ಸಂಬಂಧಭೇದವ್ಯಪದೇಶೇಭ್ಯಃ ಓಂ|| 32

ನ ಚಾನಂದಾದಿತ್ವಂ ಲೋಕಾನಂದಾದಿವತ್, "ಏಷ ಸೇತುರ್ವಿಧೃತಿಃ (ಛಾ-8-4-1) "ಯ ಏಷ ಆನಂದ ಪರಸ್ಯ" "ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ (ಬೃ-6-4-23) ಇತಿ ಸೇತುತ್ವಂ ಹ್ಯುಚ್ಯತೆ। "ಯತೋ ವಾಚೋ ನಿವರ್ತಂತೆ (ತ್ರೈ 2-4) ಇತ್ಯುನ್ಮಾನತ್ವಂ "ಏತಸ್ಯೈವಾನಂದ ಸ್ಯಾನ್ಯಾನಿ ಭೂತಾನಿ ಮಾತ್ರಾ ಮುಪ ಜೀವಂತಿ (ಬೃ-6-3-32) ಇತಿ ಸಂಬಂಧಃ ||

ಶ್ರೀ ಪರಮಾತ್ಮನ ಆನಂದಾದಿ ಗುಣಗಳು ಈ ಲೋಕದಲ್ಲಿ ಅನುಭವಿಸಲ್ಪಡುವ ಜೀವರುಗಳ ಆನಂದಾದಿ ಗುಣಗಳಿಂದ ಸ್ವರೂಪತಃ ಅನ್ಯವು. ಶ್ರೇಷ್ಟವಾದ ನೇತುತ ಸರ್ವಜ್ಞತ್ವ ಸ್ವತಂತ್ರತ್ವ, ಪೂರ್ಣಾನಂದಾದಿ ಮಹಿಮ ನಿತ್ಯ ಧರ್ಮಗಳಿಂದ ಪರಮಾತ್ಮ ಸಂಬಂಧವುಳ್ಳದ್ದು ಆದ್ದರಿಂದಲೇ ಲೋಕವಿಲಕ್ಷಣವು

ಅನ್ಯತ್ ಜ್ಞಾನಂ ತು ಜೀವಾನಾಮನ್ಯಜ್ಞಾನಂ ಪರಸ್ಯಚ ನಿತ್ಯಾನಂದಾವ್ಯಯಂ ಪೂರ್ಣಂ ಪರಜ್ಞಾನಂ ವಿಧೀಯತೆ ಇತಿ ಭೇದಃ। ಅತೋಽತೌತಿಕತ್ವಾತ ಪರಮೇವ ಬ್ರಹ್ಮಾನಂದಾದಿಕಂ ॥

ಲೋಕಾನಂದಾದಿಗಳು ಈ ಪರಮಾತ್ಮನ ಅಮಿತ ಗುಣಗಳ ಛಾಯಾ ಮಾತ್ರಾಂಶವುಳ್ಳವು ಮುಕ್ತ ಜೀವರೂ ಕೂಡ ಮುಕ್ತಾವಸ್ಥೆಯಲ್ಲಿಯೂ ಈ ಪರಮಾತ್ಮನ ಗುಣ ಸ್ವರೂಪಗಳ ಪ್ರತಿಬಿಂಬ ಸಂಬಂಧ ಜ್ಞಾನಾನಂದಾನುಭವವುಳ್ಳವರು ಮಾತ್ರ ಶ್ರೀ ಪರಮಾತ್ಮನ ಲೋಕ ವಿಲಕ್ಷಣ ಸ್ವರೂಪ ಗುಣಗಳು ಆಧಾರತ್ವ ಅಮಿತತ್ವ ಉಪ ಜೀವ್ಯತ್ವ ನಿಯಾಮಕತ್ವ ಮುಂತಾದ ಶ್ರೇಷ್ಟ ಧರ್ಮಗಳಿಂದ ಕೂಡಿದ್ದಾಗ ಜೀವರುಗಳಿಗೆ ಮೋಕ್ಷ ಹೊಂದುವದಕ್ಕೂ ಮತ್ತು ಮೋಕ್ಷ ಪದವಿಯಲ್ಲಿ ಈ ವಿಲಕ್ಷಣಾನಂದಾದಿ ಗುಣಗಳ ತಾರತಮ್ಯ ರೀತ್ಯಾತ್ಯಲ್ಪ ಅನುಭವಕ್ಕೆ ಆಶ್ರಯವಾಗಿರುವುದರಿಂದಲೇ ಅತಿ ಶ್ರೇಷ್ಠವು

## ಸೂ॥ ಓಂ॥ ದರ್ಶನಾತ್ ಓಂ॥ 33

ಪರಮಾತ್ಮನ ಜ್ಞಾನಾನಂದಾದಿಗಳು ಪ್ರತ್ಯಕ್ಷತಃ ಜೀವರಿಂದ ಅನುಭವಿಸಲ್ಪಡದಿರುವುದರಿಂದಲೂ ಅವು ಅತ್ಯಂತ್ಯ ಲೋಕ ವಿಲಕ್ಷಣಗಳೇ.

ದರ್ಶನಾದೇವ ಚಾನ್ಯಾನಂದಾದೀನಾಮ್ ।

ಬ್ರಹ್ಮಾದಿ ಜೀವರುಗಳ ಆನಂದಾದಿಗಳು ಮನೋ ವಾಕ್ಯಗಳಿಂದ ವಿಷಯೀಕರಿಸಲು ಸಾಧ್ಯವು ಆದರೆ ಶ್ರೀ ಪರಮಾತ್ಮನದು ಮನೋವಾಗ್ವೃತ್ತಿ ಸಾಮಾನ್ಯಕ್ಕಿಂತ ವಿಲಕ್ಷಣವು ಮತ್ತು ಅತೀತವು.

**3. ಅದೃಷ್ಟಮವ್ಯವಹಾರ್ಯಮವ್ಯಪದೇಶ್ಯಂ ಸುಖಂ ಜ್ಞಾನಮೋ**

**ಜೋಬಲಮಿತಿ ಬ್ರಹ್ಮಣಸ್ತಸ್ಮಾದ್ಬ್ರಹ್ಮೇತ್ಯಾಚಕ್ಷತೇ**
**ತಸ್ಮಾದ್ಬ್ರಹ್ಮೇತ್ಯಾಚಕ್ಷತ ಇತಿ ಕೌಂಡಿನ್ಯ ಶ್ರುತಿಃ**

ಪರಮಾತ್ಮನ ಜ್ಞಾನಾನಂದಾದಿ ಗುಣಗಳು ಸರ್ವಾತ್ಮನಾ ಅಸ್ಪಷ್ಟತ್ವದಿಂದ ಮನಸ್ಸಿನಿಂದ ತಿಳಿಯಲೂ ಸಹ ಅಸಾಧ್ಯವಾದ್ದರಿಂದಲೇ ಆತನನ್ನು ಬ್ರಹ್ಮನೆಂದು ಹೇಳುವರು. ಕೌಂಡಿಣ್ಯ ಶೃತಿಯು

4 **ಅಪ್ರಸಿದ್ಧಸ್ಯ ಕಥಮಾನಂದ ಇತ್ಯಾದಿ ವ್ಯಪದೇಶ ಇತ್ಯತೋ ವಕ್ತಿ**

ಅಪ್ರಸಿದ್ಧವಾದುದನ್ನು ಆನಂದಾದಿತ್ಯಾದಿಯಾಗಿ ತಿಳಿಯಲು ಸಹ ಹೇಗೆ ಸಾಧ್ಯವೆಂದರೆ.

## ಸೂ|| ಓಂ|| ಬುದ್ಧ್ಯರ್ಥಃ ಪಾದವತ್ ಓಂ|| 34

ಜೀವೇಶ್ವರ ಸಂಬಂಧ ಜ್ಞಾಪನಾರ್ಥಮಪ್ರಸಿದ್ಧೋಽಪಿ ಪಾದೋಯಥಾಪಾದ ಶಬ್ದೇನವ್ಯಪದಿಶ್ಯತೆ "ಪಾದೋಸ್ಯವಿಶ್ವಾಭೂತಾನೀ" (ಋ-10-90-3) **ಇತಿ** ತಥಾ ||

ಹೇಗೆ ಜೀವಾತ್ಮ ಭೂತಗಳು "ಪಾದೋಽಸ್ಯ ವಿಶ್ವಾಭೂತಾನೀ" ಎಂದು ಲೋಕವಿಲಕ್ಷಣಗಳಿಂದ್ದಾಗ್ಯೂ ಪಾದ ಶಬ್ದದಿಂದ ಹೇಳಲ್ಪಡುವುದೋ ಹಾಗೆಯೇ ಬ್ರಹ್ಮಾನಂದಾದಿಗಳೂ ಲೋಕವಿಲಕ್ಷಣತ್ವದಿಂದ ಬಿಂಬಾಖ್ಯ ಸಂಬಂಧ ಮಾತ್ರದಿಂದ ಹೇಳಲ್ಪಡುತ್ತದೆ ಬುದ್ಧಿಯಿಂದ ಜೀವರಿಗೆ ತಿಳಿಯಲು ಸಾಧ್ಯ ಧರ್ಮ ಜ್ಞಾಪನವಾದದ್ದು ಮಾತ್ರವು

5 **ಅಲೌಕಿಕೋಽಪಿ ಜ್ಞಾನಾದಿಸ್ತಚ್ಛಬ್ದೇನೈವಭಣ್ಯತೇ |**
**ಜ್ಞಾಪನಾರ್ಥಾಯ ಲೋಕಸ್ಯ ಯಥಾ ರಾಜೇವ ದೇವರಾಡಿತಿ ಚ**

ಅಲೌಕಿಕ ಧರ್ಮಗಳಾದಾಗ್ಯೂ ಈ ಲೋಕದಲ್ಲಿ "ದೇವಲೋಕದ ಇಂದ್ರನಂತೆ ಈ ರಾಜನು" ಎಂಬ ಸಾಮ್ಯ ವಾಕ್ಯವನ್ನು ಹೇಗೆ ಹೇಳುವರೋ ಹಾಗೆಯೇ ಜ್ಞಾನಪ್ರಾಪ್ತಿಗಾಗಿಯೇ ಹೀಗೆ ಬಣ್ಣಿಸಲ್ಪಡುತ್ತದೆ

– ಇತಿ ಪರಮತಾಧಿಕರಣಂ –

ಈ ಅಧಿಕರಣದಲ್ಲಿ ಬ್ರಹ್ಮಾದಿಜೀವರುಗಳ ಆನಂದಾದಿಗಳು ಶ್ರೀಪರಮೇಶ್ವರನ ಆನಂದಾದಿಗಳ ಪ್ರತಿಬಿಂಬಿತಗಳು ಎಂದು ಸಮರ್ಥನವು

2. **ಪರಾನಂದ ಮಾತ್ರತ್ವೇ ಕಥಂ ಬ್ರಹ್ಮಾದ್ಯಾನಂದಾದೀನಾಂ ವಿಶೇಷ ಇತಿ**

ಮುಕ್ತ ಬ್ರಹ್ಮಾದಿ ಜೀವಚೇತನರುಗಳ ಆನಂದಾದಿಗಳು ಶ್ರೀ ಪರಮಾತ್ಮ ನಂದಾದಿಗಳ ಪ್ರತಿಬಿಂಬಮಾತ್ರಗಳಾದ್ದರಿಂದ ಪರಸ್ಪರ ವಿಶೇಷವಿಲ್ಲವೆಂಬ ಪೂರ್ವ ಪಕ್ಷವು

ಅತ ಉಚ್ಯತೇ ಅದಕ್ಕಾಗಿ ಹೇಳಿದೆ.

## ಸೂ|| ಓಂ|| ಸ್ಥಾನವಿಶೇಷಾತ್ಪ್ರಕಾಶಾದಿವತ್ ಓಂ|| 35

ಸೂರ್ಯನ ಪ್ರಕಾಶ ಪ್ರತಿಬಿಂಬವು ಸೂರ್ಯಕಾಂತತ್ವಾದಿಸ್ಥಾನಗತ ಗುಣ ವಿಶೇಷದಿಂದ ಅಗ್ನಿಜನಕತ್ವಾದಿ ನಾನಾ ವಿಶೇಷಗಳನ್ನು ಹೊಂದುವುದು ಈ ಸಾದೃಶ್ಯ ದಿಂದಲೇ ಶ್ರೀ ಪರಮಾತ್ಮಾನಂದ ಮಾತ್ರ ಪ್ರತಿಬಿಂಬಗಳಾದ ಬ್ರಹ್ಮಾದಿ ಚೇತನರ ಪ್ರತಿಬಿಂಬಾನಂದಾದಿಗಳೂ ಪರಸ್ಪರ ವೈಚಿತ್ರ್ಯವನ್ನು ಹೊಂದಿ ವ್ಯತ್ಯಸ್ಥವಾಗಿರುವುದು

2 **ಯಥಾದಿತ್ಯಸ್ಯ ದರ್ಪಣಾದಿಸ್ಥಾನವಿಶೇಷಾತ್ ಪ್ರತಿಬಿಂಬೇ ವಿಶೇಷಃ ಏವಮಾನಂದಾದೇರಪಿ ।**

ಆದಿತ್ಯಾದಿಗಳ ಪ್ರತಿಬಿಂಬಗಳಲ್ಲಿ ದರ್ಪಣಾದಿ ಸ್ಥಾನ ವಿಶೇಷಗಳಿಂದ ವಿಶೇಷ ವೈವಿಧ್ಯವಿರುವುದು ಹಾಗೆಯೇ ಬ್ರಹ್ಮಾದಿ ಜೀವರಾಶಿಗಳ ಪ್ರತಿಬಿಂಬಗಳೂ ಜೀವರು ಗಳ ಭಕ್ಷಾದಿ ಸ್ವಭಾವವೈಚಿತ್ರ್ಯಗಳಿಂದ ಪರಸ್ಪರ ವ್ಯತ್ಯಾಸವುಳ್ಳವುಗಳೇ

3. **ಬ್ರಹ್ಮಾದಿ ಗುಣವೈಶೇಷ್ಯಾದಾನಂದಾದಿಃ ಪರಸ್ಯ ಚ ।**
**ಪ್ರತಿಬಿಂಬತ್ವಮಾಯಾತಿ ಮಧ್ಯೋಚ್ಚಾದಿವಿಶೇಷತಃ ॥**

**ಇತಿ ವಾರಾಹೇ**

ಶ್ರೀ ಪರಮಾತ್ಮನಂದಾದಿಗಳು ಬ್ರಹ್ಮಾದಿಜೀವರುಗಳ ಸ್ವರೂಪವೊಪಾದಿ ಭಕ್ತಿ ಜ್ಞಾನಾದಿ ಗುಣ ವೈಚತ್ರ್ಯದಿಂದ ಮಧ್ಯಮ, ಉತ್ತಮ, ಅಧಮಪ್ರಕಾರ ವಿಚಿತ್ರ ರೀತಿಯಲ್ಲಿ ಪ್ರತಿಬಿಂಬಕರಗಳಾಗುವುವು. ಅಂದರೆ ಶ್ರೀ ಪರಮಾತ್ಮನಾಧೀನರಾಗಿ ಅಲ್ಪ ಸಾದೃಶ್ಯ ರೂಪ ಪ್ರತಿಫಲವು ಸ್ವತಂತ್ರಪರವಲ್ಲ

## ಸೂ॥ ಓಂ ಉಪಪತ್ತೇಶ್ಚ ಓಂ॥ 36

ಐಶ್ವರ್ಯಾತ್ಪರಮಾದ್ವಿಷ್ಣೋಃಭ ಕ್ತ್ಯಾದೀನಾನುನಾದಿತಃ । ಬ್ರಹ್ಮಾದೀನಾಂ ಸೂಪಪನ್ನಾ ಹ್ಯಾನಂದಾದೇರ್ವಿಚಿತ್ರತಾ ॥ ಇತಿ ಪಾದ್ಮೇ

ಬಿಂಬ ಭೂತಭವವೈಶ್ವರ್ಯವಶದಿಂದ ಪ್ರತಿಬಿಂಬ ಭೂತ ಬ್ರಹ್ಮಾದ್ಯಾನಂದ ವೈಡಿತ್ರ್ಯವು ಆಗುವುದರಿಂದ ಪರಮಾತ್ಮನ ಪ್ರತಿಬಿಂಬತ್ವವು ಸರ್ವಜೀವರಿಗೂ ಯುಕ್ತವೇ ಶ್ರೀ ವಿಷ್ಣುವಿನ ಪರಮೈಶ್ವರ್ಯದಿಂದ ಬ್ರಹ್ಮಾದಿ ಜೀವರುಗಳ ಅನಾದಿ ಭಕ್ತ್ಯಾದಿ ವಶದಿಂದ ವ್ಯಕ್ತವಾದ ಆನಂದಾದಿಗಳು ಭಿನ್ನ ತಾರತಮ್ಯಗಳಿಂದ ನಾನಾ ವಿಧ ವಿಶೇಷಗಳನ್ನು ಹೊಂದುವುವು.

ಇತಿ ಸ್ಥಾನ ವಿಶೇಷಾಧಿಕರಣಂ

## ತಥಾನ್ಯತ್ವಾಧಿಕರಣಂ

ಈ ಅಧಿಕರಣದಲ್ಲಿ ಧ್ಯಾನ ಮಾಡುವ ದೃಶ್ಯಮಾನವಸ್ತುವಿಗಿಂತ ಅನ್ಯ ವಸ್ತುವೇ ಬ್ರಹ್ಮವೆಂದು ಆತನ ಸರ್ವದಾ ಅದೃಶ್ಯತ್ವವು ಸಮರ್ಥನವು,

1. **ಧ್ಯಾನ ಕಾಲೇ ಯಚ್ಚಿತ್ತೇ ಪ್ರದೃಶ್ಯತೇ ತದೇವ ಬ್ರಹ್ಮರೂಪಂ ಅತಃ ಕಥಮಂವ್ಯಕ್ತತೇತಿ ।**

ಧ್ಯಾನಕಾಲದಲ್ಲಿ ಚಿತ್ತದಲ್ಲ ಪ್ರತಿಬಿಂಬಿತ ಬ್ರಹ್ಮರೂಪವೇ ಬ್ರಹ್ಮನೆಂದು ಹೇಳಿರುವುದರಿಂದ ಸ್ವರೂಪಬೇದಾದಾತ್ಮ್ಯೀಯು ರೂಪಗಳನಾನಾತ್ವದಿಂದ ಬಹುತ್ವೋಪಪತ್ತಿಯಿಂದ ಬ್ರಹ್ಮರೂಪಗಳ ನಾನಾತ್ವವೇ ಎಂದು ಪೂರ್ವ ಪಕ್ಷವು.

## ಸೂ|| ಓಂ|| ತಥಾನ್ಯತ್ಪ್ರತಿಷೇಧಾತ್ ಓಂ|| 37

ಜೀವನ ಆನಂದಾದಿ ಗುಣಗಳಿಗೆ ಹೇಗೆ ಬ್ರಹ್ಮಾನಂದಾದಿಗುಣಗಳಿಂದ ವೈಚಿತ್ರ್ಯವೊ ಹಾಗೆಯೇ ಧ್ಯಾನ ಕಾಲದಲ್ಲಿ ಪ್ರತೀತಿ ವಸ್ತುವು ವಾಸನಾತ್ಮಕವು. ಬ್ರಹ್ಮರೂಪದಿಂದ ಬೇರೆಯೆ ಮತ್ತು ಭಿನ್ನವಾದದ್ದೇ. "ಯನ್ಮನಸಾ" ಎಂಬಶ್ರುತಿಯು ಅನ್ಯ ವಸ್ತುವಿಗೆ ಬ್ರಹ್ಮತ್ವವನ್ನು ಸರ್ವಥಾ ನಿಷೇಧಿಸಿರುವುದು.

ಯಥಾಜೀವಾನಂದಾದೇರನ್ಯ ದ್ಬ್ರಹ್ಮತದೋಪಾಸಾಕೃತಾದಪಿ ।
ಯನ್ಮನಸಾ ನ ಮನುತೇ ಯೇನಾಹುರ್ಮನೋಮತಂ ।
ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೆ (ಕೇನ 1-6)
ಇತಿ ಪ್ರತಿಷೇಧಾತ್ ||

ಭಕ್ತರು ಯಾವ ವಸ್ತು ಸ್ವರೂಪವನ್ನು ಉಪಾಸನೆ ಮಾಡುವರೋ ಅದು ಬ್ರಹ್ಮಸ್ವರೂಪವಲ್ಲ ಬ್ರಹ್ಮ ಸ್ವರೂಪವು ಅನ್ಯವೇ ಈ ಪರಬ್ರಹ್ಮನು ಅವ್ಯಕ್ತವೇ

ಜೀವರು ಯಾವ ವಸ್ತುವನ್ನು ಪೂರ್ಣವಾಗಿ ತಿಳಿಯರೋ ಯಾವ ವಸ್ತುವಿನಿಂದ ಮನಸ್ಸಿನ ಭಾಗವು ತಿಳಿಯಲ್ಪಡುವುದೋ ಮತ್ತು ಯಾವ ವಸ್ತುವನ್ನು ಮನಸ್ಸು ಪೂರ್ಣವಾಗಿ ಗ್ರಹಿಸಲಾರದೋ ಆ ವಸ್ತುವನ್ನೇ ಬ್ರಹ್ಮವೆಂದು ತಿಳಿಯುವುದು.

ಯಾವ ವಸ್ತುವು ಉಪಾಸಿತವೂ ಅದು ಬ್ರಹ್ಮನಲ್ಲ. ಮತ್ತೆ ಯಾವ ವಸ್ತುವು ನಿನ್ನ ಸಮೀಪದಲ್ಲಿ ನಿಯಾಮಕನಾಗಿರುತ್ತಾ ಯಾರಿಂದಲೂ ಪೂರ್ಣವಾಗಿ ಕಲಿಯಲು ಸಾಧ್ಯವಿಲ್ಲವೊ ಅದೇ ಬ್ರಹ್ಮ ವಸ್ತುವು.

3. **ಪಶ್ಯಂತಿ ಪರಮಂ ಬ್ರಹ್ಮ ಚಿತ್ತೇ ಯತ್ಪ್ರತಿ ಬಿಂಬಿತಂ ।**
**ಬ್ರಹ್ಮೈವ ಪ್ರತಿಬಿಂಬೇ ಯದತಸ್ತೇಷಾಂ ಫಲಪ್ರದಂ ।**
**ತದುಪಾಸನಂ ಚ ಭವತಿ ಪ್ರತಿಮೋಪಾಸನಂ ಯಥಾ ।**
**ದೃಶ್ಯತೇ ತ್ವಾಪರೋಕ್ಷ್ಯೇಣ ಜ್ಞಾನೇನೈವ ಪರಂ ಪದಂ ।**

ಉಪಾಸನಾತ್ವಾವರೋಕ್ಷಂ್ಯ ಗಮುಯೇತ್ತತ್ಪ್ರಸಾದತಃ
ಇತಿ ಬ್ರಹ್ಮ ತರ್ಕೆ

ಧ್ಯಾನ ಪ್ರತೀಕಸ್ವರೂಪವು ಬ್ರಹ್ಮನಲ್ಲ ಆ ಬ್ರಹ್ಮನು ಹೇಗೆ ಫಲದಾತನೊ ಆ ದಾವು ಎಂದರೆ ಆಧ್ಯಾನಕಾಲದ ಬ್ರಹ್ಮತ್ವವು ಫಲಕೊಡುವುದಿಲ್ಲ ಆದರೆ ಯಾವ ಪ್ರತಿಬಿಂಬಾಖ್ಯ ವಸ್ತುವಿನಲ್ಲಿ ಬ್ರಹ್ಮನು ಅಂತರ್ಯಾಮಿಯಾಗಿರುವನೋ ಅದೇ ದೃಶ್ಯ ಗಳಿಗೆದರ್ಶನಾರ್ಥ ಫಲಿತಾರ್ಥವು

ಪ್ರತಿಕೋಪಾಸನವು ಅಂದರೆ ಉಪಾಸನಾವಸ್ತುವಿನಲ್ಲಿ ಆ ವಸ್ತುವಿನ ಅಂತರ್ಯಾಮಿ ವಸ್ತುಧ್ಯಾನವು ಬ್ರಹ್ಮೋಪಾಸನಿಗೆ ಅಶೇಷ ಜ್ಞಾನವನ್ನು ಹೊಂದಿಸಿಕೊಡುವುದು ಅದೇ ವಸ್ತುವೇ ಫಲವನ್ನು ಹೊಂದಿಸಿಕೊಡುವುದು.

- ಇತಿ ತಥಾನ್ಯತ್ವಾಧಿಕರಣಂ -

## ಸರ್ವಗತತ್ವಾಧಿಕರಣಂ

ಈ ಅಧಿಕರಣದಲ್ಲಿ ಶ್ರೀ ಪರಮಾತ್ಮನು ಸರ್ವಕಾಲಾಂತರ ಮತ್ತು ಇತರ ಕಾರಣಗಳಿಂದಲೂ ಸರ್ವಸೃಷ್ಟ್ಯಾದಿ ಗಳನ್ನು ಮಾಡುವನೆಂದು ಸಮರ್ಥವು.

1 **ದೇಶ ಕಾಲಾಂತರೆ ಅನ್ಯತೋಽಪಿ ಸೃಷ್ಟ್ಯಾದಿ ಯುಕ್ತಂ ಇತಿ ।**

ಬೇರೆ ದೇಶ ಬೇರೆ ಕಾಲಗಳಲ್ಲಿ ಬೇರೆಯವರಿಂದಲೂ ಸೃಷ್ಟಿ ಇರಬಹುದ ಎಂದರೆ.

ಅತೋ ಭ್ರೂತೆ ಅದಕ್ಕಾಗಿ ಹೇಳಿದೆ.

**ಸೂ॥ ಓಂ॥ ಅನೇನ ಸರ್ವಗತತ್ವ ಮಾಯಾಮಯಶ ಬ್ದಾದಿಭ್ಯಃ ಓಂ॥ 38**

ಶ್ರೀ ಪರಮಾತ್ಮನಿಂದಲೇ ಸರ್ವ ದೇಶ ಕಾಲಾದಿಗಳಲ್ಲಿಯೂ ಸೃಷ್ಟಿಯು ಅನ್ಯರಿಂದಲ್ಲ. "ಏಷ ಸರ್ವಗತಃ" ಎಂಬ ಶೃತಿಯು ಸರ್ವ ಪದಾರ್ಥವನ್ನು ಒಳ ಹೊಕ್ಕು ಸರ್ವ ಸೃಷ್ಟಿಯನ್ನೂ ಶ್ರೀ ಪರಬ್ರಹ್ಮನೇ ಮಾಡುವವನು ಮತ್ತು ಶ್ರೀ ವಿಷ್ಣುವಿನ ಸ್ವರೂಪ ಭೂತ ಮಯಿಮಾಯಾಖ್ಯ ಧರ್ಮ ರೂಪವನ್ನು ಸರ್ವ ವಸ್ತುವಿನಲ್ಲಿಯೂ ಹೇಳುವುದರಿಂದ ಸರ್ವ ಸೃಷ್ಟಿಯು ಆತನೆ ಮಾಡುವನು ಅನ್ಯರಲ್ಲ

ಸರ್ವ ದೇಶ ಕಾಲವಸ್ತುಷ್ವ ನೇನ್ನೈವ ಸೃಷ್ಟ್ಯಾದಿ ಕಂ ಪ್ರವರ್ತತೇ । "ಏಷ ಸರ್ವ ಏಷ ಸರ್ವಗತ ಏಷ ಸರ್ವೇಶ್ವರ ಏಷೋಽ "ಚಿಂತ್ಯ ಏಷ ಪರಮಃ" ಇತಿ ಭಾಲ್ಲವೇಯ ಶೃತಿಃ ॥

ಪರಬ್ರಹ್ಮನ ಸ್ವರೂಪ ಭೂತವಾದ ಮಾಯಾ ಶಕ್ತಿಯಿಂದ ವಿಶ್ವದ ಸರ್ವ ಸೃಷ್ಟಿಯೂ ಆಗುವುವು ಆದ್ದರಿಂದಲೇ ಶ್ರೀ ವಿಷ್ಣುವನ್ನು ಮಾಯಾಮಯನೆಂದು ಜ್ಞಾನಿಗಳು ಹೇಳುವರು ಈತನು ಪರಮ ನಿತ್ಯನು ನಿತ್ಯ ಶಕ್ತನು, ದೇಶಕಾಲಾಂತರದಲ್ಲಿಯೂ ಅನ್ಯ ಪುರುಷ ಸೃಷ್ಟಿ ಕರ್ತೃತ್ವವು ಇರುವುದಕ್ಕೆ ಯಾವ ಪ್ರಮಾಣವೂ ಇಲ್ಲ. ಈತನೆ ಸರ್ವ ಸೃಷ್ಟಿಕರ್ತನು

3. **ಸರ್ವತ್ರ ಸರ್ವಮೇತಸ್ಮಾತ್ಸರ್ವದಾ ಸರ್ವವಸ್ತುಷು ।**
**ಸ್ವರೂಪಭೂತಯಾ ನಿತ್ಯಶಕ್ತ್ಯಾ ಮಾಯಾಖ್ಯಯಾ ಯುತಃ ।**
**ಅತೋ ಮಾಯಾಮಯಂ ವಿಷ್ಣುಂ ಪ್ರವದಂತಿ ಸನಾತನಮಿತಿ**
**ಚತುರ್ವೇದ ಶಿಖಾಯಾಂ ॥**

ಶ್ರೀ ಹರಿಯು ಸರ್ವಗುಣಪೂರ್ಣನು, ಸರ್ವ ವ್ಯಾಪ್ತನು, ಸರ್ವಾಧಾರಕನು, ಸರ್ವವಸ್ತುಗಳನ್ನು ಪ್ರವೇಶಿಸಿ ನಾನಾ ರೂಪಗಳಿಂದ ಸರ್ವವನ್ನು ಸೃಷ್ಟಿಸುವನು. "ಮಾಯಾ ಶಕ್ತಿಯು" ಈತನ ಸ್ವರೂಪಶಕ್ತಿಯೇ ಪ್ರಮಾಣಾಂತರವಿಲ್ಲ

ಆದಿ ಶಬ್ದಾದನ್ಯತ್ರ ಪ್ರಮಾಣಾಭಾವಾಚ್ಚ ।

"ಆದಿ" ಶಬ್ದದಿಂದ ಬೇರೆ ಅರ್ಥಮಾಡಲು ಪ್ರಮಾಣವಿಲ್ಲ ಎಂದು ಹೇಳಿದೆ

– ಇತಿ ಸರ್ವಗತತ್ವಾಧಿಕರಣಂ –

- ಫಲಾಧಿಕರಣಂ -

ಈ ಅಧಿಕರಣದಲ್ಲಿ ಪರಬ್ರಹ್ಮನಿಗೆ ಸ್ವರ್ಗಾದಿ ಫಲದಾತೃತ್ವ ಸಮರ್ಥನವು

1 **ಕರ್ಮಾಪೇಕ್ಷತ್ವಾತ್ಫಲ ದಾನಸ್ಯ ತದೇವ ದದಾತೀತಿ ನ ವಾಚ್ಯಂ ಕುತಃ ॥**

## ಸೂ॥ ಓಂ॥ ಫಲಮತ ಉಪಪತ್ತೇಃ ಓಂ॥ 39

ಶ್ರೀ ಪರಮಾತ್ಮನು ಚೇತನನಾಗಿ ಸರ್ವಸ್ವಾಮಿಯಾದ್ದರಿಂದ ಫಲದಾತೃತ್ವವು ಆತನದೇ. ಕರ್ಮವು ಅಚೇತನವಾದ್ದರಿಂದ ಫಲದಾನದಲ್ಲಿ ಪ್ರವೃತ್ತಿಯು ಸಾಧ್ಯವಲ್ಲದ್ದರಿಂದ ಮತ್ತು ಅನ್ಯಾಧೀನವಾದ್ದರಿಂದಲೂ ಸರ್ವ ಕರ್ಮಫಲದಾತೃವು ಈಶ್ವರನೇ.

ಅತ ಏವೇಶ್ವರಾತ್ಫಲಂ ಭವತಿ । ನಹ್ಯ ಚೇತನಸ್ಯ ಸ್ವತಃ ಪ್ರವೃತ್ತಿಃಯು ಜ್ಯತೆ.

ಸ್ವರ್ಗ ನರಕಾದಿ ಪ್ರಾಪ್ತ ಸರ್ವ ಫಲಗಳೂ ಶ್ರೀ ಪರಮಾತ್ಮನಿಂದಲೇ ಸಾಧ್ಯವು ಈತನೇ ಚೇತನನಾಗಿ ಕರ್ಮವು ಈತನ ಸ್ವಾಮಿತ್ವವುಳ್ಳ ಅಚೇತನವು. ಆದ್ದರಿಂದ ಆತನೇ ಫಲದಾತೃವು

## ಸೂ॥ ಓಂ॥ ಶ್ರುತತ್ವಾಚ್ಚ ಓಂ॥ 40

"ರಾತಿ" ಎಂಬ ಶೃತಿಯು ಈಶ್ವರನಿಗೆ ಫಲದಾತೃತ್ವವು ಹೇಳುವುದು.

"ವಿಜ್ಞಾನ ಮಾನಂದಂ ಬ್ರಹ್ಮ ರಾತಿರ್ದಾತುಃ ಪರಾಯಣಮ್" ।। (ಬೃ 9-5-28) ಇತಿ ।।

ಹವಿಸ್ಸನ್ನು ಕೊಡುವ ಯಜಮಾನರಾದ ಪೂಜಕರಿಗೆ ಪ್ರಿಯನಾದ, ಮನಸ್ಸಿನಲ್ಲಿ ಇರುವ ಬ್ರಹ್ಮ ಜ್ಞಾನಿಗಳಿಗೆ ಪರಮಪ್ರಿಯನಾದ, ಪೂರ್ಣ ಜ್ಞಾನಾನಂದ ಬ್ರಹ್ಮ ವಸ್ತುವೇ ಫಲಪ್ರದನು

ಸ ಪ್ರಿಯಃ ಸರ್ವದಾತೃಣಾಂ ಜ್ಞಾನಿನಾಂಪರಮಪ್ರಿಯಃ ।
ಯೋ ತು ತದ್ಭಾವಿತಾ ನಿತ್ಯಂ ತೇಷಾಮೇವ ಪರಾಯಣಂ ।।

## ಸೂ।। ಓಂ।। ಧರ್ಮಂ ಜೈಮಿನಿರತ ಏವ ಓಂ।। 41

ಜೈಮಿನ್ಯಾಚಾರ್ಯರು ಧರ್ಮವು ಫಲಪ್ರದವು. ಆ ಧರ್ಮವಾದರೂ ಈಶ್ವರನಿಂದ ಹುಟ್ಟುವುದು "ಏಷ ಹ್ಯೇವ" ಶೃತಿಯು ಹಾಗೆ ಹೇಳುವುದನ್ನುವರು

ಯತಃ ಫಲಂ ತದೇವ ಕರ್ಮ ಈಶ್ವರಾದ್ಭವತಿ । "ಏಷ ಹ್ಯೇವ ಸಾಧು ಕರ್ಮಕಾರಯತಿ (ಕಾ-3-8) ಇತಿ ಶೃತೇ ಇತಿ ಜೈಮಿನಿಃ ।

ಧರ್ಮ ಅಧರ್ಮಾಖ್ಯ ಕರ್ಮಗಳೇ ಫಲ ಕೊಡುವುವು ಆದರೆ ಈ ಕರ್ಮಗಳ ಈಶ್ವರನಿಂದಲೆ ಮಾಡಿಸಲ್ಪಡುವುವು ಎಂದು ಜೈಮಿನ್ಯಾಚಾರ್ಯರು ಹೇಳುತ್ತಾರೆ.

## ಸೂ।। ಓಂ।। ಪೂರ್ವಂ ತು ಬಾದರಾಯಣೋ ಹೇತು ವ್ಯಪದೇಶಾತ್ ಓಂ।। 42

ಬಾದರಾಯಣಾಚಾರ್ಯರು ಬ್ರಹ್ಮ ಧರ್ಮಗಳೆರಡೂ ಫಲಕ್ಕೆ ಕಾರಣಗಳೆಂದು ಹೇಳುವುದು ಬ್ರಹ್ಮನು ಕರ್ತೃತ್ವದಿಂದಲೂ ಕರ್ಮವು ಕಾರಣತ್ವದಿಂದಲೂ ಹೇತುಗಳು.

ಪರಸ್ಯ ಕರ್ಮಣಶ್ಚೋಭಯೋಃಫಲಕಾರಣತ್ವೇಪಿ ನ ಕರ್ಮ ಪರ

ಪ್ರವರ್ತಕಂ । ಪರ ಏವ ಕರ್ಮಣಃ ಪ್ರವರ್ತಕಃ । "ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಂ (ಪ್ರ–3-7) ಇತಿ ಹೇತು ವ್ಯಪದೇಶಾತ್।

"ದ್ರವ್ಯಂ ಕರ್ಮಚ ಚಿ ಕಾಲಶ್ಚ" ಇತಿ ಚ ॥

ಯದ್ಯಪಿ ಕರ್ಮಗಳಿಗೂ ಬ್ರಹ್ಮನಿಗೂ ಕಾರಣತ್ವವಿದ್ದಾಗ್ಯೂ ಎರಡೂ ಸಮ ಪ್ರಧಾನ ಭಾವವುಳ್ಳವರಲ್ಲ. ಪೂರ್ವ ಸೂತ್ರದಲ್ಲಿ ಹೇಳಿದಂತೆ ಪರಬ್ರಹ್ಮನೇ ಫಲದಾನದಲ್ಲಿಯೂ ಕರ್ತೃವಾಗಿ ಕಾರಣೀಭೂತ ಕರ್ಮಕ್ಕೂ ಪ್ರಯೋಜಕನು ಪುಣ್ಯದಿಂದಜ್ಞಾನವನ್ನು ಉತ್ಪಾದನ ಮಾಡಿ ಪಾಪವನ್ನು ನಾಶಗೊಳಿಸಿ ಪುಣ್ಯ ಪಾಪ ಪರಿಹಾರದಿಂದ ಜ್ಞಾನಿಗಳಿಗೆ ಪ್ರಸನ್ನನಾಗಿ ಶ್ರೀ ಪರಮಾತ್ಮನೇ ಅನಂತ ಫಲ ವನ್ನು ಕೊಡುವ ಶ್ರೀಮನ್ನಾರಾಯಣ ರೂಪದ ಮಹಿಮೆಯು ಅತ್ಯಾಶ್ಚರ್ಯಕರವು.

– ಇತಿ ಫಲಾಧಿಕರಣಃ –

ತೃತೀಯಾಧ್ಯಾಯಸ್ಯ ದ್ವಿತೀಯ ಪಾದಃ ಸಂಪೂರ್ಣಂ

ಶ್ರೀ ಕೃಷ್ಣಾರ್ಪಣಮಸ್ತು

## – ಸರ್ವವೇದಾಧಿಕರಣಂ –

ಜಿಜ್ಞಾಸಾನಂತರ ಶ್ರೀ ಪರಮಾತ್ಮನ ಉಪಾಸನಾ ರೂಪ ಕರ್ತವ್ಯವು ಈ ಪಾದದಲ್ಲಿ ಪ್ರತಿಪಾದಿಸಲ್ಪಡುವುದು ಉಪಾಸನೆಯು ಎರಡು ವಿಧ 1) ಶ್ರವಣ, ಮನನ ಶಾಸ್ತ್ರಾಭ್ಯಾಸ ರೂಪ ಮತ್ತು 2) ಧ್ಯಾನರೂಪ ಯಥಾಶಕ್ತಿ ಸರ್ವವೇದಾರ್ಥ ಪದಾರ್ಥಜ್ಞಾನ ರೂಪವು. ಅಜ್ಞಾನ ಸಂಶಯ ವಿಪರ್ಯಗಳ ನಿವೃತ್ತಿರೂಪ ಧ್ಯಾನಾಂಗತ್ವವು ಈ ಅಧಿಕರಣದಲ್ಲಿ ಅಧಿಕಾರಿಗಳಿಂದ ಹೊಂದಲಗತ್ಯವನ್ನು ಹೇಳುವುದು. ಸರ್ವವೇದಗಳ ಸರ್ವಶಾಖೆಗಳ ಅಧ್ಯಯನವೇ ಸೂಕ್ತವೆಂದು ಹೇಳಲ್ಪಡುತ್ತಿರಲು ನಿರ್ಧಾರಕ್ಕಾಗಿ ಮೊದಲನೇ ಸೂತ್ರವು

1. **ಉಪಾಸನಾಸ್ಮಿನ್ಪಾದ ಉಚ್ಯತೇ । ಸರ್ವ ಪರಿಜ್ಞಾನಂ ಪ್ರಥಮತಃ ಉಚ್ಯತೇ ॥**

ಶ್ರೀ ಪರಮಾತ್ಮನ ಉಪಾಸನೆಯು ಈ ಪಾದದಲ್ಲಿ ಹೇಳಿದೆ. ಸರ್ವವೇದ ವಾಕ್ಯಗಳ ಪರಿಜ್ಞಾನವು ಮೊದಲನೆಯದಾಗಿ ಹೇಳಲ್ಪಡುವುದು.

## ಸೂ॥ ಓಂ॥ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ॥ 1

ಪೂರ್ವಸೂತ್ರೋಕ್ತ ಬ್ರಹ್ಮನು ಯಥಾಶಕ್ತಿ ವೇದಗಳ ಶ್ರವಣದಿಂದ ಉತ್ಪನ್ನವಾದ ಜ್ಞಾನ ವಿಷಯವು. "ಆತ್ಮಾ" ಎಂಬ ಶೃತಿಯು ವಿಧಿಸುವುದರಿಂದಲೂ "ಅತ್ರಹ್ಯೇತೆ" ಎಂದು ವಾಕ್ಯದ ಯುಕ್ತಿಯಿಂದಲೂ ಸರ್ವಾಧಿಕಾರಿ ಸಾಧಾರಣತ್ವದಿಂದಲೂ ಬ್ರಹ್ಮೋಪಾಸನವು ಹೇಳಲ್ಪಟ್ಟಿದೆ.

ಅಂತೊ ನಿರ್ಣಯಃ "ಉಭಯೋರಪಿದ್ರುಷ್ಟೋಂತಃ" (ಗೀ-2-16) ಇತಿ ವಚ ನಾತ್ ಸರ್ವ ವೇದ ವಿನಿರ್ಣಯೋತ್ಪಾದ್ಯ ಜ್ಞಾನಂ ಬ್ರಹ್ಮ।

ತತ್ವದರ್ಶಿಗಳಿಂದ ಪ್ರಕೃತಿ ಪುರುಷ ಮತ್ತು ಕಾಲವು ನಿತ್ಯವೆಂದು ನಿರ್ಧರಿಸ ಲ್ಪಟ್ಟ ವೇದಾಂತ ಶಬ್ದಕ್ಕೆ ವೇದಗಳ ಯಥಾಶಕ್ತಿ ಶ್ರವಣ ಮನನಗಳಿಂದ ಉತ್ಪನ ವಾದ ವಿಚಾರ ಸಾಧ್ಯವೇದಾರ್ಥ ನಿರ್ಣಯರೂಪ ಜ್ಞಾನ ವಿಷಯವೇ ಹೊರ್ತು ಇತ ರರು ಹೇಳುವಂತೆ ಉಪನಿಷತ್ಪರತ್ವಾರ್ಥವು ಅಸಂಬದ್ಧವು.

2 ಆತ್ಮೇತ್ಯೇವೋಪಾಸೀತೇತ್ಯಾದಿ ವಿಧೀನಾಂ ತದುಕ್ತಯುಕ್ತೀನಾಂ ಚಾವಿಷ್ಟತ್ವಾತ್ ॥

"ಆತ್ಮಾನಮೇವ ಲೋಕ ಮುಪಾಸೀತ ತಮೇವೈಕಂ "ಜಾನಥ" ವಿಜ್ಞಾಯ ಪ್ರಜ್ಞಾಂಕುರ್ವೀತ"

ಇತ್ಯಾದಿ ಕರ್ಮ ವಿಧಿಯನ್ನು ಹೇಳುವ ಕಾಣ್ವಶಾಖಾ ವಾಕ್ಯಗಳು ಸರ್ವಾಧಿ ಕಾರಿ ಸಾಧಾರಣತ್ವಗಳಾದ್ದರಿಂದ ಜ್ಞಾನ ವ್ಯಥ್ಯರ್ಥವಾಗಿ "ಅತ್ರ ಹ್ಯೇತೆ ಸರ್ವ ಏಕೀ ಭವಂತಿ"

"ಸ ಆತ್ಮಾನ ಮೇವ ಲೋಕ ಮುಪಾಸ್ತೆ" "ನಹ್ಯಸ್ಯ ಕರ್ಮಕ್ಷೀಯತೆ"
"ಅಮೃತಸ್ಯೈಷಃ ಸೇತುಃ" "ವಾಚೊವಿಗ್ಲಾಪನಂ" ಇತ್ಯಾದಿ ವಿಧೀಕಾಂ
ತದುಕ್ತ ಉಕ್ತೀನಾಂ ಚ ಅವಿವೃತತ್ವಾತ್ ॥

ಈ ವಾಕ್ಯಗಳಲ್ಲಿ ಹೇಳಿರುವ ಯುಕ್ತಗಳೂ ಸರ್ವಾಧಿಕಾರಿ ಸಾಧಾರಣತ್ವದಿಂದ ಲೂ ಅಧಿಕಾರ ವಿಶೇಷ ಕಲ್ಪನೆಯ ಯುಕ್ತವಲ್ಲ.

## ಸೂ॥ ಓಂ॥ ಭೇದಾನ್ನೇತಿ ಚೇದೇಕಸ್ಯಾಮಪಿ ಓಂ॥ 2

ವಿವಿಧ ಶಾಖೋಕ್ತ ಅರ್ಥಗಳು ವಿಧ ವಿಧವಾಗಿ ತೋರಿಬರುವುದರಿಂದ ಸರ್ವ ಶಾಸ್ತ್ರೋಕ್ತ ಬ್ರಹ್ಮ ಜ್ಞಾನವು ಒಂದೇ ರೀತಿಯದಲ್ಲ. ಆದ್ದರಿಂದ ತಮ್ಮ ತಮ್ಮ ಶಾಖೆಗಳಲ್ಲಿ ಹೇಳಲ್ಪಡುವ ಜ್ಞಾನವೇ ಹೊಂದಲು ಯುಕ್ತವೆಂದರೆ ಒಂದೊಂದೇ ಶಾಖೆ ಯಲ್ಲಿಯ ವಾಕ್ಯಗಳು ಅರ್ಥ ಬೇದದಿಂದಲೂ ಧರ್ಮ ವಿಧಾನ ಭೇದದಿಂದಲೂ

ವ್ಯತ್ಯಾಸ ಶಂಕಿತವಾಗಿರಲು ಸಾಧ್ಯವು. ಆದ್ದರಿಂದ ಇತರ ಪರಿಹಾರವು ಸರ್ವ ಶಾಖೋಪೇತ ಪರಿಜ್ಞಾನದ ಸಾಧನವೇ ಸಾಧು ಎಂದು ಹೇಳಲ್ಪಡುತ್ತದೆ.

"ವಿಜ್ಞಾನಮಾನಂದ ಬ್ರಹ್ಮ (ಬೃ 4-9-28) ಸತ್ಯಂ ಜ್ಞಾನ ಮನಂತಂ ಬ್ರಹ್ಮ (ತೈ-2-1) ಇತ್ಯಾದಿ ಪ್ರತಿ ಶಾಖಮುಕ್ತಿಭೇಧಾನ್ನೈಕಾಧಿಕಾರಿ ವಿಷಯಾಃ ಸರ್ವ ಶಾಖಾ ಇತಿ ಚೇತ್-ನ ಏಕ ಸ್ಯಾಮಪಿ ಶಾಖಾಯಾಂ "ಆತ್ಮೇತ್ಯೇವೋಪಾಸೀತ್ (ಬ್ರ-3-4-7) "ಕಂ ಬ್ರಹ್ಮ ಖಂ ಬ್ರಹ್ಮ" (ಛಾ-4-10-5) ಇತ್ಯಾದಿ ಭೇದ ದರ್ಶನಾತ್ ॥

ಮೊದಲೆರಡು ಮೇಲಿನ ಬೇರೆ ಬೇರೆ ಶಾಖಾ ಸೂಕ್ತಗಳಲ್ಲಿ ಬ್ರಹ್ಮನ ವಿಷಯದಲ್ಲಿ ವ್ಯತ್ಯಾಸೋಕ್ತಿಯು ಇದ್ದರೂ ಇತರೆರಡು ವಾಕ್ಯಗಳಲ್ಲಿ ಒಂದೇ ಶಾಖೆಯಲ್ಲಿಯೇ ವ್ಯತ್ಯಾಸವು ಕಂಡಿರುವುದರಿಂದ, ಭೇದೋಕ್ತಿಯಲ್ಲಿ ಯಾವ ವಿಶೇಷವೂ ಮತ್ತು ಶಾಖಾ ಬೇಧವೂ ಕಾರಣವಲ್ಲವಾಗಿ ಸರ್ವ ಕ್ರಿಯಾಂತ ಜ್ಞಾನವೇ ವಿಷಯವಾಗಿ ಉಳಿಯು ವುದು.

## ಸೂ॥ ಓಂ॥ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಧಿ ಕಾರಾಚ್ಚ ಓಂ॥ 3

"ಸ್ವಾಧ್ಯಾಯೋಧ್ಯೇತವ್ಯ · (ತೈ-ಆ-3-15) ಇತಿ ಸಾಮಾನ್ಯ ವಿಧೇಃ । ಹಿ ಶಬ್ದಾತ್ ವೇದ . ಕೃತ್ಸ್ನೋಧಿಗಂತವ್ಯ · ಸರಹಸ್ಯೋ ದ್ವಿಜನ್ಮನಾ ॥
ಇತಿಸ್ಮೃತೇಃ

ಮೇಲಿನ ಶ್ರುತಿಯಲ್ಲಿ ವಿಧಿಸಿರುವ ಸರ್ವ ಸಾಧಾರಣ ಅಧ್ಯಯನ ವಿಧಾನ ಸರ್ವ ವೈದಿಕ ಕರ್ಮ ಕರಣಗಳಲ್ಲಿ ಸರ್ವರಿಗೂ ಅಧಿಕಾರವು ಹೇಳಿರುವುದರಿಂದ ಮತ್ತು ಸ್ಮೃತಿ ವಚನದಿಂದಲೂ ಸರ್ವಶಾಖಾಧ್ಯಯನ ಬ್ರಹ್ಮಜ್ಞಾನವು ಯುಕ್ತವು, ಸ್ಮೃತ್ಯ ರ್ಥವು. ತ್ರೈವರ್ಣಿಕರಿಂದಲೂ ರಹಸ್ಯಾರ್ಥ ಜ್ಞಾನಕ್ಕಾಗಿ ಅಧ್ಯಯನ ಮಾಡಲ್ಪಡ ಬೇಕು.

5 ಸರ್ವ ವೇದೋಕ್ತಮಾರ್ಗೇಣ ಕರ್ಮಕುರ್ವೀತ ನಿತ್ಯಶಃ ।
ಆನಂದೋಹಿ ಫಲಂ ಯಸ್ಮಾಚ್ಛಾಖಾಭೇದೋ ಹ್ಯಶಕ್ತಿಜಃ ।
ಸರ್ವಕರ್ಮಕೃತೌ ಯಸ್ಮಾದಶಕ್ತಾಃ ಸರ್ವಜಂತವಃ ।
ಶಾಖಾಬೇದಂ ಕರ್ಮ ಬೇದಂ ವ್ಯಾಸಸ್ತಸ್ಮಾದಚೀಕ್ಳ್ ಪದಿತಿ
ಸಮಾಚಾರೇ ಸರ್ವೇಷಾಮಧಿಕಾರಾಚ್ಚ ॥

ಜ್ಞಾನಿಯು ನಿತ್ಯವೂ ಸರ್ವವೇದೋಕ್ತ ಮಾರ್ಗದಿಂದ ಕರ್ಮವನ್ನು ಮಾಡಬೇಕು ಇದರ ಫಲವು ಆನಂದವು ಸರ್ವಜಂತುಗಳೂ ಸರ್ವಕರ್ಮವನ್ನು ಮಾಡಲು ಅಶಕ್ತರಾದ್ದರಿಂದ ಸೂಕ್ತ ರೀತಿಯಲ್ಲಿ ಶಾಖಾಭೇದವೂ ಕರ್ಮ ಭೇದವೂ ವ್ಯಾಸರಿಂದ ಯಥಾಶಕ್ತ್ಯಾನುಷ್ಠಾನವು ಅನುಕೂಲವಾಗಲು ಮಾಡಲ್ಪಟ್ಟಿತು ಆದ್ದರಿಂದ ಸರ್ವ ಶಾಖೋಕ್ತ ಸರ್ವಕರ್ಮಗಳಲ್ಲಿಯೂ ಎಲ್ಲಾ ಶಾಖಾಧಿಕಾರಿಗಳಿಗೂ ಅಧಿಕಾರಉಂಟು

## ಸೂ॥ ಓಂ॥ ಸಲಿಲವಚ್ಚ ತನ್ನಿಯಮಃ ಓಂ॥ 4

ಯಥಾ ರ್ವಸಲಿಲಂ ಸಮುದ್ರಂಗಚ್ಛತಿ । ಏವಂ ಸರ್ವಾಣಿ ವಚನಾನಿ
ಬ್ರಹ್ಮ ಜ್ಞಾನಾರ್ಥಾ ನೀತಿ ನಿಯಮ

ಹೇಗೆ ಸರ್ವ ಜಲವೂ ಪ್ರತಿಬಂಧವಿಲ್ಲದ್ದಾಗ ಸಮುದ್ರವನ್ನೆ ಆಶ್ರಯವಾಗಿ ಹೊಂದುವುದೋ ಹಾಗೆಯೇ ಪುರುಷ ಶಕ್ತಿಯನ್ನು ಅಪೇಕ್ಷಿಸಿ ಶಾಖಾ ನಿಯಮವಿಲ್ಲದೆಯೇ ಸರ್ವವೇದೋಕ್ತ ವಚನಗಳಿಂದಲೇ ನಿರ್ಧಾರಿತ ಪ್ರಕಾರವಾಗಿ ಪರಬ್ರಹ್ಮನು ತಿಳಿಯಲ್ಪಡಬೇಕು.

7 ಆಗ್ನೇಯೇ—ಯಥಾ ನದೀನಾಂ ಸಲಿಲಂ ಶಕ್ತ್ಯೇ ಸಾಗರಗಂ
ಭವೇತ್ । ಏವಂ ವಾಕ್ಯಾನಿ ಸರ್ವಾಣಿ ಪುಂಶಕ್ತ್ಯಾ ಬ್ರಹ್ಮ
ವಿತ್ತಯೆ ಇತಿ ॥

ಸರ್ವ ನದಿಗಳ ನೀರೂ ಸಾಧ್ಯವಾದಲ್ಲಿ (ಅಡಚಣೆಗಳಿಲ್ಲದಿದ್ದಲ್ಲಿ) ಸಾಗರವನ್ನು ಕುರಿತೇ ಹೋಗುವುದೊ ಹಾಗೆಯೇ ಸರ್ವವೇದ ವಾಕ್ಯಗಳೂ ಪುರುಷರ ಶಕ್ತಿಯಂತೆ ಬ್ರಹ್ಮ ಜ್ಞಾನ ಸಾಧನವು.

## ಸೂ|| ಓಂ|| ದರ್ಶಯತಿ ಓಂ|| 5

ಸರ್ವೈಶ್ಚ ವೇದೈಃ ಪರಮೋಹಿ ದೇವೋ ಜಿಜ್ಞಾಸ್ಯೋಸೌನಾಲ್ಪ ವೇದೈಃ
ಪ್ರಸಿಧ್ಯೇತ್ ತಸ್ಮಾದೇನಂಸರ್ವ ವೇದಾನಧೀತ್ಯ ವಿಚಾರ್ಯ ಚ ಜ್ಞಾತು
ಮಿಚ್ಛೇನ್ಮುಮುಕ್ಷುಃ

ಚತುರ್ವೇದ ಶಾಖೆ ವಚನವು-ಸರ್ವ ಶ್ರೇಷ್ಠನಾದ ಸರ್ವ ವಿಲಕ್ಷಣನಾದ ಸರ್ವ ವೇದ ವಾಕ್ಯಗಳಿಂದಲೇ ತಿಳಿಯಲ್ಪಡುವನಾದ್ದರಿಂದ (ಅಲ್ಪ ವೇದ ವಚನಗಳಿಂದಲ್ಲ) ಆತನು ಸರ್ವ ವೇದಗಳಿಂದಲೇ ಜಿಜ್ಞಾಸ್ಯನು ಆದ್ದರಿಂದಲೂ ಸರ್ವ ವೇದಗಳನ್ನು ಶಾಖಾ ಬೇಧವಿಲ್ಲದ ಅಧ್ಯಯನ ಮಾಡಿ ಶ್ರವಣ ಮನನ ವಿಚಾರಾದಿಗಳಿಂದ ಜ್ಞಾನ ವಿಷಯನಾಗಿ ತಿಳಿಯಬೇಕು

ಸರ್ವಾನ್ ವೇದಾನ್ ಸೇತಿಹಾಸಾನ್ ಸಪುರಾಣಾನ್ ಸಯುಕ್ತಿಕಾನ್ ।
ಸಪಂಚ ರಾತ್ರಾನ್ವಿಜ್ಞಾಯ ವಿಷ್ಣುರ್ಜ್ಞೇಯೋ ನ ಚಾನ್ಯಥಾ ||
ಇತಿ ಬ್ರಹ್ಮತರ್ಕೇ ||

ಸರ್ವ ವೇದಗಳನ್ನು ಇತಿಹಾಸ ಪುರಾಣ ಪಂಚ ರಾತ್ರಾದಿಗಳಿಂದಲೂ ಯುಕ್ತಿಗಳಿಂದಲೂ ವಿಚಾರಮಾಡಿ ಬ್ರಹ್ಮಜ್ಞಾನ ಸಂಪಾದನೆ ಸಾಧ್ಯ

– ಇತಿ ಸರ್ವವೇದಾಧಿಕರಣಂ –

## – ಉಪಸಂಹಾರಾಧಿಕರಣಂ –

**ಈ ಅಧಿಕರಣದಲ್ಲಿ ಜ್ಞಾನ ಸಂಪಾದನೆಗೆ ಸಾರ್ವತ್ರಿಕ ಗುಣೋಪ ಸಂಹಾರವು ಸಮರ್ಥಿಸಲ್ಪಡುತ್ತದೆ.**

1 ಸರ್ವೈರ್ವೇದ್ಯೈರ್ಜ್ಞೇಯೋನೋಪಾಸ್ಯೋಽಶಕ್ಯತ್ವಾದಿತ್ಯತ ಆಹ ॥

ಶ್ರೀ ಪರಮಾತ್ಮನು ಸರ್ವವೇದೋಕ್ತ ಗುಣಗಳಿಂದ ತಿಳಿಯಲ್ಪಡಬೇಕು ಆದರೆ ಸರ್ವ ವೇದೋಕ್ತ ಗುಣಗಳಿಂದ ಉಪಾಸ್ಯನಲ್ಲ ಏಕೆಂದರೆ ವೇದಗಳ ಅನಂತಾನಂತ ವಾಕ್ಯಗಳಿಂದ ಹೇಳಲ್ಪಡುವ ಅನಂತಾನಂತ ಗುಣಗಳನ್ನು ಒಟ್ಟಿಗೆ ಬುದ್ಧಿಯಲ್ಲಿ ಚಿಂತಿಸಲು ಅಸಾಧ್ಯವಾದ್ದರಿಂದ ಅಶಕ್ಯವು ಎಂದು ಪೂರ್ವಪಕ್ಷವು ಒಬ್ಬನೇ ಪರಮಾತ್ಮನು ಸರ್ವವೇದಗಳಲ್ಲಿ ಹೇಳಿರುವ ಸರ್ವ ಗುಣಾತ್ಮಕನು ಆದ್ದರಿಂದ ಉಪ ಸಂಹಾರವು ಯುಕ್ತವು ಎಂದು ಸಿದ್ಧಾಂತ.

2 ಅತ ಆಹ–ಅದಕ್ಕಾಗಿ ಹೇಳಿದೆ.

## ಸೂ॥ ಓಂ॥ ಉಪ ಸಂಹಾರೋಽರ್ಥಾಭೇದಾದ್ವಿಧಿಶೇಷ ವತ್ಸಮಾನೇ ಚ ಓಂ॥ 6

ಸರ್ವ ವೇದೋಕ್ತಾನ್ ಗುಣಾನ್ ದೋಷಾಭಾವಾಂಶ್ಚೋಪ ಸಂಹೃತ್ಯೈವ ಪರಮಾತ್ಮೋಽಪಾಸ್ಯಃ ।

ವಿಧಿವಿಹಿತ ಸಂಧ್ಯಾವಂದನಾದಿಗಳು ಹೇಗೆ ಆವಶ್ಯಗಳೋ ಹಾಗೆಯೇ ಶ್ರೀಪರಮಾತ್ಮನ ಸರ್ವಗುಣಗಳನ್ನು (ಪೂರ್ಣತ್ವಕ್ಕೆ ವಿರೋಧವಿಲ್ಲದ ಶ್ರೇಷ್ಠ ಗುಣಗಳನ್ನೂ) ಉಪ ಸಂಹಾರ ಮಾಡಲೇಬೇಕು. ಸರ್ವ ಶ್ರೇಷ್ಠ ಗುಣಗಳನ್ನು ಏಕ ಮನಸ್ಸಿನಿಂದ ಧ್ಯಾನ ಮಾಡುವುದೇ ಉಪ ಸಂಹಾರವು ಎಂದು ಉಪಾಸ್ಯ ಏಕಃ ಎಂಬ ಶೃತಿಯು ವಿಧಿಸುತ್ತದೆ ಶ್ರೀ ಪರಮಾತ್ಮನನ್ನು ಸರ್ವ ವೇದಾಂತ ಪ್ರತ್ಯಯ ಸಾರನೆಂದು ಉಪಾಸನೆಯು ಮಾಡಲ್ಪಡಬೇಕು.

2 ಉಪಾಸ್ಯ ಏಕಃ ಪರತಃ ಪರೋ ಯೋ ವೇದ್ಯೈಶ್ಚ ಸರ್ವೈಃ ಸಹ
ಚೇತಿಹಾಸ್ಯೈಃ । ಸಪಂಚರಾತ್ರೈಃ ಸಪುರಾಣೈಶ್ಚದೇವಃ
ಸರ್ವ ಗುಣೈಃ ತತ್ರತತ್ರ ಪ್ರತೀತೈರಿತಿ ಭಾಲ್ಲವೇಯಶ್ರುತಿಃ ॥

ರಮಾ ಬ್ರಹ್ಮಾದಿ ದೇವತೆಗಳಿಗಿಂತಲೂ ಉತ್ತಮನಾದ ಶ್ರೀ ಪರಮಾತ್ಮನು ಸರ್ವವೇದಗಳು, ಇತಿಹಾಸಗಳು ಪುರಾಣಗಳು ಮತ್ತು ಇತರ • ವೇದಾನುಸಾರಿ

ಗ್ರಂಥಗಳಲ್ಲಿ ಮುಖ್ಯ ವೃತ್ತಿಯಿಂದ ಸರ್ವಗುಣಪೂರ್ಣನೆಂದು ಪ್ರತಿಪಾದಿತವೊ ಹಾಗೆಯೇ ಅಲ್ಲಲ್ಲಿ ಹೇಳಿರುವಂತೆಯೇ ಉಪ ಸಂಹಾರವು ಯುಕ್ತವು. ಭಾಲ್ಲವೇಯ ಶ್ರುತಿ

3 ಆಗ್ನೆಯೇ ಚ : **ವಿಧಿಶೇಷಾಣಿ ಕರ್ಮಾಣಿ ಸರ್ವವೇದೋದಿತಾನ್ಯಪಿ । ಯಥಾ ಕಾರ್ಯಾಣಿ ಸರ್ವೈಶ್ಚ ಸರ್ವಾಣ್ಯೇವಾವಿಶೇಷತಃ ॥ ಏವಂ ಸರ್ವಗುಣಾನ್ಸರ್ವದೋಷಾಭಾವಾಂಶ್ಚ ಯತ್ನತಃ ॥ ಯೋಜಯಿತ್ವೈವ ಭಗವಾನುಪಾಸ್ಯೋ ನಾನ್ಯಥಾ ಕ್ವಚಿದಿತಿ ॥**

ವೇದಗಳಲ್ಲಿ ಹೇಳಿರುವ ಪ್ರಧಾನ ವಿಧಿ ಶಿಷ್ಟಗಳಾದ "ಸೋಮೇನಯಜೇತ್" ಎಂಬ ಕರ್ಮಗಳು (ಬೇರೆ ಬೇರೆ ಶಾಖೆಗಳಲ್ಲಿಯೂ) ಅಧಿಕಾರ ವಿಶೇಷ ವಿಭಾಗ ವಿಲ್ಲದೆಯೇ ಅವುಗಳನ್ನು ಸರ್ವರೂ ಮಾಡುವಂತಹವು ತಮ್ಮ ಶಾಖೆಗಳಲ್ಲಿ ಹೇಳಲ್ಪಟ್ಟವುಗಳು ಮಾತ್ರವೇ ಅಲ್ಲ ಎಲ್ಲಾ ಶಾಖೋಕ್ತ ಕರ್ಮಗಳು ಶ್ರವಣಾದಿ ಸರ್ವಪ್ರಯತ್ನದಿಂದಲೂ ಅನುಸರಿಸಲ್ಪಡಬೇಕು

4 **ಸಮಾನ ವಿಷಯೇ ಚೋಪಸಂಹಾರಃ । ನತು ಸೋಽರೋದಿತ್ ।** (ತ ಸ-1-5-1) ಇತ್ಯಾದೀನಾಂ ॥

ಉಪ ಸಂಹಾರವು ಯೋಗ್ಯ ಗುಣ ವಿಷಯಗಳಿಂದಲೇ ಕಾರ್ಯವು ಅಯೋಗ್ಯ ಉಪಾಸನಾದಿಂದ ಅನಿಷ್ಟ ಪ್ರಾಪ್ತಿಯು ಹೇಳಿದೆ.

5 **ಗುಣೈರೇವ ಸ ತೂಪಾಸ್ಯೋ ನೈವ ದೋಷೈ: ಕಥಂಚನ । ಗುಣೈರಪಿ ನ ತೂಪಾಸ್ಯೋ ಯೋ ಪೂರ್ಣತ್ವವಿರೋಧಿನ ಇತಿ ಬೃಹತ್ತಂತ್ರೇ ॥**

ಶ್ರೀ ಪರಮಾತ್ಮನು ಶ್ರೇಷ್ಟ ಗುಣಗಳ ಪೂರ್ಣತ್ವದಿಂದಲೇ ಉಪಾಸ್ಯನು ದೋಷ ಗುಣಗಳಿಂದ ಸರ್ವಥಾ ಅಲ್ಲ ಪೂರ್ಣತ್ವ ಸಾಧಕವಲ್ಲದ ಗುಣಗಳಿಂದಲೂ ಅಲ್ಲ. ಮಿತಭುಕ್ತ್ವವು ಲೋಕದಲ್ಲಿ ಗುಣವಾದರೂ ಶ್ರೀ ಪರಮಾತ್ಮನಲ್ಲಿ ಬ್ರಹ್ಮಭೋಕ್ತೃತ್ವವೇ ಗುಣವು ಉಪಾಸ್ಯವು.

## ಸೂ॥ ಓಂ॥ ಅನ್ಯಥಾತ್ವಂ ಚ ಶಬ್ದಾದಿತಿಚೇನ್ನಾವಿಶೇಷಾತ್ ಓಂ॥ 7

"ಆತ್ಮೇತ್ಯೇವೋಪಾಸೀತ್" (ಬೃ-3-4-7) ಇತಿ ಶಬ್ದಾದುಪ ಸಂಹಾರಸ್ಯಾನ್ಯ ಥಾತ್ವಮಿತಿ ಚೇನ್ನ ಏತೇ ಗುಣಾನೋಪಾಸ್ಯಾ ಇತಿ ವಿಶೇಷ ವಚನಾ ಭಾವಾತ್ "ಸರ್ವೈರ್ಗುಣೈರೇಕ ಏವೇಶಿತಾಸಾವುಪಾಸಿತವ್ಯೋ ನತುಮೋಕ್ಷೈಃ ಕದಾಚಿತ್ ಇತಿ ವಿಶೇಷ ವಚನಾಚ್ಚ ಆತ್ಮೇತ್ಯೇವೇತ್ಯವ ಧಾರಣಮುನಾತ್ಮ ನಿವೃತ್ಯರ್ಥಂ ॥

ಸರ್ವಗುಣೋಪ ಸಂಹಾರ ಪೂರ್ವಕ ಉಪಾಸನೆಯೇ ಯುಕ್ತವು ಆತ್ಮೇತ್ಯೇ ವೋಪಾಸ್ಯ" ಎಂಬ ವಾಕ್ಯದಲ್ಲಿ ಉಪ ಸಂಹಾರವು ಯುಕ್ತವೆಂದು ಹೇಳಿದೆ ಅನ್ಯಥಾ ಉಪಾಸನವು ಯುಕ್ತವಲ್ಲ ಈ ಗುಣಗಳು ಉಪಾಸನಾರ್ಥವಾಗಿಯಲ್ಲ ಎಂಬುದಾಗಿ ಯಾವ ನಿಷೇಧವೂ ಎಲ್ಲಿಯೂ ಹೇಳಿರುವುದಿಲ್ಲ ಆತ್ಮ ಶಬ್ದ ವಾಚ್ಯಪೂರ್ಣ ಗುಣತ್ವ ದಿಂದಲೇ ಉಪಾಸನೆಯನ್ನು ವಿಧಿಸಿರುವುದರಿಂದ ಸರ್ವ ಗುಣೋಪಾಸನೆಯು ಯುಕ್ತವು ಅಲ್ಲದೆ ಯಾವ ಕಾಲದೇಶಗಳಲ್ಲಿಯೂ ಯಾವ ದೋಷದಿಂದಲೂ ಉಪಾ ಸನೆಯು ಉಕ್ತವಾಗಿಲ್ಲ.

## ಸೂ॥ ಓಂ॥ ನ ವಾ ಪ್ರಕರಣಬೇದಾತ್ಪರೋವರೀಯಸ್ತ್ವಾ ದಿವತ್ ಓಂ॥ 8

ಪ್ರಕರಣ ಭೇದಾನ್ನೈವೋಪ ಸಂಹಾರಃ ಕಾರ್ಯಃ । ಪರೋವರೀಯಸ್ತ್ವಾದಿ ಷುತಾವ ದೇವಹ್ಯುಕ್ತಂ ॥

ಪರೋವರೀಸ್ತ್ವಾದಿ ಗುಣ ಪ್ರತಿಪಾದಕ ಪ್ರಕರಣಗಳಲ್ಲಿ (ನಿರವಧಿಕ ಸರ್ವೋ ತ್ತಮತ್ವ ಉದ್ಗೀತತ್ವ ಅನಂತತ್ವ ಪ್ರಕರಣಗಳಲ್ಲಿಯೂ) ಪರೋವರೀಯ ವೈಶ್ವಾ ನರಾದಿ ವಿದ್ಯಾ ಭೇದ ಗುಣಗಳಿಂದ ಕೂಡಿರುವುದರಿಂದ ಸರ್ವಗುಣೋಪೇತ ಉಪ ಸಂಹಾರವು ವಿಹಿತವೊ ಅನ್ಯಥಾವೊ ಅಂದರೆ ಪರೋವರೀಯತ್ವಾದಿ ಗುಣಗಳಷ್ಟೆ ಉಪಸಂಹಾರಕ್ಕೆ ತಕ್ಕವುಗಳು

## ಸೂ॥ ಓಂ॥ ಸಂಜ್ಞಾತಶ್ಚೇತ್ತದುಕ್ತಮಸ್ತಿ ತುತದಪಿ ಓಂ॥ 9

ಸರ್ವ ವಿದ್ಯೆಯೂ ಶ್ರೀ ಭಗವನ್ನಾಮತ್ವದಿಂದ ಆತನ ಗುಣಕ್ರಿರೂಪವಾದ್ದರಿಂದ ಸರ್ವ ವಿಧ್ಯೋಕ್ತಗುಣಗಳ ಉಪಸಂಹಾರವು ಯುಕ್ತವು

ಸರ್ವ ವಿದ್ಯಾಉಕ್ತಾತ್ವ ಸೋಽಹಂ ನಾಮವಿದೇವಾಸ್ಮಿನಾತ್ಮವಿತ್ (ಛೂ 7-1-3) ಇತಿ ವಚನಾತ್ಸರ್ವಸ್ಯ ಬ್ರಹ್ಮನಾಮತ್ವಾತ್ತದುಪಸಂಹಾರಃ ಕಾರ್ಯಃ ।

ಮೇಲಿನ ಶೃತಿಯು ಸರ್ವ ವಿದ್ಯೆಯೂ ಬ್ರಹ್ಮನಾಮಾತ್ವವನ್ನೆ ಹೇಳುವುದರಿಂದ ಸರ್ವ ವಿದ್ಯೋಪ ಗುಣೋಪ ಸಂಹಾರವು ಯುಕ್ತವು ಎಂದು ತಿಳಿಸುವುದು.

**9 ನಾಮತ್ವಾತ್ಸರ್ವ ವಿದ್ಯಾನಾಂ ಗುಣಾನಾಮುಪ ಸಂಹೃತಿಃ ।**
**ಕಾರ್ಯೈವ ಬ್ರಹ್ಮಣಿ ಪರೇ ನಾತ್ರಕಾರ್ಯಾವಿಚಾರಣಾ ॥**
**ಇತಿ ಬ್ರಹ್ಮತರ್ಕೇ**

ಇತಿಚೇತ್ ಸತ್ಯಂ ಉಕ್ತ್ಯೋಹ್ಯುಪಸಂಹಾರಃ ।

ಸರ್ವವಿದ್ಯೆಗಳು ಬ್ರಹ್ಮನಾಮಕಳಾಗಿ ಸರ್ವಗುಣಗಳನ್ನು ಹೇಳುವುದರಿಂದ ಗುಣಾಭಿಧಾನಗಳ ಉಪಸಂಹಾರವು ಕರ್ತವ್ಯವು ಪ್ರತಿಯಾಗಿ ಯಾರೂ ವಿಚಾರ ಮಾಡಬೇಕಾಗಿಲ್ಲ

ತತ್ಪ್ರಮಾಣಮುಪ್ಯಸ್ತ್ಯೇವ । ನಾಮ ವಾ ಏತಾಬ್ರಹ್ಮಣಃ ಸರ್ವ ವಿದ್ಯಾಸ್ತಸಾದೇಕಃ । ಸರ್ವ ಗುಣೈರ್ವಿಚಿಂತ್ಯಃ ಇತಿ ಕೌಂಡಿನ್ಯ ಶೃತೌ।

ಸರ್ವ ವಿದ್ಯೆಗಳು ಪರಬ್ರಹ್ಮ ನಾಮಗಳೇ ಆದ್ದರಿಂದಲೇ ಸರ್ವ ಗುಣಗಳಿಂದಲೂ ಉಪಸಂಹಾರ ಯುಕ್ತವು ಶಕ್ತಿಪೂರ್ವಕ ಪ್ರಯತ್ನೋಪಾಸನವು ಫಲಾಧಿಕ್ಯ ಭೇದಕವು

-ಇತಿ ಉಪಸಂಹಾರಾಧಿಕರಣಂ-

-ಪ್ರಾಪ್ತ್ಯಧಿಕರಣಂ-

## ಸೂ॥ ಓಂ ಪ್ರಾಪ್ತೇಶ್ಚಸಮಂಜಸಂ ಓಂ॥ 10

ಯುಜ್ಯತೆ ಚೋಪಸಂಹಾರೋನುಪಸಂಹಾರಶ್ಚ ಯೋಗ್ಯತಾ ವಿಶೇಷಾತ್ ।

ಉಪಸಂಹಾರಾನುಪಸಂಹಾರಗಳು ಪ್ರಾಪ್ಯಫಲಭೇದತ್ವ ಕಾರಣವಾದ ಪುರುಷರಲ್ಲಿ ವ್ಯತ್ಯಾಸವು

ಒಂದೇಕಾಲದಲ್ಲಿ ವೇದೋಕ್ತಸರ್ವಗುಣಧರ್ಮವು ಚತುರ್ಮುಖಬ್ರಹ್ಮನಿಗೆ ಮಾತ್ರ ದೇವಾದಿಪಿತೃಗಳಲ್ಲಿ ಕ್ರಮವಾಗಿ ಫಲ ಪ್ರಾಪ್ತಿಯೋಗ್ಯತಾ ತಾರತಮ್ಯದಿಂದ ತಕ್ಕಂತೆ ನ್ಯೂನಗುಣಗಳ ಅನುಸಂಧಾನವು. ಮನುಷ್ಯರು ಅಲ್ಪಗುಣಪ್ರತೀತಿ ಯೋಗ್ಯರು

2 **ಗುಣೈಸ್ಸರ್ವೈರುಪಾಸ್ಯೋಸೌ ಬ್ರಹ್ಮಣಾ ಪರಮೇಶ್ವರಃ ।**
**ಅನ್ಯೈರ್ಯಥಾಕ್ರಮಂಚೈವ ಮಾನುಷ್ಯೈಃ ಕೈಶ್ಚಿದೇವತು ॥ ಇತಿ ಭವಿಷ್ಯತ್ಪರ್ವಣಿ**

ಶ್ರೀ ಪರಮಾತ್ಮನು ಚತುರ್ಮುಖ ಬ್ರಹ್ಮನಿಂದ ಮಾತ್ರಸರ್ವಗುಣಗಳಿಂದ ಯುಗಪದ್ಯುಪಾಸ್ಯನು. ವಿಶ್ವದೇವವಿದ್ಯೆಗಳಲ್ಲಿ ತಾರತಮ್ಯಾನುಸಾರ ನ್ಯೂನತೆಯಿಂದಲೂ ಮನುಷ್ಯರಲ್ಲಿ ಸ್ವಲ್ಪಗುಣಗಳ ಯೋಗದಿಂದಲೂ ಉಪಾಸ್ಯನು

ಇತಿ ಪ್ರಾಪ್ತ್ಯಧಿಕರಣಂ

## ಸರ್ವಾಭೇದಾಧಿಕರಣಂ

ಈ ಅಧಿಕರಣದಲ್ಲಿ ಬಹುಗುಣೋಪಸಂಹಾರದಿಂದ ಫಲಾತಿಶಯೋಕ್ತಿಯು ಆದ್ದರಿಂದ ಕರ್ತವ್ಯವೆಂದು ಸಮರ್ಥನೆಯು(ಮೋಕ್ಷದಲ್ಲಿ)

**ಸೂ॥ ಓಂ॥ ಸರ್ವಾಭೇದಾದನ್ಯತ್ರೇಮೇ ಓಂ॥** 11

ಸರ್ವಗುಣಯುಕ್ತತ್ವೇನೋಪಾಸನಾದನ್ಯತ್ರ್ಯೈವಫಲೇ ಬ್ರಹ್ಮಾದಯೋ ಭವಂತಿ।

ಸರ್ವಗುಣಗಳ ಯುಕ್ತತೆಯಿಂದ ಬ್ರಹ್ಮಗುಣೋಪಾಸನವು ಚತುರ್ಮುಖ ಬ್ರಹ್ಮನಿಂದ ಮಾಡಲ್ಪಟ್ಟು ಮುಕ್ತಿಯಿಂದ ಸಂಪೂರ್ಣ ಸುಖವುಳ್ಳವನಾಗುತ್ತಾನೆ ಇತರರಾದರೋ ತಾರತಮ್ಯಯೋಗ್ಯತಾನುಸಾರ ಉಪಾಸನದಿಂದಲೇ ಯಥಾ ಯೋಗ್ಯ ಪೂರ್ಣ ಫಲವನ್ನು ಹೊಂದುವರು.

2 ಸಂಪೂರ್ಣೋಪಾಸನಾದ್ಬ್ರಹ್ಮಾ ಸಂಪೂರ್ಣಾನಂದ
ಭಾಗ್ಭವೇತ್ ।
ಇತರೇ ತು ಯಥಾಯೋಗಂ ಸಮ್ಯಙ್ಮುಕ್ತಾ ಭವಂತಿಹಿ॥
ಇತಿಪಾದ್ಮೇ

ಚತುರ್ಮುಖ ಬ್ರಹ್ಮನಿಗೆ ಸಂಪೂರ್ಣಗುಣೋಪಾಸನೆಯು ಯುಕ್ತವು. ಆದರ ಫಲವಾಗಿ ಆತನಿಗೆ ಸಂಪೂರ್ಣಾನಂದ ಫಲವು ಇತರರಿಗೆ ಯಥಾಯೋಗ್ಯಉಪಾಸನೆಯೇ ಯುಕ್ತವು ಮತ್ತು ಅದರಫಲವಾಗಿ ಸೂಕ್ತಫಲವನ್ನು ಯಥಾಯೋಗ್ಯತೆಯಂತೆ ಪಡೆಯುವರು ಮುಖ್ಯವಾಗಿ ದುಃಖಲೇಶಾಭಾವವು ಸೂಚಿತವಾಗಿದೆ.

– ಇತಿ ಸರ್ವಾಭೇದಾಧಿಕರಣಂ –

## – ಆನಂದಾಧಿಕರಣಂ –

ಈ ಅಧಿಕರಣದಲ್ಲಿ ಸರ್ವಮುಮುಕ್ಷುಗಳಿಂದಲೂ ಸಾಧಾರಣವಾಗಿ ಉಪಾಸನ ಗುಣಗಳು ನಿರ್ಣಯಿಸಲ್ಪಡುತ್ತದೆ. ವಿವಿಧ ಮುಮುಕ್ಷುಗಳಿಂದ ಪುರುಷಭೇದಾಪೇಕ್ಷೆಯಿಂದ ಕ್ಲಿಪ್ತಗುಣಗಳ ಉಪಾಸನ ನಿರ್ಧಾರವು ಇಲ್ಲದ್ದರಿಂದ ಉಪಾಸನೆಯು ಯುಕ್ತವಲ್ಲವೆಂದು ಪೂರ್ವ ಪಕ್ಷವು

**ಸೂ॥ ಓಂ॥ ಆನಂದಯಃ ಪ್ರಧಾನಸ್ಯ ಓಂ ॥ 12**

ಸರ್ವೇಷಾಂ ಮುಮುಕ್ಷೂಣಾಂ ಕಿಯನ್ನಿಮಮೋನೋ ಪಾಸ್ಯ ಇತ್ಯತ ಆಹ ।

ಮೋಕ್ಷರೂಪ ಫಲಪ್ರಾಪ್ತಿಗಾಗಿ ಸರ್ವಮುಮುಕ್ಷುಗಳೂ ಮುಖ್ಯವಾಗಿ ನಾಲ್ಕು ಗುಣಗಳಿಂದ ಉಪಾಸನೆ ಮಾಡಬೇಕೆಂದು ನಿಯಮವು

ಪ್ರಧಾನಫಲಸ್ಯಮೋಕ್ಷಸ್ಯಾರ್ಥೇ ಆನಂದೋಜ್ಞಾನಂ ಸದಾತ್ಮೇತ್ಯುಪಾಸ್ಯಏವ

ಪೂರ್ಣಾನಂದ ಪೂರ್ಣಜ್ಞಾನ ನಿರ್ದೋಷತ್ವ ಸ್ವಾಮಿತ್ವಪದಗಳಿಂದ ಸಂಕೇತಿತವಾದ ಆತ್ಮಾ ಎಂಬ ಪದದಿಂದ ನಾಲ್ಕು ಗುಣಗಳನ್ನು ಸರ್ವಮುಮುಕ್ಷುಗಳು ಉಪಸಂಹಾರ ಮಾಡಲೇ ಬೇಕು

**2 ಸಚ್ಚಿದಾನಂದ ಆತ್ಮೇತಿ ಬ್ರಹ್ಮೋಪಾಸಾ ವಿನಿಶ್ಚಿತಾ ।**
**ಸರ್ವೇಷಾಂ ಚ ಮುಮುಕ್ಷೂಣಾಂಫಲಸಾಮ್ಯಾದಪೇಕ್ಷಿತಾ ॥**
**ಇತಿ ಬ್ರಹ್ಮತರ್ಕೇ**

ಸಚ್ಚಿದಾನಂದ ಆತ್ಮ ಹೀಗೆ ಪರಬ್ರಹ್ಮನು ಸರ್ವಮುಮುಕ್ಷುಗಳಿಂದಲೂ ಉಪಾಸ್ಯನಾಗಿ ಪೂರ್ಣಫಲಮೋಕ್ಷಪದವಿಯನ್ನು ಕೊಡುವನು.

– ಇತಿ ಆನಂದಾಧಿಕರಣಂ –

**– ಅಥ ಪ್ರಿಯಶಿರಸ್ತ್ವಾದ್ಯಧಿಕರಣಂ –**

ಈ ಅಧಿಕರಣದಲ್ಲಿ ಬ್ರಹ್ಮೋಪಾಸನೆಗೆ ಪ್ರಿಯಶಿರಸ್ತ್ವಾದಿ ಗುಣಗಳ ಸರ್ವಾಧಿಕಾರಿ ಸಾಧಾರಣ ಉಪಸನಾಧಿಕಾರವನ್ನು ತಿರಸ್ಕರಿಸಿ ಮೇಲಿನ ಸೂತ್ರದಲ್ಲಿ ಹೇಳಿದಂತೆ ಚತುರ್ಗುಣೋಪಾಸನೆಯೇ ಸಮರ್ಥನ ಮಾಡಲ್ಪಡುವುದು.

**ಸೂ॥ ಓಂ॥ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ॥ 13**

ಸರ್ವಮುಮುಕ್ಷುಗಳೂ ತಸ್ಯಪ್ರಿಯಮೇವಶಿರಃ ಇತ್ಯಾದಿ ಶೃತ್ಯುಕ್ತ ಪ್ರಿಯ ಶಿರಸ್ತ್ವಾದಿ ಗುಣೊಪಾಸನ ಯೋಗ್ಯತೆ ಉಳ್ಳವರಲ್ಲ ಅಧಿಕಾರಿಗಳಲ್ಲಿ ತಾರತಮ್ಯತ್ವೇನ ಮೋಕ್ಷದಲ್ಲಿ ಫಲಭೇದವು ಹೇಳಿವೆ ಆದ್ದರಿಂದ ಫಲಭೇದಸಿದ್ಧಿ ಯುಕ್ತಿಯಿಂದ ಉಪಾಸನೆಯಲ್ಲಿ ವೃದ್ಧಿಹ್ರಾಸವು ಯುಕ್ತವಾದ್ದರಿಂದ ಉಪಾಸನೆಯಲ್ಲಿಯೂ ಭೇದವೆ

ಫಲಭೇದಾರ್ಥಮುಪಚಯಾಪಚಯೋಃ ಭಾವಾನ್ನ ಸರ್ವೇಷಾಂಪ್ರಿಯಶಿರಸ್ತ್ವಾದಿ ಗುಣೋಪಾಸಾಪ್ರಾಪ್ತಿಃ ।

ಉತ್ತಮ ಫಲಪ್ರಾಪ್ತ ಚೇತನರಿಗೆ ವಿಶೇಷವಾಗಿ ಪ್ರಿಯ ಶಿರಸ್ತ್ವಾದಿ ಗುಣೋಪಾಸನೆಗಳು ಆನಂದಾದಿ ಗುಣಗಳ ಮಧ್ಯ ಇನ್ನೊಂದು ಗುಣದಲ್ಲಿಯೂ ವಿದ್ಯಮಾನ್ಯ ಪ್ರಿಯಶಿರಸ್ತ್ವಾದಿಗಳ ಸಾಕಲ್ಯ ಸವಿಷಯೀಕರಣ ಉಪಾಸನೆಯು ಮುಕ್ತಿಯಲ್ಲಿ ವಿಶೇಷಗುಣಕ್ಕೆ ಕಾರಣವು ಇದು ಉಪಚಯವು ಉತ್ತಮಾಧಿಕಾರಿಗಳಿಗೆ ಯಥಾ ತಾರತಮ್ಯದಿಂದ ಲಭ್ಯವು ಅಧಮಾ ಅಧಿಕಾರಿಗಳಿಗಾದರೋ ಈ ಉತ್ತಮೋಪಾಸನೆಯು ಯೋಗ್ಯವಲ್ಲ (ಇದು ಉಪಚಯವು)

2 **ನೈವ ಸರ್ವಗುಣಾಃ ಸರ್ವೈರುಪಾಸ್ಯಾ ಮುಕ್ತಿಭೇದತಃ ।**
**ವಿರಿಂಚಸ್ಯೈವಯನ್ಮುಕ್ತಾವಾನಂದಸ್ಯ ಸಂಪೂರ್ಣತಾ ॥**

ಸರ್ವ ಗುಣೋಪಾಸ್ತಿಯೂ ಸರ್ವರಿಂದಲೂ ಉಪಾಸ್ಯವಲ್ಲ ಮುಕ್ತಿಯಲ್ಲಿ ತಾರತಮ್ಯವಿರುವುದು ಚತುರ್ಮುಖಬ್ರಹ್ಮನಿಗೆ ಮುಕ್ತಿಯಲ್ಲಿ ಅತ್ಯಂತ ಸುಖವು ಯುಕ್ತವಾಗಿ ಆತನೇ ಸರ್ವಗುಣೋಪಾಸನೆಗೆ ಯೋಗ್ಯನು. ಇತರರು ತಾರತಮ್ಯದಿಂದಲೇ ಯೋಗ್ಯತೆ ಉಳ್ಳವರು

— ಇತಿ ಪ್ರಿಯಶಿರಸ್ತ್ವಾದ್ಯಧಿಕರಣಂ -

## – ಇತರಾಧಿಕರಣಂ –

ಈ ಅಧಿಕರಣದಲ್ಲಿ ಚತುರ್ಮುಖಬ್ರಹ್ಮಪ್ರಾಣಿಗಳನ್ನು ನಿಕ್ಕದೇವ ಸರ್ವಧಂ

ಪರ್ಯಂತ ಪ್ರಿಯ ಶಿರಸ್ತ್ವಾದಿ ಬಹು ಗುಣ ಉಪಾಸನೆಯು ಸಮರ್ಥನವು

ದೇವತಾ ಗಂದರ್ವಾದಿಗಳ ಉಪಾಸನವು ಅವರವರ ತಾರತಮ್ಯರೀತಿಯಿಂದ ಚತುರ್ಗುಣಯುಕ್ತವಾದ ಪ್ರಿಯಶಿರಸ್ತ್ವಾದಿ ಗುಣಗಳು ಯೋಗ್ಯತೆಗೆ ತಕ್ಕಂತೆ ಫಲ ಪ್ರಾಪ್ತವಾಗಿ ವಿಶೇಷೋಪಾಸನೆಯು ಯುಕ್ತವು. ಫಲ ಪ್ರಸಿದ್ಧಿಗೆ ತಕ್ಕಂತೆ ಉಪಾಸನಾ ಸಾಮ್ಯವು ಯುಕ್ತವು ಈ ಸಾಧ್ಯ ಗುಣೋಪಾಸನವು ಸ್ವ ಗುರುವಿನ ಮೂಲಕ ಕಲಿಯ ಬರುವುದು

## ಸೂ॥ ಓಂ॥ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ॥ 15

ಇತರೇ ಗುಣಾಃ ಫಲಸಾಮ್ಯಾಪೇಕ್ಷಯೋಪ ಸಂಹರ್ತವ್ಯಾಃ ।

ಉಪಾಸನೆಯು ಸ್ವಯೋಗ್ಯತಾ ಫಲ ಪ್ರಾಪ್ತಿಸಾಮ್ಯಾಪೇಕ್ಷಯಿಂದ ಸಾಮಾನ್ಯೋಪಾಸನ ನಾಲ್ಕು ಗುಣಗಳಿಂದ ಕೂಡಿ ಇತರ ಮಾಧ್ಯಮ ಗುಣಗಳೂ ಇತರ ದೇವತೆಗಳಿಂದ ಯಥಾಯೋಗ್ಯ ಉಪಸಂಹಾರವು ಮಾಡಲ್ಪಡಬೇಕು. ಸರ್ವೋತ್ತಮ ಗುಣಗಳು ಚತುರ್ಮುಖ ಬ್ರಹ್ಮನಿಗೆ ಮಾತ್ರ.

– ಇತಿ ಶರಾಧಿಕರಣಂ –

## – ಆಧ್ಯಾನಾಧಿಕರಣಂ –

ಈ ಅಧಿಕರಣದಲ್ಲಿ ಸರ್ವಗುಣೋಪಸಂಹಾರಾನುಪಸಂಹಾರಗಳನ್ನು ಮಾಡುವ ವಿಷಯದಲ್ಲಿ ಪ್ರಮಾಣವನ್ನು ಹೇಳುವರು.

1 ಉಪಸಂಹಾರಾನುಪಸಂಹಾರಪ್ರಮಾಣಮಾಹ ।

ಆಧ್ಯಾನಾರ್ಥಂ ಹಿ ಸರ್ವೇಗುಣಾ ಉಚ್ಯಂತೆ ಪ್ರಯೋಜನಾಂತಾರ ಭಾವಾತ್

ವೇದದಲ್ಲಿ ಹೇಳಿರುವ ಸರ್ವಗುಣಗಳೂ ಉಪಾಸನಾನುಕೂಲವಾಗಿ ಶ್ರೇಷ್ಠ ಜ್ಞಾನ ಸಾಧನಕ್ಕಾಗಿಯೇ ಗುಣಗಳ ಉಪಸಂಹಾರವು ಧ್ಯಾನಕ್ಕಾಗಿಯಲ್ಲದೆ ಇನ್ನಾವ ಕಾರಣಕ್ಕಾಗಿಯೂ ಅಲ್ಲ

2 **ಧ್ಯಾನಾರ್ಥಮಥ ಜ್ಞಾನಾರ್ಥಂ ಗುಣಾನಾಂ ಸಮುದೀರಣಾ ।**
**ಜ್ಞಾತವ್ಯಾಶ್ಚೈವಧ್ಯಾತವ್ಯಾ ಗುಣಾಸ್ಸರ್ವೇ ಪ್ಯತೋ ಹರೇಃ**
**ನಾನ್ಯತ್ಪ್ರಯೋಜನಂ ಜ್ಞಾನಾದ್ಧ್ಯಾನಾತ್ಕರ್ಮಕೃತೇರಪಿ ।**
**ಶ್ರವಣಾಚ್ಛಾಥಪಾಠಾದ್ವಾವಿದ್ಯಾಭಿಃ ಕಿಂಚಿದಿಷ್ಯತ ॥ ಇತಿ ಪರಮ ಸಂಹಿತಾಯಾಂ**

ಸರ್ವಶ್ರೇಷ್ಠನಾದ ಪರಮಾತ್ಮನ ಗುಣಗಳು ಆತನ ಜ್ಞಾನಪೂರ್ವಕ ಧ್ಯಾನಕ್ಕಾಗಿಯೇ ಮತ್ತಾವ ಕಾರಣಕ್ಕಾಗಿಯೂ ಅಲ್ಲ ಆದ್ದರಿಂದಲೇ ಹರಿಯು ಸರ್ವಗುಣ ಪೂರ್ಣನೆಂದು ತಿಳಿಯಲ್ಪಟ್ಟು ಧ್ಯಾನಮಾಡಲ್ಪಡಬೇಕು ಕರ್ಮಗಳು ಮತ್ತು ಶ್ರವಣ ಮತ್ತು ಪಾಠ ಪ್ರವಚನ ವಿದ್ಯಾರ್ಜನೆಯಿಂದ ಮತ್ತಾವ ಫಲವೂ ಇಲ್ಲ

3 **ಗುಣಾಃ ಸರ್ವೇಪಿ ವೇತ್ತವ್ಯಾ ಧ್ಯಾತವ್ಯಾಶ್ಚ ನ ಸಂಶಯಃ ।**
**ನಾನ್ಯತ್ಪ್ರಯೋಜನಂ ಮುಖ್ಯಂ ಗುಣಾನಾಂ ಕಥನೇ ಭವೇತ್ ॥**

ವೇದಾದಿ ಪುರಾಣೇತಿಹಾಸಗಳಿರದ ಶ್ರೀ ಪರಮಾತ್ಮನ ಗುಣಗಳನ್ನು ತಿಳಿದು ಪರೋಕ್ಷ ಜ್ಞಾನವನ್ನು ಹೊಂದಿ ಬಹ್ಮಗುಣಜ್ಞಾನ, ಧ್ಯಾನ ನಿಷ್ಕಾಮ ಕರ್ಮ ಆಚರಣೆಯಿಂದ ಸಂಮ್ಯಕ್ ಜ್ಞಾನದಫಲವು ಮೋಕ್ಷವೇ ಪರಮ ಸಂಹಿತೆ

4 **ಜ್ಞಾನಧ್ಯಾನ ಸಮಾಯೋಗಾದ್ಗುಣಾನಾಂ ಸರ್ವಶಃ ಫಲಂ**
**ಮುಖ್ಯಂ ಭವೇನ್ನಚಾನ್ಯೇನ ಫಲಂ ಮುಖ್ಯಂ ಕ್ವಚಿದ್ಭವೇತ್ ॥**

ಜ್ಞಾನ ಧ್ಯಾನ ಸಮಾಯೋಗದಿಂದಲೇ ಮುಖ್ಯಫಲವಾದ ಮೋಕ್ಷ ಪ್ರಾಪ್ತಿಯು.

## ಸೂ॥ ಓಂ॥ ಆತ್ಮಶಬ್ದಾಚ್ಚ ಓಂ ॥ 16

ಆತ್ಮೇತ್ಯೇವೋಪಾಸೀತ (ಬೃ 3-4-8) ಇತ್ಯನುಪಸಂಹಾರೆ ಪ್ರಮಾಣಂ.

'ಆತ್ಮೇತ್ಯೇವೋಪಾಸೀತ' ಎಂಬ ವಾಕ್ಯವು ಆತ್ಮ ಶಬ್ದದಿಂದ ಮಾತ್ರೋಪಸಂಹಾರದಿಂದಲೇ ಯಥಾಶಕ್ತಿ ಸರ್ವಗುಣೋಪಸಂಹಾರವನ್ನು ನಿರ್ಧರಿಸುವುದು ಆತ್ಮ ಶಬ್ದದಲ್ಲಿ ಸರ್ವಗುಣಗಳ ಅಂತರ್ಭಾವವು.

ಇತ್ಯಾಧ್ಯಾನಾಧಿಕರಣಂ

-ಆತ್ಮಗೃಹೀತ್ಯಧಿಕರಣಂ-

ಈ ಅಧಿಕರಣದಲ್ಲಿ ಉಪಾಸನೆಯಲ್ಲಿ ಶ್ರೀ ಪರಮಾತ್ಮನ ಆನಂದಾದಿ ನಾಲ್ಕು ಗುಣಗಳ ನಿಯಮವು ಸಮರ್ಥನವು.

## ಸೂ॥ ಓಂ॥ ಆತ್ಮಗೃಹೀತಿರಿತರವದುತ್ತರಾತ್ ಓಂ॥ 17

'ಸತ್ಯಂ ಜ್ಞಾನಂ' – ಇತ್ಯಾದಿ ತೈತರೇಯ ಶೃತಿಯಲ್ಲಿ ಸತ್ಯಾದಿಪದಗಳಿಂದ ಬೇರೆಗುಣಗಳ ಗ್ರಹಣವು ಮಾಡಲ್ಪಟ್ಟಂತೆ ಆತ್ಮೇತೀತಿ ವಾಕ್ಯದಲ್ಲಿಯೂ ಆತ್ಮಶಬ್ದದಿಂದ ಆನಂದಾದಿ ನಾಲ್ಕು ಗುಣಗಳು ಹೇಳಲ್ಪಡುವುದು ಸೂಕ್ತವು. ಅತ್ಮೇಹ್ಯೇತಿ (ಬೃ-3-4-7) ಎಂಬ ಉತ್ತರವಾಕ್ಯದಿಂದಲೂ ಚತುರ್ಗುಣೋಪಾಸನೆಯು ಯುಕ್ತವೇ. ವಿರೋಧವಲ್ಲ

ಸಚ ಆನಂದಾದಯಃ ಪ್ರಧಾನಸ್ಯ ಇತ್ಯುಕ್ತಿ ವಿರೋಧಃ । ಯತಃ ಸತ್ಯಜ್ಞಾನಮನಂತಂಬ್ರಹ್ಮ (ತೈ 2-1) ವಿಜ್ಞಾನಮಾನಂದಂ ಬ್ರಹ್ಮ (ಬೃ 5-9-28) ಇತಿ

ದೇವಾ ದೇವಾತ್ಮಶಬ್ದ ಗೃಹೀತೇಃ ಅತ್ರಹ್ಯೇತೆ ಸರ್ವ ಏಕೀಭವಂತಿ (ಬೃ 3-4-7) ಇತ್ಯುತ್ತರಾತ್ ।

ಮೇಲಿನ ಶೃತಿಗಳಲ್ಲಿ ಹೇಗೆಸತ್ಯಜ್ಞಾನನಂದಾದಿಗಳು ಹೇಗಿವೆಯೋ ಹಾಗೆಯೇ ಇಲ್ಲಿಯೂ ಆನಂದಾದಿಗುಣಗಳ ಗ್ರಹಣವು ಯುಕ್ತವು ಉತ್ತರವಾಕ್ಯವೂಕೂಡ ಎಲ್ಲವಾಕ್ಯಗಳಲ್ಲಿಯೂ ಸಮಾನೋಕ್ತಿಯ ಸ್ಮರಣವು ವಿರೋಧವಲ್ಲ

**2 ಆನಂದಾನುಭವತ್ವಾಚ್ಚ ನಿರ್ದೋಷತ್ವಾಚ್ಚ ಭಣ್ಯತೇ ।**
**ನಿತ್ಯತ್ವಾಚ್ಚ ತಥಾತ್ಮೇತಿ ವೇದವಾದಿ ಭಿರೀಶ್ವರಃ ॥ ಇತಿಬೃಹತ್ತಂತ್ರೆ**

ಆತ್ಮಶಬ್ದವು ಸ್ವಾಮಿತ್ವವನ್ನು ಮಾತ್ರ ಹೇಳುವುದಲ್ಲ ಮತ್ತೆ ಸತ್ಯನಂದಾದಿ ಗುಣಗಳನ್ನು ಹೇಳುವುದೆಂದು ಸ್ಮೃತಿ ಸಮರ್ಥನವು.

ಶ್ರೀ ಪರಮಾತ್ಮನು ನಿತ್ಯಾನಂದನಾದ್ದರಿಂದ ಸರ್ವದೋಷಗಳನ್ನೂ ತನ್ನಿಂದ ದೂರಮಾಡಿಕೊಂಡಿರುವುದರಿಂದಲೂ ನಿತ್ಯಸ್ವತಂತ್ರನಾದ್ದರಿಂದಲೂ ಆತ್ಮಶಬ್ದವಾಚ್ಯ ನೆಂದು ವೇದಾದಿಗಳಲ್ಲಿ ಹೇಳುವರು (ಬೃಹತ್ತಂತ್ರವಾಕ್ಯ)

**ಇತಿ ಆತ್ಮಗೃಹೀಹತ್ಯಧಿಕರಣಂ**

## – ಅನ್ವಯಾಧಿಕರಣಂ –

ಈ ಅಧಿಕರಣದಲ್ಲಿ ಆತ್ಮಶಬ್ದವು ಹಿಂದೆ ಉಪಸಂಹಾರತ್ವದಿಂದ ಹೇಳಿರುವುದು ಆಕ್ಷೇಪಣೆಗೆ ಸಮಾಧಾನವು ಹೇಳಲ್ಪಡುವುದು.

## ಸೂ॥ ಓಂ ಅನ್ವಯಾದಿತಿಚೇತ್ಸ್ಯಾದವಧಾರಣಾತ್ ಓಂ॥ 18

ಸರ್ವಗುಣಾನಾಮನ್ವಯ ಆತ್ಮಶಬ್ದೇ ಭ್ರವತಿ । ಅಸ್ತು ವ್ಯಾಪ್ತೇರಾತ್ಮಶಬ್ದಃ ಪರಮಸ್ಯ ಪ್ರಯುಜ್ಯತೆ ಇತಿ ವಚನಾದಿತಿ ಚೇತ್ಸತ್ಯಂ ಸ್ಯಾಚ್ಚೈವಂ ।

ಆತ್ಮೇತ್ಯೇವ (ಬೃ 3-4-7) ಇತ್ಯವಧಾರಣಾತ್ । ಅನ್ಯಥಾ ಸರ್ವೋಪ ಸಂಹಾರ ವಚನವಿರೋಧಾತ್ ।

ಆತ್ಮಶಬ್ದೋಪಾಸನವು ಪರಮಾತ್ಮನ ಸರ್ವಗುಣಗಳೂ ಯುಕ್ತವಾಗುವುದರಿಂದ ತಾರತಮ್ಯಾನುಸಾರ ಉಪಾಸನಗುಣಗಳ ವ್ಯತ್ಯಸ್ತದಿಂದ ಯುಕ್ತವಲ್ಲವೆಂದರೆ ಹಾಗಲ್ಲ ಆತ್ಮೇತ್ಯೈವ ಎಂಬಶೃತಿಯಲ್ಲಿ ಆತ್ಮಶಬ್ದವು ಸರ್ವಗುಣೋಪಸಂಹಾರಕ ವಾಚ್ಯವಾದರೂ ಶ್ರೀ ಪರಮಾತ್ಮನಲ್ಲಿ ಈ ಉಪಾಸನೆಯು ಯುಕ್ತವು ಏಕೆಂದರೆ ಮುಂದೆ ಅವಧಾರಣವಾಕ್ಯವಾದ ಆತ್ಮೇತ್ಯೇವ ಎಂಬಲ್ಲಿ ಏವ ಶಬ್ದವು. ಅಧಿಕಾರಿಗಳ ಸದೃಶವ್ಯಕ್ತತ್ವಾಪೇಕ್ಷಯಿಂದಲೇ ತಾರತಮ್ಯಾನುಸಾರವೇ ಆಗಿ ಯುಕ್ತೋಪಾಸನೆಯೇ ಆಗುವುದು

ಇತ್ಯನ್ವಯಾಧಿಕರಣಂ

## - ಕಾರ್ಯಾಧಿಕರಣಂ -

ಈ ಅಧಿಕರಣದಲ್ಲಿ ಅಲೌಕಿಕ ಗುಣಗಳೇ ಉಪಸಂಹಾರ್ಯವೆಂದು ಸಮರ್ಥನೆ

## ಸೂ॥ ಓಂ॥ ಕಾರ್ಯಾಖ್ಯಾನಾದಪೂರ್ವಂ ಓಂ॥ 16

ಶ್ರೀ ಪರಮಾತ್ಮಧ್ಯಾನಕ್ಕೆ ಅಲೌಕಿಕವಾದ ಮೋಕ್ಷಫಲವು ಸಿದ್ಧಿಸುವುದರಿಂದ ಅಪೂರ್ವ ಅಲೌಕಿಕ ಪರಮಾತ್ಮ ಗುಣಗಳೇ ಧ್ಯಾನಮಾಡಲ್ಪಡಬೇಕು.

ಅಲೌಕಿಕಾಸ್ತಸ್ಯ ಗುಣಾ ಹ್ಯುಪಾಸ್ಯಾಅಲೌಕಿಕ ಯುಕ್ತಿಕಾರ್ಯಂ ಯತೊಸ್ಯ ಇತಿ ಕಾರ್ಯಖ್ಯಾನಾದನ್ಯತ್ರ ಅದೃಷ್ಟಾ ಏವ ಗುಣಾಃ ಉಪಾಸ್ಯಾಃ ।

ಧ್ಯಾನವು ಅಲೌಕಿಕವಾದ ಮೋಕ್ಷಫಲಸಾಧನವಾದ್ದರಿಂದ ಅದನ್ನು ಹೊಂದಲು ಅಲೌಕಿಕ (ಲೋಕ ವಿಲಕ್ಷಣ) ಆನಂದಾದಿಗುಣಗಳೇ ಧ್ಯಾನಿಸಲ್ಪಡಬೇಕು.

ಇತಿ ಕಾರ್ಯಾಧಿಕರಣಂ

**- ಸಮಾನಾಧಿಕರಣಂ -**

ಈ ಅಧಿಕರಣದಲ್ಲಿ ಉಪಾಸನೆಗೆ ತಕ್ಕಂತೆ ಫಲಪ್ರಾಪ್ತಿಯು ಎಂದು ಬಹ್ಮದೇವರ ಮತ್ತು ಸರಸ್ವತೀದೇವಿಯರ ಉಪಾಸನಾ ವಿಷಯದಲ್ಲಿ ಸಮ ವಿಷಮತ್ವವು ಸಮರ್ಥನವು

## ಸೂ॥ ಓಂ ॥ ಸಮಾನ ಏವಂ ಚಾ ಭೇಧಾತ್ ಓಂ॥ 20

ಬ್ರಹ್ಮದೇವರು ಮತ್ತು ಸರಸ್ವತಿದೇವಿಯರೂ ಕೂಡ ಸತ್ಯಲೋಕಸ್ಥರಾದ್ದರಿಂದ ಇಬ್ಬರಿಗೂ ಒಂದೇವಿಧ ಉಪಸಂಹಾರವು ಯುಕ್ತವು ಆದ್ದರಿಂದ ಮೋಕ್ಷದಲ್ಲಿ ಫಲ ಪ್ರಾಪ್ತಿಯು ಒಂದೇವಿಧವಾಗಿ ತಾರತಮ್ಯವು ಗುಣಫಲಪ್ರಾಪ್ತಿಗೆ ವೈಷಮ್ಯವು ಆದ್ದರಿಂದ ಇಬ್ಬರಿಗೂ ಸಮನಾಗಿ ತ್ರಿವಿಕ್ರಮಾದಿ ರೂಪೋಪಸಂಹಾರವು ಯುಕ್ತವು ಎಂದರೆ ಹಾಗಲ್ಲ. ಅವರಿಬ್ಬರಿಗೂ ತಾರತಮ್ಯವ್ಯತ್ಯಾಸದಿಂದಲೇ ಫಲಪ್ರಾಪ್ತಿಯಲ್ಲಿ ವ್ಯತ್ಯಾಸಕ್ಕಾಗಿ ಉಪಸಂಹಾರದಲ್ಲಿ ವ್ಯತ್ಯಾಸರೀತಿಯು ಯುಕ್ತವೆ. ಸರಸ್ವತೀದೇವಿ ಯವರಿಗೆ ಸಾಧಾರಣ ನಿತ್ಯವಿಶ್ರಾಂತಿರಮಣರೂಪಾದಿಗಳ (ನಿತ್ಯಾನಂತರೂಪಗಳಲ್ಲಿ ಅನಂತಪ್ರಿಯಗಳುಳ್ಳದ್ದೆಂದು) ಉಪಸಂಹಾರಮಾತ್ರವೇ ಯುಕ್ತವು. ಚತುರ್ಮುಖ

ಬ್ರಹ್ಮನಿಗಾದರೂ ಸರ್ವಕಾಲದಲ್ಲಿಯೂ ತ್ರಿವಿಕ್ರಮತ್ವಾದಿ ವಿಶೇಷಾಕಾರದಿಂದ ಉಪಾಸನೆಯು ಯುಕ್ತವು.

ಅಪೂರ್ವತ್ವೇಪಿ ಸಮಾನಾನಾಮೇವೋಪಸಂಹಾರಃ । ನ ತು ತ್ರಿವಿಕ್ರಮತಾದೀನಾಂ ಕಾದಾಚಿತ್ಕಾನಾಂ ಪೃಥಕ್ತ್ವೇನ ನಿತ್ಯವಿಕ್ರಾಂತ್ಯಾದಿಷ್ವಂತರ್ಭಾವಾತ್ ॥

ತ್ರಿವಿಕ್ರಮಾದಿ ಕ್ರಿಯಾ ವಿಶೇಷವು ಲೋಕದೃಷ್ಟಿಯಿಂದ ಅತ್ಯಾಶ್ಚರ್ಯ ವಿಷಯಕವಾದಾಗ್ಯೂ ಈ ಮೋಕ್ಷರೂಪೋಪಾಸನೆಯಲ್ಲಿ ಬ್ರಹ್ಮದೇವರು ಮತ್ತು ಸರಸ್ವತೀದೇವಿಯರುಗಳಿಗೆ ತಾರತಮ್ಯಾನುಸಾರ ಉಪಸಂಹಾರತ್ಯತ್ಯಾಸವು ಸಿದ್ಧವು. ತ್ರಿವಿಕ್ರಮತ್ವಾದಿ ವಿಶೇಷಕಾರ್ಯಗಳೂ ಯಾವಾಗಲಾದರೂ ಒಂದುಕಾಲದಲ್ಲಿ ಉದ್ಬೋಧವಾದರೂ ನಿತ್ಯವಿಕ್ರಾಂತ್ಯಾದಿಗುಣಗಳಲ್ಲಿ ಅಂತರ್ಭಾವ ಹೊಂದುವುದರಿಂದ ಉಪಸನವ್ಯತ್ಯಾನು ಸಾಧ್ಯವಾಗಿ ತಾರತಮ್ಯಾನುಸಾರವೇ ಉಪಸಂಹಾರವು

## ಸೂ॥ ಓಂ॥ ಸಂಬಂಧಾದೇವ ಮನ್ಯತ್ರಾಪಿ ಓಂ॥ 21

ಚತುರ್ಮುಖಬ್ರಹ್ಮನಿಗೆ ತ್ರಿವಿಕ್ರಮಾದಿಮೂರ್ತಿಗಳ ಕ್ರಿಯಾ ವಿಶೇಷಗಳು ತಾದಾತ್ಮ್ಯರೂಪಸಂಬಂಧದಿಂದ ನಿತ್ಯಗಳಾದ್ದರಿಂದ ಉಪಾಸನೆಯು ಶ್ರೇಷ್ಟತೆಯು ಯುಕ್ತವು.

ಪರಮಾತ್ಮಸಂಬಂಧಿತ್ವೇನ ನಿತ್ಯತ್ವಾತ್ ತ್ರಿವಿಕ್ರಮತ್ವಾದಿಷ್ವ್ಯಪ್ಯತಸಂಹಾರ್ಯತ್ವಂ ಯುಜ್ಯತೆ ।

ಶ್ರೀ ಪರಮಾತ್ಮನ ನಿತ್ಯಸಂಬಂಧದಿಂದ ವಿಶೇಷೋಪ ಸಂಹಾರವು ಯುಕ್ತವು.

2 ಗುಣಾಸ್ತ್ರೈವಿಕ್ರಮಾದ್ಯಾಶ್ಚ ಸಂಹರ್ತವ್ಯಾನ ಸಂಶಯಃ ।
ವಿರಿಂಚಸ್ಯೈವ ನಾನ್ಯೇಷಾಂ ಸ ಹಿ ಸರ್ವಗುಣಾಧಿಕಃ ॥
ಇತಿ ಬ್ರಹತ್ತಂತ್ರೇ

ತ್ರಿವಿಕ್ರಮತ್ವಾದಿ ಕ್ರಿಯಾತ್ಮಕ ಧರ್ಮಗಳಾದ ಹನನ ಭಕ್ಷಣಾದಿ ಕರ್ಮಗಳ

ವಿಶೇಷದ್ಯೋತಕಗಳಾಗಿ ಚತುರ್ಮುಖಬ್ರಹ್ಮದೇವರಿಂದ ಮಾತ್ರ ಉಪಾಸ್ಯವು ಆತನೇ ಸರ್ವಜೀವೋತ್ತಮನು

ಇತಿ ಸಮಾನಾಧಿಕರಣಂ

-ನವಾಧಿಕರಣಂ-

ಈ ಅಧಿಕರಣದಲ್ಲಿ ಆತ್ಮ ಶಬ್ದೋಕ್ತ ಗುಣಗಳಿಂದ ಉಪಾಸನವು ಸರ್ವರಿಗೂ ಯುಕ್ತವೆಂದು ಸಮರ್ಥನೆವು, ಆತ್ಮಶಬ್ದವು ಸರ್ವಗುಣಗಳ ಸಾಧಾರಣ ವಾಚಕ ವಾಗಿ ಇಷ್ಟೇ ಗುಣಗಳು ಉಪಾಸ್ಯಗಳು ಎಂದು ನಿರ್ದಿಷ್ಟವಾಗಿ ಹೇಳಲ್ಪಡುವುದರಿಂದ ತಾರತಮ್ಯಾನುಸಾರ ಗು ಣೋಪಾಸನೆಯ ವಿಷಯವಾಗಿ ಯಾರಿಂದಲೂ ಉಪಾಸ್ಯವಲ್ಲ ವೆಂದರೆ,

## ಸೂ|| ಓಂ|| ನ ವಾ ವಿಶೇಷಾತ್ ಓಂ|| 22

ನವಾತ್ಮ ಶಬ್ದೇನ ಸರ್ವಗುಣಗ್ರಹೀತಿಃ । ಅಧಿಕಾರಿ ವಿಶೇಷಾತ್ ॥

ಆತ್ಮ ಶಬ್ದದಿಂದ ಉಪಾಸನೆಯಲ್ಲಿ ಯೋಗ್ಯತೆಯಂತೆ ಗುಣಗಳ ಉಪ ಸಂಹಾರವು ಕಾಣಬರದಿರುವುದರಿಂದ ಹಾಗೆ ಉಪಾಸನವು ಹೇಳಿರುವುದು ಸೂಕ್ತವಲ್ಲ ವೆಂಬ ಪೂರ್ವಪಕ್ಷಕ್ಕೆ ಉತ್ತರವಾಗಿ ಭಾಲ್ಲವೆಯ ಶೃತಿಯಲ್ಲಿ ಹೇಳಿರುವ ವ್ಯತ್ಯಾಸವು ಯುಕ್ತವೆ.

## ಸೂ|| ಓಂ|| ದರ್ಶಯತಿ ಚ ಓಂ|| 23

ಸರ್ವಾನ್ಸ್ಗುಣಾನಾತ್ಮಶಬ್ದೋ ಬ್ರವೀತಿ ಬ್ರಹ್ಮಾದೀನಾಮಿತರೇಷಾಂ ನ ಚೈವ ।
ಇತಿ ಭಾಲ್ಲವೇಯ ಶೃತಿಯು

ಆತ್ಮಶಬ್ದವು ಬ್ರಹ್ಮದೇವರನ್ನು ಮಾತ್ರ ಕುರಿತು ಸರ್ವಧರ್ಮಗಳನ್ನು ಹೇಳುವುದು. ಇತರರಿಗೆ ಅವರ ತಾರತಮ್ಯಾನುಸಾರ ಶಕ್ತಿಗುಣಗಳನ್ನೇ ಹೇಳುವುದು ಪೂರ್ಣಗುಣಗಳನ್ನಲ್ಲ. ಆದ್ದರಿಂದ ಆತ್ಮಶಬ್ದವು ಉಪಾಸಕರ ಸಾಮರ್ಥ್ಯಾನುಸಾರ ಧರ್ಮಗಳನ್ನು ಪ್ರಕಾಶಪಡಿಸಿ ಫಲವನ್ನು ಕೊಡುವುದು.

ಇತಿ ನವಾಧಿಕರಣಂ

## -ಸಂಭೃತ್ಯಧಿಕರಣಂ-

ಈ ಅಧಿಕರಣದಲ್ಲಿ ಸಭೃತ್ವಾದಿಗುಣಗಳು ಸರ್ವೋಪಾಸ್ಯವಲ್ಲವೆಂದು ಹೇಳುವುದು

### ಸೂ|| ಓಂ|| ಸಂಭೃತಿದ್ಯುವ್ಯಾಪ್ತ್ಯಪಿಚಾತಃ ಓಂ|| 24

ಸಮ್ಯಗ್ಭರಣ ಪ್ರಕಾಶವ್ಯಾಪ್ತಗುಣಗಳ ಉಪಾಸ್ಯವು ಸರ್ವಮುಮುಕ್ಷುಗಳಿಂದಲೂ ಉಪಾಸ್ಯವಲ್ಲ. ಅದು ದೇವತೆಗಳಿಂದಲೇ ಉಪಾಸನವು. ಅದು ಅಧಿಕಾರ ಯೋಗ್ಯತೆಯ ಫಲಾಭಿದಾಯಕವಾದ ಗುಣಗಳಾದ್ದರಿಂದ ಸರ್ವೋಪಾಸ್ಯನಲ್ಲ,

ಸಂಭೃತಿದ್ಯುವ್ಯಾಪ್ತೀ ಅಪಿ ದೇವಾದೀನಾಮುಪಸಂಹರ್ತವ್ಯಾನಾನ್ಯೇಷಾಂ ।
ಅತ ಏವ ಯೋಗ್ಯತಾವಿಶೇಷಾತ್ ।

ಯೋಗ್ಯತಾವಿಶೇಷಪ್ರಾಪ್ತಿ ಫಲಕಾರ್ಯವಾದ್ದರಿಂದ ಸರ್ವರಿಂದ ಉಪಾಸ್ಯವಲ್ಲ

2 ದೇವಾದೀನಮುಪಾಸ್ಯಾಸ್ತು ಭೃತಿವ್ಯಾಪ್ತ್ಯಾದಯೋಗುಣಾಃ ।
ಆನಂದಾದ್ಯಾಸ್ತು ಸರ್ವೇಷಾಮ ನ್ಯಥಾನರ್ಥಕೃದ್ಭವೇತ್ ॥
ಇತಿ ಬ್ರಹ್ಮತರ್ಕೇ

ಸ್ವರ್ಗ ಭೂಲೋಕಗಳ ಸಂಭೃತಿಯು ಭರಣಾಶಕ್ತಿಯು ಮಹಾಪ್ರಕಾಶ ವ್ಯಾಪ್ತಿಯು ಈ ಗುಣಗಳು ದೇವತೆಗಳಿಂದಲೇ ಉಪಾಸ್ಯವು ಯೊಗ್ಯತಾವಿಶೇಷ ದಿಂದಲೇ ಲಭ್ಯಫಲವು

ಇತಿ ಸಂಭೃತ್ಯಧಿಕರಣಂ

- ಪುರುಷಾಧಿಕರಣಂ -

ಈ ಅಧಿಕರಣದಲ್ಲಿ ಸರ್ವವಿದ್ಯೆಗಳೂ ಯಥಾಯೋಗ್ಯ ಉಪಸಂಹಾರ್ಯಗಳೇ ಎಂದು ಸಮರ್ಥನವು. ಸಾರ್ವತ್ರಿಕ ಮಹಾಗುಣಗಳ ಉಪಾಸನೆಯಿಂದಲೇ ಉತ್ತಮ ಮಧ್ಯಮ ಅಧಮ ಮುಮುಕ್ಷುಗಳಿಗೆ ಯೋಗ್ಯತಾನುಸಾರ ಫಲಪ್ರಾಪ್ತಿಯಿಂದ ಬ್ರಹ್ಮ ಗುಣೋಪಾಪ್ತಿಯ ವಿಶೇಷವೇನನ್ನೂ ಹೇಳದ್ದರಿಂದ ಅಲ್ಪಗುಣೋ ಪಾಪ್ತಿಯೇ ಯುಕ್ತವು ಎಂದು ಪೂರ್ವಪಕ್ಷವು. ಅದಕ್ಕೆ ಉತ್ತರವಾಗಿ. ಹಾಗಲ್ಲ

1 ಯಸ್ಯಾಂ ವಿದ್ಯಾಯಾಂ ಮಹಾಗುಣಾ ಉಚ್ಯಂತೆ ಸೋತ್ತ
ಮಾನಾಮಿತರಾನ್ಯೇಷಾಮಿತಿ ಚೇತ್ ।

ಉತ್ತಮ ಜೀವರಿಗೆಮಾತ್ರ ಮಹಾಗುಣಗಳನ್ನು ಹೇಳುವ ವಿದ್ಯಾ ಉಪಾಸನೆ ಯು ಯುಕ್ತವು. ಇತರರಿಗೆ ಸಾಧಾರಣ ಗುಣೋಪಾಸನೆಯೇ ಯಾಕೆಂದರೆ ಫಲತಾರತಮ್ಯದಿಂದಲೆಂದರೆ ಹಾಗಲ್ಲ.

**ಸೂ॥ ಓಂ॥ ಪುರುಷವಿದ್ಯಾಯಾಮಪಿ ಚೇತರೇಷಾಮ ನಾಮ್ನಾನಾತ್ ಓಂ॥ 25**

ಪುರುಷಸೂಕ್ತದಲ್ಲಿ ಎಲ್ಲೆಡೆಯಲ್ಲಿಯೂ ಶ್ರೀ ಪರಮಾತ್ಮನ ಮಹಾಗುಣಗಳೇ ಹೇಳಲ್ಪಟ್ಟಾಗ್ಯೂ ಪೂರ್ಣವಾಗಿ ಆತನ ಗುಣಗಳೆಲ್ಲವೂ ಹೇಳಲ್ಪಡದಿರುವುದರಿಂದ (ಅವು ಅಸಂಖ್ಯಾತವಾಗಿರುವುವು) ಯಥಾಯೋಗ್ಯ ಸರ್ವಗುಣೋಪಸಂಹಾರವು ಯುಕ್ತವು.

ಪುರುಷ ಸೂಕ್ತವಿದ್ಯಾಯಾಮಪಿ ಕೇಷಾಂಚಿದ್ಗುಣಾನಾಮನಾಮ್ನಾನಾತ್

ಪುರುಷಸೂಕ್ತ ವಿದ್ಯೆಯಲ್ಲಿಯೂ ಶ್ರೀ ಪರಮಾತ್ಮನ ಗುಣಗಳು ಪೂರ್ಣವಾಗಿ ಹೇಳಲ್ಪಡದಿರುವುದರಿಂದ ಸರ್ವ ಗುಣೋಪ ಸಂಹಾರವು ಮಾಡಲ್ಪಡಬೇಕು.

**3 ಸರ್ವತಃ ಪೌರುಷೇಸೂಕ್ತೇ ಗುಣಾ ವಿಷ್ಣೋರುದೀರಿತಾ ।**
**ತತ್ರಾಪಿ ನೈವ ಸರ್ವೇಪಿ ತಸ್ಮಾತ್ತ್ಯಾರ್ಯೋಪಸಂಹೃತಿಃ ॥**
**ಇತಿ ಬ್ರಹ್ಮತರ್ಕೆ**

ಪುರುಷಸೂಕ್ತದಲ್ಲಿ ಪರಮಾತ್ಮನ ಗುಣಗಳೇ ಹೇಳಿದಾಗ್ಯೂ ಸರ್ವಪರಮಗುಣ ಗಳೂ ಅದರಲ್ಲಿ ಅಡಕವಾಗಿಲ್ಲವಾಗಿ ಸರ್ವಗುಣೋಪಸಂಹಾರವು ಯುಕ್ತವು.

**ಇತಿ ಪುರುಷಾಧಿಕರಣಂ**

**-ವೇಧಾಧಿಕರಣಂ-**

ಈ ಅಧಿಕರಣದಲ್ಲಿ ದುರ್ಜನ ವೇಧನ ಛೇಧನ ಹಿಂಸನಾದಿ ಗುಣಗಳು ಸರ್ವೋ ಪಾಸ್ಯಗಳಲ್ಲವೆಂದು ಸಮರ್ಥನವು.

## ಸೂ॥ ಓಂ॥ ವೇಧಾದ್ಯರ್ಥಭೇದಾತ್ ಓಂ ॥ 26

ವೇದಾದ್ಯುಪಾಸನೆಯು ಹಿಂಸಾತ್ಮಕಕಾರಿಯಾದ್ದರಿಂದಲೂ ಯತ್ಯಾದಿಗಳಿಂದ ಮಾಡಲು ಅಯೋಗ್ಯ ಫಲದಾಯಕವಾದ್ದರಿಂದಲೂ ಹಿಂಸಾತ್ಮಕ ಗುಣಗಳು ಸರ್ವೋ ಪಾಸ್ಯಗಳಲ್ಲ.

ಭಿಂಧಿಂವಿದ್ಧಿ ಶೃಣೀಹೀತಿ ಫಲಭೇದೇನ ಸರ್ವಶಃ ।
ಯತ್ಯಾದೀನಾಂ ತೇಷ್ವಯೋಗಾನ್ನಾಧಿಕಾರ್ಥೈಕತಾ ಭವೇತ್ ।
ಅಯೋಗ್ಯೋಪಾಸನಾದೀಯಂನರ್ಥಂ ಚಾರ್ಥನಾಶನಂ ॥ ಇತಿ ಬೃಹತ್ತಂತ್ರೇ

ಭಿಂಧಿವಿದ್ಧಿ ಶೃಣೀಹಿ ಇತ್ಯಾದಿ ಫಲಭೇದದಿಂದ ಹೇಳಲ್ಪಡುವ ಗುಣಗಳು ಹಿಂಸಾತ್ಮಕವಾಗಿ ಯತಿಗಳಿಗೆ ಧ್ಯಾನ ಮೊದಲು ಪ್ರಾಣಾಯಾಮ ಕಾಲದಲ್ಲಿ ಪಾಪ ಪುರುಷ ಶೋಷಣ ದಹನಾದಿಗಳು ಕರ್ತವ್ಯವಾದರೂ ಧ್ಯಾನಕಾಲದಲ್ಲಿ ಸ್ವ ಯೋಗ್ಯ ಗುಣಗಳನ್ನು ಮಾತ್ರ ಉಪಸಂಹಾರಮಾಡಬೇಕಾದ ವಿಧಿಯಿಂದ ಅಯೋಗ್ಯಫಲ ದಾಯಕವಾದ ಹಿಂಸಾತ್ಮಕಗುಣಗಳು ಅನರ್ಥಸಾಧಕವಾಗಿ ಉಪಸಂಹಾರ ಯೋಗ್ಯ ಗಳಲ್ಲ.

ಇತಿ ವೇದಾಧಿಕರಣಂ

## -ಹಾನ್ಯಾಧಿಕರಣಂ-

ಈ ಅಧಿಕರಣದಲ್ಲಿ ಮುಕ್ತಿಯಲ್ಲಿಯೂ ಉಪಾಸನೆಯೂ ಸಮರ್ಥನೆ ಮಾಡಲ್ಪಟ್ಟದೆ,

ಮುಕ್ತಸ್ಯ ಉಪಾಸನಾ ಕರ್ತವ್ಯಾನವೇತಿ ।

ಮುಕ್ತನಾದ ಜೀವನಿಗೆ ಮೋಕ್ಷದಲ್ಲಿ ಉಪಾಸನ ವಿಧಿಸಲ್ಪಡದಿರುವುದರಿಂದ ಮಾಡಬೇಕಾಗಿಲ್ಲ, ಉಪಾಸನೆಗೆ ಮೋಕ್ಷವೇ ಫಲವು ಅನಂತರ ಉಪಾಸನೆಯು ಫಲವು ಇಲ್ಲದ್ದರಿಂದ ಮುಕ್ತಿಫಲಪರ್ಯಂತವೇ ಉಪಾಸನವು ಯೋಗ್ಯವೆಂದು ಒಂದು ಪಕ್ಷ ಇನ್ನೊಂದು ಪಕ್ಷವು ಮೋಕ್ಷದಲ್ಲಿಯೂ ಉಪಾಸನೆಯುಕ್ತವು. ಯಾಕೆಂದರೆ ಮುಕ್ತನೂ ಪರತಂತ್ರನಾದ್ದರಿಂದ ವಿಷಯ ಭೋಗಾಪೇಕ್ಷೆಯು ಯಾವಾಗಲಾದರೂ

ಇಚ್ಛೆಯಾದಲ್ಲಿ ಅದರ ಸಂಭವಕ್ಕಾಗಿ ಯುಕ್ತವು ವಿಧಿಬದ್ಧವಾಗಿಯಲ್ಲ ಸ್ವೇಚ್ಛೆಯಿಂದಲೆ ಎಂದು

2. ಅತೋಽಬ್ರವೀತಿ - ಅದಕ್ಕಾಗಿ ಹೇಳಿದೆ-

**ಸೂ॥ ಓಂ॥ ಹಾನೌತೂಪಾಯನಶಬ್ದಶೇಷತ್ವಾತ್ಕುಶಾಚ್ಛಂದಸ್ತುತ್ಯುಪಗಾನವತ್ತದುಕ್ತಂ ಓಂ॥ 27**

ನಿಯತ ಸ್ವಾಧ್ಯಾಯಾನಂತರಂ ಸ್ವೇಚ್ಛಯಾ ಕುಶಗ್ರಹಣಸ್ತುತ್ಯುಪಗಾನವದೇವಮೋಕ್ಷೇಉಪಾಸನಾದಿ ।

ಬಂಧನಾಶ ಮುಕ್ತಿಯಲ್ಲಿ ಏತಸ್ಯಾಮ್ ಎಂಬ ಶ್ರುತಿಯು ಉಪಾಸನವು ಶ್ರುತವಾದ್ದರಿಂದ ಉಪಾಸನವು ಮುಕ್ತಿಯಲ್ಲಿಯೂ ಯುಕ್ತವು. ಸಂಧ್ಯಾವಂದನಾದಿ ಉಪಾಸನಾನಂತರ ಕುಶಗ್ರಹಣಪೂರ್ವಕ ವೇದಾಧ್ಯಯನಾದಿ ಉಪಾಸನಾದಿ ವಿಧಿಗಳನ್ನು ಮೋಕ್ಷಾನಂತರದಲ್ಲಿಯೂ ಹೇಳಿದೆಯಾಗಿ ವಿಧಿಯಿಂದ ಅಲ್ಲಿರದಿದ್ದರೂ ಸ್ವೇಚ್ಛೆಯಿಂದ ಉಪಾಸನೆಯು ಮಾಡಲ್ಪಡುವುದು. ವಿಧಿಬದ್ಧಉಪಾಸನಾನಂತರ ಕುಶ ಗ್ರಹಣಪೂರ್ವಕ ಸ್ತುತ್ಯಾದಿಗಳು ಸ್ವೇಚ್ಛೆಯಿಂದ ಮಾಡಲ್ಪಡುವಂತೆ

3 **ಬ್ರಹ್ಮವಿದಾಪ್ನೋತಿ ಪರಂ** (ತೈ 2-1-1) **ಇತಿ ಮೋಕ್ಷ ವಾಕ್ಯಶೇಷ ತ್ವಾದಿತರೇಷಾಂ ತಚ್ಛ್ರುತ್ಯೋಕ್ತಂ ಏತತ್ಸಾಮ ಗಾಯನ್ನಾಸ್ತೆ**
(ತೈ 3-10)

ಋಗ್ಮಂತ್ರದಲ್ಲಿ ಹೇಳಿದೆ ಮುಕ್ತಚತುರ್ಮುಖಬ್ರಹ್ಮನು ಹಾಗೂ ಇತ್ಯಾದಿ ಎಂದು ಸಾಮಮಂತ್ರವನ್ನು ಹೇಳುತ್ತಿರುವವನು ಮತ್ತೊಬ್ಬನು ಪುಷ್ಟಿಯನ್ನುಚ್ಚರಿಸುವನು. ಇನ್ನೊಬ್ಬನು ಪೌರುಷೇಯ ವಿದ್ಯೆಯನ್ನು ಹೇಳುವನು. ಮತ್ತೊಬ್ಬನು ಮಂತ್ರಗಳಿಂದ ಧ್ಯಾನಿಸುವನು ಹೀಗೆ ಮುಕ್ತರೂ ಸ್ವೇಚ್ಛೆಯಿಂದಲೇ ಉಪಾಸನವನ್ನು ಮಾಡುವರೆಂದು ಹೇಳಿದೆ.

4 ಬೃಹ್ಮತರ್ಕೇ ಚ – ಮುಕ್ತಾ ಅಪಿ ಹಿಕುರ್ವಂತಿಸ್ವೇಚ್ಛಯೋ
ಪಾಸನಂ ಹರೇಃ ।
ನಿಯಮಾನಂತರಂ ವಿಪ್ರಾಃ ಕುಶಾದ್ಯೈರಷ್ಯ
ಧೀಯತೆ ॥ ಇತಿ

ಸ್ವೇಚ್ಛೆಯಿಂದ ಮುಕ್ತರಿಗೆ ಉಪಾಸನೆಯು ಹೇಳಿದೆ

5 ಕೃಷ್ಣೋಮುಕ್ತೈರಿಜ್ಯತೆವೀತಮೋಹೈಃ ಇತಿ ಚ ಭಾರತೇ

ಶ್ರೀಕೃಷ್ಣಪರಮಾತ್ಮನು ವಿಧಿಬಂಧದಿಂದ ಮುಕ್ತರಾದ ಮುಕ್ತರಿಂದಲೂ ಪೂಜಿಸಲ್ಪಡುವನು ಆದರೆ ಸ್ವೇಚ್ಛೆಯಿಂದಲೇ ವಿಧಿಬದ್ಧವಾಗಿ ಅಲ್ಲ

## ಸೂ॥ ಓಂ॥ ಸಾಂಪರಾಯೇ ತರ್ತವ್ಯಾ ಭಾವಾತ್ತಥಾಹ್ಯನ್ಯೇ ಓಂ॥ 28

ಸ್ವೇಚ್ಛಯೈವೇತ್ಯಂಗೀಕರ್ತವ್ಯಂ ಮುಕ್ತಸ್ಯ ತೀರ್ಣತ್ವಾತ್ ।
ತೀರ್ಣೋಹಿ ತದಾ ಸರ್ವಾಂಛೋಕಾ ಹೃದಯಸ್ಯ ಭವತಿ ॥
(ಬೃ6-3-22) ಇತಿ ಹಾನ್ಯೇ ಪಠಂತಿ

ಮೋಕ್ಷದಲ್ಲಿ ಉಪಾಸನೆಯು ಸ್ವೇಚ್ಛೆಯಿಂದಲೇ ಅನಿಷ್ಟ ನಿವೃತ್ತ್ಯರ್ಥವಾಗಲ್ಲ. ಮುಕ್ತಿಯು ಪರಿಹಾರಮಾಡಬೇಕಾದ ಸರ್ವಾನಿಷ್ಟನಿವೃತ್ತಿರೂಪನಾದ್ದರಿಂದ ಯಾವ ಪರಿಹಾರ್ಯ ವಿಷಯವು ಇರುವುದಿಲ್ಲ ಹೃದಯಸ್ಥ ಸರ್ವಶೋಕಗಳೂ ನಾಶವಾಗಿ ಪರಮಾತ್ಮಾಧೀನತೆಯಿದ್ದಾಗ್ಯೂ ಸರ್ವೇಷ್ಟಗಳೂ ಸಂಕಲ್ಪಮಾತ್ರದಿಂದಲೇ ಅನುಭವ ವಾಗುವುದರಿಂದ ಉಪಾಸನೆಯು ಸ್ವೇಚ್ಛೆಯಿಂದಲೇ ನಿಯತವಲ್ಲ.

7 ವಾಯುಪ್ರೋಕ್ತೇ –
**ಸ್ಥಿತ ಪ್ರಜ್ಞತ್ವಮಾಪ್ತಾಯೇ ಜ್ಞಾನೇನ ಪರಮಾತ್ಮನಃ ।**
**ಬ್ರಹ್ಮಲೋಕಂ ಗತಾಸ್ಸರ್ವೇ ಬ್ರಹ್ಮಣಾ ಚ ಪರಂಗತಾಃ ।**
**ತೀರ್ಣಕರ್ತವ್ಯಭಾಗಾಶ್ಚ ಸ್ವೇಚ್ಛೆಯೋಪಾಸತೇ ಪರಂ ॥ ಇತಿ**

ಶ್ರೀ ಪರಮಾತ್ಮನ ಜ್ಞಾನಹೊಂದಿ ಸ್ಥಿತಪ್ರಜ್ಞರಾದ ಮುಮುಕ್ಷುಗಳು ಬ್ರಹ್ಮ ಲೋಕವನ್ನು ಹೊಂದಿ ಬ್ರಹ್ಮನಜೊತೆ ಪರಮಾತ್ಮನನ್ನು ಹೊಂದಿ ಸರ್ವ ಸಂಸಾರ ದುಃಖವನ್ನು ಕಳೆದುಕೊಂಡು ಸ್ವೇಚ್ಛೆಯಿಂದಲೇ ಪರಮಾತ್ಮನ ಉಪಾಸನೆ ಮಾಡು ವರು

ಇತಿ ಹಾನ್ಯಾಧಿಕರಣಂ

– ಛಂದಾಧಿಕರಣಂ –

ಈ ಅಧಿಕರಣದಲ್ಲಿ ಮುಕ್ತರಿಗೆ ಕರ್ಮಗಳಲ್ಲಿ ನಿಯಮಭಾವವು ಸಮರ್ಥನವು

1 **ಕರ್ಮಾಪಿ ಕುರ್ವ-ಂತಿ ನವೇತ್ಯತ ಆಹ ।**

ಮುಕ್ತರಿಗೆ ಕರ್ಮಾಕರ್ಮಗಳಲ್ಲಿ ವಿಧಿಬದ್ಧತ್ವ ಮತ್ತು ಪ್ರತ್ಯವಾಯವು ಇಲ್ಲದ್ದ ರಿಂದ ಸ್ವೇಚ್ಛೆಯಿಂದಲೇ ಮಾಡುವುದು ಮತ್ತು ಮಾಡದಿರುವುದು ಕೊಡುವುದು

## ಸೂ॥ ಓಂ॥ ಛಂದತ ಉಭಯಾ ವಿರೋಧಾತ್ ಓಂ॥ 29

ಸ್ವೇಚ್ಛಯಾ ಕುರ್ವಂತಿ ನವಾ । ಬಂಧಪ್ರತ್ಯವಾಯಯೋರಭಾವಾತ್ ॥

ಇಚ್ಛೆಬಂದಂತೆ ಕರ್ಮ ಮಾಡಬಹುದು ಬಿಡಬಹುದು ನಿಯಮಭಾದಕಗಳಿಲ್ಲ

## ಸೂ॥ ಓಂ॥ ಗತೇರರ್ಥವತ್ತ್ವಮುಭಯಥಾನ್ಯಥಾ ಹಿ ವಿರೋಧಃ ಓಂ॥ 30

ಬಂಧ ಪ್ರತ್ಯವಾಯಾಭಾವೇ ಹಿ ಮೋಕ್ಷಸ್ಯಾರ್ಥವತ್ತ್ವಂ ।
ಅನ್ಯಥಾಮೋಕ್ಷತ್ವಮೇವ ನ ಸ್ಯಾತ್ ॥

ಬಂಧ ಪ್ರತ್ಯವಾಯಗಳ ಅಭಾಸವೇ ಮೋಕ್ಷವೆಂಬ ಪುರುಷಾರ್ಥವು. ಪುರುಷಾರ್ಥರೂಪಮೋಕ್ಷಪ್ರಾಪ್ತಿಯಿಂದ ಯಾವಜೀವನು ಸಂಸಾರದ ಬಿಡುಗಡೆ ಹೊಂದುವನೋ ಆತನಲ್ಲಿ ಯಾವ ನಿಜಬಂಧವೂ ಸಾಧ್ಯವಿಲ್ಲ

**3 ಕದಾಚಿತ್ಕರ್ಮ ಕುರ್ವಂತಿ ಕದಾಚಿನ್ನೈವ ಕುರ್ವಂತಿ ।**
**ನಿತ್ಯಜ್ಞಾನಸ್ವರೂಪತ್ವಾನ್ನಿತ್ಯಂ ಧ್ಯಾಯಂತಿ ಕೇಶವಂ ॥**

ಮುಕ್ತರು ಅಪರೋಕ್ಷಜ್ಞಾನವುಳ್ಳವರಾದ್ದರಿಂದ ಶ್ರೀಪರಮಾತ್ಮನನ್ನು ಯಾವಾಗಲೂ ಭಕ್ತಿಯಿಂದ ಉಪಾಸನಾಮಾಡುತ್ತಿರುವರು. ಮತ್ತು ಆತ್ಮಸ್ವರೂಪಾನುಭವದಿಂದ ಸರ್ವದಾಮುಕ್ತರೂಪಾನಂದವನ್ನು ಹೊಂದುವರು ಆದರೆ ಯಾವಾಗಲೂ ಮನಬಂದಂತೆ ಸ್ವೇಚ್ಛೆಯಿಂದಲೇ ಪರಮಾತ್ಮನ ಪೂಜಾರೂಪ ಕರ್ಮವನ್ನು ಮಾಡುವರು ಹಾಗೂ ಬಿಡುವರು.

**4 ತೀರ್ಣತರ್ತವ್ಯಭಾಗಾ ಯೇ ಪ್ರಾಪ್ತಾನಂದಾಃ ಪರಾತ್ಮನಃ ।**
**ಪ್ರತ್ಯವಾಯಸ್ಯ ಬಂಧಸ್ಯಾಪ್ಯಭಾವಾ ಸ್ವೇಚ್ಛಯಾ ಭವೇತ್ ॥**
**ಇತಿ ಬ್ರಹ್ಮಾಂಡೇ**

ಶ್ರೀ ಪರಮಾತ್ಮನ ಪರಮಾನುಗ್ರಹದಿಂದ ಕಳೆದುಕೊಳ್ಳಬೇಕಾದ ಸರ್ವಾನಿಷ್ಟಗಳನ್ನು ದೂರಮಾಡಿಕೊಂಡು ಸ್ವರೂಪಾನಂದ ಹೊಂದಿದ ಮುಕ್ತರು ಸ್ವೇಚ್ಛೆಯಿಂದಲೇ ಕರ್ಮಮಾಡುವರು ಬಿಡುವರೂಕೂಡ ಮಾತ್ರ ಯಾವಫಲಾಪೇಕ್ಷೆಯಿಂದಲೂ ಅಲ್ಲ

## ಸೂ॥ ಓಂ॥ ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ ಓಂ॥ 31

ಉಪಪನ್ನಶ್ಚೈವಂ ಭಾವಃ । ಪ್ರಾಪ್ತತ್ವಾತ್ತ ಲಕ್ಷಣಸ್ಯಫಲಸ್ಯ ।

ಲೋಕದಲ್ಲಿ ಶ್ರೀ ವಿಷ್ಣುವನ್ನು ದ್ವೇಶಿಸಿ ಮಾಡಬೇಕಾದ ಯೋಗಾಂಗಭೂತ ನಿಯಮ ಪೂರ್ವಕರ್ಮಗಳ ಪೂರ್ಣಫಲಪ್ರಾಪ್ತ್ಯನಂತರದಲ್ಲಿಯೂ ಕರ್ಮ ಮಾಡಲು ನಿಯತವಲ್ಲವಾಗಿ ಸ್ವೇಚ್ಛೆಯಿಂದ ಮಾಡಲೂಬಹುದು. ಬಿಡಲೂಬಹುದು

6 ಯಥಾಲೋಕೇ ವಿಧ್ಯರ್ಥತ್ವೇನ ವಿಷ್ಣುಕ್ರಮಣಾದಿಕಂ ಕೃತ್ವಾ ಸಮಾಪ್ತ ಕರ್ಮೇಚ್ಛಯಾ ಕರೋತಿ ನ ಕರೋತಿ ಚ ।

ಶ್ರೀ ವಿಷ್ಣು ಉದ್ದೇಶ್ಯಯೋಗಾನುಷ್ಠಾನ ನಿಯಮ ದಿಂದ ಫಲಪ್ರಾಪ್ತಿಯಾದ ನಂತರ ಆ ಯುಗಗಳು ಮಾಡಲೂ ಬಿಡಲೂ ಸ್ವೇಚ್ಛೆಯೋ ಹಾಗೆಯೇ ವರ್ಷಾಂತರ ದಲ್ಲಿಯೂ ಕೂಡ ಕರ್ಮಗಳು ಮಾಡಲೂಬಹುದು ಬಿಡಲೂಬಹುದು ನಿಯಮವಿಲ್ಲ

ಇತಿ ಛಂದಾಧಿಕರಣಂ

## -ಅನಿಯಮಾಧಿಕರಣಂ-

ಈ ಅಧಿಕಕರಣದಲ್ಲಿ ಉಪಾಸನಾಜನ್ಯ ಬ್ರಹ್ಮಜ್ಞಾನವು ಎಲ್ಲಾ ಉಪಾಸಕರಿಗೂ ಮೋಕ್ಷಸಾಧನವೆಂದು ಹೇಳಲ್ಪಡುತ್ತದೆ.

## ಸೂ॥ ಓಂ॥ ಅನಿಯಮಃ ಸರ್ವೇಷಾಮವಿರೋಧಾಚ್ಛಬ್ದಾನುಮಾನಾಭ್ಯಾಂ ಓಂ॥ 32

ಅಪರೋಕ್ಷ ಜ್ಞಾನಿಗಳಲ್ಲಿ ಕೆಲವರಿಗೆ ಮಾತ್ರ ಮೋಕ್ಷವು ಅನ್ಯರಿಗೆ ಇಲ್ಲವೆಂಬ ವ್ಯವಸ್ಥೆಯಾವುದೂ ಇಲ್ಲ ಕೌಂಡಿನ್ಯಶೃತಿಯಲ್ಲಿ 'ನಕಶ್ಚಿತ್' ಹೇಳುವಂತೆ ಸರ್ವ ಅಪರೋಕ್ಷ ಜ್ಞಾನಿಗಳೂ ಮೋಕ್ಷವನ್ನು ಹೊಂದಿಯೇ ಹೊಂದುವರು. ನಿಷೇಧವು ಯಾರಿಗೂ ಇರುವುದಿಲ್ಲ.

ಪ್ರಾಪ್ತ ಜ್ಞಾನಾನಾಮಪಿ ಕೇಷಾಂ ಚಿನ್ಮುಕ್ತಿಪ್ರಾಪ್ತಿಃ ಕೇಷಾಚಿನ್ನ
ಯಥೋಪ ಸಂಹಾರ ನಿಯಮ ಇತ ನ ಮಂತವ್ಯಂ ।
ಸರ್ವಗುಣಾ ಬ್ರಹ್ಮಣೈವ ಹ್ಯುಪಾಸ್ಯಾ ನಾನ್ಯೈರ್ದೇವೈಃ ಕಿಮು ಸರ್ವೈರ್ಮನುಷ್ಯೈಃ ಇತ್ಯುಪಸಂಹಾರೇ ವಿರೋಧಾದನ್ಯತ್ರಾ ವಿರೋಧಾತ್ ॥

ಉಪಾಸಕರಲ್ಲಿ ಹೇಗೆ ಕೆಲವರಿಗೆ ಮಾತ್ರಸರ್ವೋಪಸಂಹಾರವೋ ಇತರರಿಗೆ ಇದು ನಿಷಿದ್ಧವೋ ಹಾಗೆಯೇ ಮೋಕ್ಷಹೊಂದುವಲ್ಲಿಯೂ ಕೆಲವರಿಗೆ ಮಾತ್ರ ಮೋಕ್ಷವು ಮಿಕ್ಕವರಿಗೆ ಇಲ್ಲವೆಂಬ ಪುರುಷ ನಿಯಮ ಯಾವುದೂ ಇಲ್ಲ. ಉಪಾಸನೆ ಯಲ್ಲಿ ಸರ್ವೇಗುಣ್ಯೈ ...ಮನುಷ್ಯೈಃ ಎಂಬ ನಿಷೇದ ವಾಕ್ಯವಿರುವಂತೆ ಮೋಕ್ಷಪ್ರಾಪ್ತಿ ವಿಷಯದಲ್ಲಿ ಯಾವ ನಿಷೇಧವಾಕ್ಯವೂ ಇಲ್ಲ

**2 ನಕಶ್ಚಿದ್ಬ್ರಹ್ಮವಿಸ್ಮೃತಿಮನುಭವತಿ ಮುಕ್ತೋಹ್ಯೇವ ಭವತಿ**
**ತಸ್ಮಾದಾಹುಃ ಸ್ಮೃತಿಹೇತೀತಿ ಕೌಂಡಿನ್ಯಶ್ರುತೇಶ್ಚ ।**
**ಯಥಾ ಕೇಷಾಂಚಿನ್ಮೋಕ್ಷಏವಮನ್ಯೇಷಾಮಿತ್ಯನುಮಾನಾಚ್ಚ ॥**

ಮೇಲಿನಶೃತಿಯು ಅಪರೋಕ್ಷ ಜ್ಞಾನಿಯು ಸಂಸಾರವನ್ನು ತಿರುಗಿ ಹೊಂದುವು ದಿಲ್ಲ. ಮತ್ತೆ ಮೋಕ್ಷವನ್ನೇ ಹೊಂದುವನು ಎಂದು ಹೇಳುವುದು ಅಪರೋಕ್ಷ ಅಪರೋಕ್ಷಜ್ಞಾನಿಯನ್ನು ಸಂಸಾರವನ್ನು ನಾಶಪಡಿಸಿಕೊಂಡಿರುವವನೆಂದೂ ಮತ್ತು ಶ್ರೀ ಪರಮಾತ್ಮನು ಜೀವನ ಸಂಸಾರವನ್ನು ನಾಶಪಡಿಸಿಕೊಂಡಿರುವನೆಂದೂ ಶಬ್ದಾರ್ಥವು ಕೆಲವರಿಗೆ ಹೇಗೆ ಮೋಕ್ಷವೋ ಹಾಗೆ ಸರ್ವಜ್ಞಾನಿಗಳೂ ಮೋಕ್ಷವು ಸಿದ್ಧವೇ

ಇತಿ ಅನಿಯಮಾಧಿಕರಣಂ

## -ಯಾವದಧಿಕರಣಂ-

ಈ ಅಧಿಕರಣದಲ್ಲಿ ಉಪಾಸನೆಗೆ ಅಧಿಕಾರ ನಿಯಮವು ಸಮರ್ಥನವು.

**ಸೂ॥ ಓಂ॥ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಂ ಓಂ॥ 33**

ಅಧಿಕಾರಿ ಜೀವ ಬ್ರಹ್ಮಾದಿ ದೇವತೆಗಳು ತಮ್ಮ ಅಧಿಕಾರಾನುಸಾರವಾಗಿ ಉಪಾಸನಾ ಯೋಗ್ಯತೆಯನ್ನು ಹೊಂದಿ ಆ ಉಪಾಸನಾ ಪ್ರಾಪ್ತಫಲವನ್ನು ಮುಕ್ತಿಯಲ್ಲಿ ಅನುಭವಿಸುವನು

ಯಥಾ ಯಥಾ ಅಧಿಕಾರೋ ವಿಶಿಷ್ಯತೇ ಏವಂ ಮುಕ್ತಾನಂದೋ ವಿಶಿಷ್ಯತೆ ಮನುಷ್ಯೇಭ್ಯೋ ಗಂಧರ್ವಾಣಾಂ ಗಂಥರ್ವೇಭ್ಯ ಋಷೀಣಾಮೃಷಿಭ್ಯೋ ದೇವಾನಾಂ ದೇವೇಭ್ಯ ಇಂದ್ರಸ್ಯ ಇಂದ್ರಾದ್ರುದ್ರಸ್ಯರುದ್ರಾದ್ಬ್ರಹ್ಮಣ ಏಷ ಹ್ಯೇವ ಶತಾನಂದಃ ಇತಿ । ಚತುರ್ವೇದ ಶಿಖಾಯಾಂ

ಅಧಿಕಾರ ವಿಶೇಷದಂತೆಯೇ ಉಪಾಸಕರಿಗೆ ಮುಕ್ತಿಯಲ್ಲಿ ಆನಂದಾದಿತ್ಯವು ಮನುಷ್ಯರಿಗಿಂತ ಗಂಧರ್ವರು, ಋಷಿಗಳು, ದೇವತೆಗಳು ದೇವೋತ್ತಮ ಇಂದ್ರ ದೇವರು, ರುದ್ರ ದೇವರು ಬ್ರಹ್ಮಾದಿದೇವತೆಗಳಿಗೆ ಅನುಕ್ರಮವಾಗಿ ಆನಂದಾಧಿಕ್ಯವು ಬ್ರಹ್ಮದೇವರಿಗೆ ಶತಾನಂದನೆಂದು ಹೆಸರು.

2 ಅಧ್ಯಾತ್ಮೇ ಚ – ಜ್ಞಾನಂ ಚೋಪಾಸನಂ ಚೈವ ಮುಕ್ತಾನಾನಂದ ಏವ ಚ ।
ಯಥಾಧಿಕಾರಂ ದೇವಾನಾಂ ಭವತ್ಯೇವೋತ್ತರೋತ್ತರಂ ॥ ಇತಿ

ದೇವತೆಗಳಿಗೆ (ಮುಕ್ತ ಯೋಗ್ಯಜೀವರುಗಳೂ) ಅಧಿಕಾರಾನುಸಾರ (ಯೊಗ್ಯತಾನುಸಾರ) ಉಪಾಸನೆಯು ತಕ್ಕಂತೆ ಜ್ಞಾನಾರ್ಜನವು ತದನುಸಾರಮೋಕ್ಷದಲ್ಲಿ ಆನಂದಾಧಿಕ್ಯವು ಹೀಗೆ ಗುಣಗಳು ಉತ್ತರೋತ್ತರ ಸಾಪೇಕ್ಷಫಲಉಳ್ಳವುಗಳು.

## ಸೂ॥ ಓಂ॥ ಅಕ್ಷರಧಿಯಾಂತ್ವವಿರೋಧಃ ಸಾಮಾನ್ಯತದ್ಭಾವಾಭ್ಯಾಮೌಪಸದವತ್ತದುಕ್ತಂ ಓಂ॥ 34

ಈ ಲೋಕದಲ್ಲಿ ಅಸಮತೆ ಇದ್ದರೆ ಪರಸ್ಪರಾಸೂಯೆಯು ಹುಟ್ಟುವುದು ಕಂಡಿದೆ ಈ ವಿಷಮ ಭಾಗವು ಮುಕ್ತಿಯಲ್ಲಿ ಅಯೋಗ್ಯವಾದ್ದರಿಂದ ಅಸಮತ್ವ ಶೃತಿಯು ಉಪಾಸನಾ ವಿಷಯಮಾತ್ರವೇ. ಮುಕ್ತಫಲದಲ್ಲಿ ಅಲ್ಲ ಸರ್ವರಿಗೂ ಆನಂದ ಒಂದೇ ಅಂದರೆ ಹಾಗಲ್ಲ.

ನಚಾಸಮತ್ವೇನ ವಿರೋಧೋ ಭವತಿ |
ಬ್ರಹ್ಮಧೀತ್ವಾದ್ದೋಷಾಭಾವಸಾಮ್ಯಾದುತ್ತಮೇಭ್ಯೋಽನ್ಯೇಷಾಂ ಭಾವಾಶ್ಚ ||

ಸರ್ವಮುಕ್ತರಿಗೂ ವಿಷಯ ದೇಷಾದಿಗಳಿರಲಸಾಧ್ಯವಾದ್ದರಿಂದ ದೇಶಕಾಲ ಪರಿಚ್ಛೇದವಿಲ್ಲದ ಪರಮಾನಂದರೂಪ ಪರಮೇಶ್ವರ್ಯ ವಿಷಯ ಗುಣಧಾಮ ಪರಮಾತ್ಮನನ್ನು ಹೊಂದಿ ಆತನಾನುಗ್ರಹದಿಂದ ಯಥೇಷ್ಟಾನಂದವನ್ನು ಅನುಭವಿಸುತ್ತಿರುವ ಶ್ರೇಷ್ಠಜೀವಿಗಳಾದ ಮುಕ್ತರಿಗೆ ಅಸಮತ್ವದಿಂದ ಪರಸ್ಪರ ದ್ವೇಷವುಂಟಾಗಬಾರದು. ಶ್ರೇಷ್ಟಮುಕ್ತರು ಇತರ ಮುಕ್ತರಿಗೆ ಜ್ಞಾನ ಶ್ರೇಷ್ಠವಾದ್ದರಿಂದಲೂ ಪೂಜ್ಯತೆಯನ್ನು ಹೊಂದುವರು ಮಾತ್ಸರ್ಯವನ್ನಲ್ಲ

4 ಔಪಶಮವಚ್ಛೈನ್ಯನತ್ ।
ಉಕ್ತಂಚ ತುರಶ್ರುತೌ ।
ನಾನಾವಿಧಾ ಜೀವಸಂಘಾವಿಮುಕ್ತಾ ನ ಚೈವ ತೇಷಾಂ ಬ್ರಹ್ಮಧಿಯಾಂ ವಿರೋಧಃ |
ದೋಷಾಭಾವಾದ್ಗುರುಶಿಷ್ಯಾದಿಭಾವಾಲ್ಲೋಕೇಽಪಿ ನಾಸೌ ಕಿಮು ತೇಷಾಂ ವಿಮುಕ್ತೇಃ || ಇತಿ

ಜೀವಸಂಘಗಳು ಮೋಕ್ಷದಲ್ಲಿ ಗುಣತಃ ತಾರತಮ್ಯದಿಂದ ಪರಸ್ಪರ ವಿರೋಧವಿಲ್ಲದೆ ಗುರುಶಿಷ್ಯಸ್ವಾಮಿಸೇವಕಭಾವವು ಪುರಸ್ಕಾರಯುಕ್ತವಾಗಿ ಈ ಲೋಕದಲ್ಲಿರುವಂತೆಯೇ ಮುಕ್ತಿಯಲ್ಲಿಯೂ ವಿರೋಧವಿಲ್ಲದೆ ಸಂತೋಷಯುಕ್ತರಾಗಿಯೇ ಇರುವರು. ಯಾವ ದೋಷಗಳೂ ಅವರನ್ನು ಕಾಡುವುದಿಲ್ಲ.

ಇತಿ ಯಾವದಧಿಕರಣಂ

## – ಇಯದಾಮನನಾಧಿಕರಣಂ –

ಈ ಅಧಿಕರಣದಲ್ಲಿ ಉಪಾಸನಾಧಿಕಾರಿಗಳಲ್ಲಿ ಪ್ರಾಣನೇ ಕೊನೆಯವನೆಂದು ಸಮರ್ಥನೆಯು.

## ಸೂ|| ಓಂ|| ಇಯದಾಮನನಾತ್ ಓಂ|| 35

ಅಧಿಕಾರಿ ತಾರತಮ್ಯವು ಪ್ರಾಣಾಧಿಕಮಾತ್ರವೇ ಪ್ರಾಣೋಽಪಾನ ಎಂಬ ಶೃತಿಯು ಹೇಳಿದೆ ನಾಮಾದಿ ಶಬ್ದಗಳು ನಾಮ, ವಾಕ್, ಮನ, ಸಂಕಲ್ಪ ಚಿತ್ತ, ಧ್ಯಾನ ವಿಜ್ಞಾನ, ಬಲ, ಅನ್ನ, ಅಪ ತೇಜ, ಆಕಾಶ, ಸ್ಮರ್, ಆಶಾ ಇವುಗಳು ಕ್ರಮಶ ಉಷಾ, ಸ್ವಾಹಾ ಪರ್ಜನ್ಯ: ಮಿತ್ರ, ಅಗ್ನಿ ವರುಣ, ವಿಘು ಪ್ರವಹ ಅನಿರುದ್ಧ ಅಹಂಕಾರಿಕಪ್ರಾಣ, ಇಂದ್ರ ಉಮಾ ರುದ್ರ, ವಾಣೀ ಪರಗಳು.

ಪ್ರಾಣನಿಂದ ಮೇಲೆ ಅಧಿಕಾರಿಗಳು ಹೇಳಲ್ಪಡುವುದರಿಂದ ಮುಖ್ಯಪ್ರಾಣನೇ ಅವಧಿಯು ಎಂದಲ್ಲ ಅಧಿಕಾರಿಗಳಲ್ಲಿ ಅವನೇ ಅವಧಿಯು ಎಂದು ಅರ್ಥ

2 ನಾಮಾದ್ಯಾರಭ್ಯ ಪ್ರಾಣಾಂತಮುತ್ತರೋತ್ತರಮುತ್ತಮತ್ವ ಮುಕ್ತಂ ।
ನ ಪ್ರಾಣಾತ್ಕಿಂಚಿದ್ಭೂಯಉಕ್ತಂ ।
ತಥಾಪಿ ಪೂರ್ವವತ್ಸ್ಯಾದಿತಿ ನ ವಾಚ್ಯಂ ।
ಪ್ರಾಣೋವಾವ ಸರ್ವೇಭ್ಯೋಭೂಯಾನ್ನಹಿ ಪ್ರಾಣಾದ್ಭೂಯರ್ಾ
ಪ್ರಾಣೋಹ್ಯೇವ ಭೂಯಾಂಸ್ತಸ್ಮಾದ್ಭೂಯಾನ್ನಮೇತಿ ಕೌಂರರ ವ್ಯಶ್ರುತೇಃ

ಮೇಲಿನ ಶೃತಿಯು ಪ್ರಾಣನೇ ಸರ್ವರಿಗೂ ಶ್ರೇಷ್ಟನು ಪ್ರಾಣನಿಗಿಂತ ಬೇರೆ ಯಾರೂ ಶ್ರೇಷ್ಟರಿಲ್ಲ ಪ್ರಾಣನೇ ಶ್ರೇಷ್ಟನಾದ್ದರಿಂದ ಭೂಯಾನ್ ಎಂದು ಆತನನ್ನೇ ಕರೆಯುವರು ಎಂದು ವಾಕ್ಯದಿಂದ ಅಧಿಕಾರಿಗಳಲ್ಲಿ ಪ್ರಾಣನೇ ಶ್ರೇಷ್ಠನು. ಆದರೆ ಶ್ರೀ ಪರಮಾತ್ಮನ ಆಧೀನದಲ್ಲಿದ್ದು ಆತನ ಆಜ್ಞಾಧಾರಕನೇ ಸರ್ವಶ್ರೇಷ್ಠನಲ್ಲ.

## ಸೂ|| ಓಂ|| ಅಂತರಾ ಭೂತಗ್ರಾಮವದಿತಿ ಚೇತ್ತದುಕ್ತಂ ಓಂ|| 36

ಭೂತಗ್ರಾಮಗಳಲ್ಲಿ ನಾಮಾದಿಪ್ರಾಣಸಮೂಹದಲ್ಲಿ ಒಂದರಿಂದ ಮತ್ತೊಂದು ಹೇಗೆ ಉತ್ತಮವೋ ಹಾಗೆಯೇ ಶ್ರೀ ಪರಮಾತ್ಮನ ವಿನಹಾ ಪ್ರಾಣನಿಗೇ ಉತ್ತಮತ್ವವು. ಶೃತಿಯಲ್ಲಿ ಹೇಳಿದ ಪ್ರಾಣನ ಉತ್ತಮತ್ವವು ಶ್ರೀದೇವಿ ಮತ್ತು ಪರ

ಪರಮಾತ್ಮರನಂತರ ಅಧಿಕಾರಿ ಜೀವರುಗಳಲ್ಲಿ ಶ್ರೇಷ್ಟರು ಮಾತ್ರ

ಯಥಾಭೂತಗ್ರಾಮಏಕಸ್ಮಾದೇಕ ಉತ್ತಮೋಸ್ತ್ಯೇವ ।
ಏವಂ ಪ್ರಾಣಾದಪಿ ಪರಮಾತ್ಮಾನಂತರ ವಿದ್ಯತ ಇತಿ ಚೇನ್ನ ।
ಪ್ರಾಣಾದುತ್ತಮಾಭಾವೇ ಪ್ರಮಾಣಮುಕ್ತಂ ।
ಅನ್ಯತ್ರೋತ್ತಮಾಭಾವೇ ನ ಪ್ರಮಾಣಂ ।
ದೃಶ್ಯತೇ ಚಾನ್ಯತ್ರೋತ್ತಮತ್ವಂ ॥

ಭೂತಗ್ರಾಮಗಳಲ್ಲಿ ಪ್ರಾಣಕ್ಕಿಂತ ಮತ್ತೊಂದು ಉತ್ತಮವೆಂದು ಹೇಳಿಲ್ಲ ಶ್ರೇಷ್ಟನು ಪ್ರಾಣನೆಂದಿರುವುದರಿಂದ ಆತನಿಗಿಂತ ಬೇರೆ ಉತ್ತಮರು ಅಲ್ಲವೆತೆದು ಹೇಳಿ ಬೇರೆಯಾಗಿ ಉತ್ತಮತ್ವ ಇಲ್ಲವೆಂದಲ್ಲ ಶ್ರೀ ದೇವಿ ಪರಮಾತ್ಮರು ಮಾತ್ರ ಪ್ರಾಣನಿಗಿಂತಗಿಂತ ಉತ್ತಮರು

## ಸೂ॥ ಓಂ॥ ಅನ್ಯಥಾಭೇದಾನುಪಪತ್ತಿರಿತಿ ಚೇನ್ನೋಪದೇಶ ವತ್॥ ಓಂ 37

ಪ್ರಾಣಸ್ಯ ಸರ್ವೋತ್ತಮತ್ವೇ ಪರಮಾತ್ಮನಾ ಭೇದಾನುಪಪತ್ತಿರಿಃ ಚೇನ್ನ ।
ಶ್ರುತ್ಯುಪದಿಷ್ಟ ವದುಪಪತ್ತೇಃ ।
ಅನ್ಯೇಭ್ಯಃ ಪ್ರಾಣಸ್ಯೋತ್ತಮತ್ವಂ ತಸ್ಮಾತ್ಪರಮಾತ್ಮನೋ ಹ್ಯುಪದಿಷ್ಟಂ ॥

ಪ್ರಾಣನಿಗಿಂತಲೂ ಉತ್ತಮನು ಇಲ್ಲವೆಂದಲ್ಲ ಪ್ರಾಣ ಪರಮಾತ್ಮನಿಗೆ ಭೇಧವೆಂದಲ್ಲ. ಶ್ರೀ ಪರಮಾತ್ಮರುಗಳನ್ನು ಬಿಟ್ಟು ಸರ್ವ ಅಧಿಕಾರಿಗಳ ಸಮೂಹದಲ್ಲಿ ಪ್ರಾಣನೇ ಉತ್ತಮನು ಎಂದು ಶೃತ್ಯರ್ಥವು ಶ್ರೀದೇವಿ ಪರಮಾತ್ಮರು ಪ್ರಾಣನಿಗಿಂತ ಅಧಿಕವೇ.

ಇತಿ ಇಯದಾಮನನಾಧಿಕರಣಂ

## - ವ್ಯತಿಹಾರಾಧಿಕರಣಂ -

ಈ ಅಧಿಕರಣದಲ್ಲಿ ಉಪಾಸನಾಧಿಕಾರಿಗಳಿಲ್ಲಿ ಪ್ರಾಣನಿಗಿಂತಲೂ ಶ್ರೀಪರಮಾತ್ಮ ನಿಗೆ ಉತ್ತಮತ್ವವು ಸಾಧಿಸಲ್ಪಡುತ್ತದೆ

ನೋತಿ ಚೇನ್ನ    ಹಾಗಲ್ಲ ಎಂವರೆ ಅದು ತಪ್ಪು

## ಸೂ|| ಓಂ|| ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ|| 38

ಉಕ್ತಂ ಪ್ರಾಕ್ಷಾತ್ಪರಮಾತ್ಮನ ಉತ್ತಮತ್ವಂ ಪೂರ್ವೋಕ್ತಾತ್ಯಧ್ಯಾಹಾರೇಣ

ಪ್ರಾಣ ಪ್ರಕರಣದ ಅಂತರದಲ್ಲಿ ವಿಷ್ಣುಪ್ರಕರಣದ ಪ್ರಶ್ನೆ ಪ್ರತಿವಚನದ ಅಧ್ಯಾಹಾರವು ಸೂಕ್ತವು ನಾಮಾದಿ ವಾಕ್ಯಪರ್ಯಂತ ಪ್ರಾಣನವರೆಗೆ ಕ್ರಮವಾಗಿ ಉತ್ತಮತ್ವವು ಹೇಳಿ ಅನಂತರ ಏಷಏವ ಎಂಬ ಶೃತಿಯಲ್ಲಿ ತು ಶಬ್ದವಾದ ಶ್ರೀ ವಿಷ್ಣುವಿಗೆ ವಿಶೇಷವನ್ನು ಹೇಳಿರುವುದರಿಂದ ಆತನೇ ಪ್ರಾಣನಿಗಿಂತಲೂ ಶ್ರೇಷ್ಟನು.

2   **ಏಷ ತು ವಾ ಅತಿವದತಿ (ಚ 7-16) ಇತಿ ವಿಶಿಂಶಂಹಿತಿ ।**

ಮೇಲಿನ ಶೃತಿಯು ಯಾವ ಅಧಿಕಾರಿಯು ನಿರ್ದೋಷನೂ ಸರ್ವ ನಿಯಾಮಕನೂ ಸತ್ಯಶಬ್ದವಾಚ್ಯನೂ ಆದ ಶ್ರೀ ವಿಷ್ಣುವನ್ನು ಸರ್ವಶ್ರೇಷ್ಟನೆಂದು ಶ್ರೀಯುತನೋ ಅವನು ಶ್ರೀನಾಮಾದಿ ನಾಗಾದಿಗಳಿಗಿಂತ ಶ್ರೇಷ್ಟನಾದ ಪರಮಾತ್ಮ ನನ್ನು ಪಾ ಣನಿಗಿಂತಲೂ ಪರಮಶ್ರೇಷ್ಟನೆಂದು ತಿಳಿಯುವನೋ ಪ್ರಕರಣದ ಪ್ರಶ್ನವು ನಾಮಾದಿಗಳಿಗಿಂತ ಶ್ರೇಷ್ಟವಸ್ತುವಿದ್ದರೆ ತಿಳಿಸಿ ಎಂಬುದಕ್ಕೆ ಉತ್ತರವಾಗಿ ನಾಮಾದಿ ಗಳಿಗಿಂತಲೂ ನಾಗಾದಿಗಳು ಶ್ರೇಷ್ಟವೆಂದು ಹೇಳಲು ಪ್ರಾಣನಿಗಿಂತಲೂ ಶ್ರೇಷ್ಟ ವಸ್ತುವು ಇದೆಯೇ ಎಂಬ ಪ್ರಶ್ನೆಗೆ ಉತ್ತರವಾಗಿ ಸತ್ಯ ವಸ್ತುವನ್ನು ಶ್ರೇಷ್ಟವೆಂದು ಶ್ರೀ ವಿಷ್ಣುವೇ ಸರ್ವಶ್ರೇಷ್ಠನೆಂದು ಹೇಳಿದೆ. ಈ ಪ್ರಶ್ನೆಯು ನಾರದರಿಂದ ಸನತ್ಕುಮಾರರನ್ನು ಕುರಿತು ಪ್ರಶ್ನೆಯು. ಜ್ಞಾನಕ್ಕಾಗಿ ವಿಜ್ಞಾಪನೆಯು.

3 ಯಂಭೆತರೇಷು ವಿಶೇಷಣಂ।

ನಾಗಾದಿಗಳಲ್ಲಿ ಶ್ರೇಷ್ಠನಾದ ಪ್ರಾಣನಿಗಿಂತ ಶ್ರೀ ಹರಿಯು ಶ್ರೇಷ್ಠನೆಂದು ಅನುಸರಣ ರೀತಿಯಲ್ಲಿ ಹೇಳಿದೆ.

3 ಉತ್ತಮತ್ವಂ ಹಿ ದೇವಾನಾಂ ಮುಕ್ತಾವಪಿ ಹಿ ಮಾನವಾತ್ ।
ತೇಭ್ಯಃ ಪ್ರಾಣಸ್ಯ ತಸ್ಮಾಚ್ಚ ನಿತ್ಯಮುಕ್ತಸ್ಯ ವೈ ಹರೇಃ ॥
ಇತಿ ಬೃಹತ್ತಂತ್ರೇ

ಮಾನವರಿಗಿಂತಲೂ ಮುಕ್ತಿಯಲ್ಲಿ ದೇವತೆಗಳಿಗೆ ಶ್ರೇಷ್ಠತ್ವವು. ದೇವತೆಗಳಲ್ಲಿ ಶ್ರೀ ಮುಖ್ಯಪ್ರಾಣನಿಗೆ ಶ್ರೇಷ್ಠತ್ವವು. ನಿತ್ಯಮುಕ್ತನಾದ ಮುಕ್ತಸ್ವಾಮಿಯಾದ ಶ್ರೀ ಪರಮಾತ್ಮನು ಸರ್ವದಾ ಸರ್ವ ಶ್ರೇಷ್ಠನು.

ಇತಿ ವ್ಯತಿಹಾರಾಧಿಕರಣಂ

## - ಸತ್ಯಾಧಿಕರಣಂ -

ಈ ಅಧಿಕರಣದಲ್ಲಿ ಪ್ರಾಣನಿಗಿಂತ ಶ್ರೀ ಪರಮಾತ್ಮನಿಗೆ ಉತ್ತಮತ್ವವು ಸಾಧನವು 'ಸತ್ಯಂ ತ್ವೇವ ವಿಜಿಜ್ಞಾಸಿತವ್ಯಂ'' 'ವಿಜ್ಞಾನಂ ತ್ವೇನವಿಜಿಜ್ಞಾಸಿತವ್ಯಂ, 'ಮತಿತ್ವೇನ ವಿಜಿ ಜ್ಞಾನಿಪಸಿತವ್ಯಂ' ಎಂದು ಮುಂತಾಗಿ ಸತ್ಯ, ವಿಜ್ಞಾನ, ಮತಿ, ಶ್ರದ್ಧಾ, ಭೂಮಾ, ಅಹಂಕಾರ, ಆತ್ಮ, ಶಬ್ದವಾಚ್ಯಗಳನ್ನು ಸತ್ಯವಸ್ತುವಿಗಿಂತ ಭೇದವಾಗಿಯೇ ಉಪಾಸನವು ಹೇಳಿರುವುದರಿಂದ ಪ್ರಾಣನಿಗಿಂತ ಪರಮಾತ್ಮನಿಗಿಂತಲೂ ಬಹಳ ಉತ್ತಮರುಗಳು ಹೇಳಲ್ಪಟ್ಟಿದೆಯೆಂದರೆ ಹಾಗಲ್ಲ.

1 ಕೃತಿರ್ನಿಷ್ಠಾ ವಿಜ್ಞಾನಮಿತ್ಯಾದೀನಾಂ ಭೇದಾದ್ಬಹವ ಉತ್ತಮಾ ಇತಿ ಚೇತ್ ॥

## ಸೂ|| ಓಂ|| ನೈವ ಹಿ ಸತ್ಯಾದಯಃ ಓಂ|| 39

ಸತ್ಯಾದಿ ಗುಣಾಸ್ತಸ್ಯಾ ಏವ ಪರದೇವತಾಯಾ ಸ್ವರೂಪ ಭೂತಾಃ ।

ಸತ್ಯಾದಿ ಅಪಮಾತ್ಮಾದಿ ಪದಾರ್ಥಗಳು ಪರಮಾತ್ಮಸ್ವರೂಪ ಭೂತವಸ್ತುಗಳಾದ್ದರಿಂದ ಶ್ರೀಪರಮಾತ್ಮವಾಚ್ಯವೇ ಹಾಗೆ ಪರಮಾತ್ಮನು ಮತ್ತು ಶ್ರೀದೇವಿಯೇ ಪ್ರಾಣನಿಗಿಂತ ಶ್ರೇಷ್ಠರು ಬ್ರಹ್ಮವಸ್ತುಗಳಲ್ಲ

ಯಾವುದು ಬ್ರಹ್ಮಾದಿ ದೇವತೆಗಳಿಂದ ಉಪಾಸ್ಯ ದೇವತೆಯೆಂದು ಹೇಳಿರುವ ಗುಣಗಳೋ ಅವುಗಳು ಅಪರ ಶಬ್ದವಾಚ್ಯಗಳಾಗಿ ತನ್ನ ದರ್ಶನಾಕಾಂಕ್ಷಿಗಳಿಗೆ ಆಶ್ರಯಳಾಗಿರುವಳೋ ಮುಖ್ಯಪ್ರಾಣನಿಗಿಂತ ಶ್ರೇಷ್ಠಳೋ ಅಪರ ದೇವತೆಗಳ ಸ್ವರೂಪಗಳೇ ಇತ್ಯಾದಿಗಳು. ಮಿಕ್ಕ ವಸ್ತುಗಳಾವುದೂ ಅಲ್ಲ ಪರಮಶ್ರೇಷ್ಟತೆಯಿಂದಲೇ ಬೇರೆ ಉತ್ತಮಪ್ರಮಾಣದ ವಸ್ತು ವಿಲ್ಲದ್ದು ಶತ್ರೇಜೊ ಸ್ವರೂಪತಃ ಎಂದು ಹೇಳಿ ಅದನ್ನೇ ದೇವಕಿಎಂದು ಸ್ತ್ರೀಲಿಂಗೋಕ್ತಿಯು ಉಕ್ತಗುಣಗಳ ವಾಚಕಳಾಗಿ ಯುಕ್ತವೇ.

3 ಬ್ರಹ್ಮತರ್ಕೇ ಚ । ನಾಮಾದಿಪ್ರಾಣಪರ್ಯಂತಾದ್ಯೋ ಹಿ ಸತ್ಯಾದಿ
ರೂಪವಾರ್
ತಸ್ಮೈ ನಮೋ ಭಗವತೇ ವಿಷ್ಣವೇ ಸರ್ವ
ಜಿಷ್ಣವೇ || ೧ ೩

ಯಾವ ವಸ್ತುವು ನಾಮಾದಿಪ್ರಾಣಪರ್ಯಂತ ಅಧಿಕಾರಿ ಜೀವರುಗಳಿಗಿಂತ ಶ್ರೇಷ್ಠಾದಿಕಾರವುಳ್ಳವನೋ ಆತನೇ ಸತ್ಯಾದಿಶಬ್ದವಾಚ್ಯಗುಣಗಳುಳ್ಳವನು ಆತನೇ ಆ ಶ್ರೇಷ್ಟಗುಣಗಳನ್ನು ಸ್ವರೂಪವಾಗಿ ಹೊಂದಿ ಸರ್ವಜಯಶೀಲನಾಗಿ ಪರಮ ಶ್ರೇಷ್ಠನಾದ್ದರಿಂದ ಸಾಷ್ಟಾಂಗ ನಮಸ್ಕಾರವು

4 ಸತ್ಯಾದ್ಯಾ ಅಹಮಾತ್ಮಾಂತಾ ಯದ್ಗುಣಾಸ್ಸಮುದೀರಿತಾಃ ।
ತಸ್ಮೈ ನಮೋ ಭಗವತೇ ಯಸ್ಮಾ ದೇವ ವಿಮುಚ್ಯತೇ ॥
ಇತಿ ಚಾಧ್ಯಾತ್ಮೇ

ಸತ್ಯಾದಿಗಳಿಂದ ಆತ್ಮಾಂಕವಾಗಿ ಯಾವ ಗುಣಗಳು ಶ್ರೇಷ್ಠಗಳೋ ಆ ಗುಣಗಳ ಸ್ವರೂಪಭೂತನಾಗಿ ವಾಚ್ಯವಾದ ಶ್ರೀಪರಮಾತ್ಮನು ಸರ್ವಬಂಧಮೋಚಕ ಮೋಕ್ಷ ವಾಚ್ಯನಾದ್ದರಿಂದ ನಮಸ್ಕಾರವು.

ಇತಿ ಸತ್ಯಾಧಿಕರಣಂ

### – ಕಾಮಾಧಿಕರಣಂ –

ಈ ಅಧಿಕರಣದಲ್ಲಿ ಶ್ರೀ ಲಕ್ಷ್ಮಿ ದೇವಿಯವರಿಗೆ ಉಪಾಸನವಿಲ್ಲವೆಂದು ಸಮರ್ಥನವು.

**1 ಪ್ರಕೃತೇರಪಿ ಜನ್ಮಾದೇಃ ಸಂಸಾರ ಪ್ರಾಪ್ತೇಃ ಕಿಮಿತಿ ನಾಮಾದಿಷ್ಟ ಪಾರ ಇತಿ ।**

ಶ್ರೀಲಕ್ಷ್ಮಿದೇವಿಗೆ ಸಂಸಾರಪ್ರಾಪ್ತಿಯಿರುವುದರಿಂದ ನಾಮಾದಿಗಳಲ್ಲಿ ಹೇಳಲ್ಪಡದಿದ್ದರೂ ಪ್ರಾಣನಿಂದ ಅಧಿಕವಾಗಿ ಅಧ್ಯಾಹಾರದಿಂದ ಶ್ರೀ ಮುಖ್ಯಪ್ರಾಣನಿಗೆ ಸರ್ವಾಧಿಕಾರಿ ಶ್ರೇಷ್ಠತ್ವವು ಕೂಡುವುದಿಲ್ಲ ಎಂದು ಪೂರ್ವಪಕ್ಷವು ಅತ್ರೋಚ್ಯತೇ-

**ಸೂ॥ ಓಂ॥ ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ ಓಂ॥ 40**

ಶ್ರೀ ಲಕ್ಷ್ಮೀದೇವಿಯು ಪರಮಾತ್ಮನ ಸನ್ನಿಧಾನದಲ್ಲಿ ಯಾವಾಗಲೂ ಇರುವ ಆತನ ಸತಿಯು. ಈಶ್ವರೇಚ್ಛೆಯಿಂದಲೇ ಭೂಮ್ಯಾದಿಗಳಲ್ಲಿ ಅವತಾರಗಳನ್ನು ಹೊಂದುವಳು ಮತ್ತು ಮೂಲರೂಪದಲ್ಲಿಯೂ ಇರುವವಳು ,ಜಗತ್ತಿಗೆ ಆಶ್ರಯಳು

ಸ್ವೇಚ್ಛೆಯ್ಯೈವ ಮೂಲ ಸ್ಥಾನ ಸ್ಥಿಥಾ ನ್ಯತ್ರಚಾರೇತಾರಾನ್ ಕರೋತಿ ಪರಮೇಶ್ವರೇಚ್ಛಾನು ಸಾರೇಣ ।

ಮೂಲ ಸ್ಥಾನವಾದ ಭಗವಸ್ಥಾನಗಳಲ್ಲಿ ಯಾವಾಗಲೂ ಇದ್ದು ಈಶ್ವರನ ಇಚ್ಛಾನುಸಾರ ಅವತಾರಗಳನ್ನು ಹೊಂದುವಳು.

3 ಸರ್ವಾಯತನಾ ಸರ್ವಕಾಲಾ ಸರ್ವೇಚ್ಛಾ ಸರ್ವಜ್ಞಾನಬನಾದ್ಯಾ
ಬಂಧಿಕಾ ಸೈಷಾ ಪ್ರಕೃತಿರವಿಕೃತಿಃ ಇತಿ ಭಾಲ್ಲವೇಯ ಶ್ರುತಿಃ ॥

ಶ್ರೀ ಲಕ್ಷ್ಮೀದೇವಿಯು ಭೂಮಿಯಲ್ಲಿ ಸ್ವೇಚ್ಛೆಯಿಂದಲೇ ಪರಮಾತ್ಮೇಚ್ಛಾದಿಂದಲೇ ಅವತಾರಗಳನ್ನು ಹೊಂದುವಳು ಕರ್ಮ ಸಂಬಂಧದಿಂದ ಅಲ್ಲ ಮೂಲ ಸ್ಥಾನದಲ್ಲಿ ಸರ್ವಾಯತನವುಳ್ಳವಳು ಅನಾದಿಯು ಮತ್ತು ಪರಮಾತ್ಮಾಧೀನಳು ಜೀವರುಗಳಂತೆಯಾವಾಗಲೂ ಬದ್ಧಳಲ್ಲ ನಿತ್ಯಮುಕ್ತಳು. ಅವ್ಯಕ್ತ ಸ್ವರೂಪಳು ಜೀವರಿಗೆ ಬಂಧಕಳು

4 ನಾಮಾದಯಸ್ತು ಬದ್ಧತ್ವಾನ್ಮೋಚಕತ್ವಾತ್ಪರೋಽಪಿ ಚ ।
ಉಭಯೋ ರವ್ಯ ಭಾವೇನ ಯಥಾವ್ಯಕ್ತಂ ನ ತೂದಿತಂ ।
ಶ್ರುತೌ ತಥಾ ಜೀವಪರಾವುಚ್ಯೇತೇ ಕಿಂಚನೇತರತ್ ।
ನೋಚ್ಯತೇ ಚ ತದಾ ತತ್ವದ್ವಯಂ ವೈ ಸಮುದಾಹೃತಂ॥
ಇತಿ ಬ್ರಹ್ಮತರ್ಕೇ

ನಾಮಾದಿ ಪ್ರಾಣ ಪರ್ಯಂತ ಅಧಿಕಾರಿ ಜೀವರುಗಳಂತೆ ಬದ್ಧ ಮೋಚಕತ್ವವಿಲ್ಲದ ವಿಲಕ್ಷಣತ್ವದಿಂದ ಆ ಶ್ರುತಿಯಲ್ಲಿ ಹೇಳಲು ಯುಕ್ತವಲ್ಲ. ಆದ್ದರಿಂದ ಪ್ರಾಣನಿಗಿಂತ ಶ್ರೇಷ್ಠಗುಣಸ್ವರೂಪನೂ ವಿಷ್ಣುವೇ ಈ ಶ್ರೀತತ್ವವು ಅವ್ಯಕ್ತತ್ವ ಅಬದ್ಧತ್ವದಿಂದ ಭಗವಂತನಲ್ಲಿ ಅಂತರ್ಭಾವವು. ಅನಾದಿಕಾಲಭಗವತ್ಸಂಬಂಧದಿಂದ ಸ್ವರಮಣ ಪರಮಾತ್ಮನಿಗೆ ಮಾತ್ರ ಅಧೀನಳು ನಾಶವಿಲ್ಲದ ಸರ್ವ ಕಲ್ಯಾಣ ಗುಣಲಕ್ಷಣ ಮತ್ತು ಮತ್ತು ಆತನಿಂದ ಅಲ್ಪಭೂಮಗುಣದಿಂದ ಸತ್ಯಾದಿಗುಣ ಲಕ್ಷಣ ಯುಕ್ತವಾಗಿ ಪ್ರಾಣನಿಗಿಂತ ಉತ್ತಮಳು ಪರಮಾತ್ಮನಾಜ್ಞಾಧಾರಕಳು ಸರ್ವ ದೇವತ್ಕೃಷ್ಟಳು.

## ಸೂ॥ ಓಂ॥ ಆದರಾದಲೋಪಃ ಓಂ॥ 41

ಶ್ರೀ ಪರಮಾತ್ಮನಲ್ಲಿ ನಿರುಪಾಧಿಕ ಭಕ್ತಿ ವಿಷಯದಿಂದ ಶ್ರೀದೇವಿಗೆ ಭಗವಂತನ ಉಪಾಸನವು ಪ್ರತ್ಯಕ್ಷ ಸೇವಾರೂಪದಿಂದಲೇ.

ಅಬದ್ಧತ್ವೇಪಿ ಭಕ್ತ ವಿಶೇಷಾದೇವೋಪಾಸನಾದ್ಯಲೋಪಸ್ತಸ್ಯಾ ಭವತಿ ।

ವಿಧಿಬದ್ಧಳಲ್ಲದಿದ್ದರೂ ಭಕ್ತಿ ವಿಶೇಷದಿಂದ ಪರಮಶ್ರೇಷ್ಠ ಉಪಾಸನವನ್ನೇ ಮಾಡುವಳು.

6 ಯಥಾ ಶ್ರೀರ್ನಿತ್ಯಮುಕ್ತಾಪಿ ಪ್ರಾಪ್ತ ಕಾಮಾಪಿ ಸರ್ವದಾ ।
ಉಪಾಸ್ತೇ ನಿತ್ಯಶೋ ವಿಷ್ಣುಮೇವಂ ಭಕ್ತ್ಯೋ ಹರೇರ್ಭವೇತ್ ॥
ಇತಿ ಬೃಹತ್ತಂತ್ರೇ

ಶ್ರೀದೇವಿಯು ನಿತ್ಯಮುಕ್ತಳಾಗಿ ಸರ್ವ ಶ್ರೇಷ್ಟಗಳನ್ನು ಸದಾ ಹೊಂದಿರುವ ಳಾದಾಗ್ಯೂ ನಿತ್ಯಶಃ ಆ ವಿಷ್ಣುವಿನೋಪಾಸನೆಯನ್ನು ಸರ್ವ ಶ್ರೇಷ್ಠರೀತಿಯಿಂದ ಮಾಡುವಳು

## ಸೂ॥ ಓಂ॥ ಉಪಸ್ಥಿತೇ ಸ್ತದ್ವಚನಾತ್ ಓಂ॥ 42

ಸದಾ ಶ್ರೀಹರಿಯ ಸಮೀಪದಲ್ಲಿರುವುದರಿಂದಲೂ ಶ್ರೀ ಲಕ್ಷ್ಮೀದೇವಿಯು ನಿತ ಮುಕ್ತಳೇ

ಅನಾದಿಕಾಲ ಭಗವತ್ಸಂಬಂಧಿತ್ವಾದ್ಯುಜ್ಯತೇ ಚ ನಿತ್ಯಮುಕ್ತತ್ವಂ ತಸ್ಯಾಃ ।

ಅನಾದಿಕಾಲ ಭಗವಂತನ ಸಂಬಂಧದಿಂದ ನಿತ್ಯ ಮುಕ್ತತ್ವವು ಸಿದ್ಧವೇ.

ದ್ವಾವೇತಾ ಶೃತಿಃ

8 ದ್ವಾವೇತಾವನಾಗಿನಿತ್ಯಾವನಾದಿಯುಕ್ತೌ ನಿತ್ಯಮುಕ್ತಾವನಾದಿ
ಕೃತೌ ನಿತ್ಯ ಕೃತೌ ಯೋಯಂ ಪರಮೋ ಯಾ ಚ ಪ್ರಕೃತೀ
ರಮತೇ ಹ್ಯಸ್ಯಾಂ ಪರಮೋ ರಮತೇ ಹ್ಯಸ್ಮಿನ್ಪ್ರಕೃತಿ ಸ್ವಸ್ಮಿನ್ಹಿ
ರಮತೇ ಪರಮೋನ ಸ್ವಸ್ಮಿನ್ ಪ್ರಕೃತಿರತ ಏನಮಾಹುಃ ಪರಮಾ
ಇತೀತಿ ಗೌಪವನ ಶೃತಿ ವಚನಾತ್ ।

ಮೇಲಿನ ಶೃತಿಯು ಹೇಳುವುದು ಶ್ರೀ ಲಕ್ಷ್ಮಿಯೂ ಶ್ರೀ ಪರಮಾತ್ಮನೂ ಅನಾದಿ ನಿತ್ಯರು ಅನಾದಿ ಯುಕ್ತರು ನಿತ್ಯಮುಕ್ತರು ನಿತ್ಯಪೂರ್ಣರು ಸರ್ವ ಕಾಲ ದಲ್ಲಿಯೂ ಪೂರ್ಣರು ಅವರಲ್ಲಿ ಪರಸ್ಪರ ರಮಣವುಳ್ಳವರು. ಆದರೆ ಶ್ರೀ ಪರಮಾತ್ಮನು ತನ್ನಲ್ಲಿ ತಾನೇ ರಮಣವುಳ್ಳವನು ಆದರೆ ಶ್ರೀದೇವಿಗೆ ಪರಮಾತ್ಮನಿಂದಲೇ ರಮಣತ್ವವು ಆದ್ದರಿಂದ ಶ್ರೀದೇವಿಗಿಂತಲೂ ಶ್ರೀ ಪರಮಾತ್ಮನೇ ಶ್ರೇಷ್ಟನು.

ಇತಿ ಕಾಮಾಧಿಕರಣಂ

ಈ ಅಧಿಕರಣದಲ್ಲಿ ಶ್ರವಣ ಮನನ ದಿಧಿಧ್ಯಾಸನ ರೂದ ಸಮಸ್ತೋಪಾಸನವೂ ಮಾಡಬೇಕೆಂದು ಸಮರ್ಥನವು

1 ದರ್ಶದಾರ್ಥಂ ಹ್ಯುಪಾಸನಂ ।

**ತಚ್ಚ ಶ್ರವಣಾದೇರೇವ ಭವತಿ ಆತಃ ಕಿಮರ್ಥ ಮಿತ್ಯತೋ್ರೇಚ್ಯತೇ॥**

ತಾರರಮ್ಯ ಜ್ಞಾನಪೂರ್ವಕ ಸಪರಿವಾರ ಶ್ರೀ ವಿಷ್ಣುವಿನ ಉಪಾಸನೆಯು ಕರ್ತವ್ಯವು ಪರಮಾತ್ಮನ ದರ್ಶನಪ್ರಾಪ್ತಿಯು. ಈ ದರ್ಶನವು ಉಪಾಸನಾಂತರ್ಗತ ಶ್ರವಣ ಮನನಗಳಿಂದಲೇ ಸಾಧ್ಯವು ಉಪಾಸನಾನುಷ್ಠಾನದಿಂದಲೇನು ಪ್ರಯೋಜನ

## ಸೂ॥ ಓಂ॥ ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಂ ಓಂ॥ 43

ತತ್ವ ನಿರ್ಧಾರಣಾರ್ಥನಿಯಮವು ನಿಶ್ಚಯಾತ್ಮಕ ನಿಯಮರೂಪವು. ಇದು ಶ್ರವಣ, ಮನನ, ಧ್ಯಾನ ಫಲರೂಪವಾದದ್ದು. ಶ್ರೀ ಪರಮಾತ್ಮನ ದೃಷ್ಟಿ ಗೋಚರವು ಹೀಗೆ ಫಲ ಭೇದವು. ಆದ್ದರಿಂದ ಬ್ರಹ್ಮದರ್ಶನವು ಶ್ರವಣಮನನಗಳ ಸಾಕ್ಷಾತ್ಫಲವಲ್ಲ. ಆದರೂ ಅವುಗಳು ವ್ಯರ್ಥವಲ್ಲ ಅನುಷ್ಠೆಯಗಳೇ. ಬ್ರಹ್ಮದರ್ಶನಕೆ ಪ್ರತಿಬಂಧಕ ನಿಶ್ಚಯರೂಪ ತತ್ವ ನಿಶ್ಚಯವು ಶ್ರವಣ ಮನನಾದಿಗಳ ಫಲವು.

ತತ್ವನಿಶ್ಚಯೋ ವೇದಾರ್ಥನಿಯಮಶ್ಚ ಬ್ರಹ್ಮದೃಷ್ಟೇಃ ಪೃಥಗೇವ ।
ವೇದಾರ್ಥನಿಶ್ಚಯದಿಂದ ತತ್ವ ನಿಶ್ಚಯವು ನಂತರ ಉಪಾಸನವು ಬ್ರಹ್ಮದೃಷ್ಟಿ ಫಲವು.

3 ಹಿ ಶಬ್ದೇನ ಆತ್ಮಾ ವಾ ಅರೇ ದೃಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯ ಇತಿ ಶೃತಿಂ (ಬೃ-4-4-5) ಸೂಚಯಂತಿ ॥

ಮೇಲಿನ ಶೃತಿಯು ದರ್ಶನಾರ್ಥವಾಗಿ ಶ್ರವಣ ಮನನಗಳು ಅಂಗಾಂಗೀ ಭಾವದಿಂದ ಈ ಮೂರು ಕರ್ತವ್ಯವೆಂದು ಹೇಳುತ್ತಿದೆ

4 ಶ್ರವಣಾದಿಫಲಂ ಚಾಜ್ಞಾನ ವಿಪರ್ಯಯಾದಿ ದರ್ಶನ ಪ್ರತಿಬಂಧ ನಿವೃತ್ತಿಃ ।

ಶ್ರವಣಮನನಾದಿಗಳು ಪರಮಾತ್ಮನ ದರ್ಶನಕ್ಕೆ ಪ್ರತಿಬಂಧಕಳಾದ ಅಜ್ಞಾನ ಮತ್ತು ವಿಪರ್ಯಯಗಳನ್ನು ನಿವೃತ್ತಿಮಾಡಿ ಉಪಾಸನೆಯಿಂದ ದರ್ಶನಪ್ರಾಪ್ತಿಯು

5 ಶ್ರುತ್ವಾ ಮತ್ವಾ ತಥಾಧ್ಯಾತ್ವಾ ತದಜ್ಞಾನವಿಪರ್ಯಯೌ ।
ಸಂಶಯಂ ಚ ಪರಾಣುದ್ಯ ಲಭತೇ ಬ್ರಹ್ಮ ದರ್ಶನಂ ॥
ಇತಿ ಬ್ರಹ್ಮತರ್ಕೇ

ಶ್ರವಣಮನನ ನಿಧಿಧ್ಯಾಸನಾತ್ಮಕ ಉಪಾಸನವು ಕ್ರಮವಾಗಿ ಅಜ್ಞಾನ, ವಿಪರೀತ ಜ್ಞಾನ ಮತ್ತು ಸಂಶಯನಿವೃತ್ತಿರೂಪ ಫಲಪ್ರದವಾಗಿ ಬ್ರಹ್ಮದರ್ಶನ ಪ್ರಾಪ್ತಿಯು.

ಇತಿ ನಿರ್ಧಾರಣಾಧಿಕರಣಂ

## – ಅಥ ಪ್ರದಾನಾಧಿಕರಣಂ –

ಈ ಅಧಿಕರಣದಲ್ಲಿ ಭಗವಂತನ ಜ್ಞಾನ ಸಾಧನ ಶ್ರವಣಾದಿ ಉಪಾಸನೆಯು ಕ್ರಮವಾಗಿ ಮಾಡಲ್ಪಡಬೇಕೆಂದು ಸಮರ್ಥನೆಯು.

## ಸೂ॥ ಓಂ॥ ಪ್ರದಾನವದೇವ ಹಿ ತದುಕ್ತಂ ಓಂ॥ 44

ಪ್ರೀತಿ ಪೂರ್ವಕವಾಗಿ ಗುರೂಪದೇಶದಿಂದ ಯುಕ್ತವಾವ ಶ್ರವಣಾದಿಗಳು ಜ್ಞಾನ ಸಾಧನವು ಜ್ಞಾನಕ್ಕೆ ಗುರುಪ್ರಸಾದವು ಅವಶ್ಯಕವಾದ್ದರಿಂದ ಗುರೂಪದೇಶವು ಆಚಾರ್ಯವಾನ್ ಎಂಬ ಶೃತಿಯಲ್ಲಿ ಗುರುವಿನಿಂದ ಉಪದೇಶವು ಹೇಳಿದೆ.

ನ ಚ ಶ್ರವಣಾದಿ ಮಾತ್ರೇಣ ಬ್ರಹ್ಮದೃಷ್ಟಿರ್ಭವತಿ।
ಕಿಂತು ಸೇತಿಕರ್ತವ್ಯೇನ ಯಥಾ ಗುರುದತ್ತಂ ತಥೈವ ಭವತಿ ॥

ಶ್ರವಣಾದಿಮಾತ್ರ ಉಪಾಸನೆಯಿಂದಲೇ ಬ್ರಹ್ಮದೃಷ್ಟಿಯೂ ಆಗುವುದಿಲ್ಲ ಗುರು ಪ್ರಸಾದವೂ ಅಗತ್ಯವು ಆದ್ದರಿಂದ ನಿತ್ಯಾನುಷ್ಠೆಯ ಕರ್ಮಕರಣ ಪೂರ್ವಕ ಗುಣಗಳಿಂದೋಪದಿಷ್ಟ ಶ್ರವಣಾದಿ ರೂಪ ಉಪಾಸನೆಯಿಂದಲೇ ಪರಮಾತ್ಮನ ಪ್ರತ್ಯಕ್ಷವು ಸಾಧನವು

2 ಆಚಾರ್ಯವಾನ್ ಪುರುಷೋ ವೇದ (ಬೃ-6-14-2)
ಇತಿಹ್ಯುಕ್ತಂ।

ಸ ಯೋಗ್ಯ ಗುರುವಿನಿಂದ ಅನುಗ್ರಹ ಧ್ಯಾನ ಮಾಡಲ್ಪಟ್ಟ ಧ್ಯಾನಿಗಳು ಜ್ಞಾನ ಸಾಧಕಗಳು ಮೋಕ್ಷ ಸಾಧನವು.

ಇತಿ ಪ್ರದಾನಾಧಿಕರಣಂ

### - ಲಿಂಗಭೂಮಸ್ತ್ವಧಿಕರಣಂ -

ಈ ಅಧಿಕರಣದಲ್ಲಿ ಇತಿ ಕರ್ತವ್ಯತಾರೂಪ ಗುರು ಪ್ರಸಾದವು ಶ್ರೇಷ್ಠವು ಎಂದ ಹೇಳಿದೆ.

1 ಗುರುಪ್ರಸಾದಃ ಸ್ವ ಪ್ರಯತ್ನೋ ವಾ ಬಲವಾನಿತಿ ।

## ಸೂ॥ ಓಂ॥ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ॥ 45

ಜ್ಞಾನಕ್ಕೋಸ್ಕರ ಗುರು ಪ್ರಸಾದಪೂರ್ವಕ ಶ್ರವಣಾದಿಗಳಲ್ಲಿ ಜ್ಞಾನ ಸಾಧನೆಗೆ ಗುರು ಪ್ರಸಾದವು ಶ್ರೇಷ್ಟವೋ ಅಥವಾ ಶ್ರವಣಾದಿ ಶಿಷ್ಯ ಪ್ರಯತ್ನವೋ ಎಂದು ಸಂಶಯವು ಗುರುಪ್ರಸಾದ ಪೂರ್ವಕ ಜ್ಞಾನಪ್ರದಾನವು ಅತಿಬಲವತ್ತರವು ಸತ್ಯ ಕಾಮ ಋಷಿಯು ವಾಯು ಅಗ್ನಿ ವರುಣಾದಿ ದೇವತೆಗಳಿಂದ ಕೇಳಲ್ಪಟ್ಟ ವಿದ್ಯ ವುಳ್ಳವನಾದರೂ ಅವರುಗಳ ಆಜ್ಞೆಯಂತೆ ಗುರುಪ್ರಸಾದ ಪೂರ್ವಕ ಜ್ಞಾನವು ಅತಿ ಬಲವತ್ತರವಾದ್ದರಿಂದ ಸ್ವ ಗುರುವನ್ನು ಜ್ಞಾನಕ್ಕಾಗಿ ಶರಣಾದನು

ಅಲ್ಲದೆಯು ಉಪಕೋಸಲಋಷಿಯು ಸ್ವ ಗುರುವಾದ ಸತ್ಯಕಾಮರಿಂದ ಬಹು ದಿನಗಳು ಬ್ರಹ್ಮ ಉಪದೇಶಿಸಲ್ಪಡದಿದ್ದರೂ ಗಾರ್ಹ ಪತ್ಯಾಗ್ನಿಗಳನ್ನು ಪೂಜೆಮಾಡಿ ಕೊಂಡಿದ್ದನು ಆ ದೇವತೆಗಳು ತುಷ್ಟರಾಗಿ ಈತನಿಗೆ ಪ್ರಾಣೋಬ್ರಹ್ಮಕಂ ಬ್ರಹ್ಮ ಖಂ ಬ್ರಹ್ಮ ಎಂದು ಪ್ರತ್ಯೇಕ ಪ್ರತ್ಯೇಕವಾಗಿ ಬ್ರಹ್ಮಜ್ಞಾನವನ್ನುಪದೇಶಿಸಿ ಸ್ವಗುರುವು ನಿನ್ನ ಗತಿಯನ್ನು ಹೇಳುವನು ಎಂದು ಆಚಾರ್ಯರ ಉಪದೇಶದ ಅಗತ್ಯವನ್ನು ಹೇಳಿದರು. ಉಪಕೋಸಲನು ತನ್ನ ಗುರುವನ್ನು ಹೊಂದಿ ಸರ್ವ ವಿಷಯವನ್ನೂ ತಿಳಿಸಿ ಅವರ ಮೂಲಕ ಬ್ರಹ್ಮೋಪದೇಶವನ್ನು ಹೊಂದಿದನು ಹೀಗೆ ಸ್ವಗುರು ಪ್ರಸಾದ ಪೂರ್ವಕ ಉಪದೇಶವು ಅತ್ಯಗತ್ಯವು

2 ಋಷಭಾದಿಭ್ಯೋವಿದ್ಯಾಂ ಜ್ಞಾತ್ವಾಪಿ ಸತ್ಯಕಾಮೋನ ಭಗವಾಂ
ಸ್ತ್ವೇವ ಮೇ ಕಾಮೇ ಬ್ರೂಯಾತ್ ।
(ಉ 4–9–2) ಶ್ರುತಂ ಹ್ಯೇವ ಮೇ ಭಗವದ್ದೃಶೇಭ್ಯಃ
ಆಚಾರ್ಯಾದ್ಧೈವ ವಿದ್ಯಾ ವಿದಿತಾ ಸಾಧಿಷ್ಠಂ ಪ್ರಾಪಯತಿ ॥
(ಉ 4–9–3) ಇತಿ ಛಾಂದೊಗ್ಯೇ

ಅತ್ರ ಹನ ಕಿಂಚನ ವೀಯಾಯ ಇತ್ಯನುಜ್ಞಾನಾದುಪಕೋಸಲಪಿಚನ್ನಾಚ ಲಿಂಗ ಭೂಯಸ್ತ್ವಾದ್ಗುರು ಪ್ರದಾನಮೇವಬಲವತ್

ದೇವತೆಗಳಿಂದ ವಿಷಯವನ್ನು ಕೇಳಿದ್ದರೂ ಆ ದೇವತೆಗಳ ಆಜ್ಞೆಯಂತೆ ಸತ್ಯ ಕಾಮನು ಸ್ವಗುರುವನ್ನು ಹೊಂದಿ ಆಚಾರ್ಯ ಮುಖೇನ ಬ್ರಹ್ಮ ಉಪದೇಶವು ಸಾಧುತ್ವವನ್ನು ಸ್ಥಿರತ್ವವನ್ನು ಸ್ಥಾಪಿಸಿ ಕೊಡುವುದರಿಂದ ಅವರನ್ನು ಉಪದೇಶಿಸುವಂತೆ ಪ್ರಾರ್ಥಿಸಿಕೊಂಡನು.

ಆಚಾರ್ಯರೂಕೂಡ ಆತನಿಗೆ ಬ್ರಹ್ಮನನ್ನು ಉಪದೇಶಿಸಿ, ಆತನು ದೇವತೆಗಳಿಂದ ಬ್ರಹ್ಮನನ್ನು ಕೇಳಿ ತಿಳಿದದ್ದು ಹಾನಿಯಾಗಲಿ ಅಪರಾಧವಾಗಲೀ ಆಗುವುದಿಲ್ಲವೆಂದು ಅನುಗ್ರಹಿಸಿದರು ಆದ್ದರಿಂದ ಗುರುಪ್ರಸಾದರೂಪ ಉಪದೇಶವೇ ಶ್ರೇಷ್ಠವು

3 **ತರ್ಹಿ ತಾವತಾಲಮಿತಿ ನ ಮಂತವ್ಯಂ ।**
**ಶ್ರೋತವ್ಯೋ ಮಂತವ್ಯಃ ॥ ಇತ್ಯಾದೇಸ್ತದಪಿ ಕರ್ತವ್ಯಂ**

ಗುರು ಪ್ರಸಾದರೂಪ ಜ್ಞಾನಾರ್ಜನೆಯು ಶ್ರೇಷ್ಠವಾದರೂ ಅಷ್ಟೇ ಸಾಲದು, ಮೋಕ್ಷ ಹೊಂದಲು ಶ್ರವಣ ಮನನ ಉಪಾಸನೆಯೂ ಅತ್ಯಗತ್ಯವು

4 **ವರಾಹೇ ಚ ಗುರುಪ್ರಸಾದೋ ಬಲವಾನ್ನ ತಸ್ಮಾದ್ಬಲವತ್ತರಂ ।**
**ತಥಾಪಿ ಶ್ರವಣಾದಿಶ್ಚ ಕರ್ತವ್ಯೋ ಮೋಕ್ಷಸಿದ್ಧಯೇ॥**

ಗುರು ಪ್ರಸಾದವು ಶ್ರೇಷ್ಠವಾಗಿ ಎಲ್ಲಾ ಸಾದನೆಗಳಿಗಿಂತಲೂ ಬಲವತ್ತರವು ಆದರೂ ಮೋಕ್ಷ ಸಾಧನೆಗಾಗಿ ಶ್ರವಣ ಮನನಗಳು ಮಾಡಲ್ಪಡಲೇ ಬೇಕು

ಇತಿ ಲಿಂಗಭೂಯಸ್ತ್ವಾಧಿಕರಣಂ

**– ಪೂರ್ವ ವಿಕಲ್ಪಾಧಿಕರಣಂ**

ಈ ಅಧಿಕರಣದಲ್ಲಿ ಪೂರ್ವದಲ್ಲಿ ಸ್ವಗುರುವು ಸ್ವೀಕರಿಸಲ್ಪಟ್ಟದ್ದರೂ ಮುಂದೆ ಅನ್ಯ

## ಸೂ ॥ ಓಂ॥ ಪೂರ್ವ ವಿಕಲ್ಪಃ ಪ್ರಕರಣಾತ್ಸ್ಯಾತ್ಕ್ರಿಯಾ ಮಾನಸವತ್ ಓಂ॥ 46

ಮಾನಸ ಕ್ರಿಯಾ ವಿಷಯದಾನದಲ್ಲಿ ಹೇಗೆ ನಿಯಮವಿಲ್ಲವೋ ಹಾಗೆಯೇ ಗುರು ಸ್ವೀಕಾರ ವಿಷಯದಲ್ಲಿಯೂ ಪೂರ್ವಪ್ರಾಪ್ತ ಗುರುಸಮನಾದ ನಂತರ ಪ್ರಾಪ್ತಗುರುವು ಸ್ವೀಕಾರಾರ್ಹನಲ್ಲವೆಂದು ನಿಯಮವು (ಸ್ವಯೋಗ್ಯಾಪರೋಕ್ಷಜ್ಞಾನದಾತನು) ಪೂರ್ವಪ್ರಾಪ್ತಗುರುವೇ ಎಂಬ ನಿಯಮವೇನೂ ಇಲ್ಲ ಸಮಗ್ರಾನುಗ್ರಹಶಕ್ತಿಯುಳ ಅನಂತರ ಪ್ರಾಪ್ತಗುರುವೂ ಸ್ವೀಕಾರ್ಯನೆ

ನ ಚ ಪೂರ್ವಪ್ರಾಪ್ತ ಏವ ಗುರುರಿತಿ ನಿಯಮಃ ।
ಸಮಗ್ರಾನುಗ್ರಹಂ ಚೇತ್ಪಶ್ಚಾತ್ತನಃ ಕರೋತಿ ಸ್ವಯಮೇವ ತದಾ ವಿಕಲ್ಪಃ ಸ್ಯಾತ್ ॥

ಅನಂತರ ಪ್ರಾಪ್ತಗುರುವು ಸ್ವಯಮೇವ ಅನುಗ್ರಹಮಾಡಲು ಪ್ರಾಪ್ತವಾದಲ್ಲಿ ಆತನ ಸ್ವೀಕಾರ್ಯವು ಯುಕ್ತವು ಪೂರ್ವಪ್ರಾಪ್ತ ಗುರುವಿನಿಂದಲೂ ಅನಂತರ ಪ್ರಾಪ್ತಗುರುವು ಸಮಗ್ರಾನುಗ್ರಹಪೂರ್ವಕ ಉಪದೇಶಮಾಡಲು ಇಚ್ಛಿಸಿದಲ್ಲಿ ಆತನೂ ಗ್ರಾಹ್ಯನೇ

2 **ಮಾನಸ ಕ್ರಿಯಾವತ್ ।**
**ಯಥೋಭಯೋರ್ಧ್ಯಾನಯೋಃ ಸಮಯೋಃ ।**

ಮಾನಸ ಕ್ರಿಯಾವಿಶೇಷವಾದ ಧ್ಯಾನಕಾರ್ಯವು ಸಮವಾಗಿದ್ದಲ್ಲ (ರಾಮ ಕೃಷ್ಣಾವತಾರಗಳಲ್ಲಿ ಸ್ವರೂಪವ್ಯತ್ಯಾಸವಿಲ್ಲವಾದ್ದರಿಂದ) ಅನಂತರ ಪ್ರಾಪ್ತಗುರುವು ಸ್ವೀಕಾರ್ಯನೇ.

3 **ಪೂರ್ವಸ್ಮಾದುತ್ತಮೋ ಲಬ್ಧಃ ಸ್ವಯಮೇವಗುರುರ್ಯದಿ ।**
**ಗೃಹ್ಣೀಯಾದ್ವಿಚಾರೇಣ ವಿಕಲ್ಪಃ ಸಮಯೋರ್ಭವೇತ್ ।**

**ಸಮಗ್ರಾನುಗ್ರಹಾಭಾವಾತ್ಸತ್ಯಕಾಮಃ ಸ್ವಕಂ ಗುರುಂ ।**
**ಋಷಭಾದ್ಯನುಜ್ಞಯಾಚೈವಪ್ರಾಸ ತಸ್ಮಾದ್ಧಿ ಯುಜ್ಯತೆ ॥**
**ಇತಿ ಬೃಹತ್ತಂತ್ರೆ**

ಪೂರ್ವ ಗುರುವಿನಿಂದ ಉತ್ತಮಗುರುವು ತಾನಾಗಿಯೇ ಪ್ರಾಪ್ತನಾದಲ್ಲಿಯೂ ವಿಚಾರವೂ ಇಲ್ಲದೆ ಸ್ವೀಕಾರಾರ್ಹನು ಸಮಗ್ರಗುರುವಾದಲ್ಲಿ ಹಿಂದಿನ ಗುರುವಿನ ಆಜ್ಞೆಯಂತೆ ಸಮಗ್ರಾನುಗ್ರಹವ್ಯಾಜದಿಂದ ಸ್ವೀಕಾರಾರ್ಹನು ಋಷಭಾದಿಋಷಿಗಳಿಂದ ಹೊಂದಿದ ಉಪದೇಶವುಳ್ಳ ಸತ್ಯಕಾಮನು ಅವರುಗಳಿಂದ ಆಜ್ಞಪ್ತನಾಗಿ ಸ್ವಯೋಗ್ಯ ಗುರುವಾದ ಗೌತಮರಿಂದ ಸಮಗ್ರಾನುಗ್ರಹ ಪೂರ್ವಕ ಉಪದೇಶವನ್ನು ಹೊಂದಿದನು.

4 **ಸಮಗ್ರಾನುಗ್ರಹಂ ಕಶ್ಚಿತ್ಸ್ವಯಮೇವ ಸಮೋಯದಿ ।**
**ಕುರ್ಯಾತ್ಸನಶ್ಚ ಗೃಹ್ಣೀಯಾದವಿರೋಧೇನ ಕಾಮತಃ**
**ಧ್ಯಾನಯೋಃ ಸಮಯೋರ್ಯ ದ್ವಿದ್ವಿಕಲ್ಪಃ ಕಾಮತೋ ಭವೇತ್ ।**
**ಏವಂ ಗುರುದ್ವಿತೀಯಸ್ಯ ವಿಕಲ್ಪೋ ಗ್ರಹಣೇಽಪಿ ಚ ॥**
**ಇತಿ ಮಹಾಸಂಹಿತಾಯಾಂ**

ಸಮಗ್ರಾನುಗ್ರಹ ಇಚ್ಛೆಯಿಂದ ತಾನಾಗಿಯೇ (ಶಿಷ್ಯ ಪ್ರಯತ್ನವಿಲ್ಲದೆಯೋ) ಪ್ರಾಪ್ತನಾದ ಸಮಗುರುವೂ ಸಹ ಸ್ವೇಚ್ಛೆಯಿಂದ ಸ್ವೀಕಾರ್ಯನು ಧ್ಯಾನರೂಪ ಉಪಾಸನವು ಸರ್ವಶ್ರೇಷ್ಟ ವ್ಯಕ್ತಿವಿಷಯವಾದಲ್ಲಿ ಗ್ರಹಣಾರ್ಹವೋ ಹಾಗೆಯೇ ಸಮಾನ ಉಪಾಸನಾ ಅನ್ಯ ಗುರುವು ಸ್ವೇಚ್ಛೆಯಿಂದಲೇ ಗ್ರಾಹ್ಯನು.

## ಸೂ॥ ಓಂ॥ ಅತಿದೇಶಾಚ್ಚ ಓಂ॥ 47

**ಬ್ರಹ್ಮೋಪಾಸ್ವ ಬ್ರಹ್ಮೋಪಚರಸ್ವ ತಚ್ಛ್ರಣು ಹಿ ತತ್ತ್ವಾಮವತು ಯಥಾ ಬ್ರಹ್ಮೋಪಚರೇ ರ್ಯಥಾ ಮಾಮುಪಚರೇ ರ್ಯೇ ಚಾನ್ಯೇಽಸ್ಮದ್ವಿಧಾಃ ಶ್ರೇಯಸಶ್ಚತಾನುಪಾಸ್ವ ತಾನುಪಚರಸ್ವ ತೇಭ್ಯಃ ಶೃಣುಹಿ ತೇ ತ್ವಾಮವಂತ್ವಿತಿ ಪೌಷ್ಯಾಯಣ ಶ್ರುತಾವತೀದೇಶಾಚ್ಚ**

ಹಿಂದಿನ ಗುರೂಪದೇಶ ರೂಪವಾಗಿ ಅಜ್ಞಾರೂಪಾದೇಶದಿಂದಲೇ ಅನಂತರ ಬಂದ ಗುರುವು ಸ್ವೀಕಾರ್ಯನು ಎಂದು ಪೌಷ್ಯಾಯಣ ಶೃತಿಯು ಹೇಳುವುದು.

ಬ್ರಹ್ಮನನ್ನು ಉಪಾಸನೆ ಮಾಡು. ಬ್ರಹ್ಮರೂಪಗುರುವನ್ನು ಸೇವಾರೂಪೋಪಾಸನೆಯನ್ನು ಮಾಡು. ಆತನ ಉಪದೇಶದಂತೆ ಬ್ರಹ್ಮೋಪಾಸನವನ್ನು ಮಾಡು ಆಪರ ಬ್ರಹ್ಮನು ನಿನ್ನನ್ನು ಕಾಪಾಡಲಿ ಹೇಗೆ ಪರಬ್ರಹ್ಮನನ್ನು ಉಪಾಸನೆ ಮಾಡುವೆಯೋ ಹಾಗೆಯೇ ನಮ್ಮಂತಹ ಗುರುಗಳನ್ನು ಶ್ರೇಷ್ಠರನ್ನು ಉಪಾಸನೆ ಮಾಡಿ ಅವರುಗಳಿಂದ ಬ್ರಹ್ಮನನ್ನು ಕೇಳಿ ತಿಳಿದು ಉದ್ಧಾರವಾಗು ಆಚಾರ್ಯೋಪಾಸನವು ವಿನಯಪೂರ್ವಕವಾಗಿ ಅವರಲ್ಲಿ ನಡವಳಿಕೆ ಮತ್ತು ಅಭೀಷ್ಟಕರಣವು

ಇತಿ ಪೂರ್ವವಿಕಲ್ಪಾಧಿಕರಣಂ

## - ವಿದ್ಯಾಧಿಕರಣಂ -

ಈ ಅಧಿಕರಣದಲ್ಲಿ ಉಪಾಸನಾದಿಗಳು ಅಗತ್ಯಮಾಡಲ್ಪಡಬೇಕೆಂದು ಸಮರ್ಥನೆಗಾಗಿ ಜ್ಞಾನವೇ ಮುಖ್ಯ ಹೇತುವೆಂದು ಸಮರ್ಥನವು.

1 **ನ ಚ ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯ**
**(ಗೀ-3-20) ಇತ್ಯಾದಿನಾನ್ಯನ್ಮೋಕ್ಷ ಸಾಧನಂ ।**

**ಮೇಲಿನ** ಗೀತಾವಾಕ್ಯದಂತೆ ಜ್ಞಾನಕ್ಕಿಂತಲೂ ಆಚರಣೆಗಳಿಂದಲೂ ಮುಕ್ತಿಯುಂಟೆಂದು ಪೂರ್ವಪಕ್ಷವು (ಕರ್ಮವು) ಕರ್ಮಕರಣ, ತ್ಯಾಗ ಇತ್ಯಾದಿಗಳು ಆದರೆ ಹಾಗಲ್ಲ.

### ಸೂ|| ಓಂ|| ವಿದ್ಯೈವತು ನಿರ್ಧಾರಣಾತ್ ಓಂ|| 48

ತಮೇವಂ ವಿದಿತ್ವಾತಿ ಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತ್ಯೇ ಯನಾಯ (ಶ್ವೇ-3-8) ಇತಿ ನಿರ್ಧಾರಣಾದ್ವಿದ್ಯಯೈವ ಮೋಕ್ಷಃ ॥

ಮೇಲಿನ ಶೃತಿಯು ನಿರ್ಧಾರಣಾ ರೂಪದಿಂದ ಮಿಕ್ಕ ಎಲ್ಲಾರೀತಿ ಸಾಧನ ಗಳನ್ನು ನಿಷೇಧಮಾಡಿ ಜ್ಞಾನವೇ ಮೋಕ್ಷಸಾಧನವೆಂದು ಹೇಳುವುದರಿಂದ ಜ್ಞಾನಕ್ಕಿಂತ ಅದು ಸಾಧನವು ಇಲ್ಲ.

## ಸೂ॥ ಓಂ॥ ದರ್ಶನಾಚ್ಚ ಓಂ॥ 49

ನ ಕೇವಲಂ ವಿದ್ಯಯಾ ಕಿಂತು ಅಪರೋಕ್ಷಜ್ಞಾನೇನ ಚ ।
ಸರ್ವಾನ್ ಪರೋಮಾಯಾಮಾಯಂ ಸಿನೀಶೇ ದೃಷ್ಟ್ವೈವತಂ ಮುಚ್ಯತೇ
ನಾಪರೇಣ ಇತಿ ಕೌಶಿಕ ಶೃತಿಃ ॥

ಮೋಕ್ಷ ಸಿದ್ಧಿಯು ಪರೋಕ್ಷಜ್ಞಾನರೂಪ ವಿದ್ಯೆಯಿಂದಲೇ ಅಲ್ಲ .ಬ್ರಹ್ಮ ಸಾಕ್ಷಾತ್ಕಾರದರ್ಶನದಿಂದಲೇ ಸಾಧ್ಯವು. ಆದ್ದರಿಂದ ಧ್ಯಾನಾನುಷ್ಠಾನವು ಅವಶ್ಯಕವು

ಮೇಲಿನ ಶೃತಿಯು ಆ ಪರಮಾತ್ಮ ವಸ್ತುವು ಸರ್ವಜೀವಗಳನ್ನು ಸ್ವೇಚ್ಛಾ ಪ್ರಕೃತಿರೂಪ ಶಕ್ತಿಯಿಂದ ಬಂಧನ ಮಾಡುವನು. ಅವರನ್ನು ಯಥಾಯೋಗ್ಯ ಧ್ಯಾನದಿಂದ ಕಂಡು ಮೋಕ್ಷರನ್ನು ಹೊಂದಬೇಕು. ಪರೋಕ್ಷಧ್ಯಾನದಿಂದಲೂ ಅನ್ಯ ವಸ್ತುದರ್ಶನದಿಂದಲೂ ಮೋಕ್ಷಪ್ರಾಪ್ತವಲ್ಲ. ಪರಮಾತ್ಮನ ವಿನಃ ಬಂಧಮೋಚಕ ಶಕ್ತಿಯು ಮತ್ಯಾರಲ್ಲಿಯೂ ಇಲ್ಲ

ಇತಿ ವಿಧ್ಯಾಧಿಕರಣಂ

ಈ ಅಧಿಕರಣದಲ್ಲಿ ಭಗವಂತನನಾಮೋಪಾಸನಾಧಿಕ್ಯ ಜ್ಞಾನದಿಂದಲೇ ಮೋಕ್ಷ ಸಾಧನವು ಸಮರ್ಥನವು.

## ಸೂ॥ ಓಂ॥ ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ಓಂ॥ 50

ಮೋಕ್ಷಕ್ಕೆ ಜ್ಞಾನ ಸಾಧನವು ಕರ್ಮಶೃತಿ ವಿರೋದವಲ್ಲ ಶೃತಿಯು ಬಲವಾದ್ದರಿಂದ ಏವಂ ವಿದಿತಾ ಎಂಬ ಶೃತಿವಾಕ್ಯದಿಂದಲೂ ಮತ್ತು ಶೃತಿಯ ನಿಶ್ಚಯಾರ್ಥ ಬೋದಕ ವಿಮರ್ಶೆಯಿಂದಲೂ ಯುಕ್ತವೇ. ಭಗವದುಪಾಸನೆಯು ಜ್ಞಾನಪೂರ್ವಕ ಮೋಕ್ಷಸಾಧನವು.

ಸಾವಧಾರಣಾ ಬಲವತೀ ಶ್ರುತಿಃ ।
ಇಂದ್ರೋಽಶ್ವಮೇಧಾಂಛತ ಮಿಷ್ಟ್ವಾಪಿ ರಾಜಾ ಬ್ರಹ್ಮಾಣ ಮೀಡ್ಯಂ ಸಮುವಾಚೋಪಸನ್ನಃ ।
ನ ಕರ್ಮಭಿರ್ನಧನೈರ್ನೈವಚಾನ್ಯೈಃ ಪಶ್ಯೇತ್ಸುಖಂತೇ ನ ತತ್ವಂ ಬ್ರವೀಹಿ ॥ ಇತಿ ಬಲಬಲ್ಲಿಂಗಂ

ಶೃತಿಯಲ್ಲಿ ಸಾವಧಾರಣಪೂರ್ವಕ ದೃಷ್ಟಿಯಿಂದಲೇ ಮೋಕ್ಷವೆಂದು ಕೌಶಿಕಶೃತಿ ಬಲದಿಂದಲೂ ಸ್ಮೃತಿಯುಕ್ತ ಸಾಧಾರಣ ಕರ್ಮೋಕ್ತಿಯು ಬಲವತ್ತರವಲ್ಲವಾದ್ದರಿಂದ ನಾನ್ಯಃ ಪಂಥಾ ಎಂದು ಇತರಸಾಧನಗಳನ್ನು ನಿಷೇಧಿಸಿರುವುದರಿಂದಲೂ ಉಪಾಸನೇಯೋ ಜ್ಞಾನಪೂರ್ವಕವಾಗಿ ಮೋಕ್ಷ ಹೇತುವು ದೇವೇಂದ್ರನು 100 ಅಶ್ವಮೇದಾಖ್ಯ ಯಾಗಗಳನ್ನು ಮಾಡಿಯೂ ದೇವತೆಗಳಿಗೆ ರಾಜನಾಗಿದ್ದರೂ ಬ್ರಹ್ಮನನ್ನು ಸ್ತುತಿಗಳಿಂದ ಪ್ರಸನ್ನವಾಗಿಸಿಕೊಂಡು ಕೇಳಿಕೊಂಡನು. ಕರ್ಮಗಳಿಂದಲೂ ಧನದಾನದಿಂದಲೂ ಮತ್ಯಾವಪದಾದರೂ ಉಪಾಯದಿಂದಲೂ ಮೋಕ್ಷಸುಖ ಲಭ್ಯವೆಂದು ಕಾಣೆನು. ಆದ್ದರಿಂದ ನನಗೆ ಪರಮಾತ್ಮ ತತ್ವವನ್ನು ಉಪದೇಶಿಸಿರಿ ಎಂಬ ಪ್ರಾರ್ಥನೆಯಿಂದ ತತ್ವಜ್ಞಾನಪೂರ್ವಕ ಬ್ರಹ್ಮೋಪಾಸನದಿಂದಲೇ ಮುಕ್ತಿಯು.

ನಾಸ್ತ್ಯಕೃತಃ ಕೃತೇನ (ಮುಂ-1-2-1)2 ಇತ್ಯುಪಪತ್ತಿಶ್ಚ ।
ಕರ್ಮಣಾ ಬಧ್ಯತೇ ಜಂತುರ್ವಿದ್ಯಯಾ ಚ ವಿಮುಚ್ಯತೇ ।
ತಸ್ಮಾತ್ಕರ್ಮ ನ ಕುರ್ವಂತಿ ಯತಯಃ ಪಾರದರ್ಶಿನಃ ।
ಇತಿಯುಕ್ತಿ ಮದ್ಭಗವದ್ವಚನಂ ।
ಅತೋ ನ ಪ್ರಮಾಣಾಂತರಬಾಧಃ ಕರ್ಮಣೈವೇತ್ಯಯೋಗವ್ಯವಚ್ಛೇದಃ ॥

ಮಾಡಲ್ಪಡುವ ಕರ್ಮದಿಂದ ಕರ್ಮಫಲನಾಶವಲ್ಲ. ಮತ್ತೆ ಕರ್ಮಫಲಬಂಧವೇ ಕರ್ಮಮಾಡುವುದರಿಂದ ಜೀವನು ಬದ್ಧನೇ ಆಗುವನು. ಜ್ಞಾನದಿಂದಲಾದರೆ ಬಿಡುಗಡ ಹೊಂದುವನು ಆದ್ದರಿಂದಲೇ ಯತಿಗಳೂ ಮತ್ತು ಮೋಕ್ಷಫಲಾತೀಕ್ಷಿಗಳೂ ಕರ್ಮಗಳನ್ನು ಮಾಡುವುದಿಲ್ಲ ಎಂದು ಯುಕ್ತಪೂರ್ವಕ ಭಗವದ್ವಚನವು

2 ಕರ್ಮಣೈವ ಇತ್ಯಯೋಗವ್ಯವಚ್ಛೇದಃ ।

ಮೇಲಿನ ವಾಕ್ಯದಲ್ಲಿಯಾದರೋ ಕರ್ಮಣಾ ಸಹ ಕರ್ಮ ಮಾಡುವವರಾಗಿಯೇ ಜನಕಾದಿಗಳು ಜ್ಞಾನರೂಪೋಪಾಸನ ದ್ವಾರಮೋಕ್ಷವನ್ನು ಹೊಂದಿದರು ಅಂದರೆ ಪಲಾಪೇಕ್ಷೆಯಿಲ್ಲದೆಯೇ ಕರ್ಮಾಚರಣೆಯು ಜ್ಞಾನಾರ್ಜನವಾಗಿ ಮೋಕ್ಷ ಫಲವು.

ಇತಿ ಶೃತ್ಯಧಿಕರಣಂ

## - ಅನುಬಂಧಾಧಿಕರಣಂ -

ಈ ಅಧಿಕರಣದಲ್ಲಿ ಬ್ರಹ್ಮಜ್ಞಾನಸಾಧನಪೂರ್ವಕ ಉಪಾಸನೆಗೆ ಭಕ್ತಿಯ ಅವಶ್ಯಕತೆಯು ಹೇಳಲ್ಪಡುವುದು.

**ಸೂ॥ ಓಂ॥ ಅನುಬಂಧಾದಿಭ್ಯಃ ॥ಓಂ 51**

ನ ಕೇವಲಂ ಶ್ರವಣಾಧಿಭಿಃ ಗುರುಪ್ರಸಾದೇನ ಬ್ರಹ್ಮದರ್ಶನಂ ।
ಕಿಂತು ಭಕ್ತ್ಯಾದಿಭಿಶ್ಚ

ಮೋಕ್ಷಫಲವು ಶ್ರವಣ ಮನನಾದಿಗಳಿಂದಲೇ ಸಾಧ್ಯವಲ್ಲ ಮತ್ತೆ ಪ್ರಬಲ ಗುರುಪ್ರಸಾದದಿಂದಲೂ ಅಲ್ಲ ಅನುಬಂಧ ಶಬ್ದದಿಂದ ಹೇಳುವ ಹರಿ ಗುರುಭಕ್ತಿ ಶಮದಮಾದಿ ವೈರಾಗ್ಯವೂ ಅವಶ್ಯಕವು.

ಅನುಬಂಧವೆಂದರೆ ಮಹಾತ್ಮ ಜ್ಞಾನಪೂರ್ವಕ ಸ್ನೇಹರೂಪ ಶ್ರೀಹರಿ ಗುರು ಗಳಲ್ಲಿ ಭಕ್ತಿಯಿಂದ ಶಮದಮಾದಿ ರೂಪ ವೈರಾಗ್ಯಪೂರ್ವಕ ಅನುಷ್ಠಾನಾದಿ ಉಪಾ ಸನವು

2 ಸರ್ವಲಕ್ಷಣ ಸಂಪನ್ನಃ ಸರ್ವಜ್ಞೋ ವಿಷ್ಣುತತ್ಪರಃ ।
ಯದ್ಗುರುಃ ಸುಪ್ರಸನ್ನಃ ಸ್ಯ ದದ್ಯಾತ್ತನ್ನಾನ್ಯಥಾ ಭವೇತ್ ।
ತಥಾಪ್ಯನಾದಿ ಸಂಸಿದ್ಧಭಕ್ತ್ಯಾದಿಗುಣಪೂಗತಃ
ಲಭೇದ್ಗುರು ಪ್ರಸಾದಂಚ ತಸ್ಮಾದೇವಚ ತದ್ಭವೇತ್ ॥ ಇತಿ

ಸರ್ವ ಸದ್ಗುರು ಲಕ್ಷಣಗಳಿಂದ ಯುಕ್ತನಾದ ಸರ್ವಜ್ಞನಾದ ವಿಷ್ಣುಭಕ್ತನಾದ ಗುರು ವು ಪ್ರಸನ್ನನಾಗಿ ಜ್ಞಾನವನ್ನುಪದೇಶಿಸುವನೋ ಅದು ಫಲಸಾಧ್ಯವು. ಅನ್ಯಥಾ ಅಲ್ಲ ಆದರೂ ಅನಾದಿಸಿದ್ಧ ಭಕ್ತ್ಯಾದಿಗಳಿಂದ ಗುರುಪ್ರಸಾದವು ಉಪ ಲಬ್ಧಜ್ಞಾನದಾರಮೋಕ್ಷಸಾಧನವು

3 ಭಕ್ತಿರ್ವಿಶಿಷ್ಟಾ ಗುರೋಶ್ಚೈವ ಗುರೌರ್ನಿತ್ಯಪ್ರಸನ್ನತಾಂ ।
ದದ್ಯಾಚ್ಛಮದ ಮಾದೀಂಶ್ಚ ತೇನ ಚೈತೇ ಗುಣಾಃ ಪುನಃ ।
ತೈಸ್ಸರ್ವೈರ್ದರ್ಶನಂ ವಿಷ್ಣೋಃ ಶ್ರವಣಾದಿಕೃತಂ ಭವೇತ್ ॥
ಇತಿ ಚ ನಾರಾಯಣ ತಂತ್ರೇ

ಶ್ರೀ ವಿಷ್ಣು ಮತ್ತು ಗುರುಗಳಲ್ಲಿ ಸ್ವರೂಪಭೂತ ಭಕ್ತಿವಿಶೇಷದಿಂದ ಶಮದ ಮಾದಿ ವೈರಾಗ್ಯವು ಪ್ರಾಪ್ತವಾಗಿ ಗುರುಗಳ ಪ್ರಸನ್ನತೆಗೆ ಕಾರಣವು ಗುರುಪ್ರಸಾದನಾ ನಂತರ ಅತಿಶಯ ಭಕ್ತಿಯಿಂದ ಮಾಡಿದ ಉಪಾಸನೆಗಳು (ಶಮದಮಾದಿಗಳ

ಕ್ರಮಶಃ) ವಿಷ್ಣು ದರ್ಶನವಾಗಲು ಸಾಧ್ಯವು.

ಇತ್ಯನುಬಂಧಾಧಿಕರಣಂ

## - ಪ್ರಜ್ಞಾಂತರಾಧಿಕರಣಂ -

ಈ ಅಧಿಕರಣದಲ್ಲಿ ಉಪಾಸನಾಸಾಧ್ಯಜ್ಞಾನವು ತಾರತಮ್ಯ ವಿಶೇಷದಿಂದಲೇ ಎಂಬುದನ್ನು ಹೇಳಿದೆ.

## ಸೂ|| ಓಂ|| ಪ್ರಜ್ಞಾಂತರಪೃಥಕ್ತ್ವವದ್ದೃಷ್ಟಿಶ್ಚ ತದುಕ್ತಂ ಓಂ|| 52

ಧ್ಯಾನವು ಹೇಗೆ ಅನೇಕ ಪ್ರಕಾರವೋ ಅದಕ್ಕನುಸಾರವಾಗಿಯೇ ಬ್ರಹ್ಮ ದೃಷ್ಟಿಯೂ ಅನೇಕ ಪ್ರಕಾರವು ಒಂದೇ ರೀತಿಯಲ್ಲ. ಅಂತ ರ್ದೃಷ್ಟಯೋ-ಎಂಬ ಶೃತಿಯಲ್ಲಿ ಅನೇಕ ವಿಧ ದೃಷ್ಟ್ಯತ್ವವು ಹೇಳಿದೆ

ಉಪಾಸನಾಭೇದವತ್ತ ದರ್ಶನಭೇದಃ । ತಚ್ಚೋಕ್ತಂ ಕಮಠಶ್ರುತೌ ।

ಅಂತರ್ದೃಷ್ಟಯೋ ಬಹಿರ್ದೃಷ್ಟಯೋಽವತಾರದೃಷ್ಟಯಃ ಸರ್ವ ದೃಷ್ಟಯ ಇತಿ। ದೇವಾ ವಾವ ಸರ್ವದೃಷ್ಟಯಸ್ತೇಷು ಚೋತ್ತರೋತ್ತರವಮಾಬ್ರಹ್ಮಣೋ ನ್ಯೇಷು ಯಥಾಯೋಗಂ ಯಥಾಹ್ಯಾಚಾರ್ಯ ಅಚಕ್ಷತ || ಇತಿ
ಉಪಾಸನೆಯ ನಾನಾ ತಾರತಮ್ಯರೀತಿಯಿಂದ ಫಲತ್ವ ನಾನಾರೀತಿಯು.

ಕಮಠಶೃತಿಯು ಬ್ರಹ್ಮದೃಷ್ಟಿಯಲ್ಲಿ ನಾನಾರೀತಿಯ ಹೃದಯಾಂತರ ದೃಷ್ಟಿಯುಳ್ಳವರು. ಅವರುಗಳಲ್ಲಿಯೂ ದೇಹದಿಂದ ಹೊರಗೆ ಅವತಾರಗಳಲ್ಲಿ ದೃಷ್ಟಿ ಮತ್ತು ಸರ್ವದೃಷ್ಟಿಯುಳ್ಳವರು, ಎಂದು ಮೂರು ವಿಭಾಗವು. ದೇವತೆಗಳಿಗೆ ಸರ್ವವ್ಯಾಪ್ತದ

ರೂಪ ದೃಷ್ಟಿಯುಳ್ಳವರು ಇವರುಗಳಲ್ಲಿಯೂ ತಾರತಮ್ಯವಾಗಿ ಉತ್ತರೋತ್ತರ ಉತ್ತಮ ಜೀವಿಗಳು ಬ್ರಹ್ಮಪರ್ಯಂತವಾಗುತ್ತಮರುಸ್ತರತ್ವವುಳ್ಳವರು ಇತರ ಮುಮುಕ್ಷುಗಳು ಯೊಗ್ಯತಾನುಸಾರ ಆಚಾರ್ಯೋಪದೇಶಕ್ಕನುಗುಣವಾಗಿ ವ್ಯಕ್ತತ್ವ ವುಳ್ಳವರು

3 **ಅಧ್ಯಾತ್ಮೇ ಚ - ದೃಷ್ಟ್ಯೈವಹ್ಯವತಾರಾಣಾಂ ಮುಚ್ಯತೇಕೇಚಿ ದಂಜಸಾ ।**

**ದರ್ಶನೇನಾಂತರೇಣಾನ್ಯೆ ದೇವಾಃ ಸರ್ವತ್ರ ದರ್ಶನಾತ್ ।**
**ತೇಷಾಂವಿಶೇಷಮಾಚಾರ್ಯೋ ವೇತ್ತಿ ಸರ್ವಜ್ಞತಾಂಗತಃ ॥ ಇತಿ**

ಕೆಲವು ಜೀವರು ಪರಮಾತ್ಮನವತಾರ ರೂಪಗಳನು, ಚೆನ್ನಾಗಿ ಜ್ಞಾನ ಪೂರ್ವಕ ನೋಡಿಯೇ ಮುಕ್ತರಾಗುವರು ಮಿಕ್ಕ ದೇವತೆಗಳಾದರೋ ಸರ್ವ ವ್ಯಾಪ್ತನನ್ನಾಗಿ ನೋಡಿ ಮುಕ್ತರಾಗುವರು ಈ ಜೀವದ ವಿಶೇಷಗಳನ್ನು ಸರ್ವಜ್ಞ ರಾದ ಗುರುಗಳು ಮಾತ್ರತಿಳಿದು ಉಪದೇಶಿಸಿ ಯೋಗ್ಯ ದರ್ಶನವನ್ನು ಹೊಂದಿಸು ವರು.

ಇತಿ ಪ್ರಜ್ಞಾಂತರಾಧಿಕರಣಂ

## – ನ ಸಾಮಾನ್ಯಾಧಿಕರಣಂ –

**ಈ** ಅಧಿಕರಣದಲ್ಲಿ ಉಪಾಸನೆಯಿಂದ ಬಿಂಬಶಬ್ದಿತ ಆತ್ಮರೂಪ ವಿಷಯಕ ಪರಮಾತ್ಮಸ್ವರೂಪವು ಮುಕ್ತಿ ಸಾಧನವು. ಭಗವಂತನು ಸರ್ವರೂಪಗಳಲ್ಲಿಯೂ ಮೋಕ್ಷರಾಪ್ಯತ್ವ ಗುಣಸಾಮ್ಯನಾದ್ದರಿಂದ ಯಾವುದಾದರೂ ಒಂದು ರೂಪದೃಷ್ಟಿಯು ಮೋಕ್ಷಸಾಧನವು ಸ್ವಬಿಂಬದರ್ಶನವೇ ಎಂಬ ನಿಯಮವೇನೂ ಇಲ್ಲ ಹೀಗೆ ಪೂರ್ವ ಪಕ್ಷವು

## ಸೂ॥ ಓಂ॥ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ ಓಂ॥ 53

ಸಾಮಾನ್ಯಮೃತಿಮಾತ್ರನಿಂದಲೇ ಮುಕ್ತಿಯಾಗದೆ ಕೊನೆಯ ಜೀವನದ ಮೃತ್ಯುನಂತರವೇ ಮುಕ್ತಿಯು ಸಾಧ್ಯವು ಹಾಗೆಯೇ ಭಗದ್ರೂಪಗಳಲ್ಲಿ ಸಾಮ್ಯತ್ವ ವಿದ್ದರೂ ಸಾಧಾರಣ ರೂಪ ದರ್ಶನದಿಂದ ಮುಕ್ತಿಯು ಲಭ್ಯವಲ್ಲ ಮತ್ತೆ ಸಾಧಾರಣ ರೂಪ ಪರೋಕ್ಷಜ್ಞಾನವು ಮಾತ್ರ ಲಭ್ಯವು ಸ್ವಬಿಂಬದರ್ಶನದಿಂದಲೇ ಮುಕ್ತಿಯು ಆದರೂ ಸಾಮಾನ್ಯ ದರ್ಶನಮಾತ್ರವೂ ನಿಷ್ಫಲವಲ್ಲ ಮತ್ತೆ ಮಹದಾದಿ ಲೋಕ ಸಾಧನವು ವಿಶೇಷ ರೂಪ ಸಂಹಾರ ಮುಕ್ತಿಯಲ್ಲ ತನ್ನ ಸಮೀಪದಲ್ಲಿರುವ (ಹೃದ್ಗತ) ತಾರತಮ್ಯರೀತ್ಯಾ ಯೋಗ್ಯ ವಿಶೇಷದೃಷ್ಟಿಯೇ ಮೋಕ್ಷ ಸಾಧನವು

ನ ಸಾಮಾನ್ಯದರ್ಶಣಮಾತ್ರೇನ ಮುಕ್ತಿಃ ।
ಯಥಾ ಮೃತ್ಯುಮಾತ್ರಾತ್ ॥

ಸಾಧಾರಣವಾಗಿ ಸರ್ವಜನ್ಮದಲ್ಲಿಯೂ ಆಗುವ ಮೃತ್ಯುವು ಹೇಗೆ ಮೋಕ್ಷ ಸಾರ್ಥವಲ್ಲವೋ ಹಾಗೆಯೇ ಸಾಧಾರಣರೂಪದರ್ಶನದಿಂದ ಮೋಕ್ಷ ಪ್ರಾಪ್ತಿಯಲ್ಲ.

ನ ಹಿ ಲೋಕಾಪತ್ತಿಮಾತ್ರಂ ಮುಕ್ತಿಃ
ಸಾಮಾನ್ಯದರ್ಶನಾಲ್ಲೋಕಾ ಮುಕ್ತಿರ್ಯೋಗ್ಯಾತ್ಮದರ್ಶನಾತ್।
ಮುಚ್ಯತೇ ನಾತ್ರ ಸಂದೇಹೋ ದೃಷ್ಟ್ವಾ ತು ಸ್ವಾತ್ಮಯೋಗ್ಯಯಾ ॥
ಇತಿ ನಾರಾಯಣತಂತ್ರೇ

ಪ್ರಾರಬ್ಧಕರ್ಮಕ್ಷಯರೂಪಮುಕ್ತನಂತರವೇ ಮುಕ್ತಿಯು ಬ್ರಹ್ಮಜ್ಞಾನಿಗಳಿಗೂ ಕೂಡ ಜ್ಞಾನಾನಾಂತರ ಮೃತ್ಯುವು ಸಂಸಾರಮೃತ್ಯುವು ಮಾತ್ರವು. ಪ್ರಾರಬ ಕರ್ಮಾವಸಾನಪರ್ಯಂತ ಜನ್ಮಗಳನ್ನು ಹೊಂದಿಯೇ ಕರ್ಮಫಲನಾಶಾನಂತರ ಮೋಕ್ಷವು ಆದರೆ ಸಾಮಾನ್ಯರೂಪದರ್ಶನವು ಮೋಕ್ಷಸಾಧನವಲ್ಲದಿದ್ದರೂ ಬಿಂಬ ರೂಪದರ್ಶನವು ಉತ್ತಮಲೋಕಪ್ರಾಪ್ತಿರೂಪ ಫಲಉಳ್ಳದ್ದು. ಸ್ವಯೋಗ್ಯಬಿಂಬ ದರ್ಶನವೇ ಮುಕ್ತಯೋಗ್ಯವು.

5 ದರ್ಶನೇನಾತ್ಮಯೋಗ್ಯೇನ ಮುಕ್ತಿರ್ನಾನ್ಯೇನ ಕೇನಚಿದಿತಿ ಚಾಧ್ಯಾತ್ಮೇ ।

ಯೋಗ್ಯ ಬಿಂಬದರ್ಶನವೇ ಮುಕ್ತಿಫಲವುಳ್ಳದ್ದು. ಮತ್ತ್ಯಾವುದೂ ಅಲ್ಲ.
ಹೃದಿಸ್ಥಾ ಯಾ ಹರೇರ್ಮೂರ್ತಿಃ ಜೀವೋಯತ್ಪ್ರತಿಬಿಂಬಕಃ ।
ಯದ್ವಶೆವರ್ತತೇ ಜೀವಃ ಸಾತುಜೀವಕಲಾಸ್ಪೃಕಾ ॥

ಈ ಜೀವಕಲಾಮೂರ್ತಿದರ್ಶನವೇ ಮೋಕ್ಷಪ್ರಾಪ್ತಿಯು.

ಇತಿ ಸಾಮಾನ್ಯಾಧಿಕರಣಂ

## – ಪರೀಕ್ಷಾಧಿಕರಣಂ –

ಈ ಅಧಿಕರಣದಲ್ಲಿ ದರ್ಶನಸಾದನೋಪಾಸನ ಸಹಿತ ಭಕ್ತಿಯ ಸ್ವಾತಂತ್ರ್ಯವು ವಿಕಾಸನವು

1 **ಭಕ್ತಿರೇವೈನಂ ನಯತಿ ಭಕ್ತಿರೇವೈನಂ ದರ್ಶಯತಿ ಭಕ್ತಿವಶಃ ಪುರುಷೋ ಭಕ್ತಿರೇವ ಭೂಯಸೀತಿ ಮಾಠರಶ್ರುತೇರ್ನ ಪರಮಾತ್ಮನಾ ದರ್ಶನಮಿತಿಚೇತ್ ।**

ಮೇಲಿನ ಶೃತಿಯಲ್ಲಿ ಭಕ್ತಿಯೇ ಜೀವನಿಗೆ ಪರಮಾತ್ಮನ ಸಮೀಪವನ್ನು ಹೊಂದಿಸಿ ದರ್ಶನವನ್ನು ಹೊಂದಿಸುವುದು. ಅಂದರೆ ಶ್ರೀ ಪರಮಾತ್ಮನು ದರ್ಶನವನ್ನು ಹೊಂದಿಸುವುದು ಪರಮಾತ್ಮನು ಭಕ್ತಿವಶನು. ಭಕ್ತಿಯೇ ಶ್ರೇಷ್ಠವೆಂದು ಹೇಳುವುದು. ಅಂದರೆ ಶ್ರೀ ಪರಮಾತ್ಮನು ದರ್ಶನವನ್ನು ಕೊಡುವುದಿಲ್ಲ ಭಕ್ತಿಯೇ ಆತನ ದರ್ಶನವನ್ನು ಕೊಡುವುದು. ಶ್ರೀ ಪರಮಾತ್ಮನು ಭಕ್ತಿವಶನು. ಸ್ವತಂತ್ರನಲ್ಲ ಎಂದರೆ

2 **ನ ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ (ಮು-3-2-4)**
**ಇತಿ ಶೃತೇಃ ॥**

ಶ್ರೀ ಪರಮಾತ್ಮನೆ ದರ್ಶನಕೊಡುವಲ್ಲಿ ಸ್ವತಂತ್ರನು ಭಕ್ತಿಯು ಸಾಧನವು ಮಾತ್ರ ಅಥರ್ವಣಶೃತಿಯು –ನಾಯಮಾತ್ಮಾ ಪ್ರವಚನೇ ಲಭ್ಯೋ, ನಮೇಧಯಾ ನ ಬಹುನಾಶೃತೀ ಯಮೇವೈಷವೃಣುತೆ ತೇನ ಲಭ್ಯ ತಸ್ಯೈಷ ಆತ್ಮಾವಿವೃಣುತೆ ತನೂಂಸ್ವಾಂ ಏತ್ಯೈರುಪಾಯೈರ್ಯತತೆಯಸ್ತು ವಿದ್ವಾನ್ ಎಂಬು ಅದರ ಅರ್ಥವು.

ಭಕ್ತಿಪೂರ್ವಕ ಭಕ್ತರಿಂದಲೂ ಸ್ವತಂತ್ರವಾಗಿ ನೋಂದಲು ಸಾಧ್ಯವಿಲ್ಲ ಆದರೆ ಯಾವ ಭಕ್ತನು ಭಕ್ತಿಪ್ರಧಾನವಾಗಿ ಪ್ರವಚನಾದ್ಯುಪಾಸನೆಗಳಿಂದ ಬ್ರಹ್ಮದರ್ಶನಕ್ಕಾಗಿ ಯತ್ನಿಸುವನೋ ಆ ಜೀವರಿಗೆ ಪ್ರಸನ್ನನಾದ ಪರಮಾತ್ಮನು ನಾಯುವಿನಲ್ಲಿ ಆವಿರ್ಭೂತನಾಗುವನು (ಹೃದಯಾವಕಾಶವನ್ನು ಪ್ರವೇಶಿಸಿ ಕಾಣಿಸುವನು) ಆತನೆ ಸ್ವತಂತ್ರನು

3 ಕಥಂ ತರ್ಹ್ಯೇಷಾ ಶೃತಿಃ ।

## ಸೂ ॥ ಓಂ॥ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ಓಂ॥ 54

ಪರಮಾತ್ಮನಿಂದಲೇ ಬ್ರಹ್ಮದರ್ಶನವು ಆದರೂ ನಾರದ ಶೃತಿಯಲ್ಲಿ ಹೇಳಿರುವಂತೆ ಸ್ವತಂತ್ರವಾಗಿಯೇ ಭಕ್ತಿಯು ಬ್ರಹ್ಮದರ್ಶನಕ್ಕೆ ಕಾರಣವೆಂದು ಹೇಳಿರವುದೂ ಯುಕ್ತವೇ ಎಲ್ಲಾ ಸಾಧನಗಳಲ್ಲಿಯೂ ಭಕ್ತಿಯೇ ಪ್ರಧಾನವಾದ್ದರಿಂದ ಭಕ್ತಿಯ ವಿಶೇಷವನ್ನು ಹೇಳಿದೆ

ಪರಮಾತ್ಮೇನ ಭಕ್ತ್ಯಾದರ್ಶನಂ ಪ್ರಾಪ್ಯಮುಕ್ತಿಂ ದದಾತೀತಿ ಪ್ರಧಾನಸಾಧನತಾದ್ಭಕ್ತಿಃ ಕರಣತ್ವೇನೋಚ್ಯತೆ ।

ಶ್ರೀ ಪರಮಾತ್ಮನು ಭಕ್ತಿಯಿಂದಲೇ ದರ್ಶನವಿಷಯನಾಗಿ ಮುಕ್ತಿಯನ್ನು ಕೊಡುವನು. ಹೀಗೆ ಭಕ್ತರಿಗೆ ಕರಣತ್ವವು ಶೃತಿಯು ಹೇಳುವುದು. ಕರಣದಲ್ಲಿ ಕೃತ್ಯತ್ವವು ಉಪಚಾರವು ಮಾತ್ರ. ಪ್ರಧಾನಸಾಧನವಾದ್ದರಿಂದ ಹೀಗೆ ಭಕ್ತಿಯ ಅನುಬಂಧವು.

4 ಮಾಯಾವೈಭವೇ ಚ । ಭಕ್ತಿಸ್ಥಃ ಪರಮೋವಿಷ್ಣುಸ್ತಯೈವೈನಂ
ವಶಂ ನಯೇತ್ ।
ತಯೈವ ದರ್ಶನಂ ಯಾತಃ ಪ್ರದ್ಯಾನ್ಮುಕ್ತಿ
ಮೇತಯಾ ।
ಸ್ನೇಹಾನುಬಂಧೋ ಯಸ್ತಸ್ಮಿನ್ಬಹುಮಾನ
ಪುರಸ್ಸರಃ ।
ಭಕ್ತಿರಿತ್ಯುಚ್ಯತೆ ಸೈವ ಕರಣಂ ಪರಮೋ
ಶಿತು ॥ಇತಿ

ಶ್ರೀ ಪರಮಾತ್ಮನು ಅನಾದಿಸಿದ್ಧಭಕ್ತಿಯಿಂದ ತನ್ನನ್ನು ಜೀವವಶನನ್ನಾಗಿ ಮಾಡಿಕೊಳ್ಳುವನೆಂದು ಸ್ಮೃತಿ ವಾಕ್ಯವು ಭಕ್ತ್ಯಂತರ್ಯಾಮಿ ಶ್ರೀ ಪರಮಾತ್ಮಾನು ಭಕ್ತಿಯಿಂದಲೇ ಜೀವನವಶವರ್ತಿಯಾಗಿ ಗುರುಪ್ರಸಾದದಿಂದ ಅಭಿವ್ಯಕ್ತಿಯನ್ನು ಹೊಂದಿದ ಕಾರಣದಿಂದ ಪ್ರಾಪ್ತಭಕ್ತವಿಷಯನಾಗಿ ಭಕ್ತಿಯಿಂದಲೇ ಮುಕ್ತಿಯನ್ನು ಕೊಡುವನು ಅಂತಹ ಜೀವನು ಬಹುಮಾನ ಪುರಸ್ಸರನಾಗಿ ದೇಶ ಕಾಲ ಗುಣಗಳಿಂದ ಪೂರ್ಣನಾಗಿ ತತ್ಫಲವಾಗಿ ಪರಮಾತ್ಮನಿಂದಲೇ ಕೃತ್ಯರೂಪಫಲವನ್ನಾಗಿ ಮೋಕ್ಷವನ್ನು ಹೊಂದುವನು.

5 ಸರ್ವಶಬ್ದಾನಾಂಬ್ರಹ್ಮಣಿ ಪ್ರವೃತ್ತೇಶ್ಚ ॥

ಭಕ್ತ್ಯಾದಿ ಸರ್ವಪದಗಳೂ ಪರಮಾತ್ಮವಾಚಕವಾಗಿ ದರ್ಶನ ಕೃತ್ಯತ್ವದಲ್ಲಿ ಆತನಿಗೆ ಕರಣತ್ವವೂ ಕೂಡ ಯುಕ್ತವೇ.

ಇತಿ ಪರೀಕ್ಷಾಧಿಕರಣಂ

## – ಏಕಾಧಿಕರಣಂ –

ಈ ಅಧಿಕರಣದಲ್ಲಿ ಉಪಾಸನೆಗೆ ಅನಾದಿಯೋಗ್ಯತಾಪೇಕ್ಷೆಯು ಹೇಳಿದೆ

1 ಜೀವಾಂಶಾನಾಂ ಪೃಥಗುತ್ಪತ್ತೇರ್ನಾನಾದಿ ಯೋಗ್ಯತಾಪೇಕ್ಷೇತಿ ನ ಮಂತವ್ಯಂ ಕುತಃ ॥

ಉಪಾಸನಾ ಯೋಗ್ಯತಾಪೇಕ್ಷಯು ಅನಾವಶ್ಯಕವು ಇಂದ್ರಾದಿಗಳ ಜೀವಾಂಶಗಳಿಂದ ಅರ್ಜುನಾದಿಗಳಿಗೆ ಉತ್ಪತ್ತಿಯಿರುವಂತೆ ಅನಾದಿತ್ವಧರ್ಮದಿಂದ ತಧರ್ಮಭೂತಯೋಗ್ಯತೆಯು ಅನಾದಿತ್ವವಾಗಲಾರದಾಗಿ ಇಂದ್ರಾದಿಜೀವರುಗಳಿಗೂ ತದಂಶಿಗೂ ಭಿನ್ನಗಳಾದ್ದರಿಂದ ಜ್ಞಾನ ಸುಖಾದಿಅನುಸಂದಾನ ವೈಲಕ್ಷಣದಿಂದಲೂ ಭೇದವೇ ಎಂದರೆ ಹಾಗಲ್ಲ ಏಕೆಂದರೆ

## ಸೂ॥ ಓಂ॥ ಏಕ ಆತ್ಮನಃ ಶರೀರೇ ಭಾವಾತ್ ಓಂ॥ 55

ಅಂಶಾಂಶಿನೋರೇಕತ್ವಮೇವ ।
ಅಂಶಿಕರ್ಮವಿಸಿರ್ಮಿತೇ ಶರೀರ ಏವಾಂಶಸ್ಯ ಭಾವಾತ್ ॥

ಅಂಶ ಅಂಶಿಗಳು ಒಂದೇ ಜೀವರು. ಇಂದ್ರಾದಿಗಳಿಂದ ಮಾಡಲ್ಪಟ್ಟ ಕರ್ಮ ನಿರ್ಮಿತ ಶರೀರವೇ ಅರ್ಜುನಾದ್ಯಂಶ ಗಳಿಂದ ಪ್ರಾಪ್ತವಾದ ಅಭಿಮಾನಿ ಶರೀರವು. ಕರ್ಮ ದಿರ್ಮಾಣ ಶರೀರದಲ್ಲಿ ತನ್ನಂಶವೇ ಇರುವುದರಿಂದ ಭೇದವಿಲ್ಲ.

## ಸೂ॥ ಓಂ॥ ವ್ಯತಿರೇಕಸ್ತದ್ಭಾವಭಾವಿತ್ವಾನ್ನತೂಪಲಬ್ಧಿವತ್ ಓಂ॥ 56

ಅಂಶಾಂಶಿಗಳಲ್ಲಿ ಜ್ಞಾನಸುಖಾದಿಗಳು ಪರಸ್ಪರ ಭೇಧನೆ. ಉಪಲಬ್ಧಿಯಿಂದ ಅಂಶಿಕ್ಯತಾ ಉಪಾಸನಾ ಲಭ್ಯವಾದ ಅನುಭವವು ಜ್ಞಾನಸುಖಾದಿಗಳು ಅಂಶಕ್ಕಿಂತ ಭೇದವೇ ಆದರೆ ಅಂಶಾಂಶಿಗಳ ಸ್ವಾಭಾವಿಕ ಭೇದವಿಲ್ಲ. ಅದು ಒಂದೇ. ಜ್ಞಾನಾದಿ ವಿಧ್ಯಮಾನೇಪಿ ಉಪಾಸನಾ ಜನಿತ ಮಹಾ ಫಲಾನುಸಂಧಾನವೇ ಅಭೇದಕ್ಕೆ ಸಾಧನವು. ಅಂಶಿಗಳಿಂದ ಅನುಷ್ಠಾನ ಮಾಡಲ್ಪಟ್ಟ ಉಪಾಸನಾಸಂಬಂಧ ಆನಂದವೃದ್ಧಿರೂಪ ಮಹಾಫಲಕ್ಕೆ ಅಂಶನೂ ಭಾಗಿಯಾಗಿರುವನು. ಅಂಶಿಯಲ್ಲಿ ಯಾದರೋ ವೃತ್ತಿಜ್ಞಾನಸುಖಾದಿಗಳಲ್ಲಿ ಮನುಷ್ಯ ಸಾಧ್ಯ ಭೋಗಾದಿಗಳಿಂದ ಅಲ್ಪತ್ವರೂಪಾನುಭವವು ಕಾಣುವುದು. ಆದರೂ ಅಂಶಾಂಶಗಳಲ್ಲಿ ಭೆದೇಪಿಲ್ಲ.

2 ಆಂಶಿನಸ್ತು ಪೃಥಗ್ಜ್ಞಾತಾ ಆಂಶಾಸ್ತಸ್ಯೈವ ಕರ್ಮಣಾ ॥
ಪುನರೈಕ್ಯಂ ಪ್ರಪದ್ಯಂತೇ ನಾತ್ರಕಾರ್ಯಾ ವಿಚಾರಣಾ
ಇತಿ ॥

ಅಂಶಿಗಳು ಅಂಶಜೀವಕರ್ಮಗಳಿಂದ ತಿರುಗಿ ಸುಟ್ಟುವುದು. ಅಂಶದಲ್ಲಿ ಸೇರಿ ಹೊಂದುವರು ಅನ್ಯಥಾ ಅಲ್ಲ.

ಇತ್ಯೇಕಾಧಿಕರಣಂ

– ಅಂಗಾವಬದ್ಧಾಧಿಕರಣಂ –

ಈ ಅಧಿಕರಣದಲ್ಲಿ ಭಗವದುಪಾಸನೆಯಲ್ಲಿ ಯಥಾ ಯೋಗ್ಯಬ್ರಹ್ಮಾದಿಅಂಗ ದೇವತೆಗಳ ಉಪಾಸನವು ಕರ್ತವ್ಯವು ಎಂದು ಹೇಳಿದೆ. ಅನ್ಯಾವಾಜೋವಿಮುಂಚಿಥ ಪೂಜಯೇನ್ನಾನ್ಯ ದೇವತಾಃ ಈ ವಾಕ್ಯದಲ್ಲಿ ಅಂಗದೇವತೆಗಳು ಜಯ ನಿಷೇಧಿಸಲ್ಪಟ್ಟು ಶ್ರೀ ಪರಮಾತ್ಮನೊಬ್ಬನನ್ನೆ ಪೂಜಿಸಲು ಉಪಯುಕ್ತವೆಂದು ಹೇಳಿದೆ ಅಂದರೆ

## ಸೂ॥ ಓಂ॥ ಅಂಗಾವಬದ್ಧಾಸ್ತು ನಶಾಖಾಸು ಹಿ ಪ್ರತಿವೇದಂ ಓಂ॥ 57

ಶ್ರೀ ಹರಿಯ ಅಂಗಾಶ್ರಿತ ದೇವತೆಗಳೂ ಪರಮಾತ್ಮನ ಪರಿವಾರಗಳೆಂದು ಉಪಾಸ್ಯರೇ ಈ ಉಪಾಸನದಲ್ಲಿ ವಿಶೇಷವಿದೆ. ದೇವತೆಗಳ ಪ್ರತಿವೇದದಲ್ಲಿ ಹೇಗೆ ಬ್ರಹ್ಮಾದ್ಯಧಿಗ ದೇವತೆಗಳ ಗುಣಗಳೋ ಆ ಗುಣಗಳ ಮಾತ್ರ ಉಪಸಂಹಾರವು ಯುಕ್ತವು ಅನ್ಯ ಗುಣಗಳ ಉಪಸಂಹಾರವು ಅನ್ಯ ದೇವತೆಗಳಲ್ಲಿ ಯುಕ್ತವಲ್ಲ.

ಸರ್ವ ವರ್ಣಾಶ್ರಮೈರ್ವಿಷ್ಣು ರೇಕಏವೇಜ್ಯತೆ ಸದಾ ।
ರಮಾಬ್ರಹ್ಮಾದಯಸ್ತಸ್ಯ ಪರಿವಾರತ ಏವತು ॥
ಸಮಾತ್ಸಾದ್ವ್ಯೋಕ್ತಮತ್ಸ್ವಾದ್ಧ್ಯಾನಾಂಗ ದೇವಾದ್ಯುಪಾಸನಂ ।

ಉಪಸಂಹಾರ್ಯರ್ಮಿತ್ಯಾಹುಃ ವೇದಸಿದ್ಧಾಂತವೇದಿನಃ ।
ಬ್ರಹ್ಮಾದ್ಯಂಗ ದೇವತಾವಬದ್ಧೋಪಾಸನಾದಿ ಪ್ರತಿಶಾಖಂ ಪ್ರತಿ ವೇದಂ ಚ
ನೋಪಾಸನ ಸಂಹಿತೆ ॥

ಮುಮುಕ್ಷುಗಳಿಂದ ಅಂಗದೇವನೋಪಾಸನವು ಕರ್ತವ್ಯವೇ ಆದರೆ. ಅವರವ ಅಂಗಶ್ರಮತ್ವಗಳಲ್ಲಿಯೋ ಗುಣಸಾಮ್ಯವು ಬ್ರಹ್ಮಾತಗಳ ಗುಣಗಳನ್ನು ಅವರು ದೇವತೆಗಳ ಉಪಸಂಹಾರ ಮಾಡಬಾರದು.

2 ಸಮತ್ವಾದ್ವೋತ್ತಮತ್ವಾದ್ವಾನಾಂಗದೇವಾದ್ಯುಪಾಸನಂ ।
ಉಪಸಂಹಾರ್ಯರ್ಮಿತ್ಯಾಹುವೇದಸಿದ್ಧಾಂತವೇದಿನ ॥
ಇತಿ ಬ್ರಹ್ಮತರ್ಕವಚನಾತ್

ಅನ್ಯ ದೇವತೆಗಳು ಪರಮಾತ್ಮಾ ಶ್ರೀಕಾಂಗಗಳ ಗುಣಮಾತ್ರಗಳಿಂದಲೇ ಉಪಸಂಹಾರ ಯುಕ್ತವು. ಅದೂ ಪರಮಾತ್ಮದಿಂದ. ಸಮತ್ವದಿಂದ ಅಲ್ಲ. ಸ್ವಾಮಿತ್ವದಿಂದಲೇ.

## ಸೂ॥ ಓಂ॥ ಮಂತ್ರಾದಿವದ್ವಾಽವಿರೋಧಃ ಓಂ॥ 58

ಸರ್ವ ದೇವತಾಮಂತ್ರಾಯಥಾಧೀಯಂತೆ ಏವಮವಿರೊಧೋವಾ ।

ಹೇಗೆ ಅಗ್ನ್ಯಾದ್ಯರ್ಥವು ದೇವತಾವಾ ಚಿ ಮಂತ್ರವಿದ್ಯೆಗಳೆಲ್ಲವೂ ಬ್ರಹ್ಮಾದ್ಯುತ್ತಮ ದೇವತಾವಾಚ್ಯವೋ ಹಾಗೆಯೇ ಅಥವ ದೇವತಾಗುಣವಾಚ್ಯತ್ವವು ಉತ್ತಮದೇವತೆಗಳಲ್ಲಿ ಉಪಸಂಹಾರಕ್ಕೆ ವಿರೋಧವಿಲ್ಲ. ಅಥವರಲ್ಲಿರುವ ಗುಣಗಳು ಉತ್ತಮರಲ್ಲಿ ಸಿದ್ಧವೇ.

3 ಉಪಾಸನಾಂಗದೇವಾನಾಂ ಪರಮಾಂಗತಯಾ ಭವೇತ್ ।
ಉಪಸಂಹೃತಿರ್ವಿಶೇಷೇ ತು ಫಲಾನಾಮನ್ಯಥಾ ನ ತು ।
ಪುರುಷಾಣಾಂ ವಿಶೇಷಾದ್ವಾ ಯಥಾಯೋಗಂ ಭವಿಷ್ಯತಿ ॥
ಇತಿ ಬೃಹತ್ತಂತ್ರೇ

ಸರ್ವ ಮುಮುಕ್ಷುಗಳೂ ಬ್ರಹ್ಮಾದ್ಯಂಗ ದೇವತೆಗಳನ್ನು ಪರಮಾತ್ಮನ ಪರಿವಾರ ತ್ವೇನ ಉಪಾಸನೆ ಮಾಡಬೇಕು ಪ್ರಧಾನವಾಗಿ ಮಾಡಬಾರದು. ಇದರಿಂದ ಫಲ ವಿಶೇಷವು ಲಭ್ಯವು ಯಾರು ಪುರುಷ ವಿಶೇಷರೋ ಉತ್ತಮಾಧಿಕಾರಿಗಳೋ ಅವರ ಗುಣಸಂಹಾರ ಪೂರ್ವಕವು ಉತ್ತಮಾಧಿಕಾರಿತ್ವ ಸಾಧನವು

ಇತಿ ಅಂಗಾವಬದ್ಧಾಧಿಕರಣಂ

## – ಭೂಮಾಧಿಕರಣಂ –

ಈ ಅಧಿಕರಣದಲ್ಲಿ ಭೂಮ ಗುಣವು ಸರ್ವೋಪಾಸಕ ಸಾಧಾರಣತ್ವವು ಸಮರ್ಥನವು.

## ಸೂ॥ ಓಂ॥ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ಓಂ॥ 59

ಯಜ್ಞಕರ್ಮಗಳಲ್ಲಿ ಜ್ಯೋತಿಷ್ಟೋಮ ಮುಖ್ಯಯಜ್ಞದಲ್ಲಿ ದೀಕ್ಷಾ ಎಂಬ ಹೆಸರು ಯಜಮಾನಸಂಸ್ಕಾರ ರೂಪಕರ್ಮವಿಶೇಷವುಹಾಗೆಯೇ ಎಲ್ಲಾ ಯಜ್ಞಗಳಲ್ಲಿಯೂ ಯೋಗ್ಯಅಂಗಕಲಾಪಗಳು ಮಾಡಲ್ಪಡಬೇಕು ಅವುಗಳಂತೆಯೇ ಪೂರ್ಣಗುಣಗಳು ಇತರ ಗುಣಗಳಿಂದ ಶ್ರೇಷ್ಠವು ಆದ್ದರಿಂದ ಆನಂದಾದಿಗುಣಗಳಾನುವೃತ್ತಿಯಿಂದ ಉಪಾಸನಾಯೋಗ್ಯ ಭೂಮಗುಣವು ಸರ್ವಗುಣಗಳ ಸರ್ವಶ್ರೇಷ್ಠತ್ವವನ್ನು ಪರಮಾತ್ಮನಲ್ಲಿ ಹೇಳುವುದರಿಂದ ಸಾರ್ವಜನಿಕವಾಗಿ ಉಪಸಂಹಾರ್ಯವು

ಸರ್ವ ಗುಣೇಷು ಭೂಮಗುಣಸ್ಯ ಜ್ಯಾಯಸ್ತ್ವಂ ಕ್ರತುವತ್ ಸರ್ವತ್ರೋಪಸಂಹಾರ ಭಾವಾತ್

ದೀಕ್ಷಾ ಪ್ರಾಯಣೀಯೋದಯನೀಯಸವನತ್ರಯಾವಭೃಥಾತ್ಮಕಃ ಕ್ರತುಃ ॥

ಯಜ್ಞಗಳಲ್ಲಿ ಅಂಗಕಲಾಪಗಳು ಸರ್ವತ್ರಶ್ರೇಷ್ಟಫಲಪ್ರಾಪ್ತಿಗಾಗಿ ಮಾಡಲ್ಪಡ ಕೋ ಹಾಗೆಯೇ ಸರ್ವಗುಣಪೂರ್ಣತ್ವವನ್ನು ಹೇಳುವ ಭೂಮ ಗುಣವು ಸರ್ವರಿ ಗೂ ಯುಕ್ತವು.

2 ಭೂಮ್ನೈವ ದೇವಃ ಪರಮೋಹ್ಯುಪಾಸ್ಯೋನೈವಾಭೂಮಾ ಫಲ
ಮೇಷಾಂ ಪ್ರದತ್ತೇಃ ।
ತಸ್ಮಾದ್ಭೂಮಾ ಗುಣತೊ ವೈ ವಿಶಿಷ್ಟೋ ಯಥಾ ಕ್ರತುಃ ಕರ್ಮ
ಮಧ್ಯೆ ವಿಶಿಷ್ಟ ಇತಿ ಗೌಪವನ ಶ್ರುತಿಃ

ಪರಮಶ್ರೇಷ್ಟ ದೇವತೆಯಾದ ಶ್ರೀಮನ್ನಾರಾಯಣನು ಸರ್ವಗುಣಪೂರ್ಣ

ನೆಂದು ಸರ್ವರಿಂದಲೂ ಉಪಾಸ್ಯನು, ಅಪೂರ್ಣತ್ವದಿಂದಲ್ಲ. ಭೂಮಗುಣವು ಸರ್ವ ಗುಣಗಳರಾಶಿಗಿಂತಲೂ ವಿಶೇಷಾರ್ಥವುಳ್ಳದ್ದು. ದೀಪಾದ್ಯೇಕಕಲಾಪಗಳು ಕರ್ಮ ಮಧ್ಯದಲ್ಲಿ ವಿಕೃತಿಯಾಗಗಳಲ್ಲಿ ವಿಶೇಷೋಪಾಸನಾಫಲದಾತೃವೋ ಹಾಗೆಯೇ ಭೂಮ ಗುಣವು ಸರ್ವಗುಣತ್ವದಿಂದ (ಸರ್ವ ಗುಣಗಳೂ ಒಂದೊಂದೂ ಶ್ರೇಷ್ಟತೆಉಳ್ಳವು ಗಳಾಗಿ) ಉಪಾಸನೆಯು ಸರ್ವಮುಮುಕ್ಷುಗಳಿಗೂ ಅವರವರಿಗೆ ಸದೃಶಫಲಕೊಡು ವುದರಿಂದ ಸರ್ವರಿಂದಲೂ ಉಪಾಸ್ಯವು.

ಇತಿ ಭೂಮಾಧಿಕರಣಂ

## – ನಾನಾಶಬ್ದಾಧಿಕರಣಂ –

ಈ ಅಧಿಕರಣದಲ್ಲಿ ಅಧಿಕಾರಿಗಳಿಗೆ ಭೂಮಗುಣದ ನಾನಾಪ್ರಕಾರದ ಪ್ರತೀತಿಯು ಸಮರ್ಥನವು. ಭೂಮಗುಣವು ಶಬ್ದ, ಪ್ರತ್ಯಕ್ಷ, ಅನುಮಾನ, ಪ್ರಮಾಣ ಗಳಿಂದಲೂ ಅಧಿಕಾರಿಯೋಗ್ಯತಾ ಭೇದದಿಂದ ನಾನಾರೂಪವುಳ್ಳದ್ದೆಂದು ಪ್ರಮಾಣ ಪೂರ್ವಕ ಸಮರ್ಥನೆಯು.

## ಸೂ॥ ಓಂ॥ ನಾನಾಶಬ್ದಾದಿಭೇದಾತ್ ಓಂ॥ 60

ಶಬ್ದೋಽನುಮಾ ತಥೈವಾಕ್ಷೋ ಯೋಗ್ಯತಾ ಭೇದತಃ ಸದಾ ।
ಬ್ರಹ್ಮಾದೀನಾಮೇವಮರ್ಥಂ ಬಹುಧಾ ದರ್ಶಯಂತಿ ಹಿ ।
ಅತಃ ಪೂರ್ಣತ್ವಮೀಶಸ್ಯ ನಾನ್ಯೈವೈಷಾಂ ಪ್ರದೃಶ್ಯತೇ ।
ಅತಃ ಫಲಸ್ಯನಾನಾತ್ವಂ ನಾನ್ಯೈವೋಪಾಸ ನಾಯತಃ ॥ ಇತಿ ಬ್ರಹ್ಮತರ್ಕೇ
ಅತೋಭೂಮತ್ವಮಪಿ ನಾನ್ಯೈವೋಪಾಸ್ಯತೇ

ಭೂಮಗುಣವು ಸರ್ವ ಮುಮುಕುಗಳಿಂದಲೂ ಯಥಾಯೋಗ್ಯವಾಗಿ ನಾನಾತ್ಮಕವಾಗಿ ಉಪಾಸಿಸಲ್ಪಡಬೇಕು ವೇದಾದಿ ಪ್ರಮಾಣಗಳಿಂದ ಅಧಿಕಾರಿ ಭೇದದಿಂದ ಉಪಾಸಿಸಲು ನಾನಾಪ್ರಕಾರವೇ ಸಾಧ್ಯವು ಏಕ ಪ್ರಕಾರದಿಂದ ಅಲ್ಲ

ಭೂಮ ಗುಣವು ಶಬ್ದಪ್ರತ್ಯಕ್ಷ ಅನುಮಾನಪ್ರಮಾಣರೂಪ ಯೋಗ್ಯತಾವಿಶೇಷ ದಿಂದ ಬ್ರಹ್ಮಾದಿದೇವತೆಗಳಲ್ಲಿ ಏಕೈಕ ಅರ್ಥಪೂರ್ಣತ್ವಾದಿ ರೂಪ ಅವಾಂತರ ವಿಶೇಷತ್ವ ಜ್ಞಾಪಕವು ಬ್ರಹ್ಮಾದಿ ದೇವತೆಗಳು ಶಬ್ದಾದಿಭೇದದಿಂದ ನಾನಾರೀತಿಯಾಗಿ ಭೂಮತ್ವ ಉಪಾಸನಾದಿಂದ ನಾನಾರೂಪ ಫಲಪ್ರಾಪ್ತಿಯು ಯುಕ್ತವೇ. ಭೂಮ ಗುಣವು ಉಪಾಸನಾಧಿಕಾರಿಭೇದದಿಂದ ಬೇರೆ ಭೇರೆ ರೀತಿಯೇ ಏಕೋಪಾಸನವಲ್ಲ.

ಇತಿ ನಾನಾ ಶಬ್ದಾದಿಕರಣಂ

### – ವಿಕಲ್ಪಾಧಿಕರಣಂ –

ಈ ಅಧಿಕರಣದಲ್ಲಿ ಬಿಂಬಾತಿರಿಕ್ತರೂಪೋಪಾಸನದ ಕರ್ತವ್ಯತೆಯು ಹೇಳಿದೆ

## ಸೂ॥ ಓಂ॥ ವಿಕಲ್ಪೋಽವಿಶಿಷ್ಟಫಲತ್ವಾತ್ ಓಂ॥ 61

ಬಿಂಬೋಪಾಸನರೂಪದಿಂದ ಅನ್ಯತ್ವನಿಂದಾದ ರೂಪೋಪಾಸನವು ದುರಿತ ನಿವೃತ್ತಿವಿಶೇಷ ಫಲದಾಯಕವಾದ್ದರಿಂದ ಕರ್ತವ್ಯವು ನಿಷೇಧವಲ್ಲ ತಮ್ಮ ತಮ್ಮ ಮೋಕ್ಷಸಾಧನೆಗೆ ಅನುಕೂಲವಲ್ಲದ ಅನ್ಯದೇವತಾರೂಪ (ನರಸಿಂಹಾದಿರೂಪಗಳು) ಉಪಾಸನವು ಸ್ವಯೋಗ್ಯ ಬಿಂಬೋಪಾಸನಾ ನಂತರ ಜ್ಞಾನಾದಿಗಳ ಪ್ರತಿಬಂಧಕ ದುರಿತ ವಿಶೇಷ ನಿವೃತ್ತಿ ಮೋಕ್ಷೋಪಯೋಗಿ ಫಲೇಚ್ಛೆಯಿಂದ ಶ್ರೀ ಪರಮಾತ್ಮನ ನಾನಾರೂಪ ಉಪಾಸನೆಯು ಮಾಡಲ್ಪಡಬೇಕು ಈ ಉಪಾಸನವು ವಿಶಿಷ್ಟ ಫಲ ದಾತೃವಾಗಿ ಮುಮುಕ್ಷುವಿಗೆ ಮೋಕ್ಷದಲ್ಲಿ ಅಧಿಕಾನಂದಗಳೂ ಪ್ರಾಪ್ಯವು

ಸ್ವಯೋಗ್ಯಾಪಾಸನಾನಂತರಂ ಸಾಮಾನ್ಯತ್ವಾಪಿ ಕಸ್ಯಚಿದುಪಾಸನಂವಿಕಲ್ಪೇನ ಭವತಿ ವಿಶಿಷ್ಟಫಲಾಪೇಕ್ಷಯಾ ।

ಸ್ವಯೋಗ್ಯಾಪಾಸನಾ ನಂತರ ಪರಮಾತ್ಮನ ಯಾವುದಾದರೂ ಸಾಮಾನ್ಯ ಅವತಾರ ರೂಪಗಳ ಉಪಾಸನೆಯು ಮಾಡಲು ಯುಕ್ತವು ಇದರಿಂದ ಮೋಕ್ಷದಲ್ಲಿ ಅಧಿಕ ಆನಂದಾದ್ಯನುಭವಗಳು ಉಂಟು.

2 **ಮುಖ್ಯಾರ್ಥಮಾತ್ಮಯೋಗ್ಯಂ ಹಿ ಕಾರ್ಯಮೇವ ಹ್ಯುಪಾಸನಂ ।**
**ನೃಸಿಂಹಾದಿಕಮನ್ಯಚ್ಚ ದುರಿತಾದಿನಿವೃತ್ತಯೇ ।**
**ಉಪಾಸ್ಯತೇ ಯಥಾಯೋಗಂ ನ ವಾ ಫಲವಿಭೇದತಃ ॥**
**ಇತಿ ಬ್ರಹ್ಮತರ್ಕೇ**

ಈ ಮೇಲಿನ ಎರಡು ಉಪಾಸನೆಗಳೂ ಭಿನ್ನಾರೂಪ ಫಲಕಾರಿಯಾದ್ದರಿಂದ ಉಪಾಸ್ಯವೆ ಬಿಂಬರೂಪೋಪಾಸನವು ಮೋಕ್ಷದಾತೃವು. ಅನ್ಯನಾಮೋಪಾಸನವು ದುರಿತನಿವೃತ್ತಿದ್ವಾರಮೋಕ್ಷಫಲಕ್ಕೆ ಸಹಾಯಕವಾಗಿ ಮೋಕ್ಷದಲ್ಲಿ ಆನಂದಾತಿಶಯ ಪ್ರಾಪ್ತಿಯು.

**ಇತಿ ವಿಕಲ್ಪಾಧಿಕರಣಂ**

## – ಕಾಮೊಧಿಕರಣಂ

ಈ ಅಧಿಕರಣದಲ್ಲಿ ಜ್ಞಾನಸಾದನೋಪಾಸನವು ಅವಶ್ಯ ಕರ್ತವ್ಯವು' ಕಾಮ ಸಾಧನ ರೂಪೋಪಾಸನೆಯು ಯುಕ್ತವಲ್ಲವೆಂದು ಸಮರ್ಥನವು.

**ಸೂ|| ಓಂ|| ಕಾಮ್ಯಾಸ್ತು ಯಥಾ ಕಾಮಂ ಸಮುಚ್ಚೀರನ್ನ ವಾ ಪೂರ್ವಹೇತ್ವಭಾವಾತ್ ಓಂ|| 62**

ಕಾಮಿಕ ಸಾಧನ ಭಗವದ್ಗುಣಗಳು ತನ್ನ ಫಲದಾತೃತ್ವದಲ್ಲಿ ಕಾಮಾನುಸಾರ ವಾಗಿ ಮುಮುಕ್ಷುಗಳಿಂದ ಉಪಸಂಹಾರ್ಯವು ಕೇವಲ. ಮುಮುಕ್ಷುಗಳಿಂದ ಉಪ ಸಂಹಾರ್ಯಗಳಲ್ಲ. ಮುಮುಕ್ಷುಗಳಿಗೆ ಮೋಕ್ಷೇಚ್ಛಾಕಾಲಿನ ಅನ್ಯಥಾ ಮುಖ್ಯಹೇತು ವಿಲ್ಲವರಿಂದ ಮೋಕ್ಷೇಚ್ಛುಗಳ ಪರಪ್ರೀತಿಗೋಸ್ಕರ ಉಪಸಂಹಾರವು ಅನ್ಯ ಫಲಕ್ಕಾಗಲ್ಲ

2 **ಯಸ್ಯ ಯಸ್ಯ ಹಿ ಯಃ ಕಾಮಸ್ತಸ್ಯ ತಸ್ಯ ಹ್ಯುಪಾಸನಂ ।**
**ತಾದೃಶಾನಾಂ ಗುಣಾನಾಂ ಚ ಸಮಾಹಾರಂ ಪ್ರಕಲ್ಪಯೇತ್ ।**
**ಅಕಾಮುಸ್ತಂ ಮಲಿಮುಕ್ಷೂಣಾಂ ನ ವಾ ತೇಷಾಮುಪಾಸನಂ ।**
**ತುಷ್ಟ್ಯರ್ಥಮೀಶ್ವರಸ್ಯೈವ ನ ಚೋಪಾಸಾವಿದುಷ್ಯತಿ ॥**
**ಇತಿ ಬೃಹತ್ತಂತ್ರೇ**

ಉಪಾಸಕರಿಗೆ ಯಾವೇಚ್ಛೆಯೋ ಅವಕ್ಕನುಸಾರವಾಗಿಯೇ ಗುಣಗಳೋಪ ಸಂಹಾರವು ಮಾಡಲ್ಪಡಬೇಕು. ಮುಮುಕ್ಷುಗಳು ವಿಶೇಷತಃ ಅಕಾಮಿಗಳಾದ್ದರಿಂದ ಕಾಮಿತಾರ್ಥರೂಪೋಪಸಂಹಾರವು ಯುಕ್ತವಲ್ಲ ಶ್ರೀ ಪರಮಾತ್ಮ ಪ್ರೀತಿಗಾಗಿ ಮಾಡಲು ನಿಷೇಧವಿಲ್ಲ.

**ಇತಿ ಕಾಮಾಧಿಕರಣಂ**

ಈ ಅಧಿಕರಣದಲ್ಲಿ ಅಂಗಾಶ್ರಿತತ್ವೇನ ದೇವತೋಪಾಸನೆಯು ಸಮರ್ಥನವು

## ಸೂ|| ಓಂ|| ಅಂಗೇಷು ಯಥಾಶ್ರಯಭಾವಃ ಓಂ|| 63

ಶ್ರುತಿಯಲ್ಲಿ ದೇವತೆಗಳಿಗೆ ಪರಮಾತ್ಮನ ವಿವಿಧ ಅಂಗಾಶ್ರಯವು ಹೇಳಿದೆ. ಆ ದೇವತೆಗಳ ಉಪಾಸನ ತನ್ನ ಆ ಪರಮಾತ್ಮನ ಅಂಗಾಶ್ರಯತ್ವ ಧರ್ಮದಿಂದ (ಉಪಾಸನೆ) ಮಾಡಬೇಕು. ಶ್ರುತಿಯಲ್ಲಿ ಅಂಗಗಳಿಂದ ಹುಟ್ಟುವಿಕೆಯು ಹೇಳಿದ್ದರೂ ಆ ದೇವತೆಗಳು ಆ ಅಂಗಗಳಲ್ಲಿಯೇ ಆಶ್ರಯವನ್ನು ಹೊಂದುವುದರಿಂದ ಆ ಅಂಗಗಳ ಗುಣೋಪಸಂಹಾರವು ಯುಕ್ತವು. ಅಲ್ಲಿಯೇ ಲಯವೂ ಚಿಂತಿಸಲ್ಪಡಬೇಕು.

ಅಂಗದೇವತಾನಾಂ ಯಥಾ ಯಥಾ ಪರಮೇಶ್ವರಾಂಗಾಶ್ರಯತ್ವಂ ।
ಚಕ್ಷೋಃ ಸೂರ್ಯೋ ಅಜಾಯತೆ (ಋ-10-90-13) ಅತ್ಯಾದಿ ತಥಾ ಭಾವನಾ ಕರ್ತವ್ಯಾ

ಅಂಗದೇವತೆಗಳು ಯಾವ ಯಾವ ಶ್ರೀ ಪರಮಾತ್ಮಾಂಶಗಳನ್ನು ಆಶ್ರಯಿಸಿರುವರೋ ಆ ಧರ್ಮದಿಂದಲೇ ಅವರುಗಳು ಉಪಾಸ್ಯರು. ಆ ದೇವತೆಗಳ ಜನ್ಮಸ್ಥಿತಿ ಮತ್ತು ಲಯಗಳು ಆ ಅಂಗಗಳಲ್ಲಿಯೇ ಚಿಂತಿಸಲ್ಪಡಬೇಕು.

## ಸೂ|| ಓಂ|| ಶಿಷ್ಟೇಶ್ಚ ಓಂ|| 64

2 **ಯಸ್ಮಿನ್ಯಸ್ಮಿನ್ಯೋ ಹಿ ಚಾಂಗೇ ನಿವಿಷ್ಟ: ।**
**ಪರಸ್ಯ ಚಿಂತ್ಯ: ಸ ತಥಾ ತಥೈವ ॥ ಇತಿ ಪೌತ್ರಾಯಣ ಶ್ರುತೇಃ**

ಶ್ರೀ ಪರಮಾತ್ಮನ ಪರಿವಾರ ದೇವತೆಗಳು ಪರಮಾತ್ಮನ ಯಾವ ಅಂಗವನ್ನು ಆಶ್ರಯವುಳ್ಳವರೋ ಆ ರೀತಿಯೇ ಚಿಂತನೆ ಮಾಡಬೇಕು

## ಸೂ|| ಓಂ|| ಸಮಾಹಾರಾತ್ ಓಂ|| 65

ಅಂಗೈಃ ಪರಾದ್ಯೈರ್ಹಿ ದೇವಾ ವಿಸ್ಪಷ್ಟಾಸ್ತತ್ತದ್ಗುಣಾತ್ಪರಮೇ ಸಂಹರೇತ ।
ತಾಂಶ್ಚಾಪಿ ತತ್ರೈವ ವಿಚಿಂತ್ಯ ದೇವಾರ್ಸ್ಥಾನಂ ಮುಮುಕ್ಷುಃ ಪರಮಂ
ವ್ರಜೇತ್

ಉಪಸಂಹಾರ ಫಲಶ್ರುತಿಯಲ್ಲಿ ಹೇಳಿರುವಂತೆ ದೇವತೆಗಳಿಗೆ ಪರಮಾತ್ಮಾಂಗಾಶ್ರಯತ್ವದಿಂದಲೇ ಉಪಾಸನೆಯು ಕ್ಲಿಪ್ತವು ಹೀಗೆ ಉಪಸಂಹಾರವು ಪರಮ ಪದವಿಯನ್ನು ಹೊಂದಿಸಿ ಕೊಡುವುದು

## ಸೂ|| ಓಂ|| ಗುಣಸಾಧಾರಣ್ಯಶ್ರುತೇಶ್ಚ ಓಂ|| 66

ಶ್ರೀ ಪರಮಾತ್ಮನ ಗುಣಗಳು ಸಾದಾರಣವಾಗಿ ಸರ್ವೋಪಾಸಕರಿಂದಲೂ ಉಪಾಸನೆಗೆ ಯುಕ್ತವೋ ಹಾಗೆಯೇ ದೇವತೋಪಾಸನೆಗಳು ಯುಕ್ತವು. ಶ್ರೀ ಪರಮಾತ್ಮನ ಸರ್ವ ಗುಣಗಳೂ ಮುಮುಕ್ಷುಗಳಿಂದ ಉಪಸಂಹಾರ್ಯಗಳು. ದೇವತೆಗಳಿಗೂ ಹೀಗೆಯೇ ಉಪಾಸನೆಯು ಹೇಳಿದೆ.

ಸಾಧಾರಣಾತ್ಸರ್ವಗುಣಾಃ ಪರಸ್ಯ ಸಮುಹಾರ್ಯಾಸ್ತತ್ವದೃಶೋ
ಮುಮುಕ್ಷೋಃ । ಇತಿ ಮಾಂಡವ್ಯ ಶ್ರುತಿಃ

ಇತ್ಥಂಗಾಧಿಕರಣಂ

- ನವಾಧಿಕರಣಂ -

ಈ ಅಧಿಕರಣದಲ್ಲಿ ಅಂಗದೇವತಾ ಉಪಾಸನೆಯು ದೇವತೆಗಳಿಂದಲೂ ಮಾಡ ಲ್ಪಡಬೇಕು ಎಂದು ನಿಯಮವು ಹೇಳುತ್ತಿದೆ.

## ಸೂ|| ಓಂ|| ನ ವಾ ತತ್ಸಹಭಾವಶ್ರುತೇಃ ಓಂ|| 67

ಅಂಗದೇವತಾಸಹಿತ ಪರದೇವತೋಪಾಸನವು ಸರ್ವಶಾಖೋಪೇತ ಗುಣೋಪಾಸನ ಶ್ರುತಿಯು ಸಹಪಾರವಿಲ್ಲವಾದ್ದರಿಂದ ಮುಮುಕ್ಷು ಜೀವರಿಗೆ ಯುಕ್ತವಲ್ಲ. ಪರಮಾತ್ಮನ ಅಂಗಗಳು ಯಾವ ದೇವತೆಗೆ ಆಶ್ರಯವೋ ಹಾಗೆ ನಾನಾ ದೇವತೆಗಳಿಂದ ಮಾತ್ರವೇ ಉಪಾಸ್ಯವು ಅನ್ಯರಿಂದ ಅಲ್ಲ. ಸರ್ವಖಾಗತ ಸರ್ವಗುಣೋಪಾಸ್ಯ ಶ್ರುತಿಯಲ್ಲಿ ಸಹಪಾರ ಉಪಾಸನೆಯು ಹೇಳಿಲ್ಲ.

ನವಾಂಗದೇವತೋಪಸಂಹಾರಕಾರ್ಯಃ ಉಪಸಂಹಾರಸ್ಯ ಸಹಾ ಶ್ರವಣಾತ್ ।

ಸರ್ವೇ ಗುಣೋಪಾಸ್ತಿ ಶ್ರುತಿಯಲ್ಲಿ ಹೇಳಿಲ್ಲದ ಕಾರಣ ಮುಮುಕ್ಷುಗಳಿಗೆ ಯೋಗ್ಯವಲ್ಲ.

## ಸೂ|| ಓಂ|| ದರ್ಶನಾಚ್ಚ ಓಂ|| 68

ಸತ್ಯೋ ಜ್ಞಾನಃ ಪರಮಾನಂದರೂಪ ಆತ್ಮೇತ್ಯೇವಂ ನಿತ್ಯದೋಪಾಸನಂ ಸ್ಯಾತ್ ।
ನಾನ್ಯತ್ಕಿಂಚಿತ್ಸಮುಪಾಸೀತಧೀರಃ ಸರ್ವೈ ಗರ್ಣೈಃ ದೇವಗಣಾ ಉಪಾಸತೆ ||
ಇತಿ ಕಮಠಶ್ರುತೌ

ಸರ್ವ ಮುಮುಕ್ಷುಗಳೂ ಸರ್ವಕಾಲದಲ್ಲಿಯೂ ಸತ್ಯಜ್ಞಾನ ಪರಮಾನಂದ ರೂಪ, ಆತ್ಮಾ ಎಂದು ನಿತ್ಯೋಪಾಸನೆಯು ವಿಹಿತವಾಗಿದೆ ಮಿಕ್ಕ ಯಾವಗುಣಗಳು ನಿತ್ಯೋಪ ಸಂಹಾರ್ಯವಲ್ಲ. ದೇವತೆಗಳೇ ಸರ್ವ ಗುಣೋಪಾಸ್ಯರು.

ಇತಿ ನವಾಧಿಕರಣಂ

ತೃತೀಯ ಅಧ್ಯಾಯಸ್ಯ ತೃತೀಯಃ ಪಾದಃ ಸಂಪೂರ್ಣಂ

ಶ್ರೀ ಕೃಷ್ಣಾರ್ಪಣಮಸ್ತು



- ಪುರುಷಾರ್ಥಾಧಿಕರಣಂ -

ಜ್ಞಾನ ಸಾಮರ್ಥ್ಯಮಸ್ಮಿನ್ಪಾದ ಉಚ್ಯತೇ ।

ಹಿಂದಿನ ಪಾದದಲ್ಲಿ ಹೇಳಿದಂತೆ ಉಪಾಸನಾಭ್ಯಾಸದಿಂದ ಉತ್ಪನ್ನವಾದ ಬ್ರಹ್ಮ ದರ್ಶನದ ಮಹಾತ್ಮೆಯನ್ನು ಈ ಪಾದದಲ್ಲಿ ಹೇಳುವರು.

ಶ್ರೀ ಪರಮಾತ್ಮನ ದರ್ಶನಕ್ಕಾಗಿ ಹೇಳಿರುವ ರೀತಿಯಲ್ಲಿ ಮಾಡಿದ ಉಪಾಸನ ಫಲವು ದರ್ಶನನಂತರ ಆತನ ಪ್ರಸಾದದಿಂದ ಸರ್ವ ಪುರುಷಾರ್ಥಗಳೂ ಸಿದ್ಧಿಸುವವು. ಮೋಕ್ಷವೊಂದೇ ಅಲ್ಲ ಧರ್ಮಾರ್ಥಕಾಮಗಳೂ ಲಭ್ಯವು ಎಂದು ಬಾದರಾಯಣರು ತಿಳಿಸುವರು.

**ಸೂ॥ ಓಂ॥ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ॥ 1**

ಯದ್ದರ್ಶನಾರ್ಥಮುಪಾಸನೋಕ್ತಾ ತಸ್ಮಾದ್ದರ್ಶನಾತ್ಸರ್ವಪುರುಷಾರ್ಥ ಪ್ರಾಪ್ತಿರಿತಿ ಬಾದರಾಯಣೋಮನ್ಯತೆ

ಶ್ರೀ ಪರಮಾತ್ಮದರ್ಶನದಿಂದ ಪುರುಷರಿಂದಾಪೇಕ್ಷಿಸಲ್ಪಟ್ಟ ಸರ್ವಶುಭಫಲಗಳೂ ಪ್ರಾಪ್ತವು. ಮೋಕ್ಷ ಫಲಮಾತ್ರವೇ ಅಲ್ಲ ಯಂ ಯಂ ಎಂಬ ಶ್ರುತಿಯು ಹಾಗೆ ಹೇಳುವುದು.

2 **ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ವಃ**
**ಕಾಮಯತೇ ಯಾಂಶ್ಚ ಕಾಮಾನ್ ।**
**ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾಂಸ್ತಸ್ಮಾದಾತ್ಮಜ್ಞಂ**
**ಹ್ಯರ್ಚಯೇದ್ಭೂತಿಕಾಮಃ ಇತಿ ಶಬ್ದಾತ್**

ನಿರ್ಮಲಾಂತಃಕರಣವುಳ್ಳ ಬ್ರಹ್ಮಜ್ಞಾನಿಯು ಮನಸ್ಸಿನಲ್ಲಿ ಯಾವ ಸ್ವರ್ಗಾದಿ

ರೂಪಸಸ್ಥಾನಗಳನ್ನು ಹೊಂದಲು ಇಚ್ಛಿಸಿದರೂ ಯಾವ ಕಾಮಗಳನ್ನು ಅಪೇಕ್ಷಿಸು ವನೋ ಅವೆಲ್ಲವು ಸಿದ್ಧವು. ಪರಮಾತ್ಮಜ್ಞಾನವು ಸರ್ವ ಪುರುಷಾರ್ಥಗಳನ್ನು ಸಾಧನೆ ಮಾಡಿ ಕೊಡುವುದು

## ಸೂ॥ ಓಂ ಶೇಷತ್ವಾತ್ಪುರುಷಾರ್ಥವಾದೋ ಯಥಾನ್ಯೇಷ್ವಿತಿ ಜೈಮಿನಿಃ ಓಂ॥ 2

ಜ್ಞಾನವು ಕರ್ಮಾಂಗವಾದ್ದರಿಂದ ಪುರುಷಾರ್ಥ ಸಾಧ್ಯವು ಯಂ ಯಂ ಎಂಬ ಶ್ರುತಿಯು ಜ್ಞಾನಕ್ಕೆ ಸ್ವರ್ಗಾದಿ ಪುರುಷಾರ್ಥ ಸಾಧನವು. ಆದರೆ ಮೋಕ್ಷಫಲದಂತೆ ಸ್ವರ್ಗಾದಿಗಳಲ್ಲಿ ಪ್ರಾಧಾನ್ಯವಿಲ್ಲ ಕರ್ಮಶೇಷಫಲಧರ್ಮಾದಿಗಳನ್ನು ಸ್ವರ್ಗಪ್ರಾಪ್ತಿಗೆ ಪ್ರಾಧಾನ್ಯವಾಗಿ ಹೇಳಿರುವುದೆಂದು ಜೈಮಿನ್ಯಾಚಾರ್ಯರು ಹೇಳುವರು

> ಅಸ್ತ್ಯೇವ ಮೋಕ್ಷಸಾಧನತ್ವಂ ಜ್ಞಾನಸ್ಯ ಸ್ವರ್ಗಾದಿಷು ತತ್ಸಾಧ ಕರ್ಮ ಶೇಷತ್ವೇನ ।

ಜ್ಞಾನಕ್ಕೆ ಮೋಕ್ಷಸಾಧನವೇ ಫಲವು ಆದರೆ ಸ್ವರ್ಗಾದಿ ಪ್ರಾಪ್ತಸಾಧನವು ಮುಖ್ಯವಾಗಿ ಧರ್ಮವೇ ಎಂದು.

4 **ಸ್ವರ್ಗಂ ಧನಾದ್ದೇಹತೋ ವೈ ಗೃಹಾಚ್ಚ ಪ್ರಾಪ್ಸ್ಯಂತಿ ಧೀರಾ ನತ್ವಧೀರಾಃ ಕುತಶ್ಚಿತ್।ಇತಿ ವದತಿ ಜೈಮಿನಿ:**

ಸ್ವರ್ಗಾದವಾರ್ಕ್ ಎಂಬ ಶೃತಿಯಲ್ಲಿ ಜ್ಞಾನಕರ್ಮಗಳಿಗಿಂತ ಬೇರೆಯಾದ ಧನಾದಿ ಸಾಧನೆಗಳಿಂದ ಸ್ವರ್ಗಪ್ರಾಪ್ತಿಯು ಮುಖ್ಯವಾಗಿ ಹೇಳಿದೆ. ಬ್ರಹ್ಮವಿತ್ತ್ವಯ ದಿಂದಲೂಶರೀರಾಯಾಸದಿಂದಲೂ ಗೃಹಸ್ಥಾಶ್ರಮ ಧರ್ಮಪಾಲನೆಯಿಂದಲೂ ಯಾಗ ದಿಂದಲೂಸ್ವರ್ಗಪ್ರಾಪ್ತಿಯು ಹೇಳಿದೆ, (ಜೈಮಿನಿಯು)

## ಸೂ। ಓಂ॥ ಆಚಾರದರ್ಶನಾತ್ ಓಂ॥ 3

ಯಜ್ಞೇನ ಯಜ್ಞಂ ಎಂಬ ಶೃತಿಯು ದೇವತೆಗಳಿಗೂ ಕರ್ಮಾನುಷ್ಠಾನವನ್ನು

ಹೇಳುವುದರಿಂದ ಜ್ಞಾನದಿಂದಲೆ ಸರ್ವ ಪುರುಷಾರ್ಥವೆಂದು ಹೇಳಲಾಗುವುದಿಲ್ಲ.

ಜ್ಞಾನಿನಾಮೇವ ದೇವಾದೀನಾಮಾಚಾರದರ್ಶನಾತ್ ।

ನೈವ ದೈವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ ಎಂಬ ವಾಕ್ಯದಂತೆ ಜ್ಞಾನ ಗಳಾದರೆ ದೇವತಾಪದವನ್ನು ಹೊಂದುವುದರಿಂದ ಅವರು ಜ್ಞಾನಿಗಳೇ ಆದರೂ ಅವರಿಗೂ ಕರ್ಮಾನುಷ್ಠಾನವು ಹೇಳಿರುವುದು ಶ್ರೇಷ್ಠತ್ವದಿಂದಲೇ ಪುರುಷಾರ್ಥವು ಪ್ರಧಾನವಾಗಿಯಲ್ಲ

## ಸೂ॥ ಓಂ॥ ತಚ್ಛ್ರುತೇಃ ಓಂ॥ 4

ಯದೇವ ವಿದ್ಯಯಾಕರೋತಿ ಶ್ರದ್ಧಯೋಗಪನಿದಾತದೇವ ವೀರ್ಯವತ್ತರಂ ಭವತಿ (ಛಾಂ -1-1-10) ಇತಿ ಶೇಷತ್ವಶ್ರುತೇ

ಮೇಲಿನಶೃತಿಯಲ್ಲಿ ಜ್ಞಾನಕ್ಕೆ ಕರ್ಮಣಿ ಶೇಷತ್ವವು ಹೇಳಿರುವುದರಿಂದ ಅದು ಪ್ರಧಾನವಲ್ಲ. ಜ್ಞಾನಕರ್ಮಗಳೆರಡೂ ಸ್ವರ್ಗ ಸಾಧನತ್ವವಾದರೂ ಜ್ಞಾನಕ್ಕೆ ಕರ್ಮ ಶೇಷತ್ವವು ಹೇಗೆಂದರೆ ಶೃತ್ಯರ್ಥವು ಆಸ್ತಿಕ್ಯ ಬುದ್ಧಿಯಿಂದಲೂ ಉಪನಿಷದುಕ್ತ ಸ್ವಯೋಗ್ಯ ಪರಿಜ್ಞಾನದಿಂದಲೂ ಜ್ಞಾನಿಯು ಯಾವ ಕರ್ಮ ಮಾಡುವನೊ ಅದು ಅಧಿಕಫಲ ಸಾಧನವೆಂದು ಹೇಳಿದೆ. ಆದ್ದರಿಂದ ಈ ಶ್ರುತ್ಯರ್ಥವು ಬಾದರಾಯಣ ರ ರೀತ್ಯಾ ಮನುಷ್ಯರಿಂದ ಮಾಡಲ್ಪಡುವ ಜ್ಞಾನದ ಶ್ರೇಷ್ಠತ್ವವು ಶ್ರೇಷ್ಠ ಫಲವು. ದೇವತೆಗಳಿಗೆ ಹಾಗಲ್ಲ. ಅವರು ಜ್ಞಾನಿಗಳೇ

## ಸೂ॥ ಓಂ॥ ಸಮನ್ವಾರಂಭಣಾತ್ ಓಂ॥ 5

ಕರ್ಮೈವ ದೇಹಂ ದೈವಿಕಂ ಮಾನುಷಂ ವಾಪ್ಯನ್ವಾರಭೇನ್ನಾಪರಸ್ತತ್ರ ಹೇತುಃ ಭೋಗಾಂಸ್ತದೀಯಾಂಶ್ಚ ಯಥಾ ವಿಭಾಗಂ ದದಾತಿ ಕರ್ಮೈವ ಶುಭಾಶುಭಂ ತೇ ॥ ಇತಿ ಮಾರಶೃತೇಶ್ಚ ಸಂಶಬ್ಧಃ ಪ್ರಾಧಾನ್ಯಂ ದರ್ಶಯತಿ

ಕರ್ಮಗಳಿಗೆ ಜ್ಞಾನ ಶ್ರೇಷ್ಠತ್ವವಿಲ್ಲ. ಸಾಮ್ಯವೂ ಇಲ್ಲ ಮತ್ತೆ ಪ್ರಧಾನ್ಯವೇ

ಮಾರರ ಶ್ರುತಿಯು ಕರ್ಮಣೆವ್ಯೆತಿ ಎಂದು ಪ್ರಧಾನ್ಯವಾಗಿಯೇ ಸ್ವರ್ಗಾದ್ಯಾರಂಭತ್ವವು ಹೇಳಿದೆ ಕರ್ಮವೇ ದೈವಿಕವಾದ ಮಾನುಷಿಕವಾದ ದೇಹಪ್ರಾಪ್ತಿಗೆ ಕಾರಣವು ಮತ್ಯಾವುದೂ ಅಲ್ಲ. ಆ ಶರೀರಸಂಬಂದ ಭೋಗಗಳನ್ನು ಯಥಾ ವಿಭಾಗವಾಗಿ ಸುಖದುಃಖಗಳನ್ನು ಕರ್ಮದಿಂದಲೇ ಪ್ರಾಪ್ತವು ಸಂಶಬ್ದವು ಪ್ರಾಧಾನ್ಯದ್ಯೋತಕವು ಶ್ರೀ ವಿಷ್ಣುವಿಗಿಂತ ಬೇರೆ ಯಾರೂ ಸ್ವತಂತ್ರ ಕಾರಣರಿಲ್ಲ

## ಸೂ|| ಓಂ|| ತದ್ವತೋಽವಿಧಾನಾತ್ ಓಂ 6

ಜ್ಞಾನೀ ಚ ಕರ್ಮಾಣಿ ಸದೋದಿತಾನಿ ಕುರ್ಯಾದಕಾಮಃ ಸತತಂ ಭವೇತ್
ಇತಿ ಕಮರಶ್ರುತೌ ಜ್ಞಾನವತೋಽಪಿ ವಿಧಾನಾತ್

ಮೇಲಿನ ಶ್ರುತಿಯಲ್ಲಿ ಜ್ಞಾನಿಗೂ ಕರ್ಮವಿಧಿಯು ಹೇಳುವುದರಿಂದ ಜ್ಞಾನ ಮಾಡುವ ಕರ್ಮವು ಲೀಲಾರೂಪವಲ್ಲ ಜ್ಞಾನಿಯು ಫಲಕ್ಕಾಗಿ ಕರ್ಮ ಮಾಡ ದಿದರೂ ಅವರುಗಳಿಗೆ ಆಕಾರ ನಡವಳಿಕೆಗಳು ಮುಕ್ತ ಜೀವರಂತೆ ಲೀಲಾಮಾತ್ರವಲ್ಲ

## ಸೂ|| ಓಂ|| ನಿಯಮಾಚ್ಚ ಓಂ|| 7

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ।
ಏವಂತ್ವಯಿ ನಾನ್ಯಥೇತೋಽಸ್ತಿ ನ ಕರ್ಮಲಿಪ್ಯತೇ ನರ ॥ ಇತಿ

ಶ್ರುತಿಯು ಜ್ಞಾನಿಗಳಿಗೆ ಕರ್ಮ ಮಾಡಲು ನಿಯತತ್ವವನ್ನೂ ಮಾಡದಿರಲು ಪ್ರತ್ಯ ವಾಯವನ್ನೂ ಹೇಳಿರುವುದರಿಂದ ಜ್ಞಾನಿ ಕರ್ಮವು ಲೀಲಾರೂಪವಲ್ಲ. ಶೃತ್ಯರ್ಥವು.

ನೂರು ವರ್ಷಗಳಕಾಲ ಮಾನುಷ ಜೀವನದಲ್ಲಿ ಜೀವನು ಬದುಕಿರುವವರೆಗೂ ಅಸಂಕಲ್ಪ ಫಲರೂಪವಾಗಿ ಉಚಿತವಾದ ಕರ್ಮಗಳನ್ನು ಸರ್ವಥಾ ಮಾಡಲೇಬೇಕು. ಭಗವತ್ಪೂಜಾರೂಪವಾಗಿ ಮಾಡಲ್ಪಟ್ಟ ಕರ್ಮವು ಅಲ್ಪಾಧಿಕಾರಿ ಮನುಷ್ಯರಲ್ಲಿಯೂ ಅನಂತರ ಪಾಪವೂ ಪ್ರಾಪ್ತವಾಗುವುದಿಲ್ಲ ಮತ್ತೆ ಜ್ಞಾನಾಧಿಕಾರಿಯೇ ಆಗುವನು

## ಸೂ|| ಓಂ|| ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ ಓಂ|| 8

ಜ್ಞಾನಾದೇವ ಸ್ವರ್ಗೋ೭ ಜ್ಞಾನಾದೇವಾಪವರ್ಗೋ೭ ಜ್ಞಾನಾದೇವ ಸರ್ವೇ
ಕಾಮಾಃ ಸಂಪದ್ಯಂತೇ ।
ತಥಾಪಿ ಯಥಾ ಯಥಾ ಕರ್ಮ ಕರೋತಿ ತಥಾ ತಥಾಧಿಕೋ೭ ಭವತಿ ।
ಇತಿ ಕೌಂರರವ್ಯ ಶೃತೇಃ
ಯುಧಿಷ್ಠಿರಾದೀನಾಂ ರಾಜಸೂಯಾದೀನಾ ಫಲಾದಿಕ್ಯ ದರ್ಶನಾಚ್ಚೇತಿ
ಬಾದರಾಯಣಸ್ಯ ಮತಂ ॥

ಬಾದರಾಯಣ ಮತವಾದರೋ ಜ್ಞಾನದಿಂದಲೇ ಸರ್ವ ಪುರುಷಾರ್ಥವು ಜ್ಞಾನಜನ್ಯ ಕರ್ಮಫಲದಲ್ಲಿ ಅತಿಯತ್ವವು ಹೇಳಿದೆ. (ಜ್ಞಾನಾದೇವ ಶೃತಿ) ಜ್ಞಾನ ಜನ್ಯಫಲವು ಕರ್ಮಜನ್ಯಫಲಕ್ಕಿಂತಲೂ ಅತಿಶಯವಾಗಿ ಯುಧಿಷ್ಠಿರಾದಿಗಳಿಗೆ ರಾಜ ಸೂಯ ಯಜ್ಞಫಲವು ಪ್ರಾಪ್ತವೆಂದು ಹೇಳಿದೆ.

ಬಾದರಾಯಣ ಮತವು ದೇವತಾನಿಷ್ಠ ವಿಷಯವು ಜೈಮಿನಿ ಮತವು ಮನುಷ್ಯ ನಿಷ್ಠಾ ಜ್ಞಾನಫಲವು ವಿಷಯವು ಆದ್ದರಿಂದ ವಿರೋಧವನ್ನು ತಿಳಿಯಬಾರದು. ಕಾಮ್ಯ ಕರ್ಮಗಳು ಮಾಡಲ್ಪಡುವ ರೀತಿಯಲ್ಲಿ ಜ್ಞಾನದಿಂದ ಮಾಡಿದಲ್ಲಿ ಅಧಿಕಫಲ ದಾರ್ಯವು. ಯಥಾವಿಧವಾಗಿ ಮಾಡಲ್ಪಟ್ಟ ಕರ್ಮವು ಜ್ಞಾನಿಗಳಿಗೆ ಅಧಿಕಫಲ ಸಾಧನವು ಅಜ್ಞಾನಿಗಳಿಗೆ ಅಲ್ಪಫಲವು ಯುಧಿಷ್ಟಿರನಿಗೆ ರಾಜಸೂಯಯಾಗದಿಂದ ಇತರ ಯಜ್ಞಕರ್ತೃಗಳಿಂದಲೂ ಅಧಿಕಫಲಪ್ರಾಪ್ತವು. ಜ್ಞಾನಾದಿತ್ಯದಿಂದಲೇ ದೇವತೆಗಳಿಗೆ ಆಚಾರಾದಿಗಳು ವ್ಯರ್ಥವಲ್ಲ ಜ್ಞಾನದಿಂದಲೇ ಸರ್ವ ಪುರುಷಾರ್ಥವು ಕರ್ಮಶೇಷದಿಂದಲ್ಲ ವೇದಬಾಗರಾಯಣಮತವು

## ಸೂ॥ ಓಂ॥ ತುಲ್ಯಂ ತುದರ್ಶನಂ ಓಂ॥ 9

ರಾಜಸೂಯಾದಿ ಕೃತಾವಕೃತೌ ಚ ಸಮಮೇವ ತೇಷಾಂ ವಿಜ್ಞಾನಂ ।

ಜ್ಞಾನಿ ಮಾಡುವ ಕರ್ಮಗಳು ಜ್ಞಾನವನ್ನು ಅತಿಶಯ ಮಾಡುವುದಿಲ್ಲ. ಮತೆ ಜ್ಞಾನಫಲವನ್ನು ಹೆಚ್ಚಿಸುವುದು. ಜ್ಞಾನವಾದರೋ ಕರ್ಮ ಮಾಡಿದರೂ ಮಾಡೆ ದಿದ್ದರೂ ಒಂದೇ ರೀತಿಯ ವಿಜ್ಞಾನವು.

ವಿಜ್ಞಾತಮೇತತ್ಸರ್ವೇಷಾಂ ಮುನೀನಾಂ ಬ್ರಹ್ಮದರ್ಶನಾತ್ ।
ಸ್ಯಾದೇವ ಮೋಕ್ಷೋ ನಾನ್ಯಸ್ಮಾದಿತಿ ತತ್ರಾಪಿ ಚಿತ್ರತಾ ॥

ಜೈಮಿನ್ಯಾದಿ ವ್ಯಾಸಶಿಷ್ಯರು ಬ್ರಹ್ಮದರ್ಶನದಿಂದಲೇ ಮೋಕ್ಷವು ಬೇರೆ ಕರ್ಮಗಳಿಂದ ಅಲ್ಲವೆಂದು ಸಮ್ಮತವು ಮೋಕ್ಷಾ ಫಲದಲ್ಲಿ ಮಾತ್ರ ನಾನಾ ಫಲದಲ್ಲಿ ಮಾತ್ರ ನಾನಾಪ್ರಕಾರ ವ್ಯತ್ಯಾಸವು ಹೇಳುವರು

13 ಸ್ವರ್ಗಾದಯಃ ಕರ್ಮಣೈವ ನಾನ್ಯೇನೇತ್ಯಪರೇ ವಿದುಃ ।
ಜ್ಞಾನೇನಾಧಿಕ್ಯಮಿತ್ಯಾಹುರ್ಜೈಮಿನ್ಯಾದ್ಯಾಸ್ತು ಕೇಚನ ।
ಅದೃಷ್ಟಮೇವ ಜ್ಞಾನೇನ ದೃಷ್ಟಂ ನೈವೋಪಲಭ್ಯತೇ ।
ಇತಿ ಕೇಚಿದ್ವಿದಃ ಪ್ರಾಹುರ್ವ್ಯಾಸ ಶಿಷ್ಯಾ ಇಮೇಽಖಿಲಾಃ
ಯಸ್ಮಾದ್ವ್ಯಾಸಮತಂ ಸರ್ವಂ ಸತ್ಯಮೇವ ತತೋಽಖಿಲಂ ॥

ಮತ್ತೆ ಕೆಲವರು ಸ್ವರ್ಗಫಲವು ಕರ್ಮಗಳಿಂದಲೇ ಸಾಧ್ಯವು ಅನ್ಯ ಸಾಧ್ಯಗಳಲ್ಲವೆಂದು ಹೇಳುವರು ಜೈಮಿನ್ಯಾದಿ ಕೆಲವರು ಜ್ಞಾನದಿಂದ ಅಧಿಕಫಲವನ್ನು ಹೇಳುವರು ಅಪರೋಕ್ಷಜ್ಞಾನಾನಂತರ ಕರ್ಮಫಲವು ಸರ್ವತ್ರಾಧಿಕವು ಎಂದು ಈ ಸರ್ವರೂ ವ್ಯಾಸಶಿಷ್ಯರಾದ್ದರಿಂದ ಎಲ್ಲರೂ ಸತ್ಯವೆಂದೇ ತಿಳಿಯಬೇಕು ಅವರವರ ಯೋಗ್ಯತೆಯಂತೆ ತಿಳುವಳಿಕೆಯೂ ಕೂಡ.

14 ಯಥಾಕಾಶಸ್ತ್ವನಂತೋಽಪಿ ವ್ಯಾಮೋ ಹಸ್ತಾ ವಧಿಸ್ತಥಾ ।
ಪ್ರಾದೇಶೋಽಪಿ ಹಿ ಸತ್ಯೇನ ತದ್ವೈತೇಷಾಂ ಮತಾನಿ ತು ॥

ಹೇಗೆ ಆಕಾಶವು ಅನಂತವಾದರೂ ಘಟಾಕಾಶ ಆಕಾಶ ಎಂಬ ಪರಿಚ್ಛೇದವೂ ಸತ್ಯವೋ ಹಾಗೆಯೇ ಈ ಮೇಲಿನ ವಾಕ್ಯಗಳೆಲ್ಲವೂ ಸತ್ಯವೇ

15 ಸ್ವಯಂ ತು ಭಗವಾನ್ ವ್ಯಾಸೋ ವ್ಯಾಪ್ತಜ್ಞಾನಮಹಾಂಶುಮಾ ।
ಅನಂತಾಕಾಶ ವತ್ಪಶ್ಯನ್ನಿ ಖಿಲಂ ಪುರುಷೋತ್ತಮಃ ।
ಜ್ಞಾನೇನೈವಾಪ್ಯತೇ ಸರ್ವಂ ಕರ್ಮಣಾತ್ವಧಿಕಂ ಭವೇತ್ ।
ಇತಿ ಪ್ರಾಹ ಮಹಾಯೋಗೀ ಪುಮರ್ಥಾನಾಂ ವಿನಿರ್ಣಯಂ ॥
ಇತಿ ಭವಿಷ್ಯತ್ಪರ್ವಣಿ

ವ್ಯಾಸರೂಪ ಶ್ರೀ ಭಗವಂತನಾದರೂ ವ್ಯಾಪ್ತ ಜ್ಞಾನಿಗಳಾದ್ದರಿಂದ ಅನಂತಾಕಾಶದಂತೆ ಸರ್ವವನ್ನು ಯಥಾವತ್ತಾಗಿ ಕಂಡು ಹೀಗೆ ಹೇಳುವರು.

ಜ್ಞಾನದಿಂದಲೆ ಸರ್ವ ಪುರುಷಾರ್ಥ ಪ್ರಾಪ್ತವು ಕರ್ಮಕರಣದಿಂದ ಅಧಿಕಫಲ ಪ್ರಾಪ್ತಿಯು ಎಂದು ನಿರ್ಣಯಪೂರ್ವಕವಾಗಿ ಹೇಳುವರು

**16 ಜ್ಞಾನಿನಾಮಪಿ ದೇವಾನಾಂ ವಿಶೇಷಃ ಕರ್ಮಭಿರ್ಭವೇತ್ ।**
**ಚೀರ್ಣೇಽಕೃತೇ ವಾ ಜ್ಞಾನಸ್ಯ ನ ವಿಶೇಷೋಸ್ತಿ ಕರ್ಮಣಿ ॥**
**ಇತಿ ಬ್ರಹ್ಮತರ್ಕೇ**

ಜ್ಞಾನಿಗಳಾದ ದೇವತೆಗಳಿಗೂ ಕರ್ಮಗಳಿಂದ ವಿಶೇಷಫಲವು ಕರ್ಮಗಳು ಅನುಷ್ಠಾನ ಮಾಡಿದರೂ ಮಾಡದಿದ್ದರೂ ವಿರೋಧವಿಲ್ಲ. (ಬ್ರಹ್ಮತರ್ಕೆ)

ಇತಿ ಪುರುಷಾರ್ಥಾಧಿಕರಣಂ

## - ಅಸಾರ್ವತ್ರಿಕಾಧಿಕರಣಂ -

ಈ ಅಧಿಕರಣದಲ್ಲಿ ಜ್ಞಾನಾರ್ಜನೆಗೆ ಸರ್ವರಿಗೂ ಅಧಿಕಾರಿವಿಲ್ಲವೆಂದು ಸಮರ್ಥನವು.

1 **ಸರ್ವೇಷಾಂ ಪುರುಷಾರ್ಥಾ ಪೇಕ್ಷಿತ್ವಾತ್ ಜ್ಞಾನಾಧಿಕಾರಿತೇತಿ ।**

ಸರ್ವರೂ ನಿರ್ದುಃಖಾನಂದ ಮೋಕ್ಷಹೊಂದಲು ಇಚ್ಛೆಯಿಂದ ಜ್ಞಾನಸಂಪಾದನ ರೂಪ ಶ್ರವಣಾದಿ ಸಾಮರ್ಥ್ಯವು ಇರುವುದರಿಂದ ಸರ್ವರಿಗೂ ಜ್ಞಾನಸಂಪಾದನಾದಿ ಕಾರವು ಇರುವುದೆಂದು ಪೂರ್ವಪಕ್ಷವು.

**ಸೂ॥ ಓಂ॥ ಅಸಾರ್ವತ್ರಿಕೀ ಓಂ॥ 10**

**ನ ಸರ್ವೇಷಾಮಧಿಕಾರಃ ।**

ಜ್ಞಾನ ಸಂಪಾದನಾಧಿಕಾರವು ಸರ್ವಜೀವರುಗಳಿಗೂ ಇಲ್ಲ ಸಿದ್ಧಾಂತವು.

## ಸೂ॥ ಓಂ॥ ವಿಭಾಗಃಶತವತ್ ಓಂ॥ 11

ಸರ್ವಜೀವರಿಗೂ ಅಪೇಕ್ಷೆಯಿದ್ದರೂ ಕೆಲವರು ಜೀವರಿಗೆ ಮಾತ್ರ ಜ್ಞಾನಾರ್ಜನೆಯಲ್ಲಿ ಅಧಿಕಾರವು ಇತರರಿಗೆ ಇಲ್ಲ. ಪರಾಪರ ಬ್ರಹ್ಮಾದಿಕ ನೂರು ದೇವತೆಗಳಿಗೆ ಮಾತ್ರ ಸೋಮಪಾನಾಧಿಕಾರವು ಅನ್ಯದೇವತೆಗಳಿಗೆ ಇಲ್ಲ ಹಾಗೆ ವಿಭಾಗವು ದೇವತೆಗಳಲ್ಲಿ ಹೇಳಿದೆಯೋ ಆ ಸಾದೃಶ್ಯದಿಂದಲೇ ಕೆಲವರಿಗೆ ಮಾತ್ರ ಅಧಿಕಾರವು

ನವ ಕೋಟ್ಯೋ ಹಿ ದೇವಾನಾಂ ತೇಷಾಂ ಮಧ್ಯೇ ಶತಸ್ಯ ತು ।
ಸೋಮಾಧಿಕಾರೋ ವೇದೋಕ್ತೋ ಬ್ರಹ್ಮಣೋ ದ್ವೇಶತಾಧಿಕೇ ।
ಯಥಾ ತಥೈವಾಸಂಖ್ಯಯೋಃ ಪ್ರಜಾಸ್ತಾನು ಕಿಯಾಜ್ಞಾನಃ ।
ಜ್ಞಾನಾಧಿಕಾರೀ ಸಂಪ್ರೋಕ್ತೋ ವಿಷ್ಣುಪಾದೈಕಸಂಶ್ರಯಃ ॥
ಇತಿ ವಚನಾತ್ಸುಖಾಪೇಕ್ಷಾಸಾಮ್ಯೇಪಿ ವಿಭಾಗ ಇಷ್ಯತೇಧಿಕಾರಾರ್ಥಂ

ನವಕೋಟಿಸಂಖ್ಯೆದೇವತೆಗಳಿದ್ದಾಗ್ಯೂ ಅವರುಗಳಲ್ಲಿ ನೂರುಸಂಖ್ಯೆ ದೇವತೆಗಳಿಗೆ ಮಾತ್ರ ವೇದದಲ್ಲಿ ಸೋಮಪಾನಾಧಿಕಾರವು ಹೇಳಿದೆ ಹಾಗೆಯೇ ಮನುಷ್ಯರಲ್ಲಿಯೂಕೆಲವು ಜೀವರುಗಳಿಗೆ ಮಾತ್ರ ಶ್ರೀ ವಿಷ್ಣುಪಾದವನ್ನೇ ಆಶ್ರಯಿಸಿಕೊಂಡಿರುವವರಿಗೆ ಜ್ಞಾನಾಧಿಕಾರವು ಮಿಕ್ಕ ಜೀವರುಗಳಿಗೆಲ್ಲ ಸುಖಾಪೇಕ್ಷೆಯು ಸರ್ವರಿಗೂ ಇದ್ದರೂ ಜ್ಞಾನಾಧಿಕಾರವು ಮಿಕ್ಕ ಜೀವರುಗಳಿಗಿಲ್ಲ ಸುಖಾಪೇಕ್ಷೆಯು ಸರ್ವರಿಗೂ ಇದ್ದರೂಜ್ಞಾನಾಧಿಕಾರವು ಕೆಲವರಿಗೆ ಮಾತ್ರವೇ.

ಪ್ರಧಾನ ವಾಯುರ್ವರು ತೊಶ್ವಿನೌ ಚ ವಸ್ವರ್ಕರುದ್ರಾಃ ಪಿತರೋಗುರುಶ್ಚ ।
ಕ್ಯಾನಾಪ್ಯಧಿವ್ಯಾವ್ಯಭವೋಪಿ ವಿಶ್ವೇದೇವಾಃ ಶತಂಸೋಮನನಾಧಿಕಾರಿಣಃ

4 ಸತ್ಯಾಧಿಕಾರಃ –

## ಸೂ॥ ಓಂ॥ ಅಧ್ಯಯನಮಾತ್ರವತಃ ಓಂ॥ 12

ಅಧಿಕಾರವು ಯಾರಿಗೆಂದರೆ ಯಥಾಶಕ್ತಿವೇದಾಧ್ಯಯನ ಮಾಡುವವರಿಗೆ ಮಾತ್ರ ಬ್ರಹ್ಮಾಧಿಕಾರವು ಜ್ಞಾನ ಪ್ರಾಪ್ತಿಯು ಇತರರಿಗೆ ಇಲ್ಲ ಸಾಂಗ ವೇದಾಧ್ಯಯನ ಮಾಡಲು ಶಕ್ತರಲ್ಲದಿದ್ದರೂ ಯಥಾ ಶಕ್ತ್ಯಖಿಲವೇದಾಧ್ಯಯನ ರೂಪ ವಿಶೇಷಉಳ್ಳ ಜೀವರಿಗೆ ಮಾತ್ರ ಜ್ಞಾನಾಧಿಕಾರವು

5 ಅವೈಷ್ಣವಸ್ಯ ವೇದೇಪಿ ಹ್ಯಧಿಕಾರೋ ನ ವಿದ್ಯತೇ ।
ಗುರುಭಕ್ತಿವಿಹೀನಸ್ಯ ಶಮಾದಿ ರಹಿತಸ್ಯ ಚ ।
ನ ಚ ವರ್ಣಾವರಸ್ಯಾಪಿ ತಸ್ಮಾದಧ್ಯಯನಾನ್ವಿತಃ ।
ಬ್ರಹ್ಮಜ್ಞಾನೇ ತು ವೇದೋಕ್ತೇ ಹ್ಯಧಿಕಾರೀ ಸತಾಂ ಮತ ।
ಇತಿ ಬ್ರಹ್ಮ ತರ್ಕೇ

ವೈಷ್ಣವ ದೀಕ್ಷಾ ಇಲ್ಲದವನಿಗೆ ವೇದಾಧ್ಯಯನಾಧಿಕಾರವಿಲ್ಲ ಗುರುಭಕ್ತಿ ಇಲ್ಲದವನಿಗೂ ಶಮದಮಾದಿ ವೈರಾಗ್ಯವಿಲ್ಲದವನಿಗೂ ವರ್ಣಾವರತ್ವ ಉಳ್ಳವನಿಗೂ ಅಧಿಕಾರವಿಲ್ಲ ಅಧ್ಯಯನವುಳ್ಳ ಅಧಿಕಾರಿಯೇ ವೇದೋಕ್ತ ಬ್ರಹ್ಮಜ್ಞಾನಕ್ಕೆ ಅಧಿಕಾರಿ ಎಂದು ಸಜ್ಜನ ಮತವು

6 ಪಠೇದ್ವೇದಾನಥಾರ್ಥಾನಧೀಯೀತಾಥ ವಿಚಾರ್ಯ ಬ್ರಹ್ಮ
ವಿಂದೇತ್ ॥ ಇತಿ ಕೌಷಾರವ ಶ್ರುತಿಃ

ಗುರೂಕ್ತವಾದ ವೇದವನ್ನು ಉಚ್ಚಾರಣ ಮಾಡಬೇಕು ವೇದಾರ್ಥವನ್ನು ಜಿಜ್ಞಾಸೆಯಿಂದ ತಿಳಿಯಬೇಕು ಶ್ರವಣ, ಮನನ ಉಪಾಸಂನಾತ ಬ್ರಹ್ಮನನ್ನು ತಿಳಿದು ಅಪರೋಕ್ಷ ಜ್ಞಾನವನ್ನು ಹೊಂದುವನು

ಇತ್ಯ ಸಾರ್ವತ್ರಿಕಾಧಿಕರಣಂ

## – ಅವಿಶೇಷಾಧಿಕರಣಂ –

ಈ ಅಧಿಕರಣದಲ್ಲಿ ಜ್ಞಾನಾಧಿಕಾರಕ್ಕೆ ತಾರತಮ್ಯದ ಸಮರ್ಥನವು.

## ಸೂ|| ಓಂ|| ನಾವಿಶೇಷಾತ್ ಓಂ|| 13

ನ ಸಾಮಾನ್ಯೇನಾಧಿಕಾರೋದೇವಾದೀನಾಂ ।

ದೇವತೆಗಳಿಗೆ ಜ್ಞಾನಾಧಿಕಾರವು ಸಾಮ್ಯತೆ ಎಂದರೆ ಅಲ್ಲ. ತಾರತಮ್ಯಾನುಸಾರವೇ ದೇವತೆಗಳಿಗೂ ಋಷಿ ಗಂಧರ್ವರಿಗೂ ಮನುಷ್ಯೋತ್ತಮರಿಗೂ ಜ್ಞಾನಾಧಿಕಾರವು ಸಮವಾಗಿಯಲ್ಲ ತಾರತಮ್ಯತಃ ಯೋಗ್ಯತೆಯು.

2 **ಅ ಥಪುಮರ್ಥಸಾಧನಾನ್ಯರ್ಥೋ ಧರ್ಮೋಜ್ಞಾನಮಿತ್ಯುತ್ತರೋತ್ತರಂ ।**
**ತತ್ರಾಧಿಕಾರಿಣೋ ಮನುಷ್ಯಾ ಋಷಯೋ ದೇವಾ ಇತ್ಯುತ್ತರಂ ॥**
**ಇತಿ ಹಿ ಕೌಂಡಿನ್ಯ ಶ್ರುತಿಃ**

ಧನವೂ ಸುರತವೂ ಮತ್ತು ಬ್ರಹ್ಮದರ್ಶನವೂ ಪೂರ್ವ ಪೂರ್ವ ಉತ್ತರೋತ್ತರ ಅಪೇಕ್ಷೆಯಿಂದ ಮೋಕ್ಷ ಸಾಧನವು. ಸರ್ವ ಜೀವರುಗಳಿಗೂ ಅರ್ಥ, ಧರ್ಮ ಮತ್ತು ಜ್ಞಾನ, ಇಚ್ಛೆ, ಸ್ವರ್ಗವ್ಯಾಪ್ತಿ, ಅಪವರ್ಗ ಇವುಗಳಿಗೆ ಉತ್ತರೋತ್ತರ ಸಾಧನವು.

**ಇತಿ ಅವಿಶೇಷಾಧಿಕರಣಂ**

### – ಸ್ತುತ್ಯಧಿಕರಣಂ –

ಈ ಅಧಿಕರಣದಲ್ಲಿ ಜ್ಞಾನಿಗಳಿಗೆ ಸದಸತ್ಪ್ರವೃತ್ತಿ ವಿಶೇಷವು ಸಾಧಿಸಿದೆ

1 **ಅಥ ಮುನಿರಮೌನಂ ಚ ಮೌನಂ ಚ ದಿರ್ವಿದ್ಯಾಥ ಬ್ರಾಹ್ಮಣಃ**
**ಸ ಬ್ರಾಹ್ಮಣಃ ಕೇನ ಸ್ಯಾದ್ಯೇನ ಸ್ಯಾತ್ತೇನೇದೃಶ ಏವೇತಿ**

ಜ್ಞಾನಿನೋ ಯಥೇಷ್ಟಾ ಚರಣಂ ವಿಧೀಯತೆ । ಇತಿ

ಅಪರೋಕ್ಷ ಜ್ಞಾನದಿಂದಲೇ ಮೋಕ್ಷವು ಆತನು ಆಗಮಜನ್ಯ ಶ್ರವಣ ಮನನ ರೂಪಜ್ಞಾನವನ್ನು ಸಂಪಾದಿಸಬೇಕು. ಪೂರ್ಣ ಪಾಂಡಿತ್ಯವನ್ನು ಹೊಂದಿ ಯುಕ್ತಿ ಬಲದಿಂದ ಮನನರೂಪಜ್ಞಾನವನ್ನು ಹೊಂದಿ ಬಲವಂತನಾಗಬೇಕು ಅನಂತರ ಧ್ಯಾನವಂತನಾಗಿ ಅಪರೋಕ್ಷಜ್ಞಾನಿಯಾಗಬೇಕು. ಹೀಗೆ ಮೌನೀ ಉಪಾಸನಾರೂಪ ಜ್ಞಾನಿಯು ಅವತಾನೀ ಅಪರೋಕ್ಷಜ್ಞಾನವನ್ನು ಹೊಂದಿ ಜೀವನ್ಮುಕ್ತನಾಗುತ್ತಾನೆ ಇಂಥಾ ಜ್ಞಾನಿಯು ನತ ಅನತ ಪ್ರಕಾರಗಳಿಂದ ಇಷ್ಟಬಂದಂತೆ ನಡವಳಿಕೆಯುಳ್ಳವ ನಾದರೂ ಮೋಕ್ಷವನ್ನು ಹೊಂದುವನು ಆದರೂ ಆತನು ಪರಮಾತ್ಮನಲ್ಲಿ ಅನಂದ ಏಕ್ಯಾಕನಂತೆಯೇ ಸ್ವತಂತ್ರನಲ್ಲ

ಅತ ಅಹ

## ಸೂ॥ ಓಂ॥ ಸ್ತುತಯೇಽನುಮತಿರ್ವಾ ಓಂ ॥ 14

3 ನ ವಿಧಿಜ್ಞಾನಿನಃ ಸ್ತುತಯೇಽನುಮತಿಮಾತ್ರಂ ವಾ ಯುಜ್ಯತೇ ಚ ॥

ಜ್ಞಾನಿಗಳಿಗೆ ಸದಸಪ್ರವೃತ್ತಿಯು ಇದೆ. ಯೇನಸ್ಯಾತ್ ,ಎಂಬ ಶೃತಿಯಲ್ಲಿ ಯಥೇಷ್ಟಾಚಾರಜ್ಞಾನಿಯೂ ಮುಕ್ತಿವಂತನಾಗುವನೆಂದು ಸ್ತುತಿಸಲ್ಪಟ್ಟದ್ದಾನೆ. ಆದರೆ ಇಲ್ಲಿ ಯಥೇಷ್ಟಾಚಾರವು ಅನುಮತಿಮಾತ್ರವೇ ವಿಧಿಯಲ್ಲ. ಆತ ಮಾಡುವ ಸತ್ಕರ್ಮಗಳ ಮಧ್ಯದಲ್ಲಿ ಮನಬಂದಂತೆ ಯಾವುದಾದರೂ ಸತ್ಕರ್ಮ ಅಥವಾ ಅಸತ್ಕರ್ಮವನ್ನು ಮಾಡಿದರೂ ಆತನಿಗೆ ನಿಯತವಾಗಿ ಮಾಡಬೇಕಾದ ಅವಶ್ಯಕತೆ ಇಲ್ಲದ್ದರಿಂದ ಯಥೇಷ್ಟಾಚಾರವು ಅನುಜ್ಞಾಮಾತ್ರವು-ವಿಧಿಯಲ್ಲ.

## ಸೂ॥ ಓಂ॥ ಕಾಮಕಾರೇಣ ಚೈಕೇ ಓಂ॥ 15

ಅಸತ್ಪ್ರವೃತ್ತಿವು ಜ್ಞಾನನಶ್ವರದನ ಶಕ್ತಿಯುಳ್ಳದ್ದು. ಸತ್ಪ್ರವೃತ್ತಿಯು ಜ್ಞಾನ ವೃದ್ಧ ಶಕ್ತಿಯಾದರೂ ಮುಕ್ತರಿಗೆ ಎರಡೂ ಒಂದೇ ಫಲದಾಯಕವಾಗಿ ವಿಶೇಷವು.

ಕಾಮಾಚಾರಾಃ ಕಾಮಭಕ್ಷಾಃ ಕಾಮವಾದಾಃ ಕಾಮೇನೈವೇಮಂ ದೇಹ ಮುತ್ಸೃಜ್ಯಾಥ ಪರಾತ್ಪರಮೀಯುರನಾರಂಭಣಂ(ಸಾಮಶಾಖಾ) ।ಇತಿ ಚೈಕೇ ಪಠಂತಿ ॥

ಇಷ್ಟುಬಂದಂತೆ ಪ್ರವೃತ್ತಿಯಿಂದಲೂ ಜ್ಞಾನಿಗಳಿಗೆ ಮೋಕ್ಷವು ಸಾಧ್ಯವೇ ಸದಸತ್ಪ್ರವೃತ್ತಿಯಿಂದ ಹಾನಿಯಿಲ್ಲ ಆದರೆ ಅಸತ್ಪ್ರವೃತ್ತಿಯು ಕುಂಠಿತ ಶಕ್ತಿಯುಳ್ಳದ್ದಾದರೂ ಮೋಕ್ಷ ಸಾಧನತ್ವವನ್ನು ಬಾಧಿಸುವುದಿಲ್ಲ ತಮ್ಮ ಇಚ್ಛೆಯಂತೆ ಕರ್ಮ ನಿಮಿತ್ತದೇಹವನ್ನು ಬಿಟ್ಟು ಅನಾದಿ ಪರಬ್ರಹ್ಮನನ್ನು ಹೊಂದುವರು

## ಸೂ॥ ಓಂ॥ ಉಪಮರ್ದಂ ಚ ಓಂ॥ 16

ಓ ಮಿತ್ಯುಚ್ಚಾರ್ಯಾಂತರಿಮಮಾತ್ಮಾನಮಭಿಪಶ್ಯೋಪಮೃದ್ಯ ಪುಣ್ಯಂ ಚ ಪಾಪಂ ಚ ಕಾಮಮಾಚರಂತೋ ಬ್ರಹ್ಮಾನುವ್ರಜಂತಿ । ಇತಿ ಚ ತುರಶ್ರುತೌ

ಜ್ಞಾನಿಗಳು ಪ್ರಾರಬ್ಧಕರ್ಮಫಲವನ್ನು ಸ್ವಲ್ಪವಾಗಿ ಅನುಭವಿಸಿ ಮಿಕ್ಕ ಫಲ ಗಳನ್ನು ಫಲಹ್ರಾಸದಿಂದ ನಾಶಪಡಿಸಿಕೊಳ್ಳುವರೆಂದು ಹೇಳಿರುವುದರಿಂದ ಜ್ಞಾನಾ ನಂತರದ ಸದಸತ್ಪ್ರವೃತ್ತಿಯು ಹೇಗೆಯೂ ಬಾಧಿಸಲಾರದು

## ಸೂ॥ ಓಂ॥ ಊರ್ಧ್ವರೇತಃಸು ಶಬ್ದೇ ಹಿ ಓಂ॥ 17

ಕಾಮಾಚಾರಿ ಜ್ಞಾನಿಗಳಿಗೆ ಮುಕ್ತ್ಯಧಿಕಾರವಿದ್ದರೂ ಕಾಮಾಚಾರ ಜಿಜ್ಞಾಸು ಗಳಿಗೆ ಜ್ಞಾನಾಧಿಕಾರವಿಲ್ಲ ಮಾಠರ ಶ್ರುತಿಯು ಊರ್ಧ್ವರೇತಸ್ತ್ವಾದಿ ಗುಣವುಳ್ಳವನಿಗೆ ಜ್ಞಾನೋಪದೇಶವು ವಿಹಿತವು ಎಂದು ಹೇಳುವುದು

ನ ತಾವತಾ ಕಾಮ ಚಾರಾಣಾಂ ಜ್ಞಾನೇಽಧಿಕಾರಃ ।
ಯ ಇಮಂ ಪರಮಂ ಗುಹ್ಯಮೂರ್ಧ್ವರೇತಸ್ಸು ಭಾಷಯೇತ್ ।
ನ ತಥಾ ವಿದ್ಯತೇ ಭೂಯಾನ್ಯಂ ಪ್ರಾಪ್ಯಾನ್ಯೇಪಿ ಭೂಯಸಃ ।
ಇತಿ ಮಾಠರ ಶ್ರುತೇಃ

ಕಾಮಾಚಾರ ಪ್ರವೃತ್ತಿಯುಳ್ಳವರಿಗೆ ಜ್ಞಾನ ಹೊಂದಲು ಅಧಿಕಾರವೇ ಇಲ್ಲ.

ಗುರುಕುಲವಾಸಾದಿ ಬ್ರಹ್ಮಚರ್ಯ ಊರ್ಧ್ವರೀತಸ್ತ್ವಾದಿ ಗುಣವುಳ್ಳವನಿಗೆ ಜ್ಞಾನೋಪದೇಶವು ಯುಕ್ತವು ಅಪರೋಕ್ಷ ಜ್ಞಾನಸಾಧನೆಗೆ ಪರೋಕ್ಷಜ್ಞಾನವು ಪೂರ್ವಭಾವಿಯಾಗಿ ಜಿಜ್ಞಾಸುಗಳಿಗೆ ಜ್ಞಾನಾಧಿಕಾರವಿಲ್ಲವಾಗಿ ನೂಕ್ತ ಗುಣಾಚರಣ ವುಳ್ಳವರಿಗೆ ಬ್ರಹ್ಮನ ಉಪದೇಶವು.

## ಸೂ|| ಓಂ|| ಪರಾಮರ್ಶಂಜೈಮಿನಿರಚೋದನಾ ಚಾಪವದತಿ ಹಿ ಓಂ|| 18

ಜೈಮಿನ್ಯಾಚಾರ್ಯರು ಏನಸ್ಯಾತ್ ...ಎಂಬ ವಾಕ್ಯಕ್ಕೆ ಪ್ರಾತರುತ್ಥಾಯ ಇತ್ಯಾದಿ ಸದಾಚಾರ ಗ್ರಹಣದಿಂದ ಸದಾಚಾರ ವಿಷಯದಲ್ಲಿಯೇ ಸ್ವೇಚ್ಛಾಚರಣವು ನಿಷಿದ್ಧ ಕರ್ಮಗಳಲ್ಲವೆಂದು ತಿಳಿಯುವರು. ಅನಿಷಿದ್ಧ ಕಾರ್ಯವು ಜ್ಞಾನಿಗಳಿಂದ ಆಚರಿಸಲಾಗನೆಂಬ ಬ್ರಾಹ್ಮಣೋನ ಹಂತವ್ಯಃ ಇತ್ಯಾದಿ ಶೃತಿಗಳು ನಿಷೇಧಿಸಿದೆ

> ಪ್ರಾತರುತ್ಥಾಯ ಸಂಧ್ಯಾಮುಪಾಸೀತ ಯತ್ಸಂಧ್ಯಾಮುಪಾಸತೇ ಬ್ರಹ್ಮೈವ ತದುಪಾಸತೇsಥ ದೇವಾನ್ನ ಮೇಜ್ಯ ಹುಯಾದ್ವೇದಾನಾವರ್ತಯೀತ ನಾನ್ಯ ತ್ಕಿಂಚಿದಾಚರೇನ್ನ ಪಲಾಂಡುಂ ಭಕ್ಷಯೀತ ನ ಭೃಶಂ ವದೇನ್ನ ವಿಸ್ಮರೇದಾತ್ಮಾನಂ ಸೋಮಂ ಪಿಬೇದ್ರುತಶೇಷಣ ವರ್ತಯೇದಿತ್ಯುಕ್ತ್ವಾಚಾರ ಗರಾಮರ್ಶೇನ ವಿಧಿ ಕಾಮತ ಏವ ತಸ್ಯ ಚರಣಂಕಾಮಚಾರ । ಇತಿ ಜೈಮಿನಿರ್ಮನ್ಯತೇ

ಜೈಮಿನ್ಯಾಚಾರ್ಯರು ಕಾಮಚರಣ ಕಾಮಭಕ್ಷಾ ಕಾಮವಾದಾಃ ಎಂಬ ಪದ ಗಳಿಗೆ ಸಂಧ್ಯೋಪಾಸ್ತಿ ದೇವಪ್ರಣಾಮ ಅಗ್ನಿಹೋತ್ರ ಹೋಮಾದಿಗಳನ್ನು ಕಾಮತಃ ಇಚ್ಛೆಯಂತೆ ವಿಷಯವನ್ನಲ್ಲ ನಿಷಿದ್ಧವನ್ನು ಆಚರಿಸಬಾರದು. ಎಂದು ಪರಾಮರ್ಶವು. ಪ್ರಾತಃಕಾಲದಲ್ಲಿ ಎದ್ದು ಸಂಧ್ಯಾವಂದನೆಯನ್ನು ಉಪಾಸಿಸಿ ದೇವತೆಗಳಿಗೆ ನಮಸ್ಕಾರ ಪೂರ್ವಕ ಹೋಮಗಳಿಂದ ಪೂಜಿಸಿ ವೇದಪಾರವನ್ನು ಆವರ್ತನೆಮಾಡಿ ಅನ್ಯವಾದ್ದನ್ನು ಆಚರಿಸಬಾರದು. ಸುರಾಪಾನ ಫಲಾಂಡುಭಕ್ಷಣ ನಿಷ್ಟುರ ವಚನಗಳು ನಿಷಿದ್ಧವು ಬ್ರಹ್ಮನನ್ನು ಸದಾಮರೆಯಲಾಗದು ಹೃತಶೇಷವನ್ನು ಸ್ವೀಕರಿಸುವುದು ಹೀಗೆ ಆಚಾರ ಕಾಮರ್ಶವಾದ ವಿಧಿವರ್ಜಿತವಲ್ಲದ ನಡವಳಿಕೆಯೇ ಕಾಮಾಚಾರವು.

**8 ನ ಚ ನಿಷಿದ್ಧಂ ಕರ್ಮ ಕರ್ತವ್ಯ ಮೇವೇತಿ ಚೋದನಾ ।**
**ಬ್ರಾಹ್ಮಣೋ ನ ಹಂತವ್ಯ ಇತ್ಯಾದ್ಯಪವಾದಶ್ಚ ||**

ನಿಷಿದ್ಧ ಪ್ರವೃತ್ತಿ ವಿಷಯವೂ ಕಾಮಾಚಾರವಾಗಿ ಮಾಡಲ್ಪಡಬಾರದೆಂದು ಜೈಮಿನ್ಯಾಚಾರ್ಯರು ಹೇಳುವರು. ಬ್ರಾಹ್ಮಣೋನ ಹಂತವ್ಯ ಇತ್ಯಾದಿ ಆ ಕರ್ಮಗಳನ್ನು ಮಾಡಬಾರದು ಎಂದು

## ಸೂ॥ ಓಂ॥ ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ ಓಂ॥ 19

ಶ್ರೀಮಾನ್ಬಾದರಾಯಣರೋ ಸ್ವೇಚ್ಛಾನುಷ್ಠಾನವೆಂದರೆ ಶೃತಿಗಳಲ್ಲಿ ಹೇಳುವ ಅನುಷ್ಠಾನಕ್ಕೆ ಯೋಗ್ಯವಾದ ಕರ್ಮಾಚರಣಗಳಲ್ಲಿ ಅನುಮತಿಯೋ ಯೇನಸ್ಯಾತ್ ಎಂಬ ಶ್ರುತಿಯರ್ಥವು ಸರ್ವ ಕರ್ಮಗಳಲ್ಲಿ ಯಥೇಷ್ಟಾಚಾರ ವಿಧಿಯಲ್ಲ ಸಾಮ್ಯ ಶ್ರುತ್ಯರ್ಥದಿಂದ ಯಾವ ಪ್ರಕಾರದಿಂದಲೂ ಪ್ರವೃತ್ತಿಯು ಜ್ಞಾನಿಗಳಿಗೆ ಸಾಮ್ಯವು ಹೇಳುವುದು

ಅನುಷ್ಠೇಯಾನಾಂ ಮಧ್ಯೆ ಏವ ಕಾಮತಶ್ಚರಣಂ ಕಾಮತೋ ನಿವೃತ್ತಿರಿತಿ ಬಾದರಾಯಣೋ ಮನ್ಯತೇ ।
ಕೇನ ಸಾಧ್ಯೇನ ಸ್ಯಾತ್ತೇನೇದೃಶ ಏವೇತಿ ಸಾಮ್ಯಶ್ರುತೇಃ ॥

ಅನುಷ್ಠೆಗಳ ಮಧ್ಯದಲ್ಲಿ ಯಾವುದನ್ನು ಮಾಡಲು ಮನಸ್ಸಾಗುವುದು ಯಾವುದನ್ನು ಮಾಡಲು ಇಚ್ಛೆ ಇಲ್ಲವೋ ಅವುಗಳ ಕರಣಾಕರಣಗಳೇ ಶೃತಿಯಲ್ಲಿ ಹೇಳಿರುವುದು ಜ್ಞಾನಿಗಳಿಗೆ ಕಾರ್ಯಾಭಾವವೇ ನಿಯಮವಿಲ್ಲವಾಗಿ ಸಾಮ್ಯವೇ.

10 ಭಗವದ್ಗೀತಾ ವಚನವು

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತ ॥ ಇತಿ**
ಗೀ (3–17)

ಆತ್ಮರತಿಃ ಪರಮಾತ್ಮನ ದರ್ಶನ ನಿಮಿತ್ತ ಸುಖಾನುಭವವುಳ್ಳವನು ಆತ್ಮ ತೃಪ್ತಿಃ ಪರಮಾತ್ಮ ಪ್ರಸಾದದಿಂದ ವಿಷಯಸುಖಗಳಲ್ಲಿ ಅಲಂಬುಧಿಯುಳ್ಳವನು

ಆತ್ಮನ್ಯೇವ ಸಂತುಷ್ಟಃ ಶ್ರೀ ಪರಮಾತ್ಮಧ್ಯಾನದಲ್ಲಿಯೇ ಆನಂದ ಉಳ್ಳವನು ಹೀಗೆ ಸರ್ವಸುಖವನ್ನು ಹೊಂದಿರುವ ಮಾನವನು ಮಾಡಬೇಕಾದ ಕರ್ಮವು ಯಾವುದು ಇದೆ? ಇಲ್ಲದಲ್ಲ ಸರ್ವವನ್ನು (ಪುರುಷಾರ್ಥವು ಪೂರ್ಣವಾಗಿ ಹೊಂದಿರುವವನು )

ಅತೀತಾನಗತಜ್ಞಾನೀ ತ್ರೈಲೋಕೋದ್ಧರಣಕ್ಷಮಃ ।
ಏತಾದೃಶೋಪಿನಾಚಾರಂ ಶ್ರೌತಸ್ಮಾರ್ತಂ ಪರಿತ್ಯಜೇತ್ ॥

ವಿಹಿತಕರ್ಮಕರಣದಿಂದ ಅಲ್ಪಲಾಭವಿದ್ದರೂ ಮಾಡದಿದ್ದಲ್ಲಿ ನರಕಾದ್ಯಭಾವತ್ವದಿಂದ ಕರ್ಮವಿಲ್ಲವೆಂದು ಹೇಳಿದೆ. ಹರಿವಂಶ

## ಸೂ॥ ಓಂ॥ ವಿಧಿರ್ವಾ ಧಾರಣವತ್ ಓಂ॥ 20

ಕೇನಸ್ಯಾದೇನಸ್ಯಾತ್ (ಬೃ-5-5-1) ಇತಿ ವಿಧಿವಾನ್ ।
ಯಥಾ ವೇದಧಾರಣಂ ತ್ರೈವರ್ಣಿಕಾನಾಂ ವಿಹಿತಂ ನಾನ್ಯೇಷಾಂ ॥
ಏವಂ ಸ್ವಮತಾನುಸಾರಿಣೀ ಪ್ರವೃತ್ತಿರ್ಜ್ಞಾನಿನಾಂ ವಿಹಿತಾ ।
ನ ತತ್ರಾಧರ್ಮ ಶಂಕಾ ಕಾರ್ಯಾ ನಾನ್ಯೇಷಾಂ ॥ ಇತಿ ವಾ

ವೇದಧಾರಣತ್ವವು ತ್ರೈ ವರ್ಣಿಕರಿಗೆ ಮಾತ್ರ ವಿಧಿ ಅನ್ಯರಿಗೆ ಅಯೋಗ್ಯವು (ಸರ್ವಾಧಿಕಾರತ್ವವಿಲ್ಲವೋ) ಹಾಗೆಯೇ ಜ್ಞಾನಿಗಳಿಗೆ ಮಾತ್ರ ಸ್ವೇಚ್ಛಾಚಾರವು (ಸ್ವಮತಾನುಸಾರಿ) ಅಜ್ಞಾನಿಗಳಿಗಲ್ಲ. ಜ್ಞಾನಿಪ್ರವೃತ್ತಿ ವಿಷಯದಲ್ಲಿ ಅಧರ್ಮ ಶಂಕೆಯೇ ಇಲ್ಲ

12 **ಸ್ವೇಚ್ಛಯೈವ ಪ್ರವೃತ್ತಿಸ್ತು ಬ್ರಹ್ಮಣೋ ವಿಧಿಚೋದಿತಾ ।**
**ನಾಶಂಕ್ಯಂ ತನ್ಮತಂ ಕ್ವಾಪಿ ವಿಷ್ಣೋಃ ಪ್ರತ್ಯಕ್ಷ ಚೋದನಾ ।**
**ಇತರೇಷಾಂ ನ ವಿಹಿತಾ ಸ್ವೇಚ್ಛಾಪ್ರವೃತ್ತಿಃ ಕಥಂಚನ ॥**
**ಇತಿ ಬ್ರಾಹ್ಮೇ**

ಶ್ರೇಷ್ಠಜ್ಞಾನಿಯಾದ ಬ್ರಹ್ಮನಿಂದ ಪ್ರತಿಕಾಮವು ಪ್ರೇರಿತವಾಗಿರುವುದರಿಂದ ವೇದಕ್ಕೆ ವಿರುದ್ಧವಾದರೂ ಅಧರ್ಮವಲ್ಲ ಶ್ರೀ ವಿಷ್ಣುವಿನಿಂದ ಪ್ರತ್ಯಕ್ಷಆಜ್ಞಾರೂಪವು ಆದ್ದರಿಂದ ಶ್ರೇಷ್ಠವೇ ನಿಷಿದ್ಧವಾಗಲಾರದು. ಇತರರುಗಳಲ್ಲಿ ಸ್ವೇಚ್ಛಾಪ್ರವೃತ್ತಿಯು

ಯುಕ್ತವಲ್ಲ ಶ್ರೀ ಪರಮಾತ್ಮನ ಪ್ರತ್ಯಕ್ಷಾಜ್ಞಾ ಪರಿಪಾಲನವು ಕರ್ತವ್ಯವು ಲೋಕ ಕ್ಷೇಮಕರವು

## ಸೂ॥ ಓಂ॥ ಸ್ತುತಿಮಾತ್ರಮುಪಾದಾನಾದಿತಿ ಚೇನ್ನಾಪೂರ್ವತ್ವಾತ್ ಓಂ · 21

ಸ್ತುತಿಮಾತ್ರಮೇವ ಸ್ವೇಚ್ಛಾಚರಣಂ ನ ವಿಧಿಃ ।
ತೈರಪಿಸಾಮಾನ್ಯ ವಿಧಿಸ್ವೀಕಾರಾದಿತಿ ಚೇನ್ನ ।
ಅಪೂರ್ವತ್ವಾತ್ । ಪರವಶತ್ವಾತ್ । ಸರ್ವ ವಿಧ್ಯತಿ ಕ್ರಮೇಣ ಸ್ತುತಿಮಾತ
ವಿಷಯತ್ವಂ ಪರಬ್ರಹ್ಮಣ ಏವ ಹಿ ॥

"ಕೇನಸ್ಯಾತ್" ಎಂಬ ಹಿಂದಿನ ಶೃತಿಯು ಸ್ತುತಿಮಾತ್ರ ವಿಧಿಯಲ್ಲ. ಜ್ಞಾನಿಗಳಿಗೂ ಸಂಧ್ಯಾಮುಪಾಸೀತ ಎಂದು ಸಾಧಾರಣ ವಿಧಿಯ ಸಂಭಂದವು ಯುಕ್ತವು ಎಂದರೆ ಹಾಗಲ್ಲ. ಜ್ಞಾನಿಗಳು 'ಅ' ಶಬ್ದವಾಚ್ಯ ಪರಮಾತ್ಮನ ಸರ್ವಾಧೀನತ ಅಪೂರ್ವತ್ವ ಧರ್ಮವುಳ್ಳವರು ಸ್ವೇಚ್ಛಾಚಾರ ವಿಧಿಯಿಲ್ಲದಿದ್ದಲ್ಲಿ ಸರ್ವ ವಿಧ್ಯತ್ವಿ ದೂರತ್ವ ಪ್ರಸಂಗದಿಂದ ಪರಮಾತ್ಮಾನಾಧೀತ್ವವು ಇಲ್ಲವಾಗುವುದು ಸರ್ವವಿಧ್ಯತಿ ಕ್ರಮಣವು ಶ್ರೀ ಪರಮಾತ್ಮನ ವಿಶೇಷ ಧರ್ಮವು ಮಾತ್ರ

14 ವಿಧೀನಾಂ ವಿಷಯಾಸ್ತ್ವನ್ಯೇ ಬ್ರಹ್ಮಣಃ ಸ್ವೇಚ್ಛಯಾ ಕೃತಾ ।
ಪರಸ್ಯ ಬ್ರಹ್ಮಣೋಹ್ಯೇವ ಸರ್ವ ವಿಧ್ಯತಿದೂರತಾ ॥
ಇತಿ ಬ್ರಹ್ಮತರ್ಕೇ

ಜ್ಞಾನಿಗಳಿಗೆ ಸಾಧ್ಯೋಪಾಸ್ಯಾದಿ ಸಾಮಾನ್ಯವಿಧಿಯಿರುವುದರಿಂದ ಸರ್ವ ವಿಧ್ಯತಿದೂರತ್ವವು ಸಾಧುವೆಂದರೆ ಹಾಗಲ್ಲ ಈ ವಾಕ್ಯವು ಸ್ತುತಿಮಾತ್ರ ವಿಶೇಷವು ಶ್ರೀ ಪರಮಾತ್ಮನೊಬ್ಬನಿಗೆ ಸರ್ವ ವಿಧ್ಯತಿ ದೂರತ್ವವು. ಅನ್ಯರಿಗಲ್ಲ

## ಸೂ॥ ಓಂ॥ ಭಾವಶಬ್ದಾಚ್ಚ ಓಂ॥ 22

ಯಥಾವಿಧಾನಮಪರೇ ವಿಧಿರ್ಭಾವೇ ಪ್ರಜಾಪತೇಃ ।
ಬ್ರಹ್ಮಣಃ ಪರಮಸ್ಯೈವ ಸರ್ವವಿಧ್ಯತಿ ದೂರತಾ ॥ ಇತಿ ತುರಶ್ರುತೌ

ಜ್ಞಾನಿಗಳಿಗೆ ಸ್ವೇಚ್ಛಾಚರಣ ವಿಧಿಯು ಉಂಟು ಆದರೆ ಅಧಿಕಾರಿಕ ವಸ್ಥೆಯಿಂದಲೇ ಸರ್ವರಿಗೂ ಏಕಪ್ರಕಾರವಾಗಿಯಿಲ್ಲ. ಪರಬ್ರಹ್ಮನೊಬ್ಬನಿಗೆ ಸರ್ವವಿಧ್ಯತಿ ಕ್ರಮಾಣವು ಎಂದು ಶ್ರುತಿಯು.

## ಸೂ॥ ಓಂ॥ ಪಾರಿಪ್ಲವಾರ್ಥ ಇತಿ ಚೇನ್ನ ವಿಶೇಷಿತತ್ವಾತ್ ಓಂ॥ 23

ಕೇನಸ್ಯಾದೇನಸ್ಯಾತ್ ಇತ್ಯಾದಯಃ ಸ್ಥಿರತ್ವನಿವೃತ್ತ್ಯರ್ಥಾ । ಇತಿ ಚೇನ್ನ ತ್ರೇಧಾ ಹಿ ಜ್ಞಾನಿನೋ ಹವಾನ ಭವಂತಿ ವಿಧಿನಿಯತಾ ಅನಿಯತಃ ಸ್ವೇಚ್ಛಾನಿಯತಾ ॥ ಇತಿ

ವಿಧಿನಿಯತಾಃ ಮನುಷ್ಯಾ ಅನಿಯತಾ ಹಿ ದೇವಾಃ ಬ್ರಹ್ಮೈವ ಸ್ವೇಚ್ಛಾನಿಯ ಇತಿ ಗೌಪವನ ಶ್ರುತೌ ವಿಶೇಷಿತ್ವತ್ ।

ಸರ್ವಧರ್ಮಾಚರಣ ವಿಧ್ಯನುಷ್ಠಾನದಲ್ಲಿ ಸ್ವೇಚ್ಛೆಯಿಂದ ಕೆಲವುಧರ್ಮಗಳ ಅನುಸರಣವು ಪರಸ್ಪರ ವಿರುದ್ಧವಾಗಿ ವ್ಯವಸ್ಥಿತ ಅರ್ಥದಿಲ್ಲದ್ದಾಗಿದೆ ಎಂದರೆ ಹಾಗಲ್ಲ. ಗೌಪವನ ಶ್ರುತಿಯಲ್ಲಿ ಮೂರು ವಿಧ್ಯಧಿಕಾರಿಗಳಿಗೂ ವಿಧಿ ನಿಯತಪದಗಳಿಂದ ವಿಶೇಷಿತವಾಗಿ ಹೇಳುವುದರಿಂದ ಆ ಅಧಿಕಾರಿಗಳಿಂದ ಸೂಕ್ತ ಪ್ರಕಾರಾನುಷ್ಠಾನವು ಯುಕ್ತವು.

ಬೃಹದಾರಣ್ಯಕ ಶೃತಿಯಲ್ಲಿ 'ತೇನಸ್ಯಾತ್' ಇತ್ಯಾದಿಗಳಲ್ಲಿ ಸ್ಥಿರತ್ವ ನಿವರ್ತಕವು ಹೇಳದೆ ಎಂದರೆ ಹಾಗಲ್ಲ ಗೌಪವನ ಶೃತಿಯಲ್ಲಿ ವಿಶೇಷವನ್ನು ಹೇಳಿದೆ. ಜ್ಞಾನಿಗಳಲ್ಲಿ ಮೂರು ವಿಧವು. (1) ವಿಧಿನಿಯತರು ಮನುಷ್ಯರು. (2) ಅನಿಯತರು ದೇವತೆ ಗಳು. (3) ಸ್ವೇಚ್ಛಾ ನಿಯತ ಬ್ರಹ್ಮನೇ. ಆದ್ದರಿಂದ ಅಸ್ಥಿರತೆಯು ಇಲ್ಲ.

## ಸೂ॥ ಓಂ॥ ತಥಾಚೈಕವಾಕ್ಯೋಪ ಬಂಧಾತ್ ಓಂ॥ 24

ಏವಂ ಸತಿ ವಿಧಿವಾಕ್ಯಾನಾಂ ಸ್ವೇಚ್ಛಾಪ್ರವೃತ್ತಿ ವಾಕ್ಯಾನಾಂ ಚ ಸಂಬಂಧೋ ಭವತಿ ॥

ಮೇಲೆ ಹೇಳಿದ ಪಕ್ಷತ್ರಯ ಅಧಿಕಾರಿ ಭೇದವನ್ನು ಆಶ್ರಯಿಸಿ ಶೃತಿಯಿಂದ ಅಧಿಕಾರವನ್ನಾಶ್ರಯಿಸಿ ಶೃತಿಯಿಂದ ಏಕವಾಕ್ಯ ನಿತ್ಯತ್ವವು ಸಿದ್ಧವು. ಅಧಿಕಾರಿಭೇದ ದಿಂದ ವ್ಯವಸ್ಥೆಯು ಅನೇಕ ಪ್ರಕಾರವಲ್ಲ ಜೈಮಿನಿ ಮತವು ಮನುಷ್ಯರಿಗೆ ವ್ಯಾಸ ಮತವು ದೇವತೆಗಳಿಗೆ ಹೀಗೆ ವ್ಯವಸ್ಥೆಯು ಯುಕ್ತವು

ಸ್ತುತಿಯು ಜ್ಞಾನಿಗಳಿಗೆ ಸಾಮಾನ್ಯವಾಗಿ ಮಾತ್ರ ಜೈಮಿನಿಮತವು ಮನುಷ ಜ್ಞಾನಿಗಳಿಗೆ, ಎರಡನೆಯದು ದೇವತೆಗಳು ವಿಷಯವು, ಮೂರನೆಯದು ಶ್ರೇಷ್ಠಜ್ಞಾನಿ ಯಾದ ಚತುರ್ಮುಖ ಬ್ರಹ್ಮ ವಿಷಯವು ಮಾತ್ರ ಹೀಗೆ ತಿಳಿಯಬೇಕು

## ಸೂ॥ ಓಂ॥ ಅತ ಏವ ಚಾಗ್ನೀಂಧನಾದ್ಯನಪೇಕ್ಷಾ ಓಂ॥ 25

ಅತ ಏವ ಜ್ಞಾನಸ್ಯ ಮೋಕ್ಷದಾನೇನಾಗ್ನಿ ಹೊತ್ರಾದ್ಯಪೇಕ್ಷಾ ।

ಜ್ಞಾನಕ್ಕೆ ಮೋಕ್ಷಸಾಧನಗಳಲ್ಲಿ ಅಗ್ನಿಹೋಮಾದಿಗಳ ಅಪೇಕ್ಷೆಯಲ್ಲಿ ಕಾಮಾ ಚಾರಿಗಳಿಗೂ ಮೋಕ್ಷವು ಪ್ರಮಾಣಸಿದ್ಧವು.

ಅಜ್ಞಾನಾಂ ಜ್ಞಾನದೇ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚಸಃ ।
ವಿಷ್ಣು ರ್ಹಿ ದಾತಾ ಮೋಕ್ಷಸ್ಯ । ಮೋಕ್ಷದಸ್ತು ಜನಾರ್ದನಃ ॥

ಭಗವಂತನನ್ನು ಜ್ಞಾನಪೂರ್ಣವಾಗಿ ತಿಳಿದಲ್ಲಿ ಮೋಕ್ಷದಾರನು ಜ್ಞಾನದಾತನು ಅವನೇ.

19 ಬ್ರಹ್ಮತರ್ಕೇ ಚ

**ಏಷಾಂ ಜ್ಞಾನಂ ಸಮುತ್ಪನ್ನಂ ತೇಷಾಂ ಮೋಕ್ಷೋ ವಿನಿಶ್ಚಿತಃ ।**
**ಶುಭಕರ್ಮಭಿರಾಧಿಕ್ಯಂ ವಿಪರೀತೈರ್ವಿಪರ್ಯಯಃ ।**
**ಸ್ವೇಚ್ಛಾನು ವೃತ್ತ್ಯೈವ ಭವೇದ್ಬ್ರಹ್ಮಣಃ ಪ್ರಾಯಶಸ್ತಥಾ ।**
**ದೇವಾನಾರೂಪ ಸರ್ವೇಷಾಂ ವಿಶೇಷಾದುತ್ತರೋತ್ತರಂ ॥**

ಯಾರಿಗೆ ಪರಮಾತ್ಮನಲ್ಲ ಜ್ಞಾನವಿದೆಯೋ ಅವರಿಗೆ ಮೋಕ್ಷವು ಸಿದ್ಧವು. ಶುಭಕರ್ಮಗಳಿಂನಾಧಿಕವು ವಿಕರ್ಮಗಳಿಂದ ಸುಖಹ್ರಾಸವು. ಸ್ವೇಚ್ಛಾವೃತ್ತಿಯು ಪ್ರಾಯಶಃ ಚತುರ್ಮುಖ ಬ್ರಹ್ಮನಿಗೆ ಮಾತ್ರ. ದೇವತೆಗಳಲ್ಲಿ ತಾರತಮ್ಯಾನುಗುಣ ವಾಗಿ ಸ್ವೇಚ್ಛಾ ಪ್ರವೃತ್ತಿಯು ಯುಕ್ತವೇ

## ಸೂ|| ಓಂ|| ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್ ಓಂ|| 26

ಪ್ರಯಾಣ ಬೆಳೆಸುವವನಿಗೆ ಕುದುರೆಯ ಸಹಾಯವು ತನ್ನ ಇಷ್ಟಸ್ಥಳ ಪ್ರಾಪ್ತಿಯವರೆಗೆ. ಅನಂತರ ಆವಶ್ಯಕತೆಯಿಲ್ಲ ಹಾಗೆಯೇ ಸರ್ವಧರ್ಮಗಳೂ ಮೋಕ್ಷಸಾಧನ ಜ್ಞಾನೋತ್ಪತ್ತಿಮಾತ್ರವೇ ಆದ್ದರಿಂದ ಜ್ಞಾನಾರ್ಜನಾ ನಂತರದಲ್ಲಿ ಧರ್ಮಾನುಷ್ಠಾನದ ಆವಶ್ಯಕತೆ ಇಲ್ಲವೆಂದು ವಿವಿದಿಷಂತಿಯಜ್ಞೇನ ಎಂಬ ಶೃತಿ ಲಭ್ಯವು ಶೃಸ್ಯರ್ಥವು ಶ್ರೇಷ್ಠ ಗುಣವಂತನಾದ ಶ್ರೀ ಪರಮಾತ್ಮನನ್ನು ತಿಳಿಯಲು ಮುನಿಗಳು ವೇದಾಧ್ಯಯನ ಯಜ್ಞಾದಿಗಳನ್ನು ಆಚರಿಸುವರು ಎಂದು –

21 **ಸರ್ವಧರ್ಮಾಪೇಕ್ಷಾ ಚ ಜ್ಞಾನ ಸ್ಯೋತ್ಪತ್ತೌ ವಿವಿದಿಷಂತಿ ಯಜ್ಞೇನ ದಾನೇನ ತಪಸಾ ನಾಶಕೇನೇತಿ ಶ್ರುತೇಃ। (ಬೃ-6-4-22) ಇತಿ ಶೃತಿಯು ಹೇಳುವದು ಯಥಾಗತಿನಿಷ್ಪತ್ಯರ್ಥಮಶ್ವಾದಯೋಪೇಕ್ಷ್ಯಂತೇ ನ ನಿಷ್ಪನ್ನ ಗತೇರ್ಗ್ರಾಮಾದಿಪ್ರಾಪ್ತೌ ||**

ತಾನು ಹೋಗುವ ಸ್ಥಳ ಪರ್ಯಂತ ಅಶ್ವಾದಿಗಳ ಅಪೇಕ್ಷಯು ನಂತರ ಅಲ್ಲ

## ಸೂ|| ಓಂ|| ಶಮದಮಾದ್ಯುಪೇತಃ ಸ್ಯಾತ್ತಥಾಪಿ ತು ತದ್ವಿಧೇಸ್ತದಂಗ ತಯಾ ತೇಷಾಮವಶ್ಯಾನುಷ್ಠೇಯತ್ವಾತ್ ಓಂ|| 27

ಯದ್ಯಪಿ ಜ್ಞಾನೇ ನೈವ ಮೋಕ್ಷೋ ನಿಯತಸ್ತಥಾಪಿ ಜ್ಞಾನೀ ಶಮದಮಾದ್ಯು ಪೇತಃ ಸ್ಯಾತ್ ।

ಜ್ಞಾನದಿಂದಲೇ ಮೋಕ್ಷ ಪ್ರಾಪ್ತಿಯು ಆದರೂ ಜ್ಞಾನಿಯು ಶಮದಮಾದಿಗಳುಳ್ಳವನೇ ಇರಬೇಕೆಂದು ನಿಯಮವು ಮಾಠರ ಶೃತಿಯಲ್ಲಿ ಆಚಾರ್ಯವಾನ್ ಜ್ಞಾನಿಗಳಿಗೆ ಶಮದಮಾದಿ ವಿಧಿಯು ವ್ಯರ್ಥವಲ್ಲ ಜ್ಞಾನಾಂಗವಾಗಿ ಉಪಕಾರಕವಾಗುವುದರಿಂದ ಅವನ ಅನುಷ್ಠೆಯು ಪೂರ್ಣ ಫಲದಾಯಕವು ಎಂಬ ಸೂಚನೆಯು

23 **ಆಚಾರ್ಯದ್ವಿದ್ಯಾಮವಾಪ್ಯೈತಮಾತ್ಮಾನಮಭಿಪಶ್ಯನ್ ಶಾಂತೋ ಭವೇದ್ದಾಂತೋಽಭವೇದನುಕೂಲೋ ಭವೇದಾಚಾರ್ಯಂ ಪರಿಚರೇತ್ಪರಿಚರೇದಾಚಾರ್ಯಮಿತಿ ಮಾಠರ ಶ್ರುತೌ ಜ್ಞಾನಿನೋಽಪಿ ತದ್ವಿಧೇಃ ॥**

ಜ್ಞಾನಿಗಳಿಗೂ ಶಮದಮಾದಿಗಳ ವಿಧಿಯು ಆಚಾರ್ಯರಿಂದ ಉಪದೇಶಪೂರ್ವಕ ಪರೋಕ್ಷಜ್ಞಾನವನ್ನು ಹೊಂದಿ ಹೃದ್ಗತ ಪರಮಾತ್ಮನನ್ನು ನೋಡಿ ಭಗವನ್ನಿಷ್ಠೆಯಿಂದಲೂ (ಶಾಂತಃ) ಇಂದ್ರಿಯನಿಗ್ರಹದಿಂದಲೂ (ದಾಂತಃ) ಸಜ್ಜನರಿಗೆ ಅನುಕೂಲ ಸೇವೆ ಮಾಡಬೇಕು ಎಂದು ಪುನರುಕ್ತಿಯು.

24 **ಬ್ರಾಹ್ಮೀಂ ವಾವ ತ ಉಪನಿಷದಮಬ್ರೂಮೇತಿ ತಸ್ಯೈ ತಪೋ ದಮಃ ಕರ್ಮೇತಿ ಪ್ರತಿಷ್ಠಾ ವೇದಾಃ ಸರ್ವಾಂಗಾನಿ ಸತ್ಯಮಾಯತನಂ ಯೋ ವಾ ಏತಾಮುಪನಿಷದಮೇವಂ ವೇದೇತಿ (ಕೇನ 4-7-8-9) ಇತಿ ಜ್ಞಾನಾಂಗತಯಾ ಕೇಷಾಮವಶ್ಯಾನುಷ್ಠೇಯತ್ವಾತ್ ।**

ಜ್ಞಾನ ಪ್ರತಿಷ್ಠಾಪಕ ನಿಮಿತ್ತದಿಂದ ಜ್ಞಾನೋತ್ತರಕಾಲ ಶಮದಮಾದಿಗಳು ಜ್ಞಾನ ವೃದ್ಧ್ಯರ್ಥವು ಅವಶ್ಯ ಅನುಷ್ಠೇಯವು ವ್ಯರ್ಥವಲ್ಲ ಉಮಾಪತಿಯಿಂದ ಚತುರ್ಮುಖಬ್ರಹ್ಮನು ಉಪದೇಶೇದಂಭೋಽಭ್ರೂಹಿ ಎಂದುಹೇಳಲ್ಪಟ್ಟು ಉತ್ತರವಾಗಿ ಹೇಳಿದನು. ಹೇ ಉಮಾಪತಿಯೇ ನಿನಗೆ ಪರಬ್ರಹ್ಮಸ್ವರೂಪವನ್ನು ಸಂಶಯವಿಲ್ಲದಂತೆ ಹೇಳುವೆನು ಆ ವಿದ್ಯೆಯಲ್ಲ ತಪಃ ಕೃಚ್ಛ್ರ ಚಾಂದ್ರಾಯಣಾದಿ ವ್ರತಾ ಚರಣವು ಶಾಸ್ತ್ರಪ್ರವಚನವು ಇಂದ್ರಿಯನಿಗ್ರಹವು. ವರ್ಣಾಶ್ರಮೋಚಿತ ಕರ್ಮವು ಇವುಗಳು ಸರ್ವವಿದ್ಯಾಪ್ರತಿಷ್ಠಿತಗಳು ಎಂದು ಜ್ಞಾನಾಂಗವಾಗಿ ಶಮದಮಾದಿಗಳ ಅನುಷ್ಠಾನದ ಅವಶ್ಯಕತೆಯನ್ನು ಹೇಳುವುದರಿಂದಲೂ ಯುಕ್ತವೆ.

25 **ಯಸ್ಯ ಜ್ಞಾನಂ ತಸ್ಯ ಮೋಕ್ಷ ? ತಿ ನಾತ್ರ ವಿಚಾರಣಾ ।
ತಸ್ಯ ಶಾಂತ್ಯಾದಯೋಽಂಗಾನಿ ತಸ್ಮಾತ್ತೇಷಾಮನುಷ್ಠಿತಿಃ ।**

अवश्यकरणीयो स्यान्नान्यथाल्पफलं भवेत् इति

चाग्नेयो ।

कुशब्दः पूर्णफलार्थत्वं सूचयति ॥

ಶಮದಮಾದಿಗಳು ಜ್ಞಾನಾಂಗಗಳಾಗಿ ಸಂಪೂರ್ಣ ಮೋಕ್ಷ ಸಾಧನೆಗೆ ಉಪಯೋಗವು.

## ಸೂ॥ ಓಂ॥ ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್ ಓಂ॥ 28

ಜ್ಞಾನಿಗಳಿಗೆ ನಿಷಿದ್ಧ ಅನಿಷಿದ್ಧ ಸರ್ವಭೂಷಣವು ಅನುಜ್ಞಾನ ಶೃತಿಯಲ್ಲಿ ಸರ್ವಾನ್ನಾನುಮತಿಯು ಹೇಳಿದೆ. ಇದು ಪ್ರಾಣಾಪತ್ತಿನ ಕಾಲದಲ್ಲಿಯೇ ಸರ್ವಕಾಲಿಕವಲ್ಲ. ಶೃತಿಯಲ್ಲಿ ಹಾಗೆ ಹೇಳಿದೆ.

ಯದಿ ಹ ವಾ ಅಪ್ಯೇವಂ ವಿನ್ನಿ ಖಿಲಂ ಭಕ್ಷಯೀತ್ಯೈವಮೇವ ಸ ಭವತಿ ಇತಿ
ಸರ್ವಾನ್ನಾನುಮತಿಃ ಪ್ರಾಣಾತ್ಯಯ ವಿಷಯಾ ।
ನ ವಾ ಅಜೀವಿಷ್ಯಮಿಮಾನಖಾದನ್ನಿತಿ ಹೋವಾಚ ಕಾಮೋ ಮ ಉದಪಾನಂ
(ಛಾ-2-10-4) ಇತಿ ದರ್ಶನಾತ್ ॥

ಸದಸತ್ಪ್ರವೃತ್ತಿಯಲ್ಲಿ ಜ್ಞಾನಿಗಳಿಗೆ ಪ್ರವೃತ್ತಿಯಿದ್ದರೂ ಸರ್ವಾನ್ನ ಭಕ್ಷಣವು ಹೇಯವಾದ್ದರಿಂದ ಸಮರ್ಥನವು ಹೇಗೆಂದರೆ ನಿಷಿದ್ಧ ಅನಿಷಿದ್ಧ ಸರ್ವಭಕ್ಷಣಶೃತಿಯು ಪ್ರಾಣಾತ್ಯಯ ವಿಷಯವು ಜ್ಞಾನಿಯು ಪ್ರಾಣಾಪಾಯ ಕಾಲದಲ್ಲಿ ಯಾವನ್ನವಾದರೂ ತಿನ್ನಬಹುದು. ಮೋಕ್ಷಹಾನಿಯಿಲ್ಲವೆಂದು ಶೃತ್ಯರ್ಥವು. ಉಷಸ್ತಿನಾಮ ಋಷಿಯು ದುರ್ಭಿಕ್ಷಕಾಲದಲ್ಲಿ ತನ್ನ ಪತ್ನಿಸಹಿತ ಕುತ್ಸಿತಾನ್ನವನ್ನು ತಿನ್ನುವವನ ಹತ್ತಿರ ಭಿಕ್ಷೆ ಬೇಡಿದನು. ಅದಕ್ಕೆ ಆತನು ಈ ಅನ್ನವು ಉಚ್ಛಿಷ್ಟವು. ಸಾಧುವಲ್ಲವೆಂದು ಹೇಳಲು ಈ ಅನ್ನವನ್ನು ಸ್ವೀಕರಿಸದಿದಲ್ಲಿ ತನ್ನ ಪ್ರಾಣಹಾನಿಯಾಗುವುದರಿಂದ ದೋಷವಿಲ್ಲವೆಂದು ಹೇಳಿ ಅದನ್ನೇ ಸ್ವೀಕರಿಸುವನು. ಎಂದು ಆಖ್ಯೆಯು

## ಸೂ|| ಓಂ|| ಅಬಾಧಾಚ್ಚ ಓಂ|| 29

ಅನ್ಯಾಯಚರಣಾಭಾವೇ ನ ಹಿ ಜ್ಞಾನಸ್ಯ ಬಾಧನಂ ।
ಅತೋ ವಿದ್ವಾನಪಿ ನ್ಯಾಯ್ಯಂ ವರ್ತೇತೋತ್ಕರ್ಷಸಿದ್ಧಯ || ಇತಿ ಬ್ರಹ್ಮತರ್ಕೆ

ಜ್ಞಾನಿಗಳಿಗೆ ನಿಷಿದ್ಧಕರಣವು ಬಾಧಕವಲ್ಲದಿದ್ದರೂ ಮಾಡಬಾರದು. ಅನ್ಯಾಯಾಚರಣೆಯಿಂದ ಜ್ಞಾನಕ್ಕೆಬಾಧವಿಲ್ಲದಿದ್ದರೂ ವಿದ್ವಾಂಸನಾದವನು ಶ್ರೇಷ್ಟ ಸಿದ್ಧಿಗಾಗಿ ನ್ಯಾಯದಿಂದಲೇ ಇರಬೇಕು

## ಸೂ|| ಓಂ|| ಅಪಿಸ್ಮರ್ಯತೇ ಓಂ|| 30

ಅತೀತಾನಾಗತಜ್ಞಾನೀ ತ್ರೈಲೋಕ್ಯೋದ್ಧರಣಕ್ಷಮಃ ।
ಏತಾದೃಶೋಽಪಿ ನಾಚಾರಂ ಶ್ರೌತಂ ಸ್ಮಾರ್ತಂ ಪರಿತ್ಯಜೇತ್ || ಇತಿ
ಹರಿವಂಶೇಷು

ಸ್ಮೃತಿಯಲ್ಲಿಯೂ ನಿಷಿದ್ಧಕರ್ಮವನ್ನು ಮಾಡಬಾರದು ಜ್ಞಾನಿಗಳೂ ಕೂಡ

ಹಿಂದೆ ಮುಂದಿನ ಸರ್ವವನ್ನು ತಿಳಿದಿರುವ ಜ್ಞಾನಿಯು ಮೂರು ಲೋಕೋದ್ಧಾರ ಶಕ್ತಿಯುಳ್ಳವನಾದರೂ ಶೃತಿಯು ಸ್ಮೃತಿಯುಕ್ತ ಆಚಾರಗಳನ್ನು ಸತ್ಕರ್ಮಗಳನ್ನು ಮಾಡಲೇಬೇಕು. ನಿಷಿದ್ಧರನ್ನು ತ್ಯಜಿಸಬೇಕು.

## ಸೂ|| ಓಂ|| ಶಬ್ದಶ್ಚಾತೋ ಕಾಮಚಾರೇ ಓಂ|| 31

ಕಾಮಾಚಾರ ನಿಷಿದ್ಧವಿಷಯಗಳಲ್ಲಿ ಕೌಂಡಿನ್ಯ ಶೃತಿಯು ಸ ಯ ಏತದೇವಂತ್ ಎಂದು ಜ್ಞಾನಿಗಳಿಗೆ ನಿಷೇಧವು ಹೇಳಿದೆ ಯಾವ ಅಧಿಕಾರಿಯು ಬ್ರಹ್ಮನನ್ನು ಯುಕ್ತ ಗುಣಗಳಿಂದ ಶ್ರವಣದಿಂದ ತಿಳಿದು ಧ್ಯಾನಮಾಡಿ ಬ್ರಹ್ಮನನ್ನು ಕಂಡಿರುವನೋ ಅಂಥವನು ಕಾಮಾಚಾರಿಯಾಗಬಾರದು. ಕಾಮವನ್ನು ಯತೇಚ್ಛವಾಗಿ ಭಜಿಸಬಾರದು. ನಿಷಿದ್ಧರಾಗಾದಿ ಸರ್ವವನ್ನು ಅನುಸರಿಸಬಾರದು.

ಸ ಯ ಏತದೇವಂ ವಿದೇವಂ ಮನಸ್ವಾನ ಏವಂ ಪಶ್ಯನ್ನಕಾಮಚಲಿತಂ ಚರೇತ್

ಕಾಮಂ ಭಕ್ಷಯೀತ ನ ಕಾಮಮನುವರ್ತೇ ॥ರ್ತ ಇತಿ ಕೌಂಡಿನ್ಯಶ್ರುತೌ

30 ಅತ ಇತ್ಯಲ್ಪ ಫಲತ್ವಂ ಸೂಚಯತಿ ।
ನ ನಿಷಿದ್ಧಾನಿ ವರ್ತೇತ ಪೂರ್ಣಜ್ಞಾನಫಲೇಚ್ಛಯಾ ॥
ಇತಿ ಪಾದ್ಮೇ

ಹೀಗೆ ಕಾಮಾಚಾರದಿಂದ ಅಲ್ಪಫಲವು ಸೂಚಿತವು. ಪಾದ್ಮದಲ್ಲಿ ಜ್ಞಾನಿಯು ಪೂರ್ಣಫಲಾಪೇಕ್ಷೆಯಿಂದ ನಿಷಿದ್ಧಕರ್ಮಗಳಲ್ಲಿ ಪ್ರವರ್ತಿಸಬಾರದು ಎಂದು ಹೇಳಿದೆ.

## ಸೂ॥ ಓಂ॥ ವಿಹಿತತ್ವಾಚ್ಚಾಶ್ರಮಕರ್ಮಾಪಿ ಓಂ॥ 32

ನ ಕೇವಲಂ ನಿಷಿದ್ಧಾಕರಣೇನ ಪೂರ್ಯತೇ ।
ಕರ್ತವ್ಯಂ ಚ ವರ್ಣಾಶ್ರಮ ವಿಹಿತಂ ಕರ್ಮ ॥

ಜ್ಞಾನಿಗಳಿಗೆ ನಿಷಿದ್ಧ ಕರ್ಮಾಚರಣವು ನಿಷೇಧ ಮಾತ್ರವಲ್ಲ ವರ್ಣಾಶ್ರಮೋಚಿತ ಸರ್ವ ಕರ್ಮಗಳನ್ನು ಪೂರ್ಣಫಲಪ್ರಾಪ್ತಿಗಾಗಿ ಅನುಷ್ಠಾನ ಮಾಡಲೇಬೇಕು. ಪಶ್ಯನ್ನಪಿ ಎಂದು ಕೌಷಾರವ ಶ್ರುತಿಯು ವಿಧಿಸುವುದು

32 ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ಕರ್ಮ ವಿಚಾರಯನ್ ।
ಯದಾತ್ಮನಃ ಸುನಿಯತಮಾನಂದೋತ್ಕರ್ಷಮಾಪ್ನುಯಾತ್
ಇತಿ ಕೌಷಾರವಶ್ರುತೌ ವಿಹಿತತ್ವಾಚ್ಚ ।
ಅಪಿಶಬ್ದೋ ವರ್ಣಧರ್ಮ ಸಮುಚ್ಚಯಾರ್ಥಂ ॥

ಪರಮಾತ್ಮನ ದರ್ಶನಾನಂತರವೂ ವರ್ಣಾಶ್ರಮ ಧರ್ಮಗಳನ್ನು ಅನುಷ್ಠಾನದಿಂದ ಆನಂದೋತ್ಕರ್ಷವನ್ನು ಹೊಂದುವನು (ಸ್ವಯೋಗ್ಯತೆಗೆ ತಕ್ಕಂತೆ)

## ಸೂ॥ ಓಂ॥ ಸಹಕಾರಿತ್ವೇನ ಚ ಓಂ॥ 33

ಯಥಾ ರಾಜ್ಞಃ ಸಹ ಕಾರ್ಯೇವ ಮಂತ್ರೀ ತಥಾಪ್ಯಕೃತೇ ತಂ ಕ್ಷಿತಿಪಃ ಕಾರ್ಯಮನ್ವಿಚ್ಛೇತ್ ।

ಏವಂ ಜ್ಞಾನಂ ಕರ್ಮ ವಿನಾಪಿ ಕಾರ್ಯಂ ಸಹಾಯಭೂತಂ ನ ವಿಚಾರೇ
ಕುತಶ್ಚಿತ್ ॥ ಇತಿ ಕರ್ಮಣಃ ಶ್ರುತೌ ಸಹಕಾರಿತ್ವೋಕ್ತೇಶ್ಚ ॥

ಜ್ಞಾನಿಗಳಿಂದ ಸಂಪೂರ್ಣ ಫಲಸಿದ್ಧಿಗೆ ಸತ್ಕರ್ಮಗಳನ್ನು ಮಾಡಿಯೇ ತೀರ ಬೇಕು. ಯಥಾರಾಜ್ಞಾ ಎಂದು ಶೃತಿಯಲ್ಲಿ ಮೋಕ್ಷ ಫಲಾತಿಶಯಕರ್ಮಗಳಿಗೆ ಜ್ಞಾನ ಸಹಕಾರವು.

ಹೇಗೆ ರಾಜನು ಮಂತ್ರಿಯನ್ನು ಸಲಹೆ ಕೇಳದೆಯೇ ರಾಜಕಾರ್ಯವನ್ನು ಮಾಡಲು ಸಾಧ್ಯವಾದರೂ ಮಂತ್ರಿ ಸಲಹೆಯನ್ನು ಕೇಳುವುದು ನ್ಯಾಯವೋ ಹಾಗೆಯೇ ಕರ್ಮಗಳಿಗೆ ಸಂಪೂರ್ಣ ಫಲಸಿದ್ಧಿಗೋಸ್ಕರ ಜ್ಞಾನದಸಹಕಾರಿತ್ವವು ಯುಕ್ತವು

34 **ಜ್ಞಾನಾನ್ಮೋಕ್ಷೋ ಭವತ್ಯೇವ ಸರ್ವಾಕಾರ್ಯಾಕೃತೋಽಪಿ ತು**
**ಆನಂದೋ ಹ್ರಸತೇಽಕಾರ್ಯಾಚ್ಛುಭಂ ಕೃತ್ವಾ ತು ವರ್ಧತೇ ॥**
**ಇತಿ ಬ್ರಹ್ಮಾಂಡೇ**

ಜ್ಞಾನಿಯು ಸರ್ವಾಕಾರ್ಯಮಾಡಿದರೂ ಮೋಕ್ಷವು ಸಿದ್ಧವೇ ಆದರೂ ಆ ಅ ಕಾರ್ಯದಿಂದ ಆನಂದಹ್ರಾಸವೂ ಸೂಕ್ತಕಾರ್ಯದಿಂದ ಆನಂದಾತಿಶಯವೂ ಆಗುವುದರಿಂದ ಜ್ಞಾನಿಯು ಸೂಕ್ತ ಕಾರ್ಯವನ್ನು ಮಾಡಿ ಅಕಾರ್ಯವನ್ನು ಬಿಡಬೇಕು

35 **ಸರ್ವದುಃಖನಿವೃತ್ತಿಶ್ಚ ಜ್ಞಾನಿನೋ ನಿಶ್ಚಿತೈವ ಹಿ ।**
**ಉಪಾಸಯಾ ಕರ್ಮ ಭಿಶ್ಚ ಭಕ್ತ್ಯಾಚಾನಂದ ಚಿತ್ರತಾ ॥ ಇತಿ**
**ಬೃಹತ್ತರ್ಕೇ**

ಜ್ಞಾನಿಗಳಿಗೆ ಸರ್ವದುಃಖನಿವೃತ್ತಿಯು ಸಿದ್ಧವಾದರೂ ಕರ್ಮ ಮತ್ತು ಸೂಕ್ತೋಪಾಸನೆಯಿಂದ ಆನಂದಾಧಿಕ್ಯ ವೈಚಿತ್ರ್ಯವು.

36 **ಧರ್ಮಸ್ಸ್ವರೂಪ ಚಿತ್ರತ್ವಾದ್ವ್ಯೋಯೋದೇವ ಮನೋಗತಃ ।**
**ಸ ಏವ ಧರ್ಮೋ ವಿಜ್ಞೇಯೋ ನ ಹ್ಯೇತೇ ಲೋಕ ಸಂಮಿತಾ ॥**
**ಇತಿ ಪಾದ್ಮೇ**

ಧರ್ಮ ಸ್ವರೂಪವು ಚಿತ್ರ ವಿಚಿತ್ರವು. ಪರಮಾತ್ಮನ ಮನೋಗತಿಯೇ ಧರ್ಮ

ವೆಂದು ತಿಳಿಯಬೇಕು, ಲೋಕ ಸಮ್ಮತವಾದುದಲ್ಲ ಎಂದು ಪಾದ್ಮವಾಕ್ಯವು.

ಇತಿ ಸ್ಮೃತ್ಯಧಿಕರಣಂ

## - ಉಭಯಲಿಂಗಾಧಿಕರಣಂ -

ಈ ಅಧಿಕರಣದಲ್ಲಿ ಬ್ರಹ್ಮಜ್ಞಾನವು ಸೂಕ್ತ ಅಧಿಕಾರಿವರ್ಗದಿಂದ ಮಾತ್ರ ಪ್ರಾಪ್ಯವು ಎಂದು ಹೇಳಲ್ಪಡುತ್ತದೆ ವೇದಗಳಲ್ಲಿ ಅನಧಿಕಾರಿಗಳಿಗೂ ಅವೈಷ್ಣವರುಗಳಿಗೂ ವೇದಪ್ರಾಪ್ತಿಯು ಕಾಣುವುದರಿಂದ ಅನಧಿಕಾರಿಗಳಿಗೂ ಮಹಾ ಪ್ರಯತ್ನದಿಂದ ಜ್ಞಾನಪ್ರಾಪ್ತಿಯು ಸಾಧ್ಯವು ಎಂದು ಪೂರ್ವಪಕ್ಷವು.

## ಸೂ|| ಓಂ|| ಸರ್ವಥಾಪಿ ತು ತ ಏವೋಭಯಲಿಂಗಾತ್ ಓಂ|| 34

ದೇಶಕಾಲ ಗುರೂಪದೇಶಾದ್ಯನೇಕ ಸಂಪತ್ತುಗಳಿದ್ದರೂ ಜ್ಞಾನಯೋಗ್ಯ ಜೀವರು ಜ್ಞಾನವನ್ನು ಹೊಂದುವರು. ಅಯೋಗ್ಯರು ಹೊಂದಲಾರರು.

ಸರ್ವಪ್ರಕಾರೇಣೋತ್ಸಾಹೇಪಿ ಯೇ ಜ್ಞಾನ ಯೋಗ್ಯಾಸ್ತ ಏವ ಜ್ಞಾನಂ ಪ್ರಾಪ್ನುವಂತಿ ನಾನ್ಯೇ ।

ಚತುರ್ಮುಖನೋಪದೇಶವು ಇಂದ್ರ ವಿರೋಚನರಿಗೆ ಒಂದೇ ಆದರೂ ಅವರುಗಳಿಗೆ ಸಮ್ಯಕ್‌ಜ್ಞಾನ, ವಿಪರೀತಜ್ಞಾನಗಳು ವಿಷಮ ರೀತಿಯಲ್ಲಿ ಪ್ರಾಪವಾಯಿತು. ಆದ್ದರಿಂದ ಅಧಿಕಾರಿ ಅನಧಿಕಾರಿಗಳಿಗೆ ಯ್ಯಾಗ ಹಾಗೂ ವಿಷಯರೀತಿ ಜ್ಞಾನಪ್ರಾಪ್ತಿಯೇ ಹೊರೆತು ಒಂದೇ ರೀತಿಯಲ್ಲ.

2 ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘಿತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯ

ಸ ವಿಜಿಜ್ಞಾಸಿತವ್ಯ (ಛಾ 8-7 1) ಇತಿ ಶ್ರುತ್ಯಾಽಽಚಾರ್ಯೋಪ
ದೇಶಸಾಮ್ಯೇಪಿ ವಿರೋಚನೋ ವಿಪರೀತಜ್ಞಾನಮಾಪೇಂದ್ರಃ
ಸಂಮ್ಯಗ್ಜ್ಞಾನಮಿತ್ಯುಭಯವಿಧಲಿಂಗಾತ್ ॥

ಬ್ರಹ್ಮದೇವರೋಪದೇಶವು ಮೇಲಿನ ಶೃತಿಯಂತೆ ಯ ಆತ್ಮಾ ಸವಿಜಿಜ್ಞಾದಿತವ್ಯ ಎಂಬುದಾಗಿ ಒಂದೇವಾಕ್ಯವಾದರೂ (ಸಮನಾಗಿ ಉಪದೇಶವು) ವಿರೋಚನನು ಅಸುರನಾಗಿ ಜ್ಞಾನಾರ್ಜನೆಗೆ ಅಯೋಗ್ಯನಾದ್ದರಿಂದ ಕಣ್ಣಿನಲ್ಲಿ ಕಾಣುವ ಪ್ರತಿ ಬಿಂಬವೇ (ಪಾಪೆ) ಅಪಹತ ಪಾಪ್ಮತ್ವಾದಿ ಗುಣೋಪಲಕ್ಷಿತ ಶ್ರೀ ಪರಮಾತ್ಮನೆಂದು ವಿಪರೀತಜ್ಞಾನವನ್ನು ಹೊಂದುವನು ಜ್ಞಾನಾಧಿಕಾರಿಯಾದ ಇಂದ್ರದೇವನಾದರೋ ಸಮ್ಯಜ್ಞಾನವಾದ ಕಣ್ಣಿನಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನನ್ನು ತಿಳಿವನು .

ಇಂದ್ರ ವಿರೋಚನರಿಬ್ಬರೂ 32 ಸಹಸ್ರ ಸಂವತ್ಸರಗಳೂ ಶಿಷ್ಟಬ್ರಹ್ಮಚರ್ಯ ವನ್ನೂ ಆಚರಿಸುತ್ತಾ ತಪಸ್ಸಿನಿಂದ ಬ್ರಹ್ಮನನ್ನು ಪ್ರತ್ಯಕ್ಷೀಕರಿಸಿಕೊಂಡನು ಅವರ ಗಳು ಬ್ರಹ್ಮಜ್ಞಾನವನ್ನು ಯಾಚಿಸಲು ಇಬ್ಬರಿಗೂ ಸಮನಾಗಿ ಮೇಲಿನ ಶೃತ್ಯುಪದೇಶ ವನ್ನು ಮಾಡಿದರು ಆದರೆ ಅವರು ಸಮ್ಯಜ್ಞಾನ ವಿಪರೀತಜ್ಞಾನಗಳನ್ನು ಕ್ರಮವಾಗಿ ಯೋಗ್ಯತಾನುಸಾರ ಹೊಂದಿದನು ಆದ್ದರಿಂದ ಜ್ಞಾನಾರ್ಜನೆಯು ಯೋಗ್ಯತಾನು ಸಾರವೇ ವಿಶೇಷ ಪ್ರಯತ್ನಾದಿಗಳೂ ಕಾರಣವಲ್ಲ.

## ಸೂ॥ ಓಂ॥ ಅನಭಿಭವಂ ಚ ದರ್ಶಯತಿ ಓಂ॥ 35

ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತ್ಯಾಸುರೀಮೇವ ಚಾಸುರಾನ್ನೈತ
ಯೋರಭಿಭವಃ ಕದಾಚಿತ್ಸ್ವಭಾವಃ ಏವ ಹ್ಯವಶಿಷ್ಯತ ॥ ಇತಿ ಸ್ವಭಾವಾನ
ಭಿಭವಂ ಚ ದರ್ಶಯತಿ

ಬಹಳ ಪ್ರಯತ್ನದಿಂದ ಅಯೋಗ್ಯತೆಯನ್ನು ಕಳೆಯಬಹುದೆಂಬ ಯುಕ್ತಿ ಯಿಂದ ಅಯೋಗ್ಯರೂ ಸಮ್ಯಜ್ಞಾನವನ್ನು ಹೊಂದಲು ಸಾಧ್ಯವು ಎಂದು ಪೂರ್ವ ಪಕ್ಷವು. ವಿಶ್ವಮಿತ್ರಋಷಿಯು ಶ್ರೇಷ್ಠಪ್ರಯತ್ನದಿಂದ ಬ್ರಹ್ಮತ್ವವನ್ನು ಸಂಪಾದಿಸಿದ ನಲ್ಲವೆ. ಎಂದರೆ ಜೀವರುಗಳ ಸ್ವಭಾವವು ಯಾವಾಗಲೂ ಯಾವ ಕಾರಣದಿಂದಲೂ ವ್ಯತ್ಯಸ್ತವಾಗುವುದಿಲ್ಲ. ದೇವತೆಗಳಿಗೆ ದೈವೀಸಂಪ್ರವೃತ್ತಿನಿಂದ ಸಮ್ಯಜ್ಞಾನವು

ಅಸುರರಿಗೆ ಅವರ ಸ್ವಭಾವ ಸ್ವದಮಿಥ್ಯಾಜ್ಞಾನಪ್ರಾಪ್ತಿಯೇ ಬೇರೆ ಅಲ್ಲ.

## ಸೂ॥ ಓಂ॥ ಅಂತರಾ ಚಾಪಿ ತು ತದ್ದೃಷ್ಟೇಃ ಓಂ ॥ 36

ಸಮ್ಯಗ್‌ಜ್ಞಾನವಿಪರೀತಜ್ಞಾನಯೋರಂತರಾಸ್ಥಿತಾನಾಮಪಿ ದೇವಾಸುರ ಭಾವಯೋರ್ದಾರ್ಢ್ಯದೃಷ್ಟೇಃ ॥

ಸಮ್ಯಜ್ಞಾನ ವಿಪರೀತಜ್ಞಾನಗಳ ಮಧ್ಯೆ ನಿತ್ಯಸಂಸಾರಿಜೀವರಿಗೂ ಮಿಶ್ರ ಸ್ವಭಾವಜ್ಞಾನಪ್ರಾಪ್ತಿಯು ಯೋಗ್ಯತ್ವ ಅಯೋಗ್ಯತ್ವ ಸ್ವಭಾವಾನುಸಾರ ಮಿಶ್ರ ಜ್ಞಾನವೇ ಸಾಧ್ಯವು ಸ್ಮೃತಿಯಲ್ಲಿ ಹಾಗೆ ಹೇಳುವುದು.

## ಸೂ॥ ಓಂ॥ ಅಸಿಕ್ಮಯರ್ಗತೇ ಓಂ॥ 37

ಅಸುರಾ ಆಸುರೇಣೈವ ಸ್ವಭಾವೇನ ಚ ಕರ್ಮಣಾ ।
ಜ್ಞಾನೇನ ವಿಪರೀತೇನ ತಮೋ ಯಾಂತಿ ವಿನಿಶ್ಚಯಾತ್ ।
ದೇವಾ ದೈವ ಸ್ವಭಾವೇನ ಕರ್ಮಣಾ ಚಾಪ್ಯಸಂಶಯಂ ।
ಸಂಮ್ಯಗ್ಜ್ಞಾನೇನ ಪರಮಾಂ ಗತಿಂ ಗಚ್ಛಂತಿ ವೈಷ್ಣವೀಂ ।
ನಾನಯೋರನ್ಯಥಾಭಾವಃ ಕದಾಚಿತ್ಕ್ವಾಪಿ ವಿದ್ಯತೇ ।
ಮಾನುಷಾಮಿಶ್ರಮತಯೋ ವಿಮಿಶ್ರಗತಯೋಽಪಿ ಚ ಇತಿ ಸ್ಕಾಂದೇ ॥

ಗೀತೆಯಲ್ಲಿ ಹೇಳಿರುವಂತೆ ದೇವದಾನವ ಮನಷ್ಯರಲ್ಲಿ ಅವರವರ ಯೋಗ್ಯತೆಗೆ ತಕ್ಕಂತೆ ಜ್ಞಾನ ಅಜ್ಞಾನ ಮಿಶ್ರಜ್ಞಾನಗಳ ಪ್ರಾಪ್ತಿಯು. ಅನ್ಯಥ ಅಲ್ಲ.

ಅಸುರರು ಅಸುರ ಸ್ವಭಾವದಿಂದ ಆಸುರೀ ಕರ್ಮಗಳನ್ನೇ ಮಾಡುತ್ತಾ ವಿಪರೀತ ಜ್ಞಾನವನ್ನು ಹೊಂದಿ ನಿಶ್ಚಯವಾಗಿಯೂ ತಮಸ್ಸನ್ನು ಹೊಂದುವರು. ದೇವತೆಗಳು ದೇವ ಸ್ವಭಾವದಿಂದ ಧರ್ಮಯುಕ್ತ ಕರ್ಮಗಳನ್ನೇ ಮಾಡುತ್ತಾ ಸುಜ್ಞಾನವನ್ನು ಹೊಂದಿ ಶ್ರೀ ವಿಷ್ಣುವಿನ ಪ್ರಸಾದದಿಂದ ಆತನ ಸ್ಥಾನವಾದ ಮೋಕ್ಷವನ್ನು ಹೊಂದು ವನು. ಇತರರಾದ ಮಧ್ಯಸ್ಥಮಾನವರು ಮಿಶ್ರಬುದ್ಧಿಯುಳ್ಳವರಾಗಿ ಮಿಶ್ರಕರ್ಮಾ ಚರಣೆಗಳಿಂದ ಮಿಶ್ರಫಲಪ್ರಾಪ್ತಿಯನ್ನೇ ಹೊಂದುವರು

ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿ ನೇನೀಯಮಾನಃ
ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶಇಂದ್ರೋ ಮನುಷ್ಯಾ
ನಿತಿ ವಿಶೇಷಾನುಗ್ರಹಂ ಚ ದರ್ಶಯತಿ ದೇವೇಷು ಪರಮೇಶ್ವರಸ್ಯ ॥
(ಋ-6-47-16)

ಮೇಲಿನಶ್ರುತಿಯಂತೆ ದೇವತೆಗಳಿಗೆ ಶ್ರೀ ಪರಮಾತ್ಮನ ವಿಶೇಷಾನುಗ್ರಹದಿಂದ ಸಮ್ಯಜ್ಞಾನವು ಮತ್ತು ಅದರ ಫಲ ಮುಕ್ತಿಪ್ರಾಪ್ತಿಯೂ ಮಿಕ್ಕವರಿಗೆ ಅಸಾಧ್ಯವು. ತನ್ನ ನಿಶ್ಚಯಾನುಸಾರ ತನ್ನ ಕಾರ್ಯವನ್ನು ಪೂರ್ತಿಮಾಡುವ ಶ್ರೀ ನರಸಿಂಹದೇವನಾದ ಪರಮೇಶ್ವರನು ಸರ್ವ ದುಷ್ಟಪ್ರಕೃತಿಯನ್ನು ದಮನಮಾಡಿ (ನರಕವನ್ನು ಹೊಂದಿಸಿ) ಅವರುಗಳ ವ್ಯತ್ಯಸ್ಥಸ್ವಭಾವವುಳ್ಳ ಸತ್ಯಸ್ಥರ ಸಂಸಾರ ಸಾಗರವನ್ನು ದಾಟಿಸಿ ತನ್ನ ನಿತ್ಯಸ್ಥಾನವಾದ ಮೋಕ್ಷವನ್ನು ಗಳಿಸಿಕೊಟ್ಟು ಯೋಗ್ಯತೆಗೆ ವ್ಯತ್ಯಸ್ಥವಾಗಿ ವರ್ಧಿಸಲು ಪ್ರಯತ್ನಿಸುವ ಮಧ್ಯಮ ಜೀವರನ್ನು ನಿತ್ಯ ಸಂಸಾರದಲ್ಲಿಯೇ ಇಟ್ಟು ಕರ್ಮಕರಣಗಳಿಂದ ಸ್ವರ್ಗ ನರಕಗಳ ಸಂಬಂಧವನ್ನು ಯೋಗ್ಯರೀತ್ಯಾ ಕೊಡುವನು.

7 ಅಸುರಾನ್ ದಮಯನ್ವಿಷ್ಣುಃ ಸ್ವಪದಂ ಚ ಸುರಾನ್ನಯನ್ ।
ಪುನಃ ಪುನರ್ಮಾನುಷಾಂಸ್ತು ಸೃತಾವಾವರ್ತಯತ್ಯಸೌ ಇತಿ
ಭವಿಷ್ಯತ್ಪರ್ವಣಿ ॥

ಶ್ರೀ ವಿಷ್ಣುವು ಅಸುರರನ್ನು ದಂಡನೆಮಾಡಿ ದೇವತೆಯನ್ನು ತನ್ನ ಪದದಲ್ಲಿ ಸೇರಿಸಿಕೊಂಡು ಮನುಷ್ಯರನ್ನು ಪುನಃ ಪುನಃ ಸಂಸಾರದಲ್ಲಿಯೇ ಇರಿಸುವನು.

## ಸೂ॥ ಓಂ॥ ಅಂತಸ್ತ್ವಿತರಜ್ಯಾಯಸೋ ಲಿಂಗಾಚ್ಚ ಓಂ॥ 39

ದೇವಭಾಗಾದಸುರ ಭಾಗವಿವ ಬಹುಲಃ ।
ತಸ್ಮಾನ್ನ ಜನತಾಮಿಯಾತ್ (ಬೃ 3-3-10) ಇತಿ ಲಿಂಗಾತ್ ।
ಚ ಶಬ್ದಾತ್ತತಃ ಕನೀಯಸಾ ಏವ ದೇವಾ ಜ್ಯಾಯಸಾ ಅಸುರಾಃ ॥
(ಬೃ 3 3 1) ಇತಿ ಶ್ರುತೇಶ್ಚ

ಅಸುರಭಾವಜೀವರು ಯಾವಾಗಲೂ ದೇವಭಾವಕ್ಕೆ ಹೆಚ್ಚಿನಸಂಖ್ಯೆಯುಳ್ಳವರೇ ಜೀವರಿಗಿಂತ .

9 **ಅಸುರಾಬಹುಲಾ ಯಸ್ಮಾತ್ತಸ್ಮಾನ್ನಜನತಾಮಿಯಾತ್ ॥ ಇತಿ ಚ ಬ್ರಾಹ್ಮೇ**

ಈ ಜಗತ್ತಿನಲ್ಲಿ ಅಸುರಸ್ವಭಾವಜನಗಳೇ ಜಾಸ್ತಿಯಾದ್ದರಿಂದ ಆ ಸ್ವಭಾವವು ಯಾವಾಗಲೂ ಬದಲಿಸಲಸಾಧ್ಯವಾದ್ದರಿಂದ ಯೋಗ್ಯ ಜೀವರು ಜನಸಂಘಗಳನ್ನು ಸೇರಬಾರದು

## ಸೂ.। ಓಂ॥ ತದ ಭೂತಸ್ಯ ತು ತದ್ಭಾವೋ ಜೈಮಿನೇರಪಿ ನಿಯಮಾ ತದ್ರೂಪಾಭಾವೇಭ್ಯಃ ಓಂ॥ 40

ಜೈಮಿನ್ಯಾಚಾರ್ಯಮತವೂ ಸ್ವಭಾವಕ್ಕೆ ಬೇರೆ ನಡವಳಿಕೆಗಳನ್ನು ಜೀವರುಗಳಲ್ಲಿ ನಿಷೇದಿಸುವುದು

ಅಸುರಜಾತೇರೇವಾಸುರತ್ವಂ ದೇವಜಾತೇರೇವ ದೇವತ್ವಂ ಜೈಮಿನೇರಪಿ ಸಿದ್ಧಮೇವ ।

ನಾಸುರಾ ದೈವೀಂ ನ ದೇವಾ ಅಸುರೀಂ ನ ಮನುಷ್ಯಾ ದೈವೀ ಮಾಸುರೀಂ ಚ ಗತಿಮೀಯುರಾತ್ಮೀಯಾಮೇವ ಜಾತಿಮನುಭವಂತಿ । ಇತಿ ನಿಯಮಶ್ರುತೇ ನಾಸುರಾಣಾಂ ದೈವಂ ರೂಪಂ ನ ದೇವಾನಾಮಾಸುರಂ ನ ಚೋಭಯಂ ಮನುಷ್ಯಾಣಾಂ ಯೋ ಯದ್ರೂಪಃ ಸ ತದ್ರೂಪೋ ನಿಸರ್ಗೋಽಹ್ಯೇಷ ಭವತಿ । ಇತ್ಯತದ್ರೂಪತ್ವಶ್ರುತೇ ః

ತಂ ಭೂತಿರಿತಿದೇವಾ ಉಪಾಸಾಂ ಚಕ್ರಿರೇ ತೇ ಬಭೂವುಸ್ತಸ್ಮಾದ್ಧಾಪ್ಯೇತರ್ಹಿಸುಪ್ತೋಃ ಭೂರ್ಭೂರಿತ್ಯೇವ ಪ್ರಶ್ವಸಿತ್ಯಸುರಾಸ್ತೇಹ ಪರಾಬಭೂವು ॥ (ಐ ಆ 2-1-8) ಇತಿ ದೇವಾ ಸುರಾಣಾಂ ಭಾವಾಭಾವಶ್ರುತೇಶ್ಚ

ಅಸುರರಿಗೆ ಅಸುರೀ ಸ್ವಭಾವವೂ ದೇವತೆಗಳಿಗೆ ದೇವತಾ ಸ್ವಭಾವವೂ ಸಿದ್ಧವು. ನಿಯಮಶ್ರುತಿಯು. ಅಸುರು ದೈವೀಭಾವವನ್ನೂ ದೇವತೆಗಳು ಅಸುರೀಭಾವವನ್ನು ಮತ್ತು ಮನುಷ್ಯರು ಈ ಎರಡು ಗುಣಗಳ ಭಾವವನ್ನು ಹೊಂದುವುದಿಲ್ಲ. ತಮ್ಮ

ಸ್ವರೂಪ ಗುಣಗಳನ್ನೇ ಹೊಂದುವರು ಅತದ್ರೂಪತ್ವ ಶೃತಿಯು ಅಸುರರಿಗೆ ದೇವ ಸ್ವರೂಪವೂ ದೇವತೆಗಳಿಗೆ ಅಸುರ ಸ್ವರೂಪವೂ ಮನುಷ್ಯರಿಗೆ ಈ ಎರಡು ಭಾವಗಳೂ ಆಗವು. ಯಾರು ಯಾವ ಸ್ವಭಾವವುಳ್ಳವರೋ ಅದರಂತೆ ಸ್ವಭಾವವು ಅನ್ಯಥಾ ಅಲ್ಲ ದೇವಾಸುರ ಭಾವಾ ಭಾವಗಳಶ್ರುತಿಯು. ದೇವತಾಸ್ವರೂಪಯೋಗ್ಯಜೀವರು ಪರಮಾತ್ಮನನ್ನು ಜ್ಞಾನೈಶ್ವರ್ಯಾದಿ ಭೂತಿಪ್ರದನೆಂದು ಉಪಾಸನಮಾಡಿ ಪರಮ ಭಾಗ್ಯವನ್ನು ಹೊಂದಿದರು. ಅಸುರರಾದರೋ ಅನೈಶ್ವರ್ಯನೆಂದು ಸಾದಿಸಿ ನಿತ್ಯ ನಿರಯವನ್ನು ಹೊಂದುವರು.

11 **ದೇವಾನಾಂ ಭೂತಿರಿತ್ಯೇವ ಮನೋ ವಿಷ್ಣೌ ಸ್ವಭಾವತಃ**
**ಆಸುರಾಣಾಮಭೂತಿ ತ್ವೇನೈತನ್ನಿಯಮತೋಽನ್ಯಥಾ ।**
**ದೇವಾಃ ಶಾಪಾಭಿಭೂತತ್ವಾತ್ಪ್ರಹ್ಲಾದಾದ್ಯಾ ಬಭೂವಿರೇ ।**
**ಅತ: ಸುಗತಿ ರೇತೇಷಾಂ ನಾನ್ಯಥಾ ವ್ಯತ್ಯಯೋ ಭವೇತ್ ॥**
**ಇತಿ ಚಾಧ್ಯಾತ್ಮೇ**

ದೇವತೆಗಳಿಗೆ ಶ್ರೀ ವಿಷ್ಣುವು ಮಹದೈಶ್ವರ್ಯನೆಂದು ತಿಳಿಯುವ ಸ್ವಭಾವವು ದೈತ್ಯನಿಗಾದರೋ ಅನೈಶ್ವರ್ಯವೆಂದು ಭಾವನೆಯು. ಅವರವರ ಸ್ವಭಾವ ಸಿದ್ಧವು ಅನ್ಯಥಾ ಆಗಲಾರದು. ಶಾಪಾದಿಕಾರಣಾಂತರದಿಂದ ಪ್ರಹ್ಲಾದಾದಿಗಳು ಅಸುರ ಜನ್ಮವುಳವರಿಗೆ ಸುಗತಿಯೋ ದುರ್ಗತಿಯಾಗಲಾರದು

ಇತ್ಯುಭಯಲಿಂಗಾಧಿಕರಣಂ

## – ಅಧಿಕಾರಿಕಾಧಿಕರಣಂ –

ಈ ಅಧಿಕರಣದಲ್ಲಿ ಬ್ರಹ್ಮಜ್ಞಾನಪ್ರಾಪ್ತಿಯು ದೇವತಾಪದಾಕಾಂಕ್ಷೆಇಲ್ಲದವರಿಗೆ ಎಂದು ಸಮರ್ಥನವು. ದೇವತೆಗಳಲ್ಲಿ ನಿಯಮವಾಗಿ ಜ್ಞಾನಪ್ರಾಪ್ತಿಯು. ತದನ್ಯರಿಗೆ ಪ್ರಾಪ್ತವಲ್ಲವೆಂದು ಹೇಳಿತು. ಈಗ ದೇವತಾಪದಪ್ರಾಪ್ತಿಯು ಅನ್ಯಜೀವರಿಗೆ ಪ್ರಾಪ್ತ

ವಲ್ಲವು ಎಂದು ಹೇಳಿದೆ. ಸ್ವಧರ್ಮಸ್ಥಿತಿಷ್ಠನ್ ಶತಜನ್ಮಭಿಃ ಪುಮಾನ್ ವಿರಿಂಚ ತಾಮೇತಿತತಃ ಪರಂಹಿಮಾಮ್ ಎಂಬುದರಿಂದ ದೇವತಾಪದಗಳು ಇತರರಿಂದಲೂ ಪ್ರಾಪ್ಯವು ಎಂದು ಅನುಮಾನವು ದೇವತಾಪದವೂ ಮತ್ತು ಭಗವದೈಶ್ವರ್ಯವೂ ಕೂಡ ಪ್ರಯತ್ನದಿಂದ ಹೊಂದಲು ಸಾಧ್ಯವು ಎಂದು ಪೂರ್ವಪಕ್ಷವು.

## ಸೂ॥ ಓಂ॥ ನ ಚಾಧಿಕಾರಿಕಮಪಿ ಪತನಾನುಮಾನಾತ್ತದ ಯೋಗಾತ್ ಓಂ॥ 41

ಜ್ಞಾನಾರ್ಥಿಗಳು ಅಯೋಗ್ಯಾಕಾಂಕ್ಷೆಯನ್ನು ಬಿಟ್ಟು ಸ್ವಯೋಗ್ಯ ಫಲಾನು ಪ್ರಾಪ್ತಿರೂಪೋಪಾಸನೆಯನ್ನು ಮಾಡಲು ಯುಕ್ತವು. ದೇವತಾದಿಕಾರಪದ ಪ್ರಾಪ್ತಿಯೂ ಅಪೇಕ್ಷಿಸಲ್ಪಡಬಾರದು ಹಾಗೆಯೇ ಶ್ರೀ ಪರಮಾತ್ಮನ ಐಶ್ವರ್ಯವನ್ನೂ ಕೂಡ ಸರ್ವಥಾ ಅಪೇಕ್ಷಿಸಬಾರದು ಅಯೋಗ್ಯೇಚ್ಛೆಯಿಂದ ಪತನಕಾರಣವುಯೆಂದು ಸ್ಮೃತಿವಚನದಿಂದ ತಮ್ಮ ಯೋಗ್ಯತೆಗೆ ತಕ್ಕಂತೆ ಉಪಾಸನೆಯೇ ಯುಕ್ತವು.

1 ನ ಚ ಪರಮಾತ್ಮೈಶ್ವರ್ಯಾದಿಕಮಾಕಾಂಕ್ಷ್ಯಂ ।
ಬ್ರಹ್ಮಾದೀನಾಮಪಿ ನಾಕಾಂಕ್ಷ್ಯಂ ಕಿಮು ಪರಸ್ಯೇತಿ ಸೂಚಯಿತು ಮಪಿಶಬ್ದಃ
ಚ ಶಬ್ದಸ್ತು ಜ್ಞಾನಾರ್ಥಿನಾಂ ಪೂರ್ವೋಕ್ತಾದಿತ್ಥಂ ಭಾವಾಂತರ ಸೂಚಕಃ ॥

ಜ್ಞಾನಾರ್ಥಿಯು ಬ್ರಹ್ಮಾದಿಪದಪ್ರಾಪ್ತಿ ಇಚ್ಛಾರೂಪೋಪಾಸನೆಯನ್ನೇ ಮಾಡಬಾರದಾಗಿ ಪರಮೇಶ್ವರೇಚ್ಛೆಯು ಸರ್ವದಾ ಹೇಯವು ಅವರವರ ಯೋಗ್ಯತಾನುಸಾರ ಜ್ಞಾನಪ್ರಾಪ್ತಿಯು. ರೂಪೇಚ್ಛೆಯೇ ಮಾಡಲ್ಪಡಬೇಕು.

2 ಅಯೋಗ್ಯಮಾರೋಢುಂ ಪ್ರಯತನ್ಪತನ್ತಿ ದೃಶ್ಯತೇ ।
ಏವಮಯೋಗ್ಯಸ್ಯ ಪರಮಾತ್ಮೈಶ್ವರ್ಯಸ್ಯ ಬ್ರಹ್ಮಾದಿಪದಸ್ಯ ಚಾಕಾಂಕ್ಷಾಯಾಂ ಪತನಮನುಮೀಯತೇ ॥

ಅಯೋಗ್ಯಫಲಾಂಕಾಂಕ್ಷೆಯು ಪತನಹೇತುವು. ಬ್ರಹ್ಮಾದಿಪದಾಕಾಂಕ್ಷೆಯು ಮಾಡಲ್ಪಡಬಾರದು ಪತನಹೇತುವೆಂದು ಅನುಮಾನ ಸಾಧ್ಯವು.

3 ನ ದೇವಪದಮನ್ವಿಚ್ಛೇತ್ಕುತ ಏವ ಹರೇರ್ಗುಣಾನ್ ।
ಇಚ್ಛನ್ಪತತಿ ಪೂರ್ವಸ್ಮಾದಧಸ್ತಾದ್ಯತ್ರ ನೋತ್ಥಿತಿರಿತಿಃ
ಬ್ರಹ್ಮಾಂಡೇ ॥

ಸಾಮಾನ್ಯ ದೇವತಾಪದವನ್ನೇ ಇಚ್ಛಿಸಬಾರದೆನ್ನಲು ಪರಮಾತ್ಮೈಶ್ವರ್ಯ ವು ಹೇಗೆತಾನೆ ಯುಕ್ತವು ತನ್ನ ಸ್ವಭಾವಕ್ಕಿಂತ ಶ್ರೇಷ್ಠತೆಯನ್ನು ಇಚ್ಛಿಸಿಪಾ-ಉ ಸಿಸಲು ಕೀಳುಸ್ಥಾನವೇ ಗತಿಯು.

4 ಸ್ವಕೀಯಮಿಚ್ಛಮಾನಂತು ರಾಜಾದ್ಯಾಃ ಪಾತಯಂತಿ ಹಿ ।
ಏವಮೇವ ಸುರಾದ್ಯಾಶ್ಚ ಹರಿಶ್ಚ ಸ್ವಪದೇಚ್ಛುಕಂ ॥
ಇತ್ಯಾದನುಮಾನರೂಪವಾಕ್ಯಾಚ್ಚ ।

ಪ್ರಪಂಚದಲ್ಲಿ ತಮ್ಮ ಸ್ಥಾನಾಪೇಕ್ಷೆಮಾಡುವವರನ್ನು ರಾಜರು ದಂಡಿಸುವಂತೆ ದೇವತೆಗಳು ಹಾಗೆಯೇ ಶ್ರೀ ಹರಿಯು ಹಾಗೆಯೇ ಎಂದು ಅನುಮಾಪಕ ವಾಕ್ಯವು

5 ಮಾಯಾಭಿರುತ್ಸಿಸೃಪ್ಸತ ಇಂದ್ರಾದ್ಯಾಮಾರುರುಕ್ಷತಃ ॥
ಅವದಸ್ಯೂಂರಧೂನುಥಾಃ ಚ ॥ ಇತಿ ಶ್ರುತಿಃ (ಋ-8-14-14)

ಹೇ ಪರಮೇಶ್ವರನೇ ಮೋಹಕವಿಧ್ಯೆಯಿಂದ ಸ್ವರ್ಗಪ್ರಾಪ್ತಿಗಾಗಿ ಪ್ರಯತ್ನಿಸುವ ಬ್ರಷ್ಟಪ್ರೇನರನ್ನು ನರಕಕ್ಕೆ ತಳ್ಳು ಶ್ರುತಿವಿರುದ್ಧ ಅಯೋಗ್ಯಪ್ರಾಪ್ತಿಗಾಗಿ ಯತ್ನಿಸು ವರನ್ನು ಹೀನ ಸ್ಥಿತಿಯನ್ನು ಪ್ರಾಪಿಸಿ ಯೋಗ್ಯ ಜ್ಞಾನಿಗಳಿಗೆ ಅವರ ಯೋಗ್ಯಸ್ಥಾನ ಗಳನ್ನು ಪ್ರಾಪಿಸು

## ಸೂ॥ ಓಂ॥ ಉಪಪೂರ್ವಮಪೀತ್ಯೇಕೇ ಭಾವಶಮನವತ್ತ ದುಕ್ತಂ ಓಂ॥ 42

ಉಪದೇವಪದಂ ಚ ನಾಕಾಂಕ್ಷ್ಯಮಿತ್ಯೇಕೇ ಭಾವಶಮನವದ್ವಿಷಿಪಡವದೇವ ।
ತಚ್ಚೋಕ್ತಮಿಂದ್ರದ್ಯುಮ್ನಶ್ರುತೌ ।
ಯಥರ್ಷೀನ್ ಪ್ರಜಾಪತೀನ್ನಾಕಾಂಕ್ಷೇ ದೇವಂ ನ ಗಂಧರ್ವಾನ್ನ ವಿದ್ಯಾಧರಾನ್ನ
ಸಿದ್ಧಾನ್ ॥ ಇತಿ

ಋಷಿಪದವನ್ನೇ ಅಪೇಕ್ಷಿಸಬಾರದಾಗಿ ದೇವತಾಪದಕಾಂಕ್ಷೆಯು ಅಯೋಗ್ಯನೇ ಇಂದ್ರದ್ಯುವ್ನು ಶ್ರುತಿಯು .... ಜ್ಞಾನಾರ್ಥನೆಯು ಋಷಿಪದವನ್ನಾಶಿಸಬಾರದು ಪ್ರಜಾಪತಿಸ್ಥಾನವನ್ನು ಗಂದರ್ವಸ್ಥಾನವನ್ನು ವಿಧ್ಯಾಧರಸ್ಥಾನವನ್ನು ಸಿದ್ದರಸ್ಥಾನ ವನ್ನು ಆಶಿಸಲೇಬಾರದೆಂದು ಸಿದ್ಧವೇ

7 ಬೃಹತ್ಸಂಹಿತಾಯಾಂ ಚ :
ನ ದೈವಾನಭಿಕಾಂಕ್ಷೇತ ಕುತ ಏವಹರೇರ್ಗುಣಾನ್ ।
ಪ್ರಾಜಾಪತ್ಯಾನ್ನ ಚಾರ್ಷಾಂಶ್ಚ ಗಾಂದರ್ವಾದೀನಪಿ ಕ್ವಚಿತ್ ।
ಋಷ್ಯಾದಿಷು ವಿಶೇಷೇ ತು ದೋಷೋನೈವಾ ವಿಶೇಷತ ಇತಿ
ಇತಿ ವಿಶೇಷದರ್ಶನಾರ್ಥಮೋಕ ಇತ್ಯುಕ್ತಂ ॥

ಜ್ಞಾನಾರ್ಥಿಯೂ ದೇವತಾಗುಣಗಳನ್ನೇ ಆಶಿಸಬಾರದು ಹರಿಗುಣಗಳನ್ನು ಹೇಗೆತಾನೆ ಉಪಾಸಿಸುವುದು? ಸ್ವಾಮಿ ಪ್ರಜಾಪತಿಗಳು, ಋಷಿಗಳು, ಗಂದರ್ವರು ಗುಣಗಳನ್ನು ಇಚ್ಛಿಸಬಾರದು ಆದರೆ ವಿಶೇಷತಃ ಋಷಿ ಹೊಂದಲು ಉಪಾಸನಾದೋಷವಲ್ಲ ಆದರೆ ಋಷಿವರಪ್ರಾಪ್ತಿಯೇಚ್ಛೆಯು ದೋಷವೇ.

## ಸೂ॥ ಓಂ॥ ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ ಓಂ॥ 43

ದೇವರ್ಷಿಗಂಧರ್ವಾದಿ ಪದೇಭ್ಯೋನ್ಯತ್ರ ಶುಭವಿಷಯ ಆಕಾಂಕ್ಷಾಯಾ ಪುನಾ ಕಾಂಕ್ಷಾಯಾಂ ಚ ನ ಪತನಂ ।

ದೇವಋಷಿ ಗಂಧರ್ವಾದಿ ಪದಗಳ ಹೊರತು ಬೇರೆ ಶುಭವಿಷಯ ಆಕಾಂಕ್ಷೆ ಇದ್ದರೂ ಇಲ್ಲದಿದ್ದರೂ ದೋಷವಿಲ್ಲ

ದೇವಾದಿಪದಗಳಿಂದ ಬೇರೆ ಭಕ್ಷ್ಯಾದಿ ವಿಷಯದಲ್ಲಿ ಆಕಾಂಕ್ಷೆಯು ದೋಷವಲ್ಲ ಯುಕ್ತವೇ ಜ್ಞಾನಾದಿಗಳಿಂದ ಐಶ್ವರ್ಯಾದ್ಯ ನಿಯತಸಾಧನವು ಭಾದವಲ್ಲ ದೇವರ್ಷಿ ಗಂದರ್ವಪದಗಳಲ್ಲದ ಅನ್ಯಶುಭಫಲಾಕಾಂಕ್ಷೆಯು ಸಾಧುವೇ. ಪತನ ಹೇತುವಾಗ ಲಾರದು.

9 ದೇವರ್ಷಿಗಂಧರ್ವಾಣಾಂ ಪದಾಕಾಂಕ್ಷೀ ಪತೇದ್ಧ್ರುವಂ ।
ಅನ್ಯತ್ರಶುಭಮಾಕಾಂಕ್ಷನ್ನ ಪತೇದವಿರೋಧತ ॥ ಇತಿ ಸ್ಮೃತೇಃ

10 ನಾನಾತ್ವಮೇವ ಕಾಮಾನಾಂ ನಾ ಕಾಮಃ ಕ್ವ ಚ ದೃಶ್ಯತೇ ।
ಅತೋ ನಿರುದ್ಧಕಾಮಃ ಸ್ಯಾದಕಾಮಸ್ತೇನ ಭಣ್ಯತ ॥ ಇತಿ
ಚಾರಾಚ್ಚ

ದೇವರ್ಷಿ ಗಂಧರ್ವಗಣಗಳ ಪದಾಕಾಂಕ್ಷೆಯು ಖಂಡಿತ ಕೆಳಗೆ ಬೀಳುವನು ಆದರೆ ಅನ್ಯತ್ರಶುಭವನ್ನು ಹೊಂದಲಪೇಕ್ಷೆಯು ಯುಕ್ತವಾದ್ದರಿಂದ ಯುಕ್ತವು. ಕಾಮಗಳಲ್ಲಿ ನಾನಾವಿಧವೇ ಸ್ಥಿತಿಯು ಅಕಾಮತ್ವವು ಎಲ್ಲಿಯೂ ಕಾಣದು. ಜ್ಞಾನಾರ್ಜನೆಗೆ ಕಾರಣವಾದ ಕಾಮವು ಅಕಾಮವೇ ಎಂದೆ ತಿಳಿಯುವುದು

ಇತ್ಯಾಧಿಕಾರಿಕಾಧಿಕರಣಂ

## – ಫಲಶ್ರುತ್ಯಧಿಕರಣಂ –

ಈ ಅಧಿಕರಣದಲ್ಲಿ ಬ್ರಹ್ಮಜ್ಞಾನಕ್ಕೆ ಸನ್ನಿಧಾನಮಾತ್ರದಿಂದಲೇ ಅಸ್ವತಂತ್ರರಾದರೂ ಮನುಷ್ಯರಲ್ಲಿ ಜ್ಞಾನಿಗಳಿಗೆ ಫಲಪ್ರಾಪ್ತಿರೂಪ ಮಹಿಮೆಯು ಹೇಳಲ್ಪಡುತ್ತದೆ.

**ಸೂ॥ ಓಂ॥ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ॥ 44**

ಬ್ರಹ್ಮವಿದಾಪ್ನೋತಿಪರಮಿತ್ಯಾದಿಫಲಂ ಸ್ವಾಮಿನಾಂ ದೇವಾನಾಮೇವ ಭವತಿ ।
ಯದುಃ ಕಿಂಚೇಮಾಃ ಪ್ರಜಾಃ ಶುಭಮಾಚರಂತಿ ದೇವಾ ಏವ ತದಾಚರಂತಿ ।
ಯದು ಕಿಂಚೇಮಾಃ ಪ್ರಜಾಃ ದೇವಾ ಏತದ್ವಿಜಾನತೇ ದೇವಾನಾಂ ಹ್ಯೇತ
ದ್ಭವತಿ ಸ್ವಾಮೀ ಹಿ ಫಲಮಶ್ನುತೇ ನಾಸ್ವಾಮೀ ಕರ್ಮ ಕುರ್ವಾಣಃ ॥
ಇತಿ ಮಾಧ್ಯಂದಿನಾಯನಶ್ರುತೇರಿತ್ಯಾತ್ರೇಯೋ ಮನ್ಯತೆ

ಇಂದ್ರಿಯಸ್ವಾಮಿಗಳಾದ ದೇವತೆಗಳಿಗೆ ಜ್ಞಾನದ ಫಲವು ಜೀವರುಗಳಿಗಲ್ಲ ದೇವತೆಗಳೇ ಜ್ಞಾನಕ್ಕೆ ಸ್ವಾಮಿಗಳು. ಎದುಕಿಂಚ ಎಂಬ ಶೃತಿಯು ದೇವತೆಗಳಿಗೇ ಫಲ ಎಂದು ಆತ್ರೇಯಾ ಚಾರ್ಯರು ತಿಳಿಯುವರು.

ದೇವತೆಗಳು ಇಂದ್ರಿಯಾಪೇರಕತ್ವದಿಂದ ಜ್ಞಾನಸಾಧನೆಗೆ ಸ್ವಾಮಿಗಳಾದ್ದರಿಂದ ಯಾವ ಶುಭಕರ್ಮವನ್ನು ಪ್ರಜಗಳು ಮಾಡಿದರೂ ಅದನ್ನು ದೇವತೆಗಳೇ ಪ್ರೇರಣೆ ಮಾಡುವುದರಿಂದ ಫಲವನ್ನು ಹೊಂದುವವರೂ ಅವರೆ ಕತೃವಾದ ಜೀವರಿಗೆ ಫಲವಿಲ್ಲ. ಎಂದರೆ ಹಾಗಲ್ಲ ಕೃಷ್ಯಾದಿಕರ್ಮಗಳಲ್ಲಿ ಫಲವು ಯಜಮಾನನಿಗೆ ಆದರೂ ಕೂಲಿ ಕೆಲಸ ಮಾಡುವ ಆಳಿಗೆ ಹೇಗೆ ಕೂಲಿಯಿಂದ ಫಲವಿದೆಯೋ ಹಾಗೆಯೇ ಉಪಾಸನಾ ಕತ್ರವಾದ ಜೀವನಿಗೂ ಜ್ಞಾನಫಲವು ಸೂಚಿತವು ಸ್ವಾಮಿತ್ವದಿಂದಲೇ ದೇವತೆಗಳಿಗೆ ಅಧಿಕಫಲವಾದರೂ ಜೀವರಿಗೂ (ಕತೃವಾದ್ದರಿಂದ) ಅಲ್ಪಫಲಪ್ರಾಪ್ತಿಯು ಸಿದ್ಧಾಂತವು

## ಸೂ|| ಓಂ|| ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ ಹಿ ಪರಿಕ್ರಿಯತೇ ಓಂ|| 45

ದೇವತೆಗಳು ಪ್ರಜಾದ್ವಾರ ಕರ್ಮ ಮಾಡುವುದರಿಂದ ಜ್ಞಾನವನ್ನು ಹೊಂದಿದರೂ ಕರ್ತತ್ವದಿಂದ ಪ್ರಜೆಗಳಿಗೂ ಅಲ್ಪಜ್ಞಾನಪ್ರಾಪ್ತಿಯು ಎಂದು ಔಡುಲೋಮಿಗಳವಾದವು. ಯಜ್ಞ ಫಲಪ್ರಾಪ್ತಿಯಲ್ಲಿ ಋತ್ವಿಕ್ಕುಗಳು ಅಲ್ಪಫಲವನ್ನು ಹೊಂದುವರೆಂದು ಉಪಮಾನವು.

ಸತ್ರಯಾಗೇಷ್ವೃತ್ವಿಜಾಮಪಿ ಫಲದರ್ಶನಾದಲ್ಪಫಲಂ ಪ್ರಜಾನಾಮಪಿ ಭವತೀ
ತ್ಯೌಡುಲೋಮಿರ್ಮನ್ಯತೆ ।
ತದರ್ಥಂ ದೇವೈಃ ಕ್ರಿಯಮಾಣತ್ವಾತ್ ||

ದೇವತೆಗಳು ಜೀವರುಗಳ ಕರಣಗಳಲ್ಲಿ ನಿಂತು ವ್ಯಾಪಾರಮಾಡುವುದರಿಂದ ಯಜ್ಞಕರ್ಮವು ಮಾಡಲ್ಪಡುವುದರಿಂದ ಆ ಜೀವರೋದ್ಧಾರಕ್ಕಾಗಿ ಕರಣತ್ವದ

ನಿಮಿತ್ತ ಅಲ್ಲ. ಜ್ಞಾನಪ್ರಾಪ್ತಿಯು ಹೆಚ್ಚುಫಲವು ದೇವತೆಗಳಿಗೆ ಸತ್ರಯಾಗಾದಿಗಳಲ್ಲಿ ಯಾಜಕರ್ತೃಗಳಿಗೆ ಸಲಾಗಾದರೂ ಮಾಡಿಸುವ ಋತ್ವಿಕರುಗಳಿಗೆ ಅಲ್ಪಫಲವಿದ್ದಂತೆ.

## ಸೂ॥ ಓಂ॥ ಸಹಕಾರ್ಯಂತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್ ಓಂ॥ 46

ತೃತೀಯಃ ಸ್ವಪಕ್ಷಃ ಮೂರನೆ ಅಭಿಪ್ರಾಯವು

ಹೇಗೆ ರಾಜನು ನಿಯಮಿಸಲ್ಪಟ್ಟ ಪ್ರಜೆಗಳು ತನ ಆಜ್ಞಾಪಾಲನೆಯಿಂದ ಸುಪ್ರೀತನಾಗಿ ಯಥಾಯೋಗ್ಯ ಅವರುಗಳ ಪಾಲನೆಯನ್ನು ಮಾಡುವನೋ ಗುರುವು ಶಿಷ್ಯನಿಗೆ ಗುರುಶುಶ್ರೂಷಣದಿಂದ ತೃಪ್ತನಾಗಿ ಸ್ವವಿಹಿತ ಜ್ಞಾನ ದಾನ ಮಾಡುವಂತೆ ದೇವತೆಗಳೂಕರಣಗಳ ಮೂಲಕ ಪ್ರೇರಣೆಯಿಂದ ಜ್ಞಾನವನ್ನು ಹುಟ್ಟುವಂತೆ ಅವರ ಸಹಕಾರ ರೀತಿಯಿಂದ ಸೂಕ್ತರೀತಿ ಅನುಗ್ರಹ ಮಾಡುವರು.ಈ ಪಕ್ಷವು ಬಾದರಾಯಣರಸಿದ್ಧಾಂತವು

4 **ದೇವಾನಾಂ ಜ್ಞಾನಾದಿ ಕರ್ಮಣಿ ಸಹಕಾರ್ಯಂತರತ್ವೇನ ಪ್ರಜಾ ವಿಧೀಯಂತೇ**
**ಯಥಾ ಪ್ರಜಾವತೋ ರಾಜ್ಞಃ ಪ್ರಜಾಃ ಸಹಕಾರಿತ್ವೇನ ವಿಧೀಯಂತೇ ।**
**ಯಥಾ ವಾಚಾರ್ಯಸ್ಯ ಶಿಷ್ಯಾಃ ॥**

ಪ್ರಥಮ ಸೂತ್ರದಲ್ಲಿ ಸ್ವಾಮಿಭೃತ್ಯಭಾವದಿಂದ ಎರಡನೆಯ ಸೂತ್ರದಲ್ಲಿ ಯಜ್ಞ ಯಜಮಾನ ಋತ್ವಿಕಭಾವದಿಂದ ಎರಡನೆಯ ಸೂತ್ರದಲ್ಲಿ ಜೀವದೇವರುಗಳ ಪ್ರಧಾನಾಂಗ ಭಾವದಿಂದಲೂ ಮಹದಲ್ಪಫಲವು ಮಾತ್ರ ಪ್ರಾಪ್ತವು.

5 **ವರಾಹೇಚ :- ಜ್ಞಾನಾದಿದಾನಂ ದೇವಾನಾಂ ವಿಷ್ಣುನಾ ಸಾಧು ಚೋದಿತಂ ।**
**ವೇದೇಷು ತೇಷಾಂ ವಿಹಿತಂ ತತ್ರಾಚಾರ್ಯೋ ಮಹತ್ತರಃ ।**

ವಿಹಿತಃ ಸಹಕಾರಿತ್ವೇ ಸಹಕಾರ್ಯರ್ಣಂತರಂ
ಪ್ರಜಾಃ ।
ಪಾತ್ರತ್ವೇನ ಯಥಾ ರಾಜ್ಞೋ ಯಥಾ ಶಿಷ್ಯಾ
ಗುರೋರಪಿ ॥

ದೇವತೆಗಳಿಗೂ ಪ್ರಜೆಗಳಿಗೂ ಯಥಾ ಯೋಗ್ಯಸಮ್ಯಜ್ಞಾನವು ಶ್ರೀವಿಷ್ಣುವಿನ ಆಜ್ಞಾದಾತ ಲಭ್ಯ. ಮೋಕ್ಷ ಸಾಧನತ್ವಜ್ಞಾನವು ದೇವತೆಗಳಿಗೆ ವೇದದಿಂದಲೇ ಪ್ರಾಪ್ತವು ದೇವತೆಗಳಿಂದ ಜ್ಞಾನದಾನವು ಜೀವರ ಸಹಕಾರಿತ್ವದಿಂದಲೂ ಆಚಾರ್ಯರ ಮೂಲಕ ಮುಖ್ಯ ಸಹಕಾರಿತ್ವದಿಂದಲೂ ಲಭ್ಯವಾದ್ದರಿಂದ ಸ್ವಯೋಗ್ಯ ಜ್ಞಾನ ಫಲವು ಜೀವರುಗಳಿಗೆ ಪ್ರಾಪ್ತವು. ಆದ್ದರಿಂದ ದೇವತೆಗಳಿಗೆ ಬ್ರಹ್ಮಪರ್ಯಂತ ಉತ್ತರೋತ್ತರ ಮಹತ್ವವು

6 ತಸ್ಮಾಚ್ಛ್ರುತಂ ಫಲಂ ತಾಸಾಮಾಚಾರ್ಯಾಣಾಂ ಮಹತ್ತರಂ ।
ತತೋ ಮಹತ್ತರಂ ಪ್ರೋಕ್ತಂ ದೇವಾನಾಮುತ್ತರೋತ್ತರಂ ॥
ಇತಿ

ಗುರುವಾದವನಿಗೆ ಶಿಷ್ಯನಿಗಿಂತ 8 ರಷ್ಟು ಫಲಪ್ರಾಪ್ತಿಯು ಮತ್ತು ಶಿಷ್ಯರಿಗೆ ಯಥಾ ಯೋಗ್ಯ ಅಲ್ಪಜ್ಞಾನವೂ ಅವುಗಳ ಫಲವಾಗಿ ಮೋಕ್ಷಪ್ರಾಪ್ತಿಯು. ಯಥಾ ಯೋಗ್ಯಸುಖಾನಂದವು ಯುಕ್ತವು.

ಇತಿ ಫಲಶ್ರುತ್ಯಧಿಕರಣಂ

## - ಕೃತ್ಸ್ನಭಾವಾಧಿಕರಣಂ -

ಈ ಅಧಿಕರಣದಲ್ಲಿ ಬ್ರಹ್ಮಜ್ಞಾನವಿಷಯದಲ್ಲಿ ವಿಶೇಷಾಧಿಕಾರಿಗಳಾದ ಯತಿಗಳಿಗೆ ಸರ್ವಶ್ರಮಿಗಳಿಂದ ಅತಿಶಯ ಜ್ಞಾನವು ಸಮರ್ಥನವು.

ಸೂ ॥ಓಂ॥ ಕೃತ್ಸ್ನಭಾವಾತ್ ಗೃಹಿಣೋಪಸಂಹಾರಃ ಓಂ 47

ಕುಟುಂಬೇ ಶುಚೌ ದೇಶೇ ಸ್ವಾಧ್ಯಾಯಮಧೀಯಾನೋಧಾರ್ಮಿಕಾನ್ವಿದ
ಧದಿತ್ಯುಕ್ತ್ವಾ ನ ಚ ಪುನರಾವರ್ತತ (ಲೂ 8-15-1) ಇತಿ ಗೃಹಿಣೋಪ
ಸಂಹಾರಃ ಕ್ರಿಯತೇ।
ತಸ್ಮಾದ್ಗೃಹಸ್ಥಸ್ಯೈವೋತ್ತಮತ್ವಮಿತಿ ನ ವಾಚ್ಯಂ ।
ಯತಃ ಕೃತ್ಸ್ನಗೃಹಸ್ಥಾನ್ ದೇವಾನಪೇಕ್ಷ್ಯೈವೋಪಸಂಹಾರಃ ಕ್ರಿಯತೇ ॥

ಮೇಲಿನ ಶೃತಿಯಲ್ಲಿ ಗೃಹಸ್ತನಿಗೆ ಮೋಕ್ಷಫಲಪ್ರಾಪ್ತಿಯಲ್ಲಿ ಸಮಾಪ್ತಿಯು ಆದರೆ ಸಂಪೂರ್ಣ ಗೃಹಸ್ಥಾಶ್ರಮ ಧರ್ಮವುಳ್ಳವರಾದ ದೇವತೆಗಳನ್ನುದ್ದೇಶಿಸಿ ಹೇಳಿರುವುದು. ಮತ್ತು ಶೃತಿಗಳ ವಿರೋಧದಿಂದ ಯತಿಗಳೇ ಸರ್ವಾಶ್ರಮಿಗಳಿಗಿಂತ ಉತ್ತಮರು ಶೃತಿಯು ಗೃಹಸ್ಥನಿಗೆ ಮೋಕ್ಷವನ್ನು ಹೇಳಿ ಪುನಃ ಸಂಸಾರಬಂಧವಿಲ್ಲ ವೆಂದು ಉಪಸಂಹಾರದಿಂದ ವಿಶೇಷೋಕ್ತಿಯು ಶೃತ್ಯರ್ಥವು – ವಿಧಾನರೀತಿಯಲ್ಲಿ ಆಚಾರ್ಯಕುಲದಿಂದ ವೇದಾಧ್ಯಯನ ಮಾಡಿ ಗೃಹಸ್ಥಾಶ್ರಮಿಯಾಗಿ ಶುಚಿಯಾದ ದೇಶದಲ್ಲಿ ವಾಸಿಸಿ ವೇದಾಧ್ಯಯನ ಮಾಡುತ್ತಾ ಧರ್ಮವ್ಯಾಪಾರವುಳ್ಳವನಾಗಿ ಪುತ್ರಾದಿ ಸಂಬಂಧಗಳನ್ನು ಹೊಂದಿ ನಂತರ ಶ್ರೀ ಪರಮಾತ್ಮನಲ್ಲಿ ಇಂದ್ರಿಯವ್ಯಾಪಾರ ಗಳನ್ನು ಕ್ರೋಡೀಕರಿಸಿ ಯಜ್ಞವಿನಃ ಅನ್ಯತ್ರ ಹಿಂಸೆಯನ್ನು ಮಾಡದೆ ಆಯುಷ್ಯ ವನ್ನು ಕಳೆದು ಮುಕ್ತಿ ಹೊಂದುವನು ಎಂದು ಇಲ್ಲಿ ಪೂರ್ಣಗೃಹಸ್ಥಾಶ್ರಮಿಗಳು ದೇವತೆಗಳೇ ಉಪಸಂಹಾರವೂ ಯೋಗ್ಯಗೃಹಸ್ಥಾಶ್ರಮಿಗಳೇ ಮಾನುಷಗೃಹಸ್ಥಾಶ್ರಮ್ಮಿ ಗಳಲ್ಲ ಮನುಷ್ಯ ಯತ್ಯಾಶ್ರಮಿಗಳು ದೇವತೆಗಳಿಗಿಂತ ಉತ್ತಮರಲ್ಲ ಅಲ್ಪ ಯೋಗ್ಯತೆ ಉಳ್ಳವರೇ.

2 **ಕೃತ್ಸ್ನಾಹ್ಯೇತೇ ಗೃಹಿಣೋ ದೇವಾಃ ಕೃತ್ಸ್ನಾಹ್ಯೇತೇ ಯತ ಯೋಽತ ಏತೇಷಾಂ ನ ಪುತ್ರಾ ದಾಯಮುಪಯಂತಿ ನ ಚೈತೇ ಗೃಹಾನ್ವಿಸೃಜಂತ್ಯರಾಗಾ ಅದ್ವೇಷಾ ಅಲೋಭಾಃ ಸರ್ವಭೋಗಾಃ ಸರ್ವಜ್ಞಾಃ ಸರ್ವಕರ್ತಾರ । ಇತಿ ಪೌತ್ರಾಯಣಶ್ರುತಿಃ**

ಪ್ರಸಿದ್ಧ ದೇವತೆಗಳೇ ಪೂರ್ಣಗೃಹಸ್ಥರು ಮತ್ತು ಶ್ರೇಷ್ಟ ಯತಿಗಳೂಕೂಡ ದೇವತೆಗಳ ದ್ರವ್ಯಾದಿ ಐಶ್ವರ್ಯಗಳು ಲ್ಲವರ ಪುತ್ರದಾಯಾದರಿಂದ ಹೊಂದಲ್ಪಡುವು ದಿಲ್ಲ. ಯತಿ ಪುತ್ರರೂ ಯತಿಸಂಪಾದಿತ ಸಂಪತ್ತಿಗೆ ಪಾತ್ರರಲ್ಲ. ದೇವತೆಗಳು ಗೃಹಸ್ಥಾಶ್ರಮಗಳನ್ನು ಬಿಡುವುದಿಲ್ಲ. ಆದರೆ ಆವರು ಅರಾಗರು, ಅದ್ವೇಷ್ಯರು

ಅಲೋಭರು, ಮತ್ತು ಸರ್ವಭೋಗವುಳ್ಳವರು ಸರ್ವಜ್ಞರು ಮತ್ತು ಸರ್ವಪ್ರೇರಕರು ಎಂದು ಋಷಿಧರ್ಮ ಗೃಹಸ್ಥಧರ್ಮಗಳನ್ನು ಅವರಲ್ಲಿ ಹೇಳಿದೆ. ಆದ್ದರಿಂದ ದೇವತೆಗಳುಋಷ್ಯೋತ್ತಮರೇ.

## ಸೂ|| ಓಂ|| ಮೌನವದಿತರೇಷಾಮುಪ್ಯುಪದೇಶಾತ್ ಓಂ|| 48

ನ ಚಾಶ್ರಮದ್ವಯಮೇವ ದೇವಾನಾಂ |
ದೇವಾ ಏವ ಬ್ರಹ್ಮಚಾರಿಣೋ ದೇವಾ ಏವ ಗೃಹಸ್ಥಾ ದೇವಾ ಏವ ವನಸ್ಥಾ
ಯಥಾ ಹ್ಯೇತೇ ಮುನಯ ಏವಂ ಸರ್ವವರ್ಣಾಃ ಸರ್ವಾಶ್ರಮಾಃ ಸರ್ವಂ
ಹ್ಯೇತೇ ಕರ್ಮ ಕುರ್ವಂತಿ || ಇತಿ ಕೌಂರರವ್ಯಶ್ರುತೌ ಯತಿತ್ವದೃಷ್ಟಾಂತೇ
ನಾನ್ಯೇಷಾಮುಪ್ಯುಪದೇಶಾತ್ ||

ದೇವತೆಗಳಿಗೆ ಯತ್ಯಾಶ್ರಮದಿಂದ ಉತ್ತಮತ್ವವಷ್ಟೇ ಅಲ್ಲ ಸರ್ವಾಶ್ರಮಗಳಿಂದಲೂ ಉತ್ತಮರು. ಕೌಂರರವ್ಯ ಶೃತಿಯು ಹೀಗೆ ಹೇಳುವುದು. ಶೃತ್ಯರ್ಥವು ದೇವತೆಗಳಿಗೆ ದೇವಯತಿಆಶ್ರಮಗಳಿಂದ ಉತ್ತಮತ್ವಮಾತ್ರವೇ ಅಲ್ಲ. ಸರ್ವಾಶ್ರಯು ಶ್ರೇಷ್ಠತ್ವವೇ. ದೇವತೆಗಳೇ ಬ್ರಹ್ಮಚಾರಿಗಳು, ಗೃಹಸ್ತರು ವನಸ್ಥರು, ಮುನಿಗಳು, ಸರ್ವವರ್ಣಾಶ್ರಮವುಳ್ಳವರು, ಸರ್ವಕರ್ಮಕರ್ತೃಗಳು.

ಇತಿ ಕೃತ್ಸ್ನಭಾವಾಧಿಕರಣಂ

### - ಅನ್ವಯಾಧಿಕರಣಂ -

ಈ ಅಧಿಕರಣದಲ್ಲಿ ಅಪರೋಕ್ಷ ಜ್ಞಾನಸಾಧನವಾದ ಪರೋಕ್ಷಜ್ಞಾನವು ಅತಿಗೋಪ್ಯತ್ವ ಮಹಿಮೆಯುಳ್ಳದ್ದೆಂದು ಸಮರ್ಥನವು

## ಸೂ|| ಓಂ|| ಅನಾವಿಷ್ಕುರ್ವನ್ನನ್ವಯಾತ್ ಓಂ|| 49

ಗುರುವಾದವನುಸಭಾದಿಗಳಲ್ಲಿ ಬ್ರಹ್ಮಜ್ಞಾನವನ್ನು ವಿಸ್ತಾರವಾಗಿ ಉಪದೇಶ ಮಾಡದ ಯೋಗ್ಯಶಿಷ್ಯರಿಗೆ ಮಾತ್ರ ವಿದ್ಯೆಯನ್ನು ಉಪದೇಶಿಸಬೇಕು ಅಯೋಗ್ಯರಿಗೆ ಜ್ಞಾನಪ್ರಾಪ್ತಿಯಿಂದ ವಿಪರೀತ ಪರಿಣಾಮವು.

ಏತಾಂ ವಿದ್ಯಾಮಧೀತ್ಯ ಬ್ರಹ್ಮದರ್ಶೀ ವಾವ ಭವತಿ ।
ಸ ಏತಾಂ ಮನುಷ್ಯೇಷು ವಿಬ್ರೂಯಾತ್ ।
ಯಥಾ ಯಥಾ ಹವ್ಯೈ ಬ್ರೂಯಾತ್ತಥಾದಿಕೋ ಭವತೀತಿ ಮಾಠರ ಶ್ರುತೌ
ವಿದ್ಯಾದಾನಂ ಶ್ರೂಯತೇ ತಚ್ಚ ಬಹೂನಾಂ ಸ್ವೀಕರಣಾರ್ಥಮಾವಿಷ್ಕಾರಣೇತಿ
ನ ಮಂತವ್ಯಂ।
ಅನ್ಯಯಾದುಕ್ತೇಃ ।
ಆವಿಷ್ಕಾರೇಽಯೋಗ್ಯಾನಾಮಪಿ ಸ್ವೀಕಾರಪ್ರಾಪ್ತಿಃ ।
ತಚ್ಚ ನಿಷಿದ್ಧಂ ॥

ಮೇಲಿನ ಶೃತ್ಯರ್ಥವು ವಿದ್ಯಾದಾನವು ಮಾಡಲ್ಪಡಬೇಕು ಸಭಾಗಳಲ್ಲಿ ಉಪದೇಶದಿಂದ ಬಹುಜನ ಶಿಷ್ಯರಿಗೆ ಉಪದೇಶದಿಂದ ಬಹುಫಲಪ್ರಾಪ್ತಿಯು ಎಂದರೆ ಹಾಗಲ್ಲ ವಿಸ್ತಾರವಾಗಿ ಉಪದೇಶವನ್ನು ಬಹುಜನಸಭೆಗಳಲ್ಲಿ ಮಾಡಬಾರದು

ಅಯೋಗ್ಯರಿಗೆ ಬ್ರಹ್ಮವಿದ್ಯಾದ ನವು ವಿಹಿತವಲ್ಲವಾಗಿ ಗೂಢವಾಗಿಯೇ ಉಪದೇಶವನ್ನು ಸೂಕ್ತ ಶಿಷ್ಯರಿಗೆ ಸಾಕ್ಷಾತ್ತಾಗಿ ಮಾಡಬೇಕು. ಅಯೋಗ್ಯರಿಗೆ ಉಪದೇಶವು ಶೃತಿಗಳಿಂದ ನಿಷಿದ್ಧವು

2 **ಮಾನಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ ನಿರಾಮಿಣೋ**
**ರಿಪವೋನ್ನೇಷು ಜಾಗೃಧುಃ ।**
**ಏಷಾಂ ನೈತನ್ನಾಪರಂ ಕಿಂ ಚ ನೈಕಂ ಬ್ರಹ್ಮಣಸ್ಪತೇಬ್ರೂಹಿ**
**ತೇಭ್ಯಃ ಕದಾಚಿತ್** ॥ (ಋ-2-23-16)

ಅಥೋಪಶಮೇನೋಪರತಾ ಮನುಷ್ಯಾ ಯೇ ಧರ್ಮಿಣೋ ಬ್ರೂಹಿ ತೇಭ್ಯಃ
ಸದಾ ನಃ ।
ಅದೇವಾ ನ ಮೋಹತೇ ವಿಪ್ರಯೋ ಹೃದಿ ಬೃಹಸ್ಪತೇ ನ ಪರಃ ಸಾಮ್ನೋವಿದುಃ
ಇತಿ ॥

ಭಗವಂತನ ಉತ್ತಮತ್ವದ ಅಜ್ಞಾನಿಗಳು (ದ್ವೇಷಿಗಳು) ಅನ್ನಾದಿಗಳಲ್ಲಿಯೇ ಆಕಾಂಕ್ಷೆಯುಳ್ಳವರು ಯಾವಜೀವರಿಗೆ ವಾಸುದೇವಾಖ್ಯ ಬ್ರಹ್ಮನು ಪರಬ್ರಹ್ಮ ವಲ್ಲವ್ರೋ ಜಗತ್ತೇ ಇಲ್ಲವೇ ಪರಂತು ಬ್ರಹ್ಮನು ನಿರ್ಗುಣನೋ, ಏಕವಿಧನಲ್ಲದವನೋ ಅನಿರ್ವಾಚ್ಯನೋ ಅವರು ತಮೋ ಯೋಗ್ಯರು ಜ್ಞಾನೋಪದೇಶಕ್ಕೆ ಅಯೋಗ್ಯರು ವಿಷ್ಣು ನಿಷ್ಠೆಯಿಂದ ಆತನಲ್ಲಿಯೇ ಮನನ ಶೀಲನಾದ ನಿಷ್ಕಾಮಕರ್ಮಗಳಿಗೆ ಮತ್ತು ದೇವತೆಗಳಿಗೂ ನಿಯಾಮಕನಾದ ಬ್ರಹ್ಮನನ್ನು ಹೃದಯದಲ್ಲಿ ಹೊಂದಿ ಆತನೇ ಶ್ರೇಷ್ಠ ನೆಂದು ತಿಳಿದುಕೊಂಡವನಿಗೆ ಮಾತ್ರ ಜ್ಞಾನೋಪದೇಶವು ಯುಕ್ತವು ವಿಧಿಯು ಕೂಡ

3 ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ ಗೋಪಾಯ ಮಾಂ ಶೇವ
ಧಿಷ್ಟೇಹಮಸ್ಮಿ ।
ಅನಾರ್ಯಕಾಯಾ ನೃಜವೇ ಶಠಾಯನ ಮಾಂ ಬ್ರೂಯಾ
ಋಜವೇ ಬ್ರೂಹಿ ನಿತ್ಯಮಿತಿ ಚ ॥

ವಿದ್ಯಾದೇವತೆಯು ವಾಯುದೇವರನ್ನು ಪ್ರಾರ್ಥನೆ ಮಾಡುವಳು. ಹೇ ವಾಯುವೇ ನನ್ನನ್ನು ಜೋಪಾನ ಮಾಡು ನಾನು ವಿಧಿಯು ಅನಿವಾರ್ಯನಿಂದ ಕಾಪಾಡು ಎಂದು

ಭಾಗವತವಾಕ್ಯವು : ತಿತಿಕ್ಷವಃ ಕಾರುಣಿಕಾಃ ಸುಹೃದಃ ಸರ್ವದೇಹಿನಾಂ ।
ಅಜಾತಶತ್ರವಃ ಶಾಂತಾಃ ಸಾಧವಃ ಸಾಧುಭೂಷಣಾಃ ।
ಮಯ್ಯನನ್ಯೇನ ಭಾವೇನ ಭಕ್ತಿಂ ಕುರ್ವಂತಿ ಯೇ
ಧೃಢಾಂ ।
ಮತ್ಕೃತೇ ತ್ಯಕ್ತ ಕರ್ಮಾಣಃ ತ್ಯಕ್ತ ಸ್ವಜನ
ಬಾಂಧವಾಃ ಮದಾಶ್ರಯಕಥಾಹೃಷ್ಟಾಃ - - - -

ಹೀಗೆ ಋಷಿಗುಣದಿಂದ ಕೂಡಿದ ಸಜ್ಜನನಿಗೆ ನನ್ನನ್ನು ಉಪದೇಶಮಾಡು. ಮೂರ್ಖನಿಗೆ ಉಪದೇಶ ಬೇಡ

ಇತ್ಯನ್ವಯಾಧಿಕರಣಂ

## – ಐಹಿಕಾಧಿಕರಣಂ –

ಈ ಅಧಿಕರಣದಲ್ಲಿ ಅಪರೋಕ್ಷ ಜ್ಞಾನಕ್ಕೆ ಪ್ರತಿಬಂಧವಿಲ್ಲದಿದ್ದಲ್ಲಿ ಸಾಧನ ಸಂಪತ್ತ್ಯ ನಂತರ ಈ ಜನ್ಮದಲ್ಲಿಯೇ ಫಲಪ್ರಾಪ್ತಿ ಸಮರ್ಥನವು

**ಸೂ॥ ಓಂ॥ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ॥ 50**

ಪ್ರಾರಬ್ಧ ಕರ್ಮ ಪ್ರತಿಬಂಧವಿಲ್ಲದಿದ್ದಲ್ಲಿ ಶ್ರವಣಾದಿಗಳಿಂದ ಹೊಂದಿದ ಅಪರೋಕ್ಷ ಜ್ಞಾನವಾದ ಜನ್ಮದಲ್ಲಿಯೇ ಮೋಕ್ಷವು ಪ್ರತಿಬಂಧಕವಿದ್ದಲ್ಲಿ ಜನ್ಮಾಂತರ ದಲ್ಲಿ ಮೋಕ್ಷವು ಶೃತ್ಯಾ ಶೃತಿಯು ಹಾಗೆ ಹೇಳುವುದು.

ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯ ।
(ಬೃ 4-4-5) ಇತಿ ದರ್ಶನಾರ್ಥಂ ಶ್ರವಣಾದಿ ವಿಧೀಯತೇ
ತಚ್ಚ ದರ್ಶನಮೈಹಿಕಮೇವ ಪ್ರಾರಬ್ಧಪ್ರತಿಬಂಧಾ ಭಾವೇ ।

ಪರಮಾತ್ಮನು ನೋಡಲ್ಪಡಬೇಕು. ಕೇಳಲ್ಪಡಬೇಕು. ತಿಳಿಯಲ್ಪಡಬೇಕು ಧ್ಯಾನಗಮ್ಯನಾಗಬೇಕು ಎಂದು 'ಪರಮಾತ್ಮನ ದರ್ಶನಕ್ಕೆ ಉಪಾಯವು ಹೇಳಿದೆ ಈ ದರ್ಶನವು ಪ್ರಾರಬ್ಧ ಕರ್ಮ ಪ್ರತಿಬಂಧವಿಲ್ಲದಿದ್ದಲ್ಲಿ ಅಜನ್ಮದಲ್ಲಿಯೇ ಆಗುವುದು ಪ್ರತಿಬಂಧವಿದ್ದಲ್ಲಿ ಜನ್ಮಾಂತರಪ್ರಾಪ್ತಿಯು

2 **ಶ್ರುತ್ವಾತ್ಮಾನಂ ಮತಿಪೂರ್ವಂ ಹ್ಯುಪಾಸ್ಯ ಇಹೈವ ದೃಷ್ಟಿಂ**
**ಪರಮಸ್ಯ ವಿಂದೇತ್ ।**
**ಯದ್ಯಾರಬ್ಧಂ ಕರ್ಮ ನಿಬಂಧಕಂ ಸ್ಯಾತ್ಪ್ರೇತ್ಯ ತತ ಪಶ್ಯೇದ್ಧ್ರುವಂ.**

ಗಮೋನಾನ್ವವೇಕ್ಷ್ಯೇತಿ ಸೌಪರ್ಣಶ್ರುತೌ ತದ್ದರ್ಶನಾತ್ ॥

ಪರಮಾತ್ಮನ ವಿಷಯವಾಗಿ ಶ್ರವಣ ಮನನಾದಿಗಳಿಂದ ಹೃದಯಾಂತರದಲ್ಲಿ ದೃಷ್ಟಿಸಿ ಉಪಾಸನೆಮಾಡಿ ಈ ಜನ್ಮದಲ್ಲಿಯೇ ಆತನ ದರ್ಶನ ಪ್ರಾಪ್ತವು. ಹಾಗೂ ಮೋಕ್ಷವು ಆವರೆ ಪ್ರಾರಬ್ಧ ಕರ್ಮಾರ್ಜನೆ ಅಡಚಣೆಯಿದ್ದಲ್ಲಿ ಅದರ ವ್ಯಯಾನಂತರ ಪುನಃ ಜನ್ಮದಲ್ಲಿ ಅಲ್ಪೋಪಾಸನೆಯಿಂದಲೇ ಪರಮಾತ್ಮದರ್ಶನವು (ಇತಿಸೌಪರ್ಣಶೃತೌತದ್ದರ್ಶನಾತ್)

3 ಅನಾದಿಜನ್ಮ ಸಂಬದ್ಧಂ ನಿರ್ಭೇತ್ತುಂ ಪಾಪಪಂಜರಂ ।
ಯಾವತ್ಯಾ ಸೇವಯಾ ಶಕ್ಯಂ ತಾವತ್ಕಾರ್ಯಂ ನ ಸಂಶಯಃ ।
ಯಾವದ್ದೂರೇ ಸ್ಥಿತೋ ಗವ್ಯಾತ್ತಾವದ್ಗಂತವ್ಯಮೇವ ಹಿ ।
ಇಹ ಜನ್ಮಾಂತರೇವಾಪಿ ತಾವತ್ಸ್ಯೈವತು ದರ್ಶನಂ ॥

ಅನಾದಿಜನ್ಮ ಸಂಪಾದಿತ ಕರ್ಮವು ಪಂಜರದ ರೀತಿಯಲ್ಲಿ ಪರಮಾತ್ಮ ಜ್ಞಾನ ದರ್ಶನ ಸಾಧನೆಗೆ ಪ್ರತಿಬಂಧಕವು. ಅಪಾರ ಪರಿಹಾರದವರೆಗೂ ಉಪಾಸನಾ ಮಾಡಲ್ಪಡಬೇಕು. ದೂರಸ್ಥಳಕ್ಕೆ ಹೋಗಬಯಸಿ ಹೇಗೆ ದೂರಪ್ರಯಾಣವನ್ನು ಮಾಡಲು ಸಿದ್ಧನಾಗಿರಬೇಕೋ ಹಾಗೆಯೇ ಈ ಜನ್ಮದಲ್ಲಾಗಲೀ ಮುಂದಿನ ಜನ್ಮಗಳಲ್ಲಾಗಲೀ ಪಾಪ ನಾಶಪರ್ಯಂತ ಉಪಾಸನೆಯು ಅಗತ್ಯವು.

4 ಶ್ರವಣಂ ಮನನಂ ಚೈವ ನಿದಿಧ್ಯಾಸನಮೇವ ಚ ।
ಪರೇ ಗುರೌಚ ಯಾ ಭಕ್ತಿಃ ಪರಿಚರ್ಯಾದಿಕಂ ಹರೇಃ ।
ವಿಷ್ಣಾಮೇನೇತಿ ಸಂಪ್ರೋಕ್ತಾ ಯಯಾ ತದ್ದರ್ಶನಂ ಭವೇದಿತಿ ॥
ಬೃಹತ್ಸಂಹಿತಾಯಾಂ ॥

ಶ್ರೀಹರಿಯ ಪರಿಚಾರಿಕೆಯನ್ನು ಮತ್ತು ಗುರುಗಳ ಸೇವೆಯನ್ನು ಭಕ್ತಿ ಪೂರ್ವಕವಾಗಿ ಶ್ರವಣ ಮನನ ನಿದಿಧ್ಯಾಸನ ಪೂರ್ವಕ ಮಾಡಲ್ಪಡಬೇಕಾದಷ್ಟನ್ನು ಮಾಡಿಯೇ ಪರಮಾತ್ಮದರ್ಶನವು

ಇತ್ಯೈಹಿಕಾಧಿಕರಣಂ

ಈ ಅಧಿಕರಣದಲ್ಲಿ ಬ್ರಹ್ಮಜ್ಞಾನದಿಂದ ಉತ್ಪತ್ತಿ ಜನ್ಮಾಂತರದಲ್ಲಿಯೇ ಪ್ರತಿಬಂಧಕವಿಲ್ಲದೆ ಮುಕ್ತಿ ಸಾಧನ ಮಹಿಮೆಯು ವರ್ಣನವು

## ಸೂ|| ಓಂ|| ಏವಂ ಮುಕ್ತಿಫಲಾನಿ ಯಮಸ್ತದವಸ್ಥಾವಧೃತೇ ಸ್ತದವಸ್ಥಾವಧೃತೇಃ ಓಂ|| 51

ಏವಮೇವ ಪ್ರಾರಬ್ಧಕರ್ಮಾಭಾವೇ ಶರೀರ ಪಾತಾನಂತರಮೇವ ಮೋಕ್ಷಃ ।
ತದ್ಭಾವೇ ಜನ್ಮಾಂತರಾಣೀತ್ಯ ನಿಯಮಃ ||

ಜ್ಞಾನ ಸಾಧನೆಗೆ ಹೇಗೆ ನಿಯಮವಿಲ್ಲವೋ ಹಾಗೆಯೇ ಮೋಕ್ಷಸಾಧನೆಗೂ ಈ ಶರೀರಾಪಾತಾನಂತರದಲ್ಲಿ ಮೋಕ್ಷವೆಂಬ ನಿಯಮವಿಲ್ಲ ಪ್ರಾರಬ್ಧಕರ್ಮವಿಲ್ಲದಿದ್ದಲ್ಲಿ ಈ ಜನ್ಮದಲ್ಲಿಯೇ ಮೋಕ್ಷವು. ಪ್ರಾರಬ್ಧಕರ್ಮವಿದ್ದಲ್ಲಿ ದೇಹಾಂತರಗಳನ್ನು ಹೊಂದಿ ಪ್ರಾರಬ್ಧಾಕರ್ಮಫಲಾನುಭವಾದ ನಂತರ ಮೋಕ್ಷವು. ಜ್ಞಾನಜನ್ಮದಲ್ಲಿ ಮುಕ್ತಿಯಾಗದ್ದಿರೂ ಆ ಜೀವರಿಗೆ ಮುಕ್ತಿಯು ಸಿದ್ಧವೇ ಪ್ರಾರಬ್ಧಕರ್ಮಗಳ ಫಲಾನುಭವಾನಂತರದಲ್ಲಿ ನಿಶ್ಚಯವಾಗಿ ಮುಕ್ತಿಪ್ರಾಪ್ತಿಯು.

ಈ ಅಧ್ಯಾಯದಲ್ಲಿ ಹೇಳಿರುವ ಸರ್ವನಿರ್ದಾರವೂ ನಿತ್ಯವೇ ಎಂದು ದ್ವಿರುಕ್ತಿಯು.

2 **ಧರ್ಮೀ ಸ್ವರ್ಗಂ ವಿಧರ್ಮೀ ನಿರಯಮೇತ್ಯೇವ ಬ್ರಹ್ಮಸಂಸ್ಥೋ ವ್ಯೃತಮೇತ್ಯೇವ ಬ್ರಹ್ಮಸಂಸ್ಥೋಽಮೃತಮೇವೇತಿ ಬ್ರಹ್ಮಸಂಸ್ಥಸ್ಯ ಮೋಕ್ಷಸ್ಯೈವಾವಧಾರಣಾತ್** ||

ಪುಣ್ಯಕರ್ಮ ಪಾಪಕರ್ಮಗಳನ್ನು ಮಾಡುವ ಜೀವನು ಸ್ವರ್ಗ ನರಕಲೋಕ

ಗಳನ್ನು ಕ್ರಮದಿಂದ ಹೊಂದುವನು. ಬ್ರಹ್ಮನಲ್ಲಿ ಸ್ಥಿರಬುದ್ಧಿಯುಳ್ಳವನು. ಮುಕ್ತಿಯನ್ನು ಹೊಂದುವನು

3 **ವಿದ್ವಾನಮೃತಮಾಪ್ನೋತಿ ನಾತ್ರ ಕಾರ್ಯಾವಿಚಾರಣಾ ।**
**ಅವಸನ್ನಂ ಯದಾರಬ್ಧಂ ಕರ್ಮ ತತ್ರೈವ ಗಚ್ಛತಿ ।**
**ನ ಚೇದ್ಬಹೂನಿ ಜನ್ಮಾನಿ ಪ್ರಾಪ್ಯೈವಾಂತೇ ನ ಸಂಶಯಃ ॥**
**(ಇತಿ ನಾರಾಯಣಾಧ್ಯಾತ್ಮೇ)**

ಜ್ಞಾನಿಯಾದವನು ಮುಕ್ತಿಯನ್ನು ಖಂಡಿತವಾಗಿಯೂ ಹೊಂದುವನು ಸಂಶಯವಿಲ್ಲ ಪ್ರಾರಬ್ಧಕರ್ಮವ್ಯಯವಾದಮೇಲೆ ಮುಕ್ತಿಯು. ಅದೇ ಜನ್ಮದಲ್ಲಿಯೇ ಅಥವಾ ಬಹು ಜನ್ಮಾಂತರಗಳಲ್ಲಿಯಾಗಲೀ ಹೊಂದುವನು ನಿಶ್ಚಯವು.ಇದು

ಇತಿ ಮುಕ್ತಿಫಲಾಧಿಕರಣಂ

ತೃತೀಯಾಧ್ಯಾಯಸ್ಯ ಚತುರ್ಥಃ ಪಾದಃ ಸಂಪೂರ್ಣಃ
ಶ್ರೀ ಕೃಷ್ಣಾರ್ಪಣಮಸ್ತು

ಶ್ರೀ ಗುರುಭ್ಯೋ ನಮಃ

ಶ್ರೀ ಮದಾನಂದತೀರ್ಥ ಭಗವತ್ಪಾದಾಚಾರ್ಯೇಭ್ಯೋ ನಮಃ ।

# ಶ್ರೀಮದ್‌ಬ್ರಹ್ಮಸೂತ್ರಾಣಿ

ಶ್ರೀ ಜಗನ್ನಾಥಯತಿಕೃತದೀಪಿಕಾನುಸಾರಿಣೀ

ಶ್ರೀ ಮನ್ಮಧ್ವಭಾಷ್ಯಸ್ಯ ಕರ್ನಾಟ ಭಾಷಾ ವಿವೃತಿಃ

## ಚತುರ್ಥಾಧ್ಯಾಯಃ ಪ್ರಾರಂಭಃ

ಶ್ರೀ ಗುರುಭ್ಯೋನಮಃ

# ಬ್ರಹ್ಮಸೂತ್ರಭಾಷ್ಯ—ಚತುರ್ಥಾಧ್ಯಾಯಃ

## ಪ್ರಥಮಪಾದಃ

### – ಆವೃತ್ತ್ಯಧಿಕರಣಂ –

1 ಫಲಂ ನಿಗದ್ಯತೇಽಸ್ಮಿನ್ನಧ್ಯಾಯೇ ಕರ್ಮನಾಶಾಖ್ಯಂ ಫಲಮಸ್ಮಿನ್ ಪಾದೇ ।
ನಿತ್ಯಶಃ ಕಾರ್ಯಂ ಸರ್ವಥಾ ಭಾವ್ಯಂ ಸಾಧನಂ ಪ್ರಥಮತಃ ಉಚ್ಯತೇ ।
ಪ್ರಾಯಿಕತ್ವಾಚ್ಚಾಧ್ಯಾಯಾನಾಂ ಪಾದಾನಾಂ ಚ ನ ವಿರೋಧಃ ॥

ಈ ಅಧ್ಯಾಯದಲ್ಲಿ ಮೋಕ್ಷಫಲವು ಹೇಳಲ್ಪಡುತ್ತದೆ. ಜ್ಞಾನಫಲವಾದ ಮೋಕ್ಷವು ನಾಲ್ಕು ವಿಧ (1) ಕರ್ಮಕ್ಷಯ (2) ಉತ್ಕ್ರಾಂತಿ (3) ಮಾರ್ಗ (4) ಮತ್ತು ಭೋಗವೆಂದು ಭೇದವು ಕರ್ಮಕ್ಷಯವು ಈ ಪಾದದಲ್ಲಿ ಹೇಳಿದೆ ಶ್ರೀ ಪರಮಾತ್ಮದರ್ಶನಪೂರ್ವಕಾಲೀನ ಸಂಚಿತಕರ್ಮನಾಶಾಖ್ಯಫಲವು ಈ ಪಾದದಲ್ಲಿ ಉಕ್ತವು ನಿತ್ಯದಲ್ಲಿಯೂ ಮೋಕ್ಷಫಲಕಾರಣ ವಿಶಿಷ್ಟ ಸಾಧನವಿಲ್ಲದೆ ಅಪರೋಕ್ಷ ಜ್ಞಾನವಾಗದಿರುವುದರಿಂದ ನಿತ್ಯಶಃ ಮಾಡಬೇಕಾದ ಶ್ರವಣ, ಮನನ, ಉಪಾಸನಾದಿ ಸಾಧನ ವಿಶೇಷಗಳು ಆವರ್ತನ ರೂಪವು ಆವಶ್ಯಕವು ಅಧ್ಯಾಯಪಾದಗಳ ವಿಭಜನೆ ಸ್ಥೂಲವಾಗಿರುವುದರಿಂದ ಪರಸ್ಪರ ವಿರೋಧ ಎಣಿಸಬಾರದು.

**ಸೂ॥ ಓಂ॥ ಆವೃತ್ತಿರಸಕೃದುಪದೇಶಾತ್ ಓಂ॥ 1**

ಜ್ಞಾನಕ್ಕಾಗಿ ಶ್ರವಣಾದಿಗಳ ಆವೃತ್ತಿರೂಪ ಸಾಧನಾನುಷ್ಠಾನವು ಮಾಡಲ್ಪಡಬೇಕು. ಶ್ವೇತಕೇತುವಿಗೆ ಉದ್ದಾಲಕರು ಪರತತ್ತ್ವ ಉಪದೇಶಕಾಲದಲ್ಲಿ ಬಹಳಸಲ ಆವೃತ್ತಿಯಿಂದ ಉಪದೇಶಮಾಡಿರುವುದರಿಂದ ಅದರಂತೆ ಆವೃತ್ತಿರೂಪ ಸಾಧನಾನುಷ್ಠಾನವೂ ಆವಶ್ಯಕವು

ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯ ಇತ್ಯಾದೀನಾಂ ನಾಗ್ನಿಷ್ಟೋಮಾದಿವದೇಕವಾರೇಣೈವ ಫಲಪ್ರಾಪ್ತಿಃ ಕಿಂತ್ವಾವೃತ್ತಿಃ ಕರ್ತವ್ಯಾ ।

ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಮಿತ್ಯಾದ್ಯಸಕೃದುಪದೇಶಾತ್ ॥
(ಬೃ 6-8-7)

ಅಗ್ನಿಷ್ಟೋಮದರ್ಶಪೌರ್ಣಮಾಸ್ಯಾದಿಯಜ್ಞಗಳು ಒಂದುಬಾರಿ ಮಾಡಿದಲ್ಲಿ ಸ್ವರ್ಗಲೋಕಪ್ರಾಪ್ತಿಯು ಹೇಳದೆಯೋ ಹಾಗೆಯೇ ಶ್ರವಣಾದಿ ಸಾಧನಗಳು ಒಂದು ಬಾರಿ ಅನುಷ್ಠಾನದಿಂದಲೇ ಜ್ಞಾನಸಾಧನ ಮೋಕ್ಷಫಲವು ಅನೇಕಾವರ್ತಿ ಶ್ರವಣ ಮನನ ನಿಧಿಧ್ಯಾಸನಾದಿಗಳು ಮಾಡಲು ನಿಯಮವಿಲ್ಲವಾಗಿ ಏಕವಾರಂ ಅನುಷ್ಠಾನವೇ ಯುಕ್ತವು ಎಂದು ಪೂರ್ವಪಕ್ಷವು ಆದರೆ ಇದು ಸರಿಯಲ್ಲ ಉದ್ದಾಲಕರು ಶ್ವೇತಕೇತುವಿಗೆ 9ಸಲ ಬ್ರಹ್ಮೋಪದೇಶ ಮಾಡಿರುವುದರಿಂದ ಅದರಂತೆ ಅನೇಕಬಾರಿ ಉಪಾಸನವು ಅಗತ್ಯವು ಉಪದೇಶಶೃತಿಯ ಅರ್ಥವು ಪರದೇವತಾಖ್ಯ ಶ್ರೀವಿಷ್ಣುವು ಜ್ಞಾನರೂಪನಾಗಿ ನಿಯಮ ಮಾಡುವುದರಿಂದ ಸರ್ವರಿಗೂ ಇಷ್ಟವಾದ ಸರ್ವವಿಘ್ನ ನಿವಾರಣ ಸರ್ವೇಚ್ಛಾಫಲದಾತೃವಾದ ಸೂಕ್ಷ್ಮ ಜ್ಞಾನವಿಷಯನಾದ ಸೂಕ್ಷ್ಮ ಪರಿಣಾಮನಾದ ಸರ್ವಸ್ವಾಮಿಯಾದ ಸರ್ವವ್ಯಾಪ್ತನಾದ ಪರಮಾನಂದ ಸಾಧು ಸ್ವರೂಪಣದ ಪೂರ್ಣನಾದ್ದರಿಂದ ಆತನೇ ಮುಖ್ಯದೇವತೆಯು ಪ್ರಧಾನನು ಸರ್ವ ಸ್ವಾಮಿಯು. ಎರಡು ಸರ್ವಸ್ವತಂತ್ರನು ಎಂದು ಅನೇಕಸಲ ಉಪಾಸನೆಯು ಮಾಡಲ್ಪಡಬೇಕು.

## ಸೂ॥ ಓಂ॥ ಲಿಂಗಾಚ್ಚ ಓಂ॥ 2

ಸ ತಪೋ ತಪ್ಯತ ಪುನರೇವ ವರುಣಂ ಪಿತರಮುಪಸಸಾರೇ ತ್ಯೈ (3-1-2) ಇತ್ಯಾದ್ಯಾವರ್ತನಲಿಂಗಾಚ್ಚ ।

ಬೃಗು ಋಷಿಗಳಿಂದ ಕೇಳಲ್ಪಟ್ಟ ಪುನರಾಲೋಚನಾರೂಪ ಅಪರೋಕ್ಷ ತತ್ವ ರೂಪ ಧರ್ಮರಿಂದ ಅನೇಕಸಲ ಉಪಾಸನೆಯು ಮಾಡಲ್ಪಡಲೇಬೇಕು. ಅಖ್ಯೆಯು ಶ್ರೀ ಬೃಗುಋಷಿಗಳು ತಂದೆಯಾದ ವರುಣದೇವರನ್ನು ಪರಬ್ರಹ್ಮೋಪದೇಶಕ್ಕಾಗಿ ಪ್ರಾರ್ಥಿಸಲು ಅವರಿಗೆ ಅನ್ನಮಯಾದಿ ಅಷ್ಟರೂಪಗಳನ್ನುಪದೇಶಿಸಿದರು ಆಪ್ರಕಾರಾ ಲೋಚನೆಯಿಂದ ಜಗಜ್ಜನ್ಮಾದಿ ಕತೃತ್ವ ಲಕ್ಷಣ ಅನ್ನಮಯಾ ನಿರುದ್ಧರೂಪವನ್ನು ಪ್ರತ್ಯಕ್ಷೀಕರಿಸಿಕೊಂಡು ನಂತರ ತಿರುಗಿ ವರುಣದೇವರಲ್ಲಿ ಪ್ರಾಣಾಖ್ಯರೂಪವನ್ನು ಉಪಾಸನಾಮಾಡಲು ಉಪದೇಶವನ್ನು ಹೊಂದಿ ಹಾಗೆಯೇ ಅನೇಕಸಲ ಉಪಾಸನೆಯು ಬ್ರಹ್ಮ, ತಪ, ಅನ್ನ, ಪ್ರಾಣ ಚಕ್ಷು, ಶ್ರೋತೃ, ಮನ, ವಾಚ, ದೇವತೆಗಳನ್ನು ಕ್ರಮವಾಗಿ ಪ್ರತ್ಯಕ್ಷೀಕರಿಸಿ ಪೂರ್ಣ ಬ್ರಹ್ಮಜ್ಞಾನವನ್ನು ಹೊಂದಿರುವುದರಿಂದ ಅನೇಕ ಸಲ ಅನುಷ್ಠಾನವು ಅವಶ್ಯಕವು.

ನಿತ್ಯಶಃ ಶ್ರವಣಂ ಚೈವ ಮನನಂ ಧ್ಯಾನಮೇವ ಚ ।
ಕರ್ತವ್ಯಮೇವ ಪುರುಷೈರ್ಬ್ರಹ್ಮದರ್ಶನಮಿಚ್ಛುಭಿರಿತಿ ಬೃಹತ್ತಂತ್ರೇ ॥

ಬ್ರಹ್ಮದರ್ಶನವನ್ನು ಮಾಡಲು ನಿತ್ಯವು ಶ್ರವಣ, ಮನನ, ಧ್ಯಾನ, ಪೂಜೆ, ಅತ್ಯಗತ್ಯವು.

ಇತ್ಯಾವೃತ್ತ್ಯಧಿಕರಣಂ

## – ಆತ್ಮಾಧಿಕರಣಂ –

ಈ ಅಧಿಕರಣವಲ್ಲಿ "ಆತ್ಮೇತ್ಯೇವೋಪಾಸೀತ" ಎಂದು ಯಾವಾಗಲೂ ಉಪಾಸನೆಯು ಸಮರ್ಥನೆ ಆತ್ಮಶಬ್ದವು ರೂಢಿಯಿಂದಲೂ ಸ್ವಾಮಿತ್ವದಿಂದಲೂ ಶ್ರೀ ವಿಷ್ಣುವಾಚ್ಯ ಪರಬ್ರಹ್ಮನಿಗೇ ಮುಖ್ಯವು.

**ಸೂ॥ ಓಂ॥ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ॥ 3**

ಶ್ರೀವಿಷ್ಣುವು ನನ್ನ ಸ್ವಾಮಿಯುಯೆಂದು ಆತ್ಮಾಎಂದು ಉಪಾಸಿಸಲ್ಪಡಬೇಕು ಹೀಗೆ ಜ್ಞಾನಿಗಳು ತಿಳಿದು ಉಪಾಸನೆಮಾಡಿ ಅದರಂತೆ ಶಿಷ್ಯೋಪದೇಶದಿಂದಲೂ ಯುಕ್ತವು

ಆತ್ಮೇತ್ಯುಪದೇಶ ಉಪಾಸನಂ ಚ ಮೋಕ್ಷಾರ್ಥಿಭಿಃ ಸರ್ವಥಾ ಕಾರ್ಯಮೇವ,
ನಾನ್ಯಂವಿಚಿಂತಯು ಆತ್ಮಾನ ಮೇವಾಹಂ ವಿಜಾನೀಯಾಮಾತ್ಮಾನ ಮುಪಾಸ
ಆತ್ಮಾ ಹಿ ಮಮ್ಯೈಷ ಭವತಿ ಇತಿ ಹ್ಯೇವ ಗಚ್ಛಂತಿ ।
ಆತ್ಮೇತ್ಯೇವೋಪಾಸ್ವ ಆತ್ಮೇತ್ಯೇವ ವಿಜಾನೀಹಿ ನಾನ್ಯಂ ಕಂಚನ ವಿಜಾನಥ
ಆತ್ಮಾಹ್ಯೇವೈಷ ಭವತೀತಿ ಗ್ರಾಹಯಂತಿ ಚ ॥

ಜ್ಞಾನಿಗಳು ಆತ್ಮಶಬ್ದದಿಂದ ಶ್ರೀ ವಿಷ್ಣುವೇ ತಮಗೆ ಸ್ವಾಮಿ ಎಂದು ತಿಳಿದು ಹಾಗೆ ಉಪಾಸನ ಮಾಡುವರು. ಮತ್ತು ತಮ್ಮ ಶಿಷ್ಯರಿಗೆ ಹಾಗೆಯೇ ಉಪದೇಶ ವನ್ನು ಮಾಡುವರು. ಉಪದೇಶವು ಸರ್ವಾಲೋಚನೆಗಳನ್ನು ತ್ಯಜಿಸಿ ಶ್ರೀ ವಿಷ್ಣುವೇ ನನ್ನ ಸ್ವಾಮಿಯೆಂದು ತಿಳಿದು ಸರ್ವಕಾಲದಲ್ಲಿಯೂ ಅವನನ್ನು ಆತ್ಮಾ ಎಂದು ಉಪಾ ಸನೆ ಮಾಡಬೇಕು ಮತ್ತು ವಿಶೇಷವಾಗಿ ತಿಳಿಯಬೇಕು. ಆ ವಿಷ್ಣುವೇ ಸರ್ವರಿಗೂ ಸ್ವಾಮಿಯು.

2 **ಆತ್ಮೇತ್ಯುಪಾಸನಂ ಕಾರ್ಯಂ ಸರ್ವಥೈವ ಮುಮುಕ್ಷುಭಿಃ ।**
**ನಾನಾಕ್ಲೇಶಸಮಾಯುಕ್ತೋಪ್ಯೇತಾವನ್ನೈವ ವಿಸ್ಮರೇತ್ ॥**
**ಇತಿ ಭವಿಷ್ಯತ್ಪರ್ವಣಿ**

ಮೋಕ್ಷಾರ್ಥಿಯು ಸರ್ವವಿಘ್ನಗಳನ್ನೂ ಗಮನಿಸದೆ ಸರ್ವವಿಧದಿಂದಲೂ ಶ್ರೀ ವಿಷ್ಣುವನ್ನೇ ಆತ್ಮಾ ಶಬ್ದದಿಂದ ಸರ್ವದೋಪಾಸನೆ ಮಾಡಬೇಕು. ಆತನನ್ನು ಮರೆಯಬಾರದು

ಆತ್ಮಾ ವಿಷ್ಣುರಿತಿ ಧ್ಯಾನಂ ವಿಶೇಷಣ ವಿಶೇಷ್ಯತಃ ।
ಸರ್ವೇಷಾಂ ಚ ಮುಮುಕ್ಷೂಣಾಮುಪದೇಶಶ್ಚ ತಾದೃಶಃ ॥
ಕರ್ತವ್ಯೋ ನಾಸ್ಯ ಹಾನೇನ ಕಸ್ಯಚಿನ್ಮೋಕ್ಷ ಇಷ್ಯತ ॥ ಇತಿ ಬ್ರಾಹ್ಮೇ

ಸರ್ವ ಮುಮುಕ್ಷುಗಳಿಂದಲೂ ಶ್ರೀ ವಿಷ್ಣುವೇ ನನ್ನ ಸ್ವಾಮಿಯು. ಆತ್ಮಾ

ಎಂದು ಧ್ಯಾನಮಾಡಬೇಕು ಮತ್ತು ಉಪದೇಶ ಮಾಡಬೇಕು. ಅನ್ಯಥಾ ಯಾವುದ ರಿಂದಲೂ ಮೋಕ್ಷವು ಸಾಧ್ಯವಿಲ್ಲ.

ಇತ್ಯಾತ್ಮಾಧಿಕರಣಂ

## - ನ ಪ್ರತೀಕಾಧಿಕರಣಂ -

ಈ ಅಧಿಕರಣದಲ್ಲಿ ಬ್ರಹ್ಮಜ್ಞಾನಾರ್ಥಿಗಳು ಶ್ರೀ ವಿಷ್ಣುವಿನ ಪ್ರತೀಕವನ್ನು ಶ್ರೀ ವಿಷ್ಣುವೆಂದೇ ಐಕ್ಯೋಪಾಸನೆಯನ್ನು ಮಾಡಬಾರದು ಎಂದು ಹೇಳಿದೆ.

## ಸೂ|| ಓಂ|| ನ ಪ್ರತೀಕೇ ನ ಹಿ ಸಃ ಓಂ|| 4

ಶ್ರೀ ವಿಷ್ಣುವನ್ನು ವಿಗ್ರಹದಲ್ಲಿ ಉಪಾಧ್ಯಧಿಷ್ಟನಾಗಿ ಇರುವನೆಂದು ಆತ್ಮಶಬ್ದೋಪಾಸನೆಯು ಮಾಡಬಾರದು. ಮತ್ತೆ ಆ ವಿಗ್ರಹದಲ್ಲಿ ವ್ಯಾಪಿಸಿಕೊಂಡಿರುವನೆಂದು ಉಪಾಸನೆಯು. ಶ್ರೀ ವಿಷ್ಣುವು ನಾಮಾದಿಪ್ರತೀಕಗಳ ಉಪಾಧಿಗ್ರಸ್ತನಲ್ಲ.

> ನಾಮ ಬ್ರಹ್ಮೇತ್ಯುಪಾಸ್ತ (ಛಾ 7-1-5) ಇತ್ಯಾದಿನಾ ಶಬ್ದಭ್ರಾಂತ್ಯಾ ನ ಪ್ರತೀಕೇ ಬ್ರಹ್ಮದೃಷ್ಟಿಃ ಕಾರ್ಯಾ ಕಿಂತು ತತ್ಸ್ಥತ್ವೇನೈವೋಪಾಸನಂ ಕಾರ್ಯಂ ||

ಐಕ್ಯತ್ವಭ್ರಾಂತಿಯಿಂದ ಆತ್ಮಾ ಎಂಬ ಉಪಾಸನೆಯು ಅಯುಕ್ತವು ಮತು ಭ್ರಾಂತಿಮೂಲಕವು. ಶ್ರೀ ಪರಮಾತ್ಮನು ನಾಮ, ವಾಕ್, ಮನಃ, ಸಂಕಲ್ಪಾದಿ ಶಬ್ದಗಳಿಂದ ತಿಳಿಯಲ್ಪಡುವ ಉಷಾ, ಸ್ವಾಹಾ, ಪರ್ಜನ್ಯಮಿತ್ಯಾದಿ ರೂಪ ಪ್ರತಿಮೆಗಳಲ್ಲಿ ಬ್ರಹ್ಮೋಪಾಸನವು ಯುಕ್ತವಲ್ಲ. ಪ್ರತೀಕದಲ್ಲಿ ಮಾತ್ರ ಬ್ರಹ್ಮದೃಷ್ಟಿಯು ಜೀವಪರವಾಗಿ ವಿಷ್ಣುವಿನ ಉಪಾಸನೆಯಲ್ಲ. ಶ್ರೀ ವಿಷ್ಣುವೇ ಆ ಪ್ರತೀಕದಲ್ಲಿ ಒಳಗೆ ವ್ಯಾಪ್ತವಾಗಿ ಪ್ರತಿಷ್ಠಿತನೆಂದು ಮಾತ್ರ ಉಪಾಸನೆಯು.

2 ನಾಮಾದಿಪ್ರಾಣಪರ್ಯಂತ ಮುಭಯೋಃ ಪ್ರಥಮಾತ್ವತಃ ।
ಐಕ್ಯದೃಷ್ಟಿರಿತಿ ಭ್ರಾಂತಿ ರಬುಧಾನಾಂ ಭವಿಷ್ಯತಿ ।
ನಾಮಾದಿ ಸ್ಥಿತಿರೇವಾತ್ರ ಬ್ರಹ್ಮಣೋ ಹಿ ವಿಧೀಯತೇ ।
ಸರ್ವಾರ್ಥಾ ಪ್ರಥಮಾ ಯಸ್ಮಾತ್ಸಪ್ತವ್ಯರ್ಥಾ ತತೋಮತಾ ॥
ಇತಿ ಬ್ರಹ್ಮತರ್ಕೆ

ನಾಮಾದಿ ಪ್ರಾಣಪರ್ಯಂತೆ ನಾಮಬ್ರಹ್ಮ ಪ್ರಾಣಬ್ರಹ್ಮ ವಾಕ್ಯಗಳು ಮೇಲ್ನೋಟಕ್ಕೆ ಐಕ್ಯಪದಗಳಾಗಿ ಕಂಡರೂ ಭ್ರಾಂತಿಮಾತ್ರವು ಜ್ಞಾನಿಗಳು ಸತ್ಯ ಜ್ಞಾನ ಇತ್ಯಾಧಿ ಬ್ರಹ್ಮನಿಗೆ ನಾಮಪ್ರಾಣಾದಿಗಳಲ್ಲಿ ಅಂತಸ್ಥತ್ವವನ್ನೇ ತಿಳಿಯುವರು ಪದಗಳು ಪ್ರಥಮವಿಭಕ್ತಿಯಲ್ಲಿದ್ದರೂ ಸಪ್ತಮ್ಯಂತೆಗಳಾಗಿ ಪರಿವರ್ತನೆಯಿಂದ ಪ್ರತೀಕ ದಲ್ಲಿ ಅಂತರ್ಭಾವನು ಎಂದು ತಿಳಿಯುವು.

ಇತಿ ನ ಪ್ರತೀಕಾಧಿಕರಣಂ

## – ಬ್ರಹ್ಮಾಧಿಕರಣಂ –

ಈ ಅಧಿಕರಣದಲ್ಲಿ ಬ್ರಹ್ಮ ಎಂದು ಶ್ರೀ ವಿಷ್ಣುವಿನೋಪಾಸನೆಯು ಸಮರ್ಥನವು

## ಸೂ॥ ಓಂ॥ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ॥ 5

ಶ್ರೀ ಪರಮೇಶ್ವರನು ಬ್ರಹ್ಮಪೂರ್ಣನೆಂದು ಉಪಾಸನೆಯು ಯುಕ್ತವು. ಪೂರ್ಣತ್ವಗುಣವು ಉತ್ಕೃಷ್ಟವಾದ್ದರಿಂದ ಹಾಗೆ ಉಪಾಸನೆಯು ಉತ್ಕೃಷ್ಟವು.

ಬ್ರಹ್ಮದೃಷ್ಟಿಶ್ಚ ಸರ್ವಥಾ ಕಾರ್ಯೈವ ಪರಮೇಶ್ವರೇ । ಉತ್ಕೃಷ್ಟತ್ವಾತ್ ॥

ಆತ್ಮಶಬ್ದದಿಂದ ಉಪಾಸನಾರೀತಿಯಲ್ಲಿಯೇ ಬ್ರಹ್ಮದೃಷ್ಟಿಯಿಂದಲೂ ಶ್ರೀ ಪರಮಾತ್ಮನೋಪಾಸನೆಯು ಯುಕ್ತವು. ಶ್ರೀ ಪರಮಾತ್ಮನು ತನ್ನಸ್ವಾಮಿಯು

ಸರ್ವೋತ್ಕೃಷ್ಟನು ಎಂದು ಉಪಾಸನಾ ವಿಧಿಯು ಬ್ರಹ್ಮತ್ವದಲ್ಲಿ ಸರ್ವ ಗುಣಾಂತರ ಭಾವದಿಂದ ಸರ್ವಗುಣೋತ್ಕೃಷ್ಟನೆಂದು ಉಪಾಸನೆಯು ಸರ್ವ ಶ್ರೇಷ್ಟವು.

2 ಬ್ರಹ್ಮದೃಷ್ಟ್ಯಾ ಸದೋಪಾಸ್ಯೋ ವಿಷ್ಣುಃ ಸರ್ವೈರಪಿ ಧ್ರುವಂ ।
ಮಹತ್ತ್ವವಾಚೀ ಶಬ್ದೋಽಯಂ ಮಹತ್ವಜ್ಞಾನಮೇವ ಹಿ ।
ಸರ್ವತಃ ಪ್ರೀತಿಜನಕಮತಸ್ತತ್ಸರ್ವಥಾ ಭವೇತ್ ॥

ಶ್ರೀ ವಿಷ್ಣುವು ಸರ್ವರಿಂದಲೂ ಸರ್ವೋತ್ಕೃಷ್ಟತೆಯೆಂದು ಉಪಾಸನೆ ಮಾಡಲ್ಪಡ ಬೇಕು. ಬ್ರಹ್ಮಶಬ್ದವು ಮಹತ್ವವಾಚಕವಾಗಿ ಮಹತ್ವಜ್ಞಾನಪೂರ್ವಕ ಉಪಾಸನೆಯು ಯುಕ್ತವು.

3 ಆತ್ಮೇತ್ಯೇವ ಯದೋಪಾಸಾತದಾ ಬ್ರಹ್ಮತ್ವಸಂಯುತಾ ।
ಕಾರ್ಯೈವ ಸರ್ವಥಾ ವಿಷ್ಣೋರ್ಬ್ರಹ್ಮತ್ವಂ ನ ಪರಿತ್ಯಜೇತ್ ॥
ಇತಿ ಬ್ರಹ್ಮತರ್ಕೇ

ಪರಬ್ರಹ್ಮೋಪಾಸನೆಯು ಶ್ರೇಷ್ಟತ್ವಸರ್ವಗುಣಗಳಿಂದ ಯುಕ್ತವಾಗಿ ಸರ್ವಥಾ ಮಾಡಬೇಕು.

ಇತಿ ಬ್ರಹ್ಮಾಧಿಕರಣಂ

## – ಆದಿತ್ಯಾಧಿಕರಣಂ –

ಈ ಅಧಿಕರಣದಲ್ಲಿ ದೇವತೆಗಳಿಗೆ ಶ್ರೀ ವಿಷ್ಣುವನ್ನು ತಮಗೆ ಆಶ್ರಯವಾಗಿ ಉತ್ಪತ್ತಿ ಲಯಗಳಿಗೆ ಸ್ಥಾನಾವರ್ಯಗಳಲ್ಲಿ ಉಪಾಸನಾ ಸಮರ್ಥನೆಯು

**ಸೂ॥ ಓಂ॥ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ॥ 6**

ಶ್ರೀ ಪರಮಾತ್ಮಾಶ್ರಿತ ಅಂಗಗಳಲ್ಲಿ ಆದಿತ್ಯಾದಿ ದೇವತೆಗಳನ್ನು ಆಶ್ರಯತ್ವ ಧರ್ಮದಿಂದ ಉಪಾಸನೆ ಮಾಡಬೇಕು. ಯಾವ ದೇವತೆಗಳು ಯಾವಾಂಗದಲ್ಲಿ

ಉತ್ಪನ್ನನಾಗಿ ಆಶ್ರಯಿಸಿ ಲಯವನ್ನು ಹೊಂದುವರೋ ಆ ಧರ್ಮಗಳಿಂದ ಉಪಾಸನೆ ಯು ಮಾಡಲ್ಪಡಬೇಕು

ಚಕ್ಷೋಃ ಸೂರ್ಯೋಃ ಅಜಾಯತೇ (ಖು10ತ-90-13) ಇತ್ಯಾದ್ಯುಪಾ
ಸನಂ ಚ ದೇವಾನಾಂ ಕಾರ್ಯಮೇವ ।
ಸ್ವೋತ್ಪತ್ತಿಸ್ಥಾನಾತ್ವಾತ್ಸ್ವಶ್ರಯತ್ವಾನ್ಮುಕ್ತೌ ತತ್ರ ಲಯಸ್ಯಾಪೇಕ್ಷಿತತ್ವಾ
ಚ್ಚೋವಸನ್ನಂ ತೇಷಾಂ ತಥೋಪಾಸನಂ ॥

ಶ್ರೀ ಪರಮಾತ್ಮನ ಚಕ್ಷುರಂಗವು ಸೂರ್ಯದೇವರ ಉತ್ಪತ್ತಿಲಯ ಆಶ್ರಯ ಸ್ಥಾನವು ಹೀಗೆ ಉಪಾಸನೆಯು ಯುಕ್ತವು ನಾನಾ ದೇವತೆಗಳೂ ಹಾಗೆಯೇ ಉಪಾಸನೆ ಮಾಡಬೇಕು.

ನಾರಾಯಣತಂತ್ರೇ ಚ– ಆಧಿವ್ಯಾದಿನಿಮಿತ್ತೇನ ವಿಕ್ಷಿಪ್ತ ಚ ಮನಸೋಪಿ ತು।
ಗುಣಾನಾಂ ಸ್ಮರಣಾಶಕ್ತೌ ವಿಷ್ಣೋರ್ಬ್ರಹ್ಮತ್ವಮೇವ ತು ॥
ಸ್ಮರ್ತವ್ಯಂ ನತತಂ ತತ್ತು ನ ಕದಾಚಿತ್ಪರಿತ್ಯಜೇತ್ ॥
ಅತ್ರ ಸರ್ವಗುಣಾನಾಂ ಚ ಯತೋಂ ತರ್ಭಾವ ಇಷ್ಯತೇ ॥

ದೇವತೆಗಳಿಗೆ ವಿಷ್ಣುವಿನೋಪಾಸನವು ಆತ್ಮಾಬಹ್ಮ ಎಂದು ಮಾತ್ರವಲ್ಲ. ಮತ್ತೆ ಅಂಗಗಳಲ್ಲಿಯೂ ಯುಕ್ತವು ಏಕೆಂದರೆ ಅಂಗಗಳಲ್ಲಿ ಪ್ರವೇಶೋಪಾಸನೆಯು ಮುಕ್ತಿ ಫಲಪ್ರಾಪ್ತ್ಯರ್ಥವು ಆಧಿತ್ಯಾಧಿ ನಿಮಿತ್ತ ಚಂಚಲ ಮನಸ್ಸಾದರೂ ಬ್ರಹ್ಮಆತ್ಮಾಗಳು ಮರೆಯಲ್ಪಡಬಾರದು ಅವು ಮುಮುಕ್ಷುಗಳಿಗೆ ಶ್ರೇಷ್ಟಫಲದಾಯಕವು

3 ಸ್ವೋತ್ಪತ್ತ್ಯಂಗಂ ಚ ದೇವಾನಾಂ ವಿಷ್ಣೋಶ್ಚಿಂತ್ಯಂ ಸದೈವತು ।
ತೇಷಾಂ ತತ್ರ ಪ್ರವೇಶೋ ಹಿ ಮುಕ್ತಿರಿತ್ಯುಚ್ಯತೇ ಬುಧೈಃ ।
ತದಾಶ್ರಿತಾಶ್ಚ ತೇ ನಿತ್ಯಂ ತತಶ್ಚಿಂತ್ಯಂ ವಿಶೇಷತ ॥ ಇತಿ

ದೇವತೆಗಳಿಗೆ ಯುಕ್ತ ಅಂಗಾಶ್ರಿತೋಪಾಸನೆಯೇ ಮುಕ್ತಿಯಲ್ಲಿ ಪ್ರವೇಶಕೆ ಕಾರಣವು.

ಇತ್ಯಾದಿತ್ಯಾಧಿಕರಣಂ

ಈ ಅಧಿಕರಣದಲ್ಲಿ ಶ್ರೀ ಪರಮಾತ್ಮನೋಪಾಸನೆಗೆ ಆಸನಾದಿನಿಯಮದ ಸಮರ್ಥನೆ ಜಿಜ್ಞಾಸುವು ಶ್ರೀ ಪರಮಾತ್ಮನೋಪಾಸನೆಯನ್ನು ಯಾವಾಗಲೂ ಮಾಡಬೇಕಾಗಿ ಹೇಳಿರುವುದರಿಂದ ಸರ್ವಕಾಲದಲ್ಲಿಯೂ ವಿಧಿನಿಯಮಾಸಣಾದಿಗಳ್ಳ ಅಸಾಧ್ಯವು ಆಗಲ್ಯಸಿಲ್ಲವೆಂದು ಪೂರ್ವಪಕ್ಷವು

## ಸೂ॥ ಓಂ॥ ಆಸೀನಃ ಸಂಭವಾತ್ ಓಂ॥ 7

ಸರ್ವದೋಪಾಸನಂ ಕುರ್ವನ್ನ ಪ್ಯಾಸೀನೋ ವಿಶೇಷತಃ ಕುರ್ಯಾತ್ ।
ತದಾ ವಿಕ್ಷೇಪಾಲ್ಪತ್ವೇನ ಸಂಭವಾತ್ ॥

ಜಿಜ್ಞಾಸುವು ಆಸನದಲ್ಲಿ ಕುಳಿತೆ ಉಪಾಸನವನ್ನು ಮಾಡಬೇಕು ಆಗಲೆ ವಿಶೇಷವಿಲ್ಲದೆ ಮನೋ ಸ್ಥಿಮಿತತ್ವವು ಸಾಧ್ಯವು ಉಪಾಸನೆಗೆ ಏಕಾಗ್ರಚಿತ್ತತೆಯೂ ಅಪೇಕ್ಷಿತವಾದ್ದರಿಂದ ಅದು ಆಸನಸ್ಥರಿಗೆ ಸಾಧ್ಯವಾದುದರಿಂದ ಆಸೀನಸ್ಥನೇ ಚಿತ್ತೈಕ ಗ್ರತೆಯಿಂದ ಉಪಾಸನೆಯು ಯುಕ್ತವು.

## ಸೂ॥ ಓಂ॥ ಧ್ಯಾನಾಚ್ಚ ಓಂ॥ 8

ಸ್ಮರಣೋಪಾಸನಂ ಚೈವ ಧ್ಯಾನಾತ್ಮಕಮಿತಿ ದ್ವಿಧಾ ।
ಸ್ಮರಣಂ ಸರ್ವದಾ ಯೋಗ್ಯಂ ಧ್ಯಾನೋಪಾಸನಮಾಸನೇ ॥

ಧ್ಯಾನವೆಂದರೆ ಚಿತ್ತೈಕಾಗ್ರತೆಯಿಂದ ಚಂಚಲಮನಸ್ಸಿಲ್ಲದೆ ಪರಮಾತ್ಮೋಪಾಸನೆಯು. ಇದು ಆಸನದಲ್ಲಿದ್ದರೆ ಸಾಧ್ಯವು ಸರ್ವದಾ ಪರಮಾತ್ಮನ ಚಿಂತನವು ಸಾಧಾರಣವು. ಹೀಗೆ ಉಪಾಸನೆಯು ಎರಡುವಿಧ.

**3 ನೈರಂತರ್ಯೇಣ ಮನೋವೃತ್ತೇರ್ಧ್ಯಾನ ಮಿತ್ಯುಚ್ಯತೇ ಬುಧೈಃ ।**
**ಆಸೀನಸ್ಯ ಭವೇತ್ತತ್ತು ನ ಶಯಾನಸ್ಯ ನಿದ್ರಯಾ ।**
**ಸ್ಥಿತಸ್ಯ ಗಚ್ಛತೋ ವಾಪಿ ವಿಕ್ಷೇಪಸ್ಯೈವ ಸಂಭವಾತ್ ।**

ಸ್ಮರಣಾತ್ಪರಮಂ ಜ್ಞೇಯಂ ಧ್ಯಾನಂ ನಾಸ್ತ್ಯತ್ರ ಸಂಶಯಃ ।
ಇತಿ ನಾರಾಯಣ ತಂತ್ರೇ ಅತೋ ಧ್ಯಾನತ್ವಾಚ್ಚ ॥

ಜ್ಞಾನಿಗಳು ಮನೋವಿಕಲ್ಪವಿಲ್ಲದೆ ನಿರಂತರ ಸ್ಮರಣವು ಧ್ಯಾನವೆಂದ ಹೇಳುವರು. ಈ ಸ್ಥಿತಿಯು ಮಲಗಿರಲು ನಿದ್ರೆಯಲ್ಲಿ ಚಲನದಲ್ಲಿ ಮನಸ್ಸಿನ ವ್ಯಾಪಾರವು ಬೇರೆಕಡೆ ವ್ಯಾಪಾರಗಳುಳ್ಳದ್ದಾಗಿ ಮನೋ ವ್ಯಾಕುಲವೇ ಆಗುವುದು. ಶ್ರೀ ಪರಮಾತ್ಮನು ಸರ್ವದಾಸ್ಮರಣದಿಂದಲೂ ಆಸನಾಸೀನ ಚಿತ್ತಸ್ಥೈರ್ಯದಿಂದಲೂ ಧ್ಯಾನಮಾಡಲು ಹೇಳಿದೆ. ಎಂದು ನಾರಾಯಣತಂತ್ರದಲ್ಲಿ ಹೇಳಿದೆ.

## ಸೂ॥ ಓಂ॥ ಅಚಲತ್ವಂ ಚಾಪೇಕ್ಷ್ಯ ಓಂ॥ 9

ಇಂದ್ರಿಯಗಳನ್ನು ವಿಷಯಗಳಿಂದೊಪಸರಣದಿಂದ ಮಾತ್ರವೇ ಚಿತ್ತಸ್ಥೈರ್ಯವಾಗುವುದಿಲ್ಲ. ಶರೀರವೂ ಚಲನವಿಲ್ಲದಿರಬೇಕು. ಆದ್ದರಿಂದ ಆಸನದಿಂದಲೇಧ್ಯಾನೋಪಾಸನವು ಯುಕ್ತವು

ಅಚಲಂ ಚೇಚ್ಛರೀರಂ ಸ್ಯಾನ್ಮನಸಶ್ಚಾ ಪ್ಯಚಾಲನಂ ।
ಚಲನೇ ತು ಶರೀರಸ್ಯ ಚಂಚಲಂ ಚ ಮನೋಭವೇತ್ ॥ ಇತಿ ಬ್ರಹ್ಮಾಂಡೇ

ದೇಹವು ಚಲನವಿಲ್ಲದಿದ್ದಲ್ಲಿ ಮನಸ್ಸು ಚಂಚಲವಿಲ್ಲದ್ದಾಗುವುದು. ಶರೀರವು ಚಲನವಿದ್ದಲ್ಲಿ ಮನಸ್ಚಾಂಚಲ್ಯವು ಸಿದ್ಧವೇ.

## ಸೂ॥ ಓಂ॥ ಸ್ಮರಂತಿ ಚ ಓಂ॥ 10

ಗೀತಾಶೃತಿಯಲ್ಲಿಯೂ ಹಾಗೆ ಹೇಳಿದೆ.

ಸಮಂ ಕಾಯಶಿರೋ ಗ್ರೀವಂ ಧಾರಯನ್ನ ಚಲಂ ಸ್ಥಿರಃ ।
ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂದಿಶಶ್ಚಾನವಲೋಕಯನ್ ॥ ಇತ್ಯಾದಿ

ಆಸನದಲ್ಲಿ ಸ್ಥಿರವಾಗಿದ್ದು ಶರೀರ ಶಿರ ಕುತ್ತಿಗೆಗಳನ್ನು ಸಮವಾಗಿರಿಸಿ ಆಚಲನಾಗಿ ಯಾವ ದಿಕ್ಕನ್ನೂ ನೋಡದೆ ತನ್ನ ಮೂಗಿನ ಕೊನೆಯನ್ನು ದೃಷ್ಟಿಸುತ್ತಾ ಮಾಡುವ ಸಾಧನವು ವ್ಯಕ್ತಿಗಾಗಿ ಆನಂದವನ್ನು ಹೊಂದಲು ಸ್ಥಿರವಾದ ಉಪಾಸನೆಯು ಯುಕ್ತವಾದುದು.

## ಸೂ॥ ಓಂ॥ ಯತ್ರೈಕಾಗ್ರತಾ ತತ್ರಾವಿಶೇಷಾತ್ ಓಂ॥ 11

ದೇಶಕಾಲಾವಸ್ಥಾದಿಷು ಯತ್ರೈಕಗ್ರತಾ ಭವತಿ ತತ್ರೈವ ಸ್ಥಾತವ್ಯಂ ।

ದೇಶಕಾಲಾವಸ್ಥಾದಿಗಳಲ್ಲಿ ಮನಸ್ಥೈರ್ಯವನ್ನು ಹೊಂದಿ ಸಾವಧಾನವಾಗಿ ಧ್ಯಾನಮಾಡಲು ಹೇಗೆ ಸಾಧ್ಯವೋ ಹಾಗೆ ಅನುಸರಣವು ಯುಕ್ತವು.

7 **ತಮೇವ ದೇಶಂ ಸೇವೇತ ತಂ ಕಾಲಂ ತಾಮುವಸ್ಥಿತಂ ।**
**ತಾನೇವ ಭೋಗಾನ್ ಭುಂಜೀತ ಮನೋ ಯತ್ರ ಪ್ರಸೀದತಿ ।**
**ನ ಹಿ ದೇಶಾದಿಭಿಃ ಕಶ್ಚಿದ್ವಿಶೇಷಃ ಸಮುದೀರಿತಃ।**
**ಮನಃ ಪ್ರಸಾದನಾರ್ಥಂ ಹಿ ದೇಶಕಾಲಾದಿ ಚಿಂತನಾ॥ ಇತಿವರಾಹೇ**

ಯಾವದೇಶಕಾಲ ಅವಸ್ಥಾ ಭೋಜನಾದಿಗಳು ಮನಸ್ಸಿಗೆ ಸಮಾಧಾನಾದಿಕವೋ ಅವುಗಳನ್ನೇ ಧ್ಯಾನದಲ್ಲಿ ಅನುಸರಿಸಲು ಯೋಗ್ಯವು. ಮನಃ ಸ್ಥೈರ್ಯವೇ ಮುಖ್ಯವು ಮಿಕ್ಕ ದೇಶಾದಿಗಳಲ್ಲಿ ಯಾವ ವಿಶೇಷವೂ ಇಲ್ಲ.

ಇತ್ಯಾಸೀನಾಧಿಕರಣಂ

### – ಆ ಪ್ರಾಯಣಾಧಿಕರಣಂ –

ಈ ಅಧಿಕರಣದಲ್ಲಿ ಧ್ಯಾನವು ಪ್ರಾಣಾಂತ್ಯದ ವರೆಗೂ ಮಾಡಲ್ಪಡಬೇಕೆಂದು ಸಮರ್ಥನೆಯು. ಸಾಧನಕ್ಕೆ ಪ್ರಾಣಪರ್ಯಂತೋಪಾಸನೆಯು ಅಗತ್ಯವೇ ಹೊರ್ತು ಜ್ಞಾನಾರ್ಜನಾ ನಂತರ ಧ್ಯಾನವು ಅವಶ್ಯಕವಲ್ಲವಾಗಿ ಮುಕ್ತಿಪರ್ಯಂತ ಧ್ಯಾನವು ಯುಕ್ತವಲ್ಲವೆಂದು ಪೂರ್ವಪಕ್ಷವು

**ಸೂ|| ಓಂ|| ಆಪ್ರಾಯಣಾತ್ತತ್ರಾಪಿ ಹಿ ದೃಷ್ಟಂ ಓಂ|| 12**

ಯಾವನ್ಮೋಕ್ಷಸ್ತಾವದುಪಾಸನಾದಿ ಕಾರ್ಯಂ ।

ಮುಮುಕ್ಷುವು ಮೋಕ್ಷವಾಗುವವರ್ಯಂತ ಧ್ಯಾನ ಮಾಡಬೇಕು. ಮೋಕ್ಷದಲ್ಲಿಯೂ ಧ್ಯಾನವು ಉಂಟೆಂದು ಶೃತಿ ಸ್ಮೃತಿಗಳು ಹೇಳುವುವು

ಮೋಕ್ಷವಾಗುವ ಪರ್ಯಂತ ಅರ್ಚನ ಶ್ರವಣಾದಿ ಧ್ಯಾನಾದಿ ಉಪಾಸನೆಗಳನು , ಮಾಡಬೇಕು. ಜ್ಞಾನಾನಂತರ ಆನಂದಾತಿಶಯಪ್ರಾಪ್ತಿಗಾಗಿ ಧ್ಯಾನವನ್ನು ಮಾಡಬೇಕು. ಸಮ್ಯಕ್ ಜ್ಞಾನಾರ್ಜನೆಗೆ ಶ್ರವಣಾದಿಗಳೂ ಅವಶ್ಯಕವು.

2 **ಸಯೋ ಹ ವೈ ತದ್ಭಗವನ್ಮನುಷ್ಯೇಷು ಪ್ರಾಯಣಾಂತಮೋಂಕಾರಮಭಿ ಧ್ಯಾಯೀತ || (ಪ್ರ 5–1) ಇತಿ ಹಿಂ ಶ್ರುತಿಃ**

ಜ್ಞಾನಿಯಪ್ರಾಣವು ಶರೀರದಿಂದ ಹೊರ ಹೊರಡುವವರೆಗೂ ಓಂ ಎಂಬ ಪ್ರಣವದಿಂದ ಶ್ರೀ ಪರಮಾತ್ಮನನ್ನು ಸರ್ವಧಾ ಚಿಂತನೆ ಮಾಡಬೇಕು

3 **ಸರ್ವದೈನಮುಪಾಸೀತ ಯಾವದ್ವಿಮುಕ್ತಿರ್ಮುಕ್ತಾ ಅಪಿ ಹ್ಯೇನಮುಪಾಸತ || ಇತಿ ಸೌಪರ್ಣ ಶ್ರುತಿಃ**

ಜ್ಞಾನಪರ್ಯಂತವೂ ಅನಂತರವೂ ಕೂಡ ಧ್ಯಾನವು ಅವಶ್ಯಕವಾಗಿ ಮಾಡಲ್ಪಡಬೇಕು ಮುಕ್ತಿಯಲ್ಲಿಯೂ ಧ್ಯಾನವುಂಟು.

4 **ಶ್ರುಣು ಯಾದ್ಯಾವದ ಜ್ಞಾನಂ ಮತಿರ್ಯಾವದ ಯುಕ್ತತಾ ।
ಧ್ಯಾನಂ ಚ ಯಾವದೀಕ್ಷಾಸ್ಯಾನ್ನೇಕ್ಷಾ ಕ್ವಚ ನ ಬಾಧ್ಯತೇ ।
ದೃಷ್ಟತತ್ತ್ವಸ್ಯ ಚ ಧ್ಯಾನಂ ಯದಾ ದೃಷ್ಟಿರ್ನ ವಿದ್ಯತೇ ।
ಭಕ್ತಿಶ್ಜಾನಂತಕಾಲೀನಾ ಪರಮೇ ಬ್ರಹ್ಮಣಿ ಸ್ಫುಟಾ ।
ಅವಿಮುಕ್ತೇರ್ವಿಧಿರ್ನಿತ್ಯಂ ಸ್ವತ ಏವ ತತಃ ಪರಂ ||
ಇತಿ ಬ್ರಹ್ಮಾಂಡೇ**

ಮನಸ್ಸಿನಿಂದ ಅಜ್ಞಾನವು ದೂಡಲ್ಪಡುವವರೆಗೂ ಶ್ರವಣ ಮನನ ಧ್ಯಾನಾದಿ ಉಪಾಸನಾ ಮಾಡುತ್ತಾ ಜ್ಞಾನದಾರ್ಢ್ಯ ನಂತರ ದೃಷ್ಟಿಪರ್ಯಂತ ಧ್ಯಾನವನ್ನು

ಮಾಡಬೇಕು. ಎಲ್ಲಾ ಕಾಲದಲ್ಲಿಯೂ ಧ್ಯಾನವು ಭಾಧ್ಯವಲ್ಲ. ಮೋಕ್ಷ ಸಾಧನವೇ ತತ್ವವನ್ನು ನೋಡಿದಮೇಲೂ ವಿಚಲವಾದಲ್ಲಿ ಧ್ಯಾನಾವಶ್ಯಕವು. ಭಕ್ತಿಯೂ ಅನಂತಕಾಲೀನವು ಮತ್ತು ಬ್ರಹ್ಮನಲ್ಲಿ ನಿಷ್ಠೆಯು, ಮುಕ್ತ್ಯನಂತರ ಸ್ವಾಭಾವಿಕವಾಗಿಯೆ ಧ್ಯಾನವು.

ಇತಿ ಅಪ್ರಾಣಾಧಿಕರಣಂ

## – ತದಧಿಗಮಾಧಿಕರಣಂ –

ಈ ಅಧಿಕರಣದಲ್ಲಿ ಕರ್ಮಕ್ಷಯಾಖ್ಯ ಫಲಸಿದ್ಧಿಯ ಸಾಧನೆಯು

## ಸೂ|| ಓಂ|| ತದಧಿಗಮ ಉತ್ತರಪೂರ್ವಾಘಯೋರಶ್ಲೇಷ ವಿನಾಶೌ ತದ್ವ್ಯಪದೇಶಾತ್ ಓಂ|| 13

ಪರಬ್ರಹ್ಮನ ಪರೋಕ್ಷಜ್ಞಾನವಾದ ನಂತರ ಹಿಂದಿನ ಕಾಲದ ಪಾಪವು ನಾಶವಾಗಿ ಉತ್ತರಕಾಲೀನ ಪಾಪವು ಅನುಸರಿಸುವುದಿಲ್ಲ ಹೀಗೆ ಶೃತಿಯು.

ಬ್ರಹ್ಮದರ್ಶನ ಉತ್ತರಾಘಸ್ಯಾಶ್ಲೇಷಃ ಪೂರ್ವಾಘಸ್ಯ ವಿನಾಶಶ್ಚ ತದ್ಯಥಾ ಪುಷ್ಕರಪಲಾಶ ಅಪೋ ನ ಶ್ಲಿಷ್ಯಂತ ಏವಮೇವಂ ವಿದಿ ಪಾಪಂ ಕರ್ಮ ನ ಶ್ಲಿಷ್ಯತೇ । [ಛಾ 4-14-3]
ತದ್ಯಥೈಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹ್ಯಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೆ (ಛಾ 5-24-3) ಇತಿ ತದ್ವ್ಯಪದೇಶಾತ್ ॥

ಜ್ಞಾನೋತ್ತರಕಾಲದ ಪಾಪವು ಅಂಟಿಕೊಳ್ಳುವುದಿಲ್ಲ ಹಿಂದಿನ ಪಾಪವು ಪ್ರಾರಬ್ಧಕರ್ಮಗಳ ಫಲದ ವಿನಃ ಮಿಕ್ಕವೂ ನಾಶವಾಗುವುವು. ಆದರೆ ಜ್ಞಾನೊತ್ತರ ಕಾಲೀನ ಪಾಪದಿಂದ ಆನಂದಹ್ರಾಸವು, ಪದ್ಮಪತ್ರಕ್ಕೆ ಹೇಗೆ ನೀರು ಸಂಬಂಧವಿಲ್ಲವೋ

ಹಾಗೆಯೇ ಜ್ಞಾನಿಗಳಿಗೆ ಪಾಪಲೇಪವಿಲ್ಲ ಬೆಂಕಿಗೆ ಹುಲ್ಲುಕಡ್ಡಿಗಳು ಬೆಂದಂತೆ ಪಾಪಗಳು ನಾಶವಾಗುವುದು.

## ಸೂ|| ಓಂ|| ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ಓಂ|| 14

ಪುಣ್ಯಸ್ಯಾಪ್ಯೇವಮಸಂಶ್ಲೇಷ ಪಾತೇ ।
ತು ಶಬ್ದೋನುತ್ಥಾನವಾಚೀ ॥

ಭಗವದ್ವೇಷಿಗಳಿಗೆ ತಮಃ ಪ್ರಾಪ್ತಿಕಾಲದಲ್ಲಿ ಅವರು ಮಾಡಿದ ಪುಣ್ಯಗಳಿಗೂ ಜ್ಞಾನಿಗಳ ಪಾಪಗಳಂತೆ ಸಂಪರ್ಕವಿರುವುದಿಲ್ಲ. ಮತ್ತು ಪೂರ್ವದ ವಿನಾಶವೂ ಆಗುವುದು.

1 ಯಥಾಶ್ಲೇಷೋ ವಿನಾಶಶ್ಚ ಮುಕ್ತಸ್ಯ ತು ವಿಕರ್ಮಣಃ ।
ಏವಂ ಸುಕರ್ಮಣಶ್ಚಾಪಿ ಪತತಸ್ತಮಸಿ ಧ್ರುವಮಿತ್ಯಾಗ್ನೇಯೇ ॥

ಜ್ಞಾನಿಗಳಿಗೆ ಹೇಗೆ ಮಾಡಲ್ಪಟ್ಟ ಪಾಪಗಳ ಸಂಪರ್ಕರಾಹಿತ್ಯವೋ ಹಾಗೆಯೇ ಕರ್ಮಯೋಗ್ಯರಿಗೆ ಮಾಡಿದ ಪುಣ್ಯಗಳ ಸಂಪರ್ಕವು ರಹಿತವು.

## ಸೂ|| ಓಂ|| ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ಓಂ|| 15

ಪೂರ್ವಫಲಪುಣ್ಯಗಳು ಮಾತ್ರ ಪೂರ್ವಾನುಭವಕ್ಕೆ ಅವಧಿಯು ಆ ಪ್ರಾರಬ್ಧ ಕರ್ಮ ನಿವೃತ್ಯನಂತರದಲ್ಲಿ ಮೋಕ್ಷವು ಸತ್ಯವು. ಪೂರ್ವ ಪಾಪಗಳ ಅನಾರಬ್ಧ ಫಲಗಳು ನಾಶವಾಗುವುವು.

5 ಅನಾರಬ್ಧಕಾರ್ಯೇ ಏವ ಪೂರ್ವೇಪುಣ್ಯ ಪಾಪೇ ವಿನಶ್ಯತಃ ।
ತಸ್ಯ ತಾವದೇವ ಚಿರಂ ಯಾವನ್ನವಿಮೋಕ್ಷ್ಯೇಥ ಸಂಪಸ್ಸ್ಯತೆ ॥
ಇತಿ ತದವಧೇಃ (ಛಾ 6-14-2)

ಅಪರೋಕ್ಷಜ್ಞಾನಿಗಳಿಗೆ ಪ್ರಾರಬ್ಧ ಪುಣ್ಯ ಪಾಪಕರ್ಮಗಳ ಫಲಾನುಭವಾ

ನಂತರದಲ್ಲಿ ಮೋಕ್ಷಪ್ರಾಪ್ತಿಯು ನಿಶ್ಚಯವು ಮಿಕ್ಕ ಕರ್ಮಫಲಗಳು ನಾಶವಾಗುವವು

6 ತುಶಬ್ದಃ ಸ್ಮೃತಿದೋತಕಃ :
ಯದನಾರಬ್ಧ ಪಾಪಂ ಸ್ಯಾತ್ತದ್ವಿನಶ್ಯತಿ ನಿಶ್ಚಯಾತ್
ಪಶ್ಯತೋ ಬ್ರಹ್ಮ ನಿರ್ದ್ವಂದ್ವಂ ಹೀನಂ ಚ ಬ್ರಹ್ಮಪಶ್ಯತಃ ।
ದ್ವಿಷತೋ ವಾ ಭವೇತ್ಪುಣ್ಯನಾಶೋ ನಾಸ್ತ್ಯತ್ರ ಸಂಶಯಃ ।
ತಸ್ಯಾಪ್ಯಾರಬ್ಧಕಾರ್ಯಸ್ಯ ನ ವಿನಾಶೋಽಸ್ತಿ ಕುತ್ರಚಿತ್ ।
ಆರಬ್ಧಯೋಙ್ ನಾಶಃ ಸ್ಯಾದಲ್ಪಯೋಃ ಪುಣ್ಯಪಾಪಯೋ ॥
ಇತಿ ಚ ನಾರಾಯಣತಂತ್ರೇ

ಸಮಧಿಕಶೂನ್ಯ ಶ್ರೀ ಪರಬ್ರಹನ ದರ್ಶನದ ನಂತರ ಅಪ್ರಾರಬ್ದ ಕರ್ಮಫಲಗಳ ನಾಶವು ನಿಶ್ಚಯವು. ಬ್ರಹ್ಮದರ್ಶನವಿಲ್ಲದ ದ್ವೇಷಿಗಳಿಗೆ ಪುಣ್ಯನಾಶವು ಈ ಎರಡು ವಿಧ ಜೀವರುಗಳಿಗೂ ಪ್ರಾರಬ್ದ ಕರ್ಮ ಫಲಗಳು ನಾಶವಾಗುವುದಿಲ್ಲ ಅನುಭವಿಸಲ್ಪಡಲೇ ಬೇಕು. ಅನಂತರದಲ್ಲಿಯೇ ಮೋಕ್ಷವು ಅನಂತರವೇತಮಃ ಪ್ರಾಪ್ತಿಯು. ಆದರೂ ಅಲ್ಪಪ್ರಾರಬ್ದಕರ್ಮಗಳ ನಾಶವೂ ವುಂಟು

## ಸೂ॥ ಓಂ॥ ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ಓಂ॥ 16

ಅಗ್ನಿಹೋತ್ರಾದ್ಯಪಿ ಮೋಕ್ಷಾನುಭವಾಯೈವ ।
ತು ಶಬ್ದಾದ್ಬ್ರಹ್ಮದರ್ಶನವತಃ ॥

ಜಿಜ್ಞಾಸುವು ಬ್ರಹ್ಮಜ್ಞಾನಾನಂತರವೂ ಅಗ್ನಿಹೋತ್ರಾದಿಗಳು ಅಕರ್ಮಕರ್ತುಗಳಾಗಿ ಮಾಡಬೇಕು. ಈ ಕರ್ಮವು ಮೋಕ್ಷಜನಕವಾದ್ದರಿಂದ ಯುಕ್ತವುನ ಹಾಸ್ಯ ಎಂಬ ಶೃತಿಯಲ್ಲ ಬ್ರಹ್ಮದರ್ಶನಾನಂತರವೂ ಅಗ್ನಿಹೋತ್ರಾದಿ ಅಕಾಮ್ಯಕರ್ಮದಿಂದ ಮುಕ್ತಿಯಲ್ಲಿ ಆನಂದಾಧಿಕ್ಯವು ಹೇಳುವುದು.

9 ಸ ಏನಮವಿದಿತೋ ನ ಭುನಕ್ತಿ ಯಥಾ ವೇದೋ ವಾಽನನೂಕೋಽನ್ಯದ್ವಾ ಕರ್ಮಾಕೃತಂ ।

ಯದಿ ಹ ವಾ ಅಪ್ಯನೇವಂ ವಿನ್ಮಹತ್ಪುಣ್ಯಂ ಕರ್ಮ ಕರೋತಿ
ತದ್ಧಾಸ್ಯಾಂತತಃ ಕ್ಷೀಯತ ಏವಾತ್ಮಾನಮೇವ ಲೋಕಮುಪಾಸೀತ
ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ
ಕ್ಷೀಯತೇಽಸ್ಮಾದ್ಧ್ಯೇವಾತ್ಮನೋ ಯದ್ಯತ್ಕಾಮಯತೇ ತತ್ತ
ತ್ಸೃಜತೆ (ಬೃ 3-4-15) ಇತಿ ತದ್ದರ್ಶನಾತ್ ॥

ಈ ಶ್ರುತಿಯು ಮೇಲಿನ ವಿಷಯವನ್ನು ದೃಢಪಡಿಸುವುದು.

## ಸೂ ॥ಓಂ॥ ಅತೋಽನ್ಯದಪೀತ್ಯೇಕೇಷಾಮುಭಯೋಃ ಓಂ॥ 17

ಪ್ರಾರಬ್ಧ ಕರ್ಮಗಳಿಂದ ಬೇರೆಯಾದ ಜ್ಞಾನಪೂರ್ವೋತ್ತರ ಅಕಾಮ್ಯ ಅನಿಷ್ಟ ಅಪ್ರಾರಬ್ಧ ಫಲಗಳು ವಿನಾಶವಾಗಿ ಸಂಬಂಧಹೊಂದುವುದಿಲ್ಲ ಕೆಲವು ಶಾಖೆಗಳಲ್ಲಿ ಜ್ಞಾನೋತ್ತರ ಪೂರ್ವ ಅಪ್ರಾರಬ್ಧ ಅನಭಿಷ್ಟ ಕಾಮ್ಯಪುಣ್ಯಗಳೂ ಬಿಡಲ್ಪಡುವವೆಂದು ಹೇಳುವುದು.

ಮುಕ್ತಾವನುಭವಕಾರಣಾದ್ಯದನ್ಯತ್ಪುಣ್ಯಮಪಿ ವಿನಶ್ಯತಿ ।
ಅಪ್ರಾರಬ್ಧ ಮನಭೀಷ್ಟಂ ಚ। ತಥಾ ಹ್ಯೇಕೇಷಾಂ ಪಾಠ ಉಭಯೋಃ
ಸ್ತ್ಯಾಗೇನ । ತಸ್ಯ ಪುತ್ರಾದಾಯಮುಪಯಂತಿ ಸುಹೃದಃ ಸಾಧುಕೃತ್ಯಾಂ
ದ್ವಿಷಂತಃ ಪಾಪಕೃತ್ಯಾಂ ॥ ಇತಿ 'ಶಾಟ್ಯಾಯನ'

ಮೋಕ್ಷದಲ್ಲಿ ಫಲದಾಯಕವಾದ ಪುಣ್ಯವಿಶೇಷಗಳ ವಿನಹ ಮತ್ಯಾವ ಕರ್ಮ ಫಲವೂ ಆತನಿಗೆ ಉಳಿಯುವುದಿಲ್ಲ. ಮುಕ್ತಿಯಲ್ಲಿ ಈ ಫಲವು ಆನಂದಾತಿಶಯ ದಾಯಕವು. ಈ ಅನ್ಯಪುಣ್ಯಗಳ ಫಲವು ಪುತ್ರಾದಿ ಸ್ನೇಹಿತರಿಗೆ ಸುಖಪ್ರಾಪ್ತಿಯು. ದ್ವೇಷಿಗಳಿಗೆ ದುಃಖಪ್ರಾಪ್ತಿಯು ಉಂಟಾಗುವುದು.

11 ಅನಭೀಷ್ಟಮನಾರಬ್ಧಂ ಪುಣ್ಯಮಪ್ಯಸ್ಯ ನಶ್ಯತಿ । ಕಿಮು ಪಾಪಂ
ಪರಬ್ರಹ್ಮಜ್ಞಾನಿನೋ ನಾತ್ರ ಸಂಶಯಃ ॥ ಇತಿ ಪಾದ್ಮೆ

ಇಷ್ಟವಿಲ್ಲದ ಅನಾರಬ್ಧ ಪುಣ್ಯವನ್ನೇ ಬಿಟ್ಟಮೇಲೆ ಪಾಪಗಳನ್ನು ಬಿಟ್ಟುಹೋಗುವವೆಂದು ಹೇಳುವುದೇನು? ಪರಬ್ರಹ್ಮಜ್ಞಾನಿಗಳ ವಿಷಯದಲ್ಲಿ ಸರ್ವವೂ ಆನಂದವೇ

## ಸೂ|| ಓಂ|| ಯದೇವ ವಿದ್ಯಯೇತಿ ಹಿ ಓಂ|| 18

ಜ್ಞಾನಿಗಳಿಂದ ಮಾಡಲ್ಪಡುವದು ಅಲ್ಪಪುಣ್ಯವೂ ಮಹಾಫಲಪ್ರದವು ಹಾಗೆ ಯದೇವ ಎಂಬ ಶೃತಿಯು ಹೇಳುವುದು

ಬ್ರಹ್ಮದರ್ಶಿಕೃತಮಲ್ಪಮಪಿ ಪುಣ್ಯಂ ಮಹತ್ತಮಮನಂತಂ ಚ ಭವತಿ ।
ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ
ಭವತಿ । (ಛ 1-1-10) ಇತಿ ಶೃತಿಃ
ನ ಹಾಸ್ಯಕರ್ಮ ಕ್ಷೀಯತೆ ಬೃ (3-4-15) ಇತಿ ಚ

ಯಾವಕರ್ಮವು ಜ್ಞಾನಪೂರ್ವಕವಾಗಿ ಶ್ರದ್ಧೆಯಿಂದ ವೇದೋಕ್ತರೀತಿಯಲ್ಲಿ ಮಾಡಲ್ಪಡುವುದೋ ಅದು ಮಹಫಲಪ್ರದವು. ಜ್ಞಾನೋತ್ತರ ಕಾಲೀನ ಅಕಾಮ್ಯ ಕರ್ಮವು ಮಹಾಫಲಪ್ರದವಾದ್ದರಿಂದ ಅವಶ್ಯ ಕರ್ತವ್ಯವೇ ಈ ಫಲಕ್ಕೆ ವಿಪರೀತ ಫಲವು ದೇವದ್ವೇಷಿಗಳಿಗೆ

ಅಲ್ಪಮಾತ್ರಕೃತೋ ಧರ್ಮೋ ಭವೇದ್ ಜ್ಞಾನವತೋ ಮಹಾನ್ ।
ಮಹಾನಪಿ ಕೃತೋ ಧರ್ಮೋ ಹ್ಯಜ್ಞಾನಾಂ ನಿಷ್ಫಲೋ ಭವೇತ್ । ಇತಿ
ಚ ಭಾರತೇ

ಜ್ಞಾನಿಗಳು ಮಾಡಿದ ಅಲ್ಪಕರ್ಮವು ಮಹಾ ಫಲದಾಯಕವು ಅಜ್ಞಾನಿಗಳಾದ ಬ್ರಹ್ಮದ್ವೇಷಿಗಳಿಂದ ಮಾಡಲ್ಪಡುವ ಮಹತ್ಪುಣ್ಯ ಕರ್ಮವೂ ಕೂಡ ನಿಷ್ಫಲವು
ಭಾರತವಾಕ್ಯ

## ಸೂ|| ಓಂ|| ಭೋಗೇನತ್ವಿತರೇ ಕ್ಷಪಯಿತ್ವಾಥ ಸಂಪತ್ಸ್ಯತೇ ಓಂ|| 19

ಆರಬ್ಧ ಪುಣ್ಯಪಾಪೇ ಭೋಗೇನ ಕ್ಷಪಯಿತ್ವಾ ಬ್ರಹ್ಮ ಸಂಪತ್ಸ್ಯತೇ ।

ಬ್ರಹ್ಮಜ್ಞಾನಿಯು ಭೋಗಾನುಭವದಿಂದ ಪ್ರಾರಬ್ಧ ಪುಣ್ಯಪಾಪಗಳ ತ್ಯಾಗಾ

ನಂತರ ನಿಯಮವಾಗಿ ಬ್ರಹ್ಮನನ್ನು ಹೊಂದುವನು ಬ್ರಹ್ಮದ್ವೇಷಿಯಾದರೆ ತಮಸ್ಸನ್ನು ಹೊಂದುವನು.

14 **ಆರಬ್ಧಪುಣ್ಯ ಪಾಪಸ್ಯ ಭೋಗೇನ ಕ್ಷಪಣಾದನು ।**
**ಪ್ರಾಪ್ನೋತ್ಯೇವ ತಮೋ ಘೋರಂ ಬ್ರಹ್ಮವಾ ನಾತ್ರ ಸಂಶಯಃ**
**ಬ್ರಹ್ಮಣಾಂ ಶತಕಾಲಾತ್ತು ಪೂರ್ವಮಾರಬ್ಧ ಸಂಕ್ಷಯಃ ।**
**ನಿಯಮೇನ ಭವೇನ್ನಾತ್ರ ಕಾರ್ಯಾ ಕಾಚಿದ್ವಿಚಾರಣಾಃ ।**
**ಇತಿ ಚ ನಾರಾಯಣತಂತ್ರೇ**

ಪ್ರಾರಬ್ಧಪುಣ್ಯಪಾಪಫಲಾನುಭವದ ನಂತರ ಜ್ಞಾನಿಯು ಬ್ರಹ್ಮನನ್ನು ಹೊಂದುವನು. ಬ್ರಹ್ಮದ್ವೇಷಿಯು ಘೋರ ತಮಸ್ಸನ್ನು ಹೊಂದುವನು ಸಂಶಯವಿಲ್ಲ. ಚತುರ್ಮುಖಬ್ರಹ್ಮನ ಶತಕಾಲಪರ್ಯಂತದಲ್ಲಿಯೇ ಆರಬ್ಧಕರ್ಮನಾಶವು ನಿಯಮವು ಸರ್ವ ಜೀವರಿಗೂ ಆಗುವುದು

ಇತಿ ತದಧಿಗಮಾಧಿಕರಣಂ

ಪ್ರಥಮಪಾದಃ ಸಂಪೂರ್ಣಃ

ಶ್ರೀ ಕೃಷ್ಣಾರ್ಪಣ ಮಸ್ತು

ದ್ವಿತೀಯಃ ಪಾದಃ

**– ವಾಙ್ಮನಸಾಧಿಕರಣಂ –**

ಈ ಪಾದದಲ್ಲಿ ಅಧಿಕಾರಿ ಪದವನ್ನು ಹೊಂದಿರುವ ದೇವತೆಗಳು ಉತ್ತರೋತ್ತರ ಪ್ರವೇಶಾತ್ಮಕ ದೇಹದಿಂದ ಮೋಕ್ಷವನ್ನು ಹೊಂದುವರು ಜ್ಞಾನಿಗಳು ಪುನುಷ್ಯ

ಶರೀರದಿಂದ ಬ್ರಹ್ಮನಾಡೀದ್ವಾರ ಉತ್ಕ್ರಮಣವನ್ನು ಹೊಂದುವರು ಎಂದು ಹೇಳಲ್ಪಡುತ್ತದೆ

1 **ದೇವಾನಾಂ ಮೋಕ್ಷಉತ್ಕ್ರಾಂತಿಶ್ಚಾಸ್ಮಿನ್ಪಾದ ಉಚ್ಯತೇ ॥**

**ದೇವತೆಗಳಿಗೆ ಮೋಕ್ಷವಾಗುವಲ್ಲಿ ಉತ್ಕ್ರಾಂತಿಯು ಹೇಳಿದೆ.**

## ಸೂ॥ ಓಂ॥ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ॥ 1

ವಾಗಭಿಮಾನಿನ್ಯುಮಾ ಮನೋಭಿಮಾನಿನಿ ರುದ್ರೇ ವಿಲೀಯತೇ ।
ವಾಚೋ ಮನೋವಶತ್ವದರ್ಶನಾತ್ ।
ತಸ್ಯ ಯಾವನ್ನವಾಙ್ಮನಸಿ ಸಂಪದ್ಯತ ಇತಿ ಶಬ್ದಾಚ್ಚ ॥

ವಾಗಭಿಮಾನಿ ಉಮಾ ಪದದಿಂದ ಲಕ್ಷಿತವಾರುಣೀ ಸೌಪರ್ಣೀ ದೇವತೆಗಳು ರುದ್ರ ಶೇಷ, ಸೌಪರ್ಣ ದೇವತೆಗಳಲ್ಲಿ ಲಯವು ವಾಗಿಂದ್ರಿಯವು ಮನ ಇಂದ್ರಿಯದ ಅಧೀನತ್ವದಿಂದಲೂ ಶ್ರುತಿಯಿಂದಲೂ ಪ್ರತ್ಯಕ್ಷತ್ವದಿಂದಲೂ ಸಿದ್ಧವು ತಸ್ಯಯಾವನ್ಮನಸಿ ಸಂಪದ್ಯತೆ ಎಂಬ ಶ್ರುತಿಯು ಎಲ್ಲಿಯವರೆಗಿನ ವಾಗಭಿಮಾನಿ ಉಮಾ ದೇವತೆಗೆ ಮನೋಭಿಮಾನಿ ರುದ್ರದೇವರಲ್ಲಿ ಹಿಡಿಯಲ್ಪಟ್ಟ ವ್ಯಾಪಾರವಾಗುವುದೋ ಅದುವರೆಗೂ ಪುರುಷನನ್ನು ತನ್ನ ಸಂಬಂಧಿಗಳೆಂದು ತಿಳಿಯುವನು ಅನಂತರ ತಿಳಿಯನು. ಎಂದು ಶ್ರುತಿಯು.

2 **ಉಮಾ ವೈವಾಕ್ ಸಮುದ್ದಿಷ್ಟಾಮನೋರುದ್ರ ಉದಾಹೃತಃ ।**
**ತದೇತನ್ಮಿಥುನಂ ಜ್ಞಾತ್ವಾ ನ ದಾಂಪತ್ಯಾದ್ವಿಹೀಯತೆ ॥**
**ಇತಿ ಸ್ಕಾಂದೇ**

ಉಮಾದೇವಿಯೂ ವಾಕ್ ಎಂದೂ ರುದ್ರದೇವರು ಮನಸ್ಸೆಂದು ಹೇಳಿದೆ ಅವೆರಡರ ಸಂಯೋಗವೇ ದಾಂಪತ್ಯವೆಂದು ಕರೆಯಲ್ಪಡುವುದು

## ಸೂ॥ ಓಂ॥ ಅತಏವ ಚ ಸರ್ವಾಣ್ಯನು ಓಂ॥ 2

ಅದ್ದರಿಂದ ಸರ್ವದೇವತೆಗಳು ಸ್ವ ಸ್ವಯೋಗ್ಯ ದೇವತೆಗಳಲ್ಲಿ ಯಥಾನುಕೂಲ ಲಯವನ್ನು ಹೊಂದುವರು.

ಅತ ಏವ ಚ ಶಬ್ದಾತ್ಸರ್ವಾಣಿ ದೈವತಾನಿ ಯಥಾನುಕೂಲಂ ವಿಲೀಯಂತೇ
ಅಗ್ನೌ ಸರ್ವೇ ದೇವಾ ವಿಲೀಯಂತೇ ಅಗ್ನಿರಿಂದ್ರೇ ಇಂದ್ರ ಉಮಾಯಾಂ
ಉಮಾ ರುದ್ರ ವಿಲೀಯತೇ ಏವ ಮನ್ಯಾನಿ ದೈವತಾನಿ ಯಥಾನುಕೂಲಂ ||
ಇತಿ ಹಿ ಗೌಪವನ ಶ್ರುತೇಃ

ಸರ್ವ ದೇವತೆಗಳೂ ಅಗ್ನಿಯಲ್ಲಿಯೂ ಅಗ್ನಿಯು ಇಂದ್ರದೇವರಲ್ಲಿಯೂ ಇಂದ್ರನು ಉಮಾರಲ್ಲಿಯೂ ಉಮಾದೇವಿಯು ರುದ್ರರಲ್ಲಿಯೂ ಹಾಗೆಯೇ ಇತರ ದೇವತೆಗಳೂ ಕ್ರಮವಾಗಿ ಅನುಕೂಲದೇವತೆಗಳಲ್ಲಿ ಲಯ ಹೊಂದುವರು.

ಇತಿ ವಾಂಗ್ಮನಸಾಧಿಕರಣಂ

## – ಮನಃ ಪ್ರಾಣಾಧಿಕರಣಂ –

ಈ ಅಧಿಕರಣದಲ್ಲಿ ಮನಸ್ಸಿಗೆ ಪ್ರಾಣನಲ್ಲಿ ಲಯೋಕ್ತಿಯು.

### ಸೂ|| ಓಂ|| ತನ್ಮನಃ ಪ್ರಾಣಉತ್ತರಾತ್ ಓಂ|| 3

ಛಾಂದೋಗ್ಯ ಶೃತಿಯಲ್ಲಿ ಮನಃ ಪ್ರಾಣೆ ಎಂದು ಮುಂದಿರುವ ವಚನದಿಂದ ಮನೋಭಿಮಾನಿ ರುದ್ರ, ಶೇಷ, ಗರುಡ, ದೇವತೆಗಳು ಪ್ರಾಣದೇವಾಖ್ಯ ಚತುರ್ಮುಖ ಬ್ರಹ್ಮನಲ್ಲಿ ಲಯ ಹೊಂದುವರು.

ಮನಃ ಪ್ರಾಣ ಇತ್ಯುತ್ತರಾದ್ವಚನಾನ್ಮನೋಭಿಮಾನೀ ರುದ್ರಃ ಪ್ರಾಣೇ
ವಾಯೌ ವಿಲೀಯತೇ ।
ವಾಯೋರ್ವಾವ ರುದ್ರ ಉದೇತಿ ವಾಯೌ ವಿಲೀಯತೇ ತಸ್ಮಾದಾಹು
ರ್ವಾಯುರ್ದೇವಾನಾಂ ಶ್ರೇಷ್ಠ || ಇತಿ ಚ ಕೌಂಡಿನ್ಯಶೃತಿಃ

ಮನೋಭಿಮಾನಿ ರುದ್ರನು ಪ್ರಾಣನಲ್ಲಿ ಲಯಹೊಂದುವನು. ಗೌಪವನ

ಶೃತಿಯಲ್ಲಿ ರುದ್ರದೇವರು ವಾಯುವಿನಿಂದ ಪ್ರಕಟವಾಗುವನು. ವಾಯುವಿನಲ್ಲಿ ಲಯ ಹೊಂದುವನು ಆದ್ದರಿಂದಲೇ ವಾಯುದೇವರೂ ದೇವೋತ್ತಮರು ಎಂದು.

ಇತಿ ಮನಃ ಪ್ರಾಣಾಧಿಕರಣಂ

- ಅಧ್ಯಕ್ಷಾಧಿಕರಣಂ -

ಈ ಅಧಿಕರಣದಲ್ಲಿ ಪ್ರಾಣಶಬ್ದವಾಚ್ಯ ಚತುರ್ಮುಖ ಬ್ರಹ್ಮನು ಪರಮೇಶ್ವರನಲ್ಲಿ ಲಯ ಉಳ್ಳವನು ಎಂದು ಸಮರ್ಥನವು.

## ಸೂ|| ಓಂ|| ಸೋಧ್ಯಕ್ಷೇ ತದುಪಗಮಾದಿಭ್ಯಃ ಓಂ|| 4

ಚತುರ್ಮುಖ ಬ್ರಹ್ಮನು ಪರಮಾತ್ಮನಲ್ಲಿ ಲಯ ಹೊಂದುವನು ಪರಮಾತ್ಮ ಪ್ರಾಪ್ತಿ ಪ್ರತಿಪಾದಕ ಶೃತಿಯು ಹಾಗೆ ಹೇಳುವುದು

ಸ ಪ್ರಾಣಃ ಪರಮಾತ್ಮನಿ ವಿಲೀಯತೇ । ಸರ್ವೇಪ್ರಾಣ ಮುಪಗಚ್ಛಂತಿ ಪ್ರಾಣಃ ಪರಮುಪಗಚ್ಛತಿ ಪ್ರಾಣಂ ದೇವಾ ಅನುಪ್ರಾಣಂತಿ ಪ್ರಾಣಃ ಪರಮನು ಪ್ರಾಣಿತಿ ತಸ್ಮಾದಾಹುಃ ಪ್ರಾಣಸ್ಯ ಪ್ರಾಣ ॥ ಇತಿ ಪ್ರಾಣಃ ಪರಸ್ಯಾಂ ದೇವತಾಯಾಂ

ಪ್ರಾಣಶಬ್ದವಾಚ್ಯ ಬ್ರಹ್ಮನು ಪರಮಾತ್ಮನಾಧೀನನಾದ್ದರಿಂದ ಪರಮಾತ್ಮನಲ್ಲಿ ಲಯಹೊಂದುವನು. ಸರ್ವ ದೇವತೆಗಳೂ ತಮ್ಮ ತಮ್ಮ ಯೋಗ್ಯತೆಯಂತೆ ಪ್ರಾಣದ್ವಾರ ಪರಬ್ರಹ್ಮನನ್ನು ಹೊಂದಿ ಯೋಗ್ಯತಾನುಸಾರ ಭೋಗವನ್ನು ಪಡೆಯುವರು.

2 ಮುಕ್ತಾಃ ಸಂತೋಗ್ನಿಮಾವಿಶ್ಯ ದೇವಾಃ ಸರ್ವೇಪಿ ಭುಂಜತೇ ।
ಅಗ್ನಿರಿಂದ್ರಂ ತಥೇಂದ್ರಶ್ಚ ವಾಯುಮಾವಿಶ್ಯ ಸೋಪಿ ತು ।
ಆವಿಶ್ಯ ಪರಮಾತ್ಮಾನಂ ಭುಂಕ್ತೇ ಭೋಗಾಂಸ್ತು ಬಾಹ್ಯಕಾನ್ ।

**ನ ಹ್ಯಾನಂದೋ ನಿಜಸ್ತೇಷಾಂ ಪರ್ಯೈರ್ಲಭ್ಯಃ ಕಥಂಚನ ।**
**ಕಿಮು ವಿಷ್ಣೋಃ ಪರಾನಂದೋ ನ ತೇ ವಿಷ್ಣಾವಿತಿ ಶ್ರುತೇಃ ॥**

ಅಗ್ನಿಗಿಂತ ಅಧಮದೇವತೆಗಳು ಕರ್ಮಕ್ಷಯಾನಂತರ ಮುಕ್ತರಾಗಿ ಅಗ್ನಿದೇವತೆಯನ್ನು ಪ್ರವೇಶಿಸಿ ಅಲ್ಲಿದ್ದು ಸ್ವಯೋಗ್ಯಭೋಗಗಳನ್ನನುಭವಿಸುವುದು ಅಗ್ನಿದೇವರು ಇಂದ್ರ ವಾಯ್ವಾದಿ ಪರಂಪರಯಾ ಬ್ರಹ್ಮನನ್ನು ಪ್ರವೇಶಿಸಿ ಬಾಹ್ಯಭೋಗಗಳನ್ನು ಪರಮಾತ್ಮನ ಸ್ವರೂಪಾನಂದ ಮತ್ತು ಮುಕ್ತರಾನಂದಗಳಿಂದ ಅನ್ಯತರ ಸ್ವಯೋಗ್ಯ ಬಾಹ್ಯಪ್ರಾಕೃತ ವಿಷಯ ಭೋಗವನ್ನು ಅನುಭವಿಸುವನು ಅನ್ಯರ ಆನಂದಾನುಭವವೂ ಯಾರಿಗೂ ಇಲ್ಲ ಶ್ರೀ ವಿಷ್ಣುವಿನಾನಂದವಂತೂ ಯಾರಿಗೂ ಹೊಂದಲ ಸಾಧ್ಯವು. ಮುಕ್ತಿಯಲ್ಲಿ ಭೋಗಾರ್ಥಕ್ಕಾಗಿ ಪ್ರವೇಶ ಕ್ರಮವು ಸಾಮ್ಯವೇ.

3 **ಪ್ರಾಣಸ್ಯ ತೇಜಸಿ ಲಯೋ ಮಾರ್ಗಮಾತ್ರಮುದಾಹೃತಂ ।**
**ಸರ್ವೇಶಿತುಶ್ಚ ಸರ್ವಾದೇಸ್ತಸ್ಯಾನ್ಯತ್ರ ಲಯಃ ಕಥಂ ॥ ಇತ್ಯಾದಿ ಶ್ರುತಿಸ್ಮೃತಿಭ್ಯಃ**

ಪ್ರಾಣನಿಗೆ ತೇಜಸ್ಸಿನಲ್ಲಿ ಲಯವು ಮಾರ್ಗಮಾತ್ರಸೂಚಿತವು. ಸರ್ವೇಶ್ವರನಲ್ಲಿಯಲ್ಲದೆ ಇನ್ನೆಲ್ಲೂ ಲಯವು ಸಾಧ್ಯವಲ್ಲ **ಪ್ರಾಣಶಬ್ದವಾಚಕ (ಚತುರ್ಮುಖ** ಬ್ರಹ್ಮನು) ಶ್ರೀದೇವಿಯಲ್ಲಿ ಲಯಹೊಂದಿ ಮುಂದಿನ ಚತುರ್ಮುಖನಾಗುವನು. ಪ್ರಾಣನಿಗೆ ದೇಹಲಯವಿಲ್ಲ. ಪ್ರತ್ಯಕ್ಷದಿಂದ ಪುನಃ ಜನನವು.

ಇತ್ಯಧ್ಯಕ್ಷಾಧಿಕರಣಂ

**– ಭೂತಾಧಿಕರಣಂ –**

ಈ ಅಧಿಕರಣದಲ್ಲಿ ಹಿಂದೆ ವಿಶೇಷವಾಗಿ ಹೇಳಲ್ಪಟ್ಟ ದೇವತೆಗಳಿಗಿಂತ ಅನ್ಯದೇವತಾದಿಗಳು ಸರ್ವಭೂತಗಳಲ್ಲಿ ಲಯವು ಸಮರ್ಥನವು

**ಸೂ॥ ಓಂ॥ ಭೂತೇಷು ತಚ್ಛ್ರುತೇಃ ಓಂ॥ 5**

ಭೂತೇಷ್ವನ್ಯೇಷಾಂ ದೇವಾನಾಂ ಲಯಃ । ಭೂತೇಷು ದೇವಾ ವಿಲೀಯಂತೇ ಭೂತಾನಿ ಪರೇ ನ ಪರ ಉದೇತಿ ನಾಸ್ತಮೇತ್ಯೇಕಲ ಏವ ಮಧ್ಯೇ ಸ್ಥಿತಾ ॥ ಇತಿ ಬೃಹಚ್ಛ್ರುತೇಃ

ಅನ್ಯ ದೇವತೆಗಳು ಪೃಥಿವ್ಯಾದಿ ಭೂತಗಳ ದ್ವಾರಾ ಪರಮಾತ್ಮನನ್ನು ಹೊಂದುವರು ಆಕಾಶ ಭೂಮಿಗಳು ಬೃಹಸ್ಪತಿದ್ವಾರ. ಭೂತ ವಾಯುವು ಪ್ರವಹನು ಇಂದ್ರನದ್ವಾರ ಆಪವು ಸೋಮದ್ವಾರ ಪರಂಪರವಾಗಿ ಪರಮಾತ್ಮನಲ್ಲಿ ಲಯವನ್ನು ಹೊಂದುವದು. ಪರಮಾತ್ಮನ ಹೊರ್ತು ಇನ್ನೆಲ್ಲಿಯೂ ಲಯವುಸಾಧ್ಯವಿಲ್ಲ. ಅವನೇ ಸ್ವತಂತ್ರನು

ಇತಿ ಭೂತಾಧಿಕರಣಂ

## – ನೈಕಸ್ಮಿನ್ನಧಿಕರಣಂ –

ಈ ಅಧಿಕರಣದಲ್ಲಿ ದೇವತೆಗಳಿಗೆ ಸರ್ವ ಭೂತಗಳಲ್ಲಿ ಲಯವು ಸಮರ್ಥನವು ಅಧಿಕಾಶಂಕೆ ಇಲ್ಲಿದೆ ಈ ಅಧಿಕರಣಪ್ರವೃತ್ತಿಯು ಪುನರುಕ್ತಿಯಲ್ಲ ಭೂತೇಷು ದೇವಾ ಎಂಬ ಶೃತಿ ಮತ್ತು ಅಗ್ನೌಸರ್ವೇದೇವಾ ಎಂಬ ಶೃತಿಗಳಲ್ಲಿ ವ್ಯತ್ಯಾಸೋಕ್ತಿಯು ಪೂರ್ವಪಕ್ಷವು.

## ಸೂ॥ ಓಂ॥ ನೈಕಸ್ಮಿನ್ ದರ್ಶಯತೋ ಹಿ ಓಂ॥ 6

ಅಗ್ನಿಭೂತದಲ್ಲಿಯೇ ಸರ್ವ ದೇವತೆಗಳ ಲಯವೂ ಅಲ್ಲ. ಮತ್ತೆ ಯಥಾಯೋಗ್ಯವೇ ಪೃಥಿವ್ಯಾಂ ಋಭವಃ ಮತ್ತು ಋಭವಃ ಪೃಥಿವ್ಯಾ ಎಂಬ ಶೃತಿಯೂ ಮಹೋಪನಿಷತ್ ಮತ್ತು ಚತುರ್ವೇದ ಶಾಖೆಯಲ್ಲಿ ಹಾಗೆ ಹೇಳಿದೆ

ನೈಕಸ್ಮಿನ್ಭೂತೇ ಸರ್ವೇಷಾಂ ದೇವಾನಾಂ ಲಯಃ ಪೃಥಿವ್ಯಾಮೃಭವೋ ವಿಲೀಯಂತೇ ವರುಣೇಽಶ್ವಿನಾವಗ್ನಾವಗ್ನಯೋ ವಾಯಾವಿಂದ್ರಃ ಸೋಮ ಆದಿತ್ಯೋ ಬೃಹಸ್ಪತಿರಿತ್ಯಾಕಾಶ ಏವ ಸಾಧ್ಯಾವಿಲೀಯಂತೇ ।

ಋಭನಾಮಕದೇವತೆಗಳು ಪೃಥಿವ್ಯಭಿಮಾನಿಧರಾದೇವಿಯಲ್ಲಿ ಅಶ್ವಿನೀ ದೇವತೆಗಳು ವರುಣನಲ್ಲಿ. ಅಗ್ನಿ ಜಡಾಭಿಮಾನಿದೇವತೆಗಳು ಅಗ್ನಿಯಲ್ಲಿ ವಾಯು ಶಬ್ದವಾಚ್ಯ ಹಿರಣ್ಯಗರ್ಭದಲ್ಲಿ ಇಂದ್ರ, ಸೋಮ ಆದಿತ್ಯ, ಬೃಹಸ್ಪತಿ ಇತ್ಯಾದಿ ಸರ್ವದೇವತೆಗಳ ಲಯವು ಇಂದ್ರದೇವರ ಲಯವು ಪ್ರತ್ಯುಕ್ತ ಕ್ರಮದಿಂದ ಸೌಪರ್ಣಿ ವಾರುಣೀ ದ್ವಾರದಿಂದ ಸೂರ್ಯನಿಗೆ ಬೃಹಸ್ಪತಿ ಶಕ್ರ ಸೌಪರ್ಣಿ ವಾಣೀ ದ್ವಾರದಿಂದ ಲಯವು. ಆಕಾಶದಭಿಮಾನಿ ಗಣಪತಿಯಲ್ಲಿ ಸಾಧ್ಯ ದೇವತೆಗಳ ಲಯವು.

2 ಮೃತ್ಯವಃ (ಋಭವಃ) ಪೃಥಿವ್ಯಾಂ ವರುಣ ಅಪ್ಪೋಗ್ನಯಸ್ತೇ
ಜಸಿ ಮರುತೋ ಮಾರುತ ಇತಿ ಆಕಾಶೇ ವಿನಾಯಕಾ ವಿಲೀಯಂತ
ಇತಿ ಮಹೋಪನಿಷಚ್ಚತುರ್ವೇದಶಿಖಾಚ ದರ್ಶಯತಃ ।
ಅತೋಗ್ನೌ ದೇವಾವಿಲೀಯಂತ ಇತಿ ತತ್ರ ನಿರ್ದಿಷ್ಟಾನಾಮೇವ ॥

ಮೃತ್ಯುನಾಮಕ ದೇವತೆಯು ಪೃಥಿವ್ಯಭಿಮಾನಿ ದೇವತೆಯಲ್ಲಿ ವರುಣಭಿನ್ನ ಅಪ್ ದೇವತೆಗಳು ತೇಜೋಭಿಮಾನಿ ಅಗ್ನಿಯಲ್ಲಿ ಭೂತವಾಯ್ವಾದಿಮರುದ್ಗಣಗಳಿಗೆ ಹಿರಣ್ಯಗರ್ಭನಲ್ಲಿ ಲಯವು. ಅನುವ್ಯಾಖ್ಯಾನರೀತ್ಯಾ ಸರ್ವ ದೇವತಾಲಯಕ್ರಮವು ಮನುಷ್ಯೋತ್ತಮರು ಮತ್ತು ನಿಋತಿಗಳು ಯಮನ ವೈಮನಸ್ಸು ಮನುಗಳು ಪ್ರಿಯವ್ರತಾದಿ ಚಕ್ರವರ್ತಿಗಳು ಸ್ವಾಯಂಭುವಮನುವಿನಲ್ಲಿ ಋಭುಗಳು ಪೃಥಿವಿಯಲ್ಲಿ, ಸಾಧ್ಯರು ಆಕಾಶದಲ್ಲಿ, ಅಗ್ನಿಪುತ್ರರು ಅಗ್ನಿಯಲ್ಲಿ, ಅಗ್ನಿಯು ಸೂರ್ಯನಲ್ಲಿ ಸೂರ್ಯ, ಆಕಾಶ, ಪೃಥಿವಿಗಳು ಗುರುವಿನಲ್ಲಿ, ಭೃಗಾದಿಗಳು ಪಕ್ಷದಲ್ಲಿ, ಮನು ಗುರುದಕ್ಷ ಶುಚೀ ಮತ್ತು ಮರುದ್ಗಣಗಳು ಇಂದ್ರನಲ್ಲಿ, ಗಂಧರ್ವರು ಕುಬೇರನಲ್ಲಿ, ನೂರು ಅಶ್ವಿನೀಗಳು, ಅಪಭಾಶಾಭಿಮಾನಿ ವರುಣನಲ್ಲಿ, ಕುಬೇರವರುಣರು ಸೋಮನಲ್ಲಿ ಸೋಮವಿಷ್ವೈಕ್ಸೇನಾದಿವಾರ್ಷಗರು ಅನಿರುದ್ಧನತ, ಅನಿರುದ್ಧ ಸನಕಾದಿ ಯತಿಗಳು ರತಿದೇವಿಯೂ ಕಾಮದೇವದಲ್ಲಿ, ಕಾಮದೇವನು ವಾರುಣಿಯಲ್ಲಿ, ವಾರುಣಿಯು ಶೇಷನಲ್ಲಿ, ಶೇಷನು ಸರಸ್ವತಿಯಲ್ಲಿ, ಇಂದ್ರನಿಗೆ, ಸೌಪರ್ಣಿಯಲ್ಲಿ, ಸೌಪರ್ಣಿಯು ಗರುಡನಲ್ಲಿ, ಗರುಡನು ಸರಸ್ವತಿಯಲ್ಲಿ ಲಯಗಳ ಕ್ರಮವು ಹೀಗೆ ಶೇಷಗರುಡ ಮಾರ್ಗ ಗಳಿಂದ ತನ್ನೋದರವನ್ನು ಪ್ರವೇಶಿಸಿದ ಅಖಿಲಪ್ರಪಂಚವನ್ನುಳ್ಳ ಸರಸ್ವತೀ ದೇವಿಯು ಹಿರಣ್ಯ ಗರ್ಭನಲ್ಲಿ ಲಯವು. ಹಿರಣ್ಯಗರ್ಭನು ಲಕ್ಷ್ಮಿಯನ್ನು ಪ್ರವೇಶಿಸಿ ಶ್ರೀಮನ್ನರಾಯಣನಲ್ಲಿ ಪ್ರವೇಶವು.

ಇತಿ ನೈಕಸ್ಮಿನ್ನಧಿಕರಣಂ

ಈ ಅಧಿಕರಣದಲ್ಲಿ ಪ್ರಕೃತಿಗೆ ಪರಬ್ರಹ್ಮನಲ್ಲಿ ಲಯವಿಲ್ಲವೆಂದು ಸಮರ್ಥನವು.

## ಸೂ॥ ಓಂ॥ ಸಮನಾ ಚಾಽಸೃತ್ಯುಪಕ್ರಮಾ ದಮೃತತ್ವಂ ಚಾನುಪೋಷ್ಯ ಓಂ॥ 7

ಶ್ರೀ ಲಕ್ಷ್ಮೀದೇವಿಯು ಲಯವಿಲ್ಲದವಳು ಆಕೆಯು ಶ್ರೀ ಪರಮಾತ್ಮನನ್ನು ಸರಿಸಿ ಸರ್ವದಾ ಉಪಾಸನಾ ಮಾಡುವುದರಿಂದ ಆಕೆಗೆ ನಿತ್ಯಮುಕ್ತತ್ವವು ಯಾವಾಗಲೂ ಸಂಸಾರೋಪಕ್ರಮವಿಲ್ಲವು. ಆಕೆಗೆ ದೇಶತಃ ಕಾಲತಃ ಪರಮಾತ್ಮನ ಸಮಾನಳು.

ದೇಶತಃ ಕಾಲತಶ್ಚ ವ್ಯಾಪ್ತ್ಯಾ ಸಮೋ ನಾ ಪರಮಪುರುಷೋ ಯಸ್ಯಾಃ ಸಾ ಸಮನಾ ।
ಸಂಸಾರಾನುಪಕ್ರಮಾತ್ಸ್ವತ ಏವಾಮೃತತ್ವಂ ತಸ್ಯಾಃ

ಲಕ್ಷ್ಮೀದೇವಿಯು ಪರಮಾತ್ಮನ ಅಧೀನಳಾಗಿ ಆಕೆಗೆ ಪರಮಾತ್ಮನಲ್ಲಿ ಲಯವು ಎಂದು ಪೂರ್ವಪಕ್ಷವು. ಆಕೆಯು ಶ್ರೀ ಪರಮಪುರುಷನ ಜತೆಯಲ್ಲಿ ನಿರಂತರವೂ ಇರುವುದರಿಂದ ದೇಶತಃ ಕಾಲತಃ ವ್ಯಾಪ್ತಿ ಪ್ರಭಾವದಿಂದ ಪರಮಾತ್ಮನಿಗೆ ಸಮಳಾಗಿ ಸರ್ವದಾ ಇರುವವಳು. ಸಂಸಾರಯೋಗವಿಲ್ಲದ್ದರಿಂದ ಸರ್ವದಾ ಮುಕ್ತಳೇ ತೇಜಃ ಪರಸ್ಯಾಂ ದೇವತಾಯಾಂ ಎಂಬ ಶ್ರುತಿಯು ಸರ್ವದಾ ಪರಮಾತ್ಮನ ಸಾಮೀಪ್ಯ ಯೋಜನೆಯು ಹರೇರತ್ಯಂತ ಸಾಮೀಪ್ಯಂ ಲಯೋ ಲಕ್ಷ್ಮ್ಯಾಃ ಪ್ರತೀರ್ತಿತಃ ಎಂಬ ಯುಕ್ತಿಯು.

2 ಬೃಹಚ್ಛ್ರುತಿಶ್ಚ –
ದ್ವಾವೇವ ಸೃತ್ಯನುಪಕ್ರಮೌ ಪ್ರಕೃತಿಶ್ಚ ಪರಮಶ್ಚ ದ್ವಾವೇತೌ ನಿತ್ಯಮುಕ್ತೌ ನಿತ್ಯೌ ಚ ಸರ್ವಗತೌ ಚೈತೌ ಜ್ಞಾತ್ವಾ ವಿಮುಚ್ಯತ॥
ಇತಿ

ಪ್ರಕೃತಿಪುರುಷರಿಗೆ ನಿತ್ಯಮುಕ್ತತ್ವಾದಿ ಸಾಮ್ಯವಿದ್ದರೂ ಸರ್ವ ಧರ್ಮ ಸಾಮ್ಯ

ವಿಲ್ಲ ಈ ಎರಡುವಸ್ತುಗಳು ದೇಹತೋಪಿ ನಿತ್ಯಗಳು ಸಂಸಾರಸಂಬಂಧವಿಲ್ಲದವುಗಳು ನಿತ್ಯಗಳು ಸರ್ವಜೀವಾಂತರ್ಗತಗಳು ಪ್ರಕೃತಿ ಪರಮಾತ್ಮನನ್ನು ಈ ರೀತಿಯಾಗಿ ತಿಳಿದು ಮುಕ್ತನಾಗುವನು ಇದಿಷ್ಟು ಧರ್ಮಮಾತ್ರವೇ ಇವರುಗಳಿಗೆ ಸಾಮ್ಯವು. ಶ್ರೀ ಪರಮಾತ್ಮನು ಸರ್ವ ಸ್ವತಂತ್ರನು ಶ್ರೀ ಲಕ್ಷ್ಮೀ ದೇವಿಯು ಆತನ ಆಶ್ರಿತಳು (ಬೇಧ ಧರ್ಮವು)

## ಸೂ|| ಓಂ|| ತದಪೀತ್ರೇಃ ಸಂಸಾರವ್ಯಪದೇಶಾತ್ ಓಂ|| 8

ಸಮಾವೇತೌ ಪ್ರಕೃತಿಶ್ಚ ಪರಮಶ್ಚ ನಿತ್ಯೌ ಸರ್ವಗತೌ ನಿತ್ಯಮುಕ್ತೌ ಅಸಮಾವೇತೌ ಪ್ರಕೃತಿಶ್ಚ ಪರಮಶ್ಚ ವಿಲೀನೋ ಹಿ ಪ್ರಕೃತೌ ಸಂಸಾರಮೇತಿ ವಿಲೀನಃ ಪರಮೇಹ್ಯನ್ಯತತ್ವಮೇತೀತಿ ಸೌಪರ್ಣಶ್ರುತೇಃ ||

ಪ್ರಕೃತಿಯಲ್ಲಿ ಸಂಸಾರವನ್ನು ಹೊಂದಿಸಿ ಕೊಡುವುದರಿಂದಲೂ ಮತ್ತು ಮೋಚಕತ್ವ ಅಮೋಚಕತ್ವ ವಿರುದ್ಧ ಧರ್ಮಗಳಿಂದಲೂ ವ್ಯತ್ಯಾಸಧರ್ಮಗಳು ಮಾತ್ರವುಳ್ಳವುಗಳು ಅವರ ಸಂಯೋಗವು ಅನ್ಯರಿಂದ ಅದೃಷ್ಟವು ಮತ್ತು ಅವರಿಬ್ಬರ ಪರಿಜ್ಞಾನ ಮಾತ್ರ ಅವರ ದೇಹಗಳು ವಿನಾಶವಿಲ್ಲದೆ ನಿತ್ಯಗಳು

## ಸೂ|| ಓಂ|| ಸೂಕ್ಷ್ಮಂಪ್ರಮಾಣತಶ್ಚ ತಥೋಪಲಬ್ಧೇಃ ಓಂ||9

ಸೂಕ್ಷ್ಮತ್ವಂ ಚಾಧಿಕಂ ಬ್ರಹ್ಮಣಃ ಪ್ರಕೃತೇಃ ।
ಜ್ಞಾನಾನಂದೈಶ್ವರ್ಯಾದಿ ಪ್ರಮಾಣಾಧಿಕ್ಯಂ ಚ ।
ಸರ್ವತಃ ಪ್ರಕೃತಿಃ ಸೂಕ್ಷ್ಮಾ ಪ್ರಕೃತೇಃ ಪರಮೇಶ್ವರಃ ಜ್ಞಾನಾನಂದೌ
ತಥೈಶ್ವರ್ಯಂ ಗುಣಾಶ್ಚಾನ್ಯೇಧಿಕಾಃ ಪ್ರಭೋಃ || ಇತಿ ಚ ತುರಶ್ರುತೇಃ

ಪರಿಣಾಮದಲ್ಲಿಯೂ ಶ್ರೀ ಪರಮಾತ್ಮನು ಪ್ರಕೃತಿಗಿಂತ ಸೂಕ್ಷ್ಮನು ಜ್ಞಾನಾನಂದಾದಿ ಗುಣಪರಿಮಾಣದಿಂದಲೂ ಉತ್ತಮನು ಎಂದು ಸರ್ವತಃ ಎಂಬ ಶೃತಿಯು ಹೇಳುವುದು ಆದ್ದರಿಂದ ಪ್ರಕೃತಿಯು ಪರಬ್ರಹ್ಮನಿಂದ ಸರ್ವಸಾಮ್ಯ ಉಳ್ಳವಳಲ್ಲ

ಅತಸ್ತಸ್ಯ ಯೋ ವಿಶೇಷಗುಣಾಸ್ತೇಷಾಮನುಪಮರ್ದೇನ್ಯೈವ ಸಾಮ್ಯಂ ।

## ಸೂ॥ ಓಂ॥ ನೋಽಸರ್ವಾದೇನಾತಃ ಓಂ॥ 10

ಶ್ರೀ ಪರಮಾತ್ಮನ ಸರ್ವ ಸ್ವಾತಂತ್ರ್ಯಾದಿ ಗುಣವಿಶೇಷಕ್ಕೆ ಪ್ರತಿಬಂಧಕವಿಲ್ಲದ ಪ್ರಕೃತಿ ಪರಮಾತ್ಮನಿಗೆ ನಿತ್ಯಮುಕ್ತತ್ವಾದಿ ಧರ್ಮಗಳಿಂದ ಮಾತ್ರ ಸಾಮ್ಯವು.

9 ದೇಶತಃ ಕಾಲತಶ್ಚೈವ ಸಮಾ ಪ್ರಕೃತಿರೀಶ್ವರೇ ।
ಉಭಯೋರಪ್ಯಬದ್ಧತ್ವಂ ತದಬಂಧಃ ಪರಾತ್ಮನಃ ।
ಸ್ವತ ಏವ ಪರೇಶಸ್ಯ ಸಾ ಚೋಪಾಸ್ತೇ ಸದಾ ಹರಿಂ ।
ಪ್ರಕೃತೇಃ ಪ್ರಾಕೃತಸ್ಯಾಪಿ ಯೇ ಗುಣಾಸ್ತೇತು ವಿಷ್ಣುನಾ ।
ನಿಯಂತಾ ನೈವ ಕೇನಾಪಿ ನಿಯತಾ ಹಿ ಹರೇರ್ಗುಣಾಃ ॥
ಇತಿ ಭವಿಷತ್ಪರ್ವಣಿ ॥

ಪ್ರಕೃತಿ ಈಶ್ವರರ ದೇಶ ಕಾಲತಃ ಸಮರು ನಿತ್ಯಮುಕ್ತರು ಆದರೆ ಪರಮಾತ್ಮನು ಸ್ವತಃ ಸ್ವತಂತ್ರನು. ಪ್ರಕೃತಿಗೆ ಶ್ರೀ ಪರಮಾತ್ಮನಿಂದಲೇ ನಿತ್ಯ ಮುಕ್ತತ್ವವು ಸ್ವತಂತ್ರವಾಗಿಲ್ಲ. ಯಾವಾಗಲೂ ಪರಮಾತ್ಮನನ್ನು ಸೇವಿಸುವಳು ಪ್ರಕೃತಿಯು ಯಾವ ಪ್ರಾಕೃತ ಗುಣಗಳೋ ಅವು ಪರಮಾತ್ಮ ನಿಯಾಮಕವುಳ್ಳದ್ದು ಆದರೆ ಪರಮಾತ್ಮಗುಣಗಳು ಯಾರಿಂದಲೂ ನಿಯಮವಿಲ್ಲ ಅವನು ಸರ್ವತಂತ್ರ ಸ್ವತಂತ್ರನು (ಭವಿಷತ್ಪರ್ವಣಿ)

## ಸೂ॥ ಓಂ॥ ಅನ್ಯೈವಚೋಽಪಪತ್ತೇರೂಷ್ಮಾ ಓಂ॥ 11

ದ್ವಿಧಾ ಹೀದಮವದೃಶ್ಯತೇ । ಉಷ್ಮಾವದನೂಷ್ಮಾವಚ್ಚ । ತತ್ರೋಷ್ಮಾವತ್ಪರಂ
ಬ್ರಹ್ಮ ಯನ್ನಜಿಘ್ರಂತಿ ನ ಪಶ್ಯಂತಿ ನ ಶೃಣ್ವಂತಿ ನ ವಿಜಾನಂತಿ ।
ಅಥಾನೂಷ್ಮಾವತ್ಪ್ರಕೃತಿಶ್ಚ ಪ್ರಾಕೃತಂ ಚ । ಯನ್ನಜಿಘ್ರಂತಿ ಜಿಘ್ರಂತಿ ಚ
ಯನ್ನಪಶ್ಯಂತಿ ಪಶ್ಯಂತಿ ಚ ಯನ್ನಶೃಣ್ವಂತಿ ಶೃಣ್ವಂತಿ ಚ ಯನ್ನಜಾಯಂತಿ
ಜಾಯಂತಿ ಚ ॥ ಇತಿ ಸೌಪರ್ಣಶ್ರುತೇಃ ಕಿಂಚಿತ್ಸಾಮ್ಯೋಽಪಪತ್ತೇಃ

ಈ ಪ್ರಪಂಚದಲ್ಲಿ ಎರಡು ಜೀವಜಾತಿಗಳು. ಒಂದು ಶ್ರೀ ಪರಮಾತ್ಮನು ಸರ್ವ ಜಗತ್ತಿನ ಸಮಸ್ತ ವಸ್ತುಗಳಿಂದಲೂ ಇಂದ್ರಿಯಗಳಿಂದ ತಿಳಿಯಲ್ಪಡದಿರುವನು ಇಂದ್ರಿಯಾತೀತನು ಎರಡನೆಯದು ಪ್ರಕೃತಿಸಂಬಂಧದಿಂದ ಇಂದ್ರಿಯಗಳ ಕ್ರಿಯಾ

ಸ್ವತಃ ಇಂದ್ರಿಯ ಸಂಬಂಧವುಳ್ಳದಾಗಿ ಶ್ರೀ ಪರಮಾತ್ಮನನ್ನು ತಿಳಿಯಲು ಅಶಕ್ತವು ಪ್ರಕೃತಿಯಾದರೋ ವ್ಯಾಪಾರದಿಂದ ತಿಳಿಯಲ್ಪಡದಿದ್ದರೂ ಇತರ ಜೀವರ ಇಂದ್ರಿಯ ಗಳಿಗೆ ವಿಷಯಗ್ರಹಣಶಕ್ತಿಯನ್ನು ಪ್ರೇರೇಪಿಸುವಳು ಆದ್ದರಿಂದ ಪ್ರಕೃತಿಯು ಪರಮಾತ್ಮನ ಪೂರ್ಣಸಾಮ್ಯವುಳ್ಳವಳಲ್ಲ ಅಲ್ಪ ಸಾಮ್ಯವೇ

## ಸೂ॥ ಓಂ॥ ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ಓಂ॥ 12

ಅಸಮೋ ವಾ ಏಷ ಪರಮೋ ನ ಹಿ ಕಶ್ಚಿದೇವಂ ದೃಶ್ಯತೇ ಸರ್ವೇ ಹ್ಯೇತೇ
ಣವೋ ಜಾಯಂತೇ ಮ್ರಿಯಂತೇ ಚ ಛಿದ್ರಾಹ್ಯೇತೇ ಭವಂತಿ ।
ಅಥ ಪರೋ ನ ಜಾಯತೇ ನ ಮ್ರಿಯತೇ ಪೂರ್ಣಶ್ಚೈಷ ಭವತಿ ಇತಿ
ಚತುರ್ವೇದಶಿಖಾಯಾಂ ಸಾಮ್ಯಪ್ರತಿಷೇಧಾನ್ನೇತಿ ಚೇನ್ನ ।
ಶರೀರಾದ್ಧಿ ಸಾಮ್ಯಂ ಪ್ರತಿಷಿಧ್ಯತೇ ॥

ಈಶ್ವರನಿಂದ ಪ್ರಕೃತಿಗೆ ಸರ್ವಸಾಮ್ಯನಿಷೇಧದಿಂದ ದೇಶಕಾಲವ್ಯಾಪ್ತ್ಯಾದಿ ಗಳಿಂದಲೂ ಸಾಮ್ಯವಲ್ಲವೆಂದರೆ ಹಾಗಲ್ಲ. ಈಶ್ವರನಿಗೆ ಜೀವರುಗಳಿಂದ ಸಾಮ್ಯವಿಲ್ಲವೇ ಹೊರತು ಅಶರೀರಳಾದ ಪ್ರಕೃತಿ ದೇವಿಯಿಂದಲ್ಲ ಮೇಲಿನಂತೆ ಅಲ್ಪಸಾಮ್ಯವೇ ಸಿದ್ಧವು. ಚತುರ್ವೇದ ಶಾಖೆಯಲ್ಲಿ ಆ ಪರಮಾತ್ಮನು ಸಮನಿಲ್ಲದವನು ಉತ್ಕೃಷ್ಟ ನಿಲ್ಲದವನು ಈ ದೃಷ್ಟಿಗೋಚರ ಪ್ರಪಂಚದಲ್ಲಿ ಸರ್ವಜೀವರೂ ಅಣುಗಳು ಹುಟ್ಟು ಸಾವುಗಳುಳ್ಳವರು ದುಃಖವುಳ್ಳವರು ಆದರೆ ಪರಮಾತ್ಮನು ಹುಟ್ಟು ಸಾವು ಗಳಿಲ್ಲದವನು. ಪೂರ್ಣನು ಎಂದು ಶ್ರುತಿಯಲ್ಲಿ ಸಾಮ್ಯವು ನಿಷೇಧಿಸಿದ್ದರೂ ಜೀವರು ಗಳಿಗೆ ಮಾತ್ರ ಇಲ್ಲಿ ಹೇಳಿದೆ. ಪ್ರಕೃತಿ ಶ್ರೀ ದೇವಿಗಲ್ಲ.

## ಸೂ॥ ಓಂ॥ ಸ್ಪಷ್ಟೋಹ್ಯೇಕೇಷಾಂ ಓಂ॥

ಅಥಾತಃ ಸಮಾಶ್ಚಾಸಮಾಶ್ಚಾಭಿಧೀಯಂತೇ ಸಮಾಸಮಾಶ್ಚಾಧ ಸಮಾನಿ
ಬ್ರಹ್ಮಣೋ ರೂಪಾಣಿ ಯೈರುತ್ಪತ್ತಿಃ ಸ್ಥಿತಿರ್ಲಯೋನಿಯತಿರಾಯತಿ ಶ್ಚೈಕಂ
ಹ್ಯೇವೈತದ್ಭವತ್ಯಥಾಸಮಾಃ ಬ್ರಹ್ಮೇಂದ್ರೋ ರುದ್ರಃ ಪ್ರಜಾಪತಿರ್ಬೃಹಸ್ಪತಿ
ರ್ಯೇಕೇ ಚ ದೇವಾ ಗಂಧರ್ವಾ ಮನುಷ್ಯಾಃ ಪಿತರೋ ಸುರಾ ಯಚ್ಚಿಂಚೇದಂ
ಚಮರಚರಂ ಚಾಥ ಸಮಾಸಮಾಪ್ರಕೃತಿರ್ವಾವ ಸಮಾಸಮಾ ಸ್ಯೈಷಾ ಹಿ

ನಿತ್ಯಾಽಜರಾ ತದ್ವರಾ ಚೇತಿ ಸ್ಪಷ್ಟೋ ಹಿ ಮಾಧ್ಯಂದಿನಾಯನಾನಾಂ
ಸಮಾದಿವಾದಃ ||

ಮಾಧ್ಯಂದಿನಶೃತಿಯು ಸ್ಪಷ್ಟವಾಗಿ ಸಮಾ, ಅಸಮಾ ಎಂದು ಹೇಳುವುದರಿಂದ ಪ್ರಕೃತಿಗೆ ಅಲ್ಪಸಾಮ್ಯವೇ ಪೂರ್ಣವಾಗಿಯಲ್ಲ ಶೃತಿಯು ಹಾಗೆ ಹೇಳುವುದು.

ಈ ಜಗತ್ತಿನಲ್ಲಿ ಸಮಾ ಅಸಮಾ ಎಂದು ಎರಡು ವಿಧ ಚೇತನಗಳು ಸಮಚೇತನಗಳು ಪರಬ್ರಹ್ಮನ ಚಿದಾನಂದಾವತಾರ ರೂಪಗಳು ಅವುಗಳಿಂದಲೇ ಜಗತ್ತಿನ ಸೃಷ್ಟಿ ಸ್ಥಿತಿ ಲಯ ನಿಯಮಾದಿ ಅಷ್ಟಕರ್ತೃತ್ವವು. ಅನ್ಯೋನ್ಯವಾಗಿ ಯಾವ ವ್ಯತ್ಯಾಸವಿಲ್ಲದವುಗಳು. ಸಾಕ್ಷಾದ್ರೂಪಗಳು, ಸಮರುಗಳು ಬ್ರಹ್ಮರುದ್ರಾದಿ ದೇವಮಾನವ್ಯ ಜೀವಗಳು ಚರಾಚರ ಪ್ರಪಂಚವು ಅಸಮವು ಸಮಾ ಅಸಮಾ ಧರ್ಮವುಳ ಪ್ರಕೃತಿಯು ಈಕೆಯು ನಿತ್ಯಳು ಮರಣವಿಲ್ಲದವಳು ಶ್ರೀ ಪರಮಾತ್ಮನ ವಶವರ್ತಿಯೂ ಹೀಗೆ ಸ್ಪಷ್ಟೋಕ್ತಿಯು

## ಸೂ|| ಓಂ|| ಸ್ಮರ್ಯತೇಚ ಓಂ|| 14

ಮತ್ಸ್ಯಕೂರ್ಮವರಾಹಾದ್ಯಾಃ ಸಮಾ ವಿಷ್ಣೋರಭೇದತಃ ।
ಬ್ರಹ್ಮಾದ್ಯಾಸ್ತ್ವಸಮಾಃ ಪ್ರೋಕ್ತಾಃ ಪ್ರಕೃತಿಶ್ಚ ಸಮಾಸಮಾ || ಇತಿ ವರಾಹೆ

ಮತ್ಸ್ಯಕೂರ್ಮ ವರಾಹಾದಿ ಪರಮಾತ್ಮಾವತಾರಗಳು ಪರಮಾತ್ಮಾಭೇದದಿಂದ ಸರ್ವಸಮ ಬ್ರಹ್ಮಾದಿ ಜೀವರುಗಳು ಅಸಮರು ಎಂದು ಹೇಳುವುದು. ಪ್ರಕೃತಿಯು ಸಮಾ, ಅಸಮಾ, ಎರಡೂ ಬಗೆಯ ಧರ್ಮವುಳ್ಳವಳು

ಇತಿ ಸಮಾಸಮಾನಾಧಿಕರಣಂ

### – ಪರಾಧಿಕರಣಂ –

ಈ ಅಧಿಕರಣದಲ್ಲಿ ದೇವಾದಿಮುಕ್ತರಿಗೆ ಮುಕ್ತಿಯಲ್ಲಿಯೂ ಪರಮಾತ್ಮನಲ್ಲಿ ಲಯವು.

## ಸೂ|| ಓಂ|| ತಾನಿ ಪರೇ ತಥಾ ಹ್ಯಾಹ ಓಂ|| 15

ಚತುರ್ಮುಖ ಬ್ರಹ್ಮನಿಗೆ ಮಾತ್ರ ಪರಮಾತ್ಮನಲ್ಲಿ ಲಯ ವು ಇತರ ದೇವತೆಗಳಿಗೆ ಹಾಗಲ್ಲ. ಚತುರ್ಮುಖ ಬ್ರಹ್ಮನು ಪರಮಾತ್ಮನ ಪ್ರತಿಬಿಂಬವಾದ್ದರಿಂದ ಎಂದು ಪೂರ್ವಪಕ್ಷವು. ಸರ್ವದೇವತೆಗಳೂ ಚತುರ್ಮುಖ ದ್ವಾರಾ ಪರಮಾತ್ಮನಲ್ಲಿ ಲಯವನ್ನು ಹೊಂದುವನು

ಪ್ರಾಣಾದ್ವಾರೇಣ ಸರ್ವಾಣಿ ದೈವತಾನಿ ಪರಮಾತ್ಮನಿ ವಿಲೀಯಂತೆ

ಸರ್ವ ದೇವತೆಗಳೂ ಪ್ರಾಣವಾಚ್ಯ ಬ್ರಹ್ಮದೇವರ ದ್ವಾರ ಪರಮಾತ್ಮನಲ್ಲಿಯೇ ಲಯವು

2 **ಸರ್ವೇ ದೇವಾಃ ಪ್ರಾಣಮಾವಿಶ್ಯ ದೇವೇ ಮುಕ್ತಾ ಲಯಂ** ಪರ ತ್ರಿ **ಯಾಂತ್ಯ ಚಿಂತ್ಯ ಇತಿ ಕೌಷಾರವ ಶ್ರುತಿಃ**

ಸರ್ವದೇವತೆಗಳು ಮುಕ್ತಿಯಲ್ಲಿ ಪ್ರಾಣವನ್ನು ಪ್ರವೇಶಿಸಿ ತದ್ವಾರಾ ಪರಮಾತ್ಮನಲ್ಲಿ ಪ್ರವೇಶವು

**ಇತಿ ಪರಾಧಿಕರಣಂ**

**– ಅವಿಭಾಗಾಧಿಕರಣಂ –**

ಈ ಅಧಿಕರಣದಲ್ಲಿ ದೇವಾದಿ ಮುಕ್ತ ಜೀವರಿಗೆ ಮುಕ್ತಿಯಲ್ಲಿಯೂ ಪರಮಾತ್ಮಾಧೀನತ್ವ ಹೇಳುವರು.

## ಸೂ|| ಓಂ|| ಅವಿಭಾಗೋ ವಚನಾತ್ ಓಂ|| 16

ಏತೇ ದೇವಾ ಏತಮಾತ್ಮಾನ ಮನುವಿಶ್ಯ ಸತ್ಯಾಃ ಸತ್ಯಕಾಮಾಃ ಸತ್ಯ ಸಂಕಲ್ಪಾಃ ಯಥಾ ನಿಕಾಮಮಂತರ್ಬಹಿಃ ಪರಿಚರಂತಿ ಇತಿ ಗೌಪವನ ಶ್ರುತಿಃ । ತತ್ಪರಮೇಶ್ವರಕಾಮಾದ್ಯವಿಭಾಗೇನೈವ ತೇಷಾಂ ಸತ್ಯ ಕಾಮತ್ವಂ ॥

ಭಗವದಿಚ್ಛೆಗೂ ಅವನ ಮುಕ್ತರಾದ ಭಕ್ತರಿಚ್ಛೆಗಳಿಗೂ ವಿಷಯೈಕ್ಯವಿರುವುದರಿಂದ ಭೇದವಿಲ್ಲ. ಒಂದೇ ಏತೇ ದೇವಾಃ ಎಂಬ ಗೌಪವನ ಶ್ರುತಿಯು ಹೇಳಿದೆ. ಮುಕ್ತದೇವತೆಗಳು ಪರಮಾತ್ಮನನ್ನು ಪ್ರವೇಶಿಸಿ ನಿತ್ಯರೂಪತ್ಯವಾದ ಇಷ್ಟವುಳ್ಳವರೂ ಸತ್ಯಸಂಕಲ್ಪ ವುಳ್ಳವರೂ ಆಗಿ ತಮ್ಮಿಷ್ಟದಂತೆ ಈಶ್ವರನ ದೇಹದ ಒಳಗೂ ಹೊರಗೂ ಸಂಚರಿಸುತ್ತಿರುತ್ತಾರೆ. ಪರಮಾತ್ಮನಿಂದ ಬೇರೆ ಭಾಗವಲ್ಲದ ಸತ್ಯಕಾಮಿತ್ವವು ಆ ದೇವತೆಗಳದು. ಅವರುಗಳ ಇಷ್ಟವೂ ಪರಮಾತ್ಮನಿಷ್ಟವೂ ಒಂದೇ.

2 ಕಾಮೇನ ಮೇ ಕಾಮ ಆಗಾದ್ಧೃದಯಾದ್ಧೃದಯಂ ಮೃತ್ಯೋಃ (ತೈ ಆ 3-15-3)

ಪರಮಾತ್ಮನ ಇಚ್ಛೆಯಿಂದಲೇ ನಮ್ಮಗಳ ಇಚ್ಛೆಯೂ ಸಹ ಸರ್ವ ಸಂಹಾರ ಕರ್ತವ್ಯಾದಿ ಭಗವಂತನ ಪ್ರಮುಖ ದೇವತೆಗಳಿಗೆ ಯಾವುದು ಪ್ರಿಯವೋ ಅದೇ ನನಗೆ ಪ್ರಿಯವು. ಭಗವತ್ಸಂಕಲ್ಪವೇ ನನ್ನ ಸಂಕಲ್ಪವು ಎಂದು ಮುಕ್ತ ಜೀವರ ಆಶಯವು.

3 **ಮುಕ್ತಾನಾಂ ಸತ್ಯಕಾಮತ್ವಂ ಸಾಮರ್ಥ್ಯಂ ಚ ಪರಸ್ಯ ತು ॥**
**ಕಾಮಾನುಕೂಲ ಕಾಮತ್ವಂ ನಾನ್ಯತ್ತೇಷಾಂ ವಿಧೀಯತೇ ॥**
**ಇತಿ ಬ್ರಾಹ್ಮೇ**

ಮುಕ್ತ ಜೀವರ ಸತ್ಯಕಾಮತ್ವಸಾಮರ್ಥ್ಯಶಕ್ತಿಯು ಪರಮಾತ್ಮನಿಂದಲೇ. ಆತನ ಇಷ್ಟವೇ ಅವರುಗಳಿಗೆ ಇಷ್ಟವು ಸರ್ವವೂ ಆತನಾಭೀಷ್ಟವು. ಸ್ವೇಚ್ಛೆ ಇಲ್ಲವೇ ಇಲ್ಲ.

ಇಚ್ಛಾವಿಭಾಗಾಧಿಕರಣಂ

ಈ ಅಧಿಕರಣದಲ್ಲಿ ಪ್ರತೀಕಾಲಂಬನ ಅಪ್ರತೀಕಾಲಂಬನರಲ್ಲದ ಇತರ ಜ್ಞಾನಿ ಮನುಷ್ಯರಿಗೆ ಮುಕ್ತಿಗಾಗಿ ದೇಹೋತ್ಕ್ರಮಣ ಕಾಲದಲ್ಲಿ ಅಜ್ಞಾನಿಯಿಂದ ವಿಲಕ್ಷಣಧರ್ಮ ದಸಮರ್ಥನೆಯು

**ಸೂ॥ ಓಂ॥ ತದೋಕೋಗ್ರಜ್ವಲನಂತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಃ ಶತಾಧಿಕಯಾ ಓಂ॥ 17**

ಜ್ಞಾನಿಗಳಿಗೆ ಉತ್ಕ್ರಾಂತಿಕಾಲದಲ್ಲಿ ಪರಮಾತ್ಮಾಶ್ರಯವಾದ ಹೃದಯದ ಮುಂದೆ ಪ್ರಜ್ವಲನವು ಆಗುವುದು ಆಗ ಪ್ರಕಾಶಿತ ದ್ವಾರದಿಂದ ಜೀವನು ಉತ್ಕ್ರಮಣ ಹೊಂದುವನು. ಈ ಶಕ್ತಿಯು ಜ್ಞಾನ ಸಾಮರ್ಥ್ಯದಿಂದ ಸಾಧ್ಯವು. ವಿದ್ಯೆಯಿಂದ ಪ್ರಾಪ್ತವಾದ ಜ್ಞಾನ ಸಾಮರ್ಥ್ಯದಿಂದ ಹೃದಯಸ್ಥ ಪರಮಾತ್ಮಾನುಗ್ರಹದಿಂದ ಶತಾದಿಕ ಸುಷುಮ್ನಾ ನಾಮಕ ನಾಡಿಯಿಂದ ಹೊರಹೊರಡುವನು ಜ್ಞಾನಿ.

ಉತ್ಕ್ರಾಂತಿಕಾಲೆ (ಹೃದಯಸ್ಯಾಗ್ರೇ ಜ್ವಲನಂ ಭವತಿ।

ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತಃ (ಬೃ-6-4-2) ಇತಿ ಶ್ರುತೇ
ತತ್ಪ್ರಕಾಶಿತದ್ವಾರೋ ನಿಷ್ಕ್ರಾಮತಿ । ವಿದ್ಯಾಸಾಮರ್ಥ್ಯಾತ್ ॥

ಜ್ಞಾನಿಯ ಉತ್ಕ್ರಾಂತಿಕಾಲದಲ್ಲಿ ಹೃದಯದ ಮುಂಬಾಗವು ಪ್ರಕಾಶಮಾನವಾಗುವುದು. ಆ ಪ್ರಕಾಶಿಸಲ್ಪಟ್ಟ ದ್ವಾರದಿಂದ ಜ್ಞಾನಿಜೀವನು ಹೊರಹೊರಡುವನು ಇದು ಕೇವಲ ಜ್ಞಾನದಿಂದಲೇ ಸಾಧ್ಯವು ಭಗವಂತನ ಸಾಕ್ಷಾತ್ಕಾರ ಸಮರ್ಥನವು.

2 ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯಂತೇ ಕಲೇವರಂ ।
ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ (ಗೀ 8-6)

ಹೇ ಅರ್ಜುನನೇ ಅಂತ್ಯಕಾಲದಲ್ಲಿ ಯಾವ ಯಾವ ಆಕೃತಿ ವಿಶೇಷವನು

ಪೂರ್ವಕರ್ಮಾನುಸಾರವಾಗಿ ಸ್ಮರಣಹೊಂದಿ ದೇಹವನ್ನು ಜೀವನು ತ್ಯಜಿಸುವನೋ ಆ ಪುರುಷನು ಆ ಭಾವವನ್ನೇ ಹೊಂದುವನು ಅಂದರೆ ಜ್ಞಾನದ ಶೇಷಫಲೋಪ ಕಾರ್ಯರಿಗೆ ಶರೀರತ್ಯಾಗ ಕಾಲದಲ್ಲಿ ತನ್ನ ಹೃದಯುವನ್ನು ಪ್ರಾರಂಭಿಸಿ ಬ್ರಹ್ಮ ಪರ್ಯಂತ ಗವ್ಯ ಪಿಷರ್ಯಾನು ಸ್ಮರಣವು ಆಗುವುದೋ ಆಯೋಗದಿಂದ ಅವನ ಉತ್ಕ್ರಮಣವು ಗತ್ಯನುಸರಣವು ವಿದ್ಯಾಶೇಷ

3 ಆಚಾರ್ಯಸ್ತು ತೇ ಗತಿಂ ವಕ್ತಾ (ಛಾ4-14-1) ಇತಿ ಹಿ ಲಿಂಗಂ

ಶೃತಿಯಲ್ಲಿ ಉಪಕೋಸಲನನ್ನು ಕುರಿತು ಅಗ್ನಿದೇವತೆಗಳು ಉತ್ಕ್ರಮಣ ಕಾಲ ದಲ್ಲಿ ಸ್ಮರಣೆಗೆ ಬರುವ ಗತಿ ಸಾಧನವಾದ ಸ್ವಯೋಗ್ಯಜ್ಞಾನೋಪದೇಶವನ್ನು ನಿನ್ನ ಸ್ವಗುರುವು ಉಪದೇಶಿಸುವರು ಎಂಬ ವಾಕ್ಯವು ಗತಿಸ್ಮರಣ ವಿಧಿಯ ಜ್ಞಾಪಕವು ಮೇಲಿನ ವಾಕ್ಯವು.

4 ಹೃದಿಸ್ಥೇನೈವ ಹರಿಣಾ ತಸ್ಯೈವಾನುಗ್ರಹೇಣ ತು ।
ಉತ್ಕ್ರಾಂತಿರ್ಬ್ರಹ್ಮರಂಧ್ರೇಣ ತಮೇವೋಪಾಸತೋ ಭವೇತ್ ॥
ಇತಿ ಚಾಧ್ಯಾತ್ಮೇ

ಹೃದಯುಸ್ಥ ಶ್ರೀ ಪರಮಾತ್ಮನ ಉಪಾಸನೆಯ ಅನುಗ್ರಹ ಪ್ರಸಾದದಿಂದ ಉತ್ಕ್ರಾಂತಿಕಾಲದಲ್ಲಿ ಬ್ರಹ್ಮರಂಧ್ರದಿಂದ ಹೊರಹೊರಡುವನು .. ... ಅಧ್ಯಾತ್ಮೇ

5 ಶತಂ ಚೈಕಾ ಚ ಹೃದಯುಸ್ಯ ನಾಡ್ಯಸ್ತಾಸಾಂ ಮೂರ್ಧಾನ ಮಭಿನಿಃ ಸೃತೈಕಾ ।
ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಗನ್ಯಾ
ಉತ್ಕ್ರಮಣೇ ಭವಂತಿ ॥ ಇತಿ ಚ

ಹೃದಯುನಾಡಿಗಳು ಒಂದುನೂರ ಒಂದು. ಅವುಗಳ ಮಧ್ಯೆ ಒಂದುನಾಡಿಯು ಶಿರದಮೇಲಿನವರೆಗೆ ಹೊರಬರುತ್ತದೆ ಆ ನಾಡಿದ್ವಾರ ಹೊರಹೊರಟು ಮೋಕ್ಷವನ್ನು ಹೊಂದುತ್ತಾನೆ (ಕಠಶೃತಿ) ಬ್ರಹ್ಮಲೋಕವನ್ನು ಹೊಂದುವನು ಪ್ರತೀಕಾಲಂಬರು ಅಪ್ರತೀಕಾಲಂಬನರು ವೈಕುಂಠಲೋಕವನ್ನು ಹೊಂದುವರು.

## ಸೂ॥ ಓಂ॥ ರಶ್ಮ್ಯನುಸಾರೀ ಓಂ॥ 18

ಜ್ಞಾನಿ ಜೀವನು ನಾಡಿಗಳಲ್ಲಿರುವ ಆದಿತ್ಯಪ್ರಕಾಶರನ್ನು ಅನುಸರಿಸಿ ಹೊರ ಹೊರಡುವನು

ನಿಷ್ಕ್ರಮತಿ । ಸಹಸ್ರಂ ವಾ ಆದಿತ್ಯಸ್ಯ ರಶ್ಮಯ ಆಸು ನಾಡೀಷ್ವಾತತಾಸ್ತತ್ರ ಶ್ವೇತಃ ಸುಷುಮ್ನೋ ಬ್ರಹ್ಮಯಾನ ಸುಷುಮ್ನಾಯಾಮಾತತಸ್ತತ್ಪ್ರಕಾಶೇನೈಷ ನಿರ್ಗಚ್ಛತಿ । ಇತಿ ಪೌತ್ರಾಯಣ ಶೃತಿಃ

ನಾಡಿಗಳೊಳಗೆ ಆಶ್ರಿತವಾದ ಸೂರ್ಯನ ಸಹಸ್ರಸಂಖ್ಯ ರಶ್ಮಿಗಳಲ್ಲಿ ಮಧ್ಯದಲ್ಲಿ ಶ್ವೇತವರ್ಣವುಳ್ಳ ಸುಷುಮ್ನಾನಾಮಕ ಬ್ರಹ್ಮಶ್ರಾವಕವಾದ ರಶ್ಮಿ ವಿಶೇಷಗಳು ನೂರೊಂದು ಈ ನೂರೊಂದು ಸುಷುಮ್ನಾನಾಡಿಗಳೊಳಗೆ ವ್ಯಾಪ್ತವಾದ ಅನ್ಯ ನಾಡಿಯುಂಟು ಈ ನಾಡೀದ್ವಾರ ಜ್ಞಾನಿಯು ದೇಹವನ್ನು ಬಿಟ್ಟು ಹೊರ ಹೊರಡುವನು. ( ಪೌತ್ರಾಯಣ ಶೃತಿ) ಪರಬ್ರಹ್ಮನನ್ನನುಸರಿಸಿಯೋ ಹೊರ ಹೊರಡೋಣವು

## ಸೂ॥ ಓಂ॥ ನಿಶಿ ನೇತಿಚೇನ್ನ ಸಂಬಂದಾತ್ ಓಂ॥ 19

ರಶ್ಮ್ಯಭಾವಾನ್ನಿಶಿ ಜ್ಞಾನಿನ ಉತ್ಕ್ರಮಣಂ ನ ಯುಕ್ತಮಿತಿ ಚೇನ್ನ ಸರ್ವದಾ ಸಂಬಂಧಾದ್ರಶ್ಮಿನಾಂ॥

ರಾತ್ರಿಸಮಯದಲ್ಲಿ ಸೂರ್ಯರಶ್ಮಿಗಳಿಲ್ಲದ್ದರಿಂದ ಜ್ಞಾನಿಗಳಿಗೆ ಆಗ ಉತ್ಕ್ರಮಣವಿಲ್ಲವೆಂದರೆ ಹಾಗಲ್ಲ ಸೂರ್ಯನ ಸಂಬಂಧವು ಯಾವಾಗಲೂ ಉಂಟು ಅಂತಸ್ಥ ಆದಿತ್ಯ ರಶ್ಮಿಗಳೂ ನಾಡೀ ಸಂಬಂಧವನ್ನು ಸರ್ವದಾ ಹೊಂದಿರುವುದರಿಂದ ರಾತ್ರಿ ಉತ್ಕ್ರಮಣ ನಿಷೇಧವಿಲ್ಲ.

ಕಿಯತ್ಕಾಲಂ—ಎಷ್ಟು ಕಾಲ?

## ಸೂ॥ ಓಂ॥ ಯಾವದ್ದೇಹ ಭಾವಿತ್ವಾದ್ದರ್ಶಯತಿ ಚ ಓಂ॥ 20

ಯಾವದ್ದೇಹೋ ವಿದ್ಯತೇ ತಾವದ್ರಶ್ಮಿಸಂಬಂಧೋಸ್ತ್ಯೇವ

ದೇಹಭಾಗವು ಇರುವವರೆಗೂ ರಶ್ಮಿಸಂಬಂಧವಿರುವುದು. ರಾತ್ರಿಯಲ್ಲಿ

ಉತ್ಕ್ರಮಣವು ಯುಕ್ತವು "ಸಂಸೃಷ್ಟಾ..." ಇತಿ ಮಾಧ್ಯಂದಿನ ಶ್ರುತಿಯು ಹಾಗೆ ಹೇಳುವುದು

9 ಸಂಸೃಷ್ಟಾ ವಾ ಏತೇ ರಶ್ಮಯಶ್ಚ ನಾಡ್ಯಶ್ಚ ನೈಷಾಂ ವಿಯೋಗೋ ಯಾವದಿದಂ ಶರೀರಮತ ಏತೈಃ ಪಶ್ಯತ್ಯೇತೈರುತ್ಕ್ರಾಮತ್ಯೇತೈಃ ಪ್ರವರ್ತತೆ ॥ ಇತಿ ಮಾಧ್ಯಂದಿನಾಯನಶ್ರುತಿಃ

ಆದಿತ್ಯರಶ್ಮಿಗಳು ಸಂಬಂಧವು ದೇಹವಿಯೋಗದವರೆಗೂ ಇರುವುದು ಈ ಸ್ಥೂಲ ಶರೀರದವನ್ನು ರಶ್ಮಿಗಳಿಂದ ನಾಡ್ಯಂತಮಾರ್ಗವು ತಿಳಿಯುವುದು ಈ ಪ್ರಕಾಶವೇ ನಿಮಿತ್ತವಾಗಿ ಉತ್ಕ್ರಾಂತಿಯುಳ್ಳ ಜ್ಞಾನಿಜೀವನು ಹೊರ ಹೊರಡುವನು

## ಸೂ॥ ಓಂ॥ ಅತಶ್ಚಾಯನೇಽಪಿ ಹಿ ದಕ್ಷಿಣೇ ಓಂ॥ 21

ದಕ್ಷಿಣೇ ಮರಣಾದ್ಯಾತಿ ಸ್ವರ್ಗಂ ಬ್ರಹ್ಮೋತ್ತರಾಯಣ ।
ಇತ್ಯುಕ್ತೇಽಪಿ ಜ್ಞಾನಿನೋ ದಕ್ಷಿಣಾಯಣೋತ್ಕ್ರಾಂತಿಯುರ್ಯುಜ್ಯತೇ ॥

ದಕ್ಷಿಣಾಯಣಕಾಲದಲ್ಲಿ ಮರಣವು ಮೋಕ್ಷಾರ್ಥವಾಗಿಲ್ಲವೆಂದರೆ ಹಾಗಲ್ಲ ಸ್ಮೃತಿಯಲ್ಲಿಹೇಳಿದ್ದರೂ ಜ್ಞಾನಿಗಳ ಉತ್ಕ್ರಾಂತಿಯು ದಕ್ಷಿಣಾಯಣದಲ್ಲಿ ಯುಕ್ತವೇ ಆಗಲೂ ಸೂರ್ಯರಶ್ಮಿಗಳ ಸಂಬಂಧವು ಇರುವುದು. ಆದ್ದರಿಂದ ದಕ್ಷಿಣಾಯನ ದೃಷ್ಟಾಂತದಿಂದ ಜ್ಞಾನಿಗೆ ರಾತ್ರಿಮರಣವು ನಿಷೇಧವಲ್ಲ ಸ್ಮೃತಿಯ ಅರ್ಥವು ದಕ್ಷಿಣಾಯನದಲ್ಲಿ ಮರಣದಿಂದ ಸ್ವರ್ಗಪ್ರಾಪ್ತಿಯು. ಉತ್ತರಾಯಣದಲ್ಲಿ ಮುಕ್ತಿಯೂ ಎಂದು ಹೇಳಿದರೂ ಬಾಧಕವಿಲ್ಲ ಜ್ಞಾನಿಗಳಿಗೆ ದಕ್ಷಿಣಾಯಣೋತ್ಕ್ರಾಂತಿಯು ದೋಷವಲ್ಲ

11 ಶತಂ ಪಂಚೈವ ಸೂರ್ಯಸ್ಯ ದಕ್ಷಿಣಾಯನ ರಶ್ಮಯಃ '
ತಾವಂತ ಏವ ನಿರ್ದಿಷ್ಟಾ ಉತ್ತರಾಯಣ ರಶ್ಮಯಃ ।
ತೇ ಸರ್ವೇ ದೇಹಸಂಬದ್ಧಾಃ ಸರ್ವದಾ ಸರ್ವದೇಹಿನಾಂ ।
ಮಹರ್ಲೋಕಾದಿಗಂತಾರ ಉತ್ತರಾಯಣರಶ್ಮಿಭಿಃ ।
ನಿರ್ಗಚ್ಛಂತೀತರೈಶ್ಚಾಪಿಯ್ಯೈರೇಷ್ವನ್ಯೇತರಾ ಗತಿಃ ।
ಉತ್ತರಂ ದಕ್ಷಿಣಮಿತಿ ತ ಏವ ತು ನಿಗದ್ಯತೇ ।

ನ ತು ಕಾಲ ವಿಶೇಷೋಽಸ್ತಿ ಜ್ಞಾನಿನಾಂ ನಿಯಮಾತ್ಫಲಂ ।
ದದಾತಿ ಕಾಲೇನು ಗುಣೇಫಲಂ ಕಿಂಚಿದ್ವಿಶಿಷ್ಯತೇ ।
ಆತ್ಯುತ್ತಮಾನಾಂ ಕೇಷಾಂಚಿತ್ನ ವಿಶೇಷೋಽಸ್ತಿ ಕಾಲತಃ ॥
ಇತಿ ನಾರಾಯಣಾಧ್ಯಾತ್ಮೇ

ಸೂರ್ಯರಶ್ಮಿಗಳು 500 ದಕ್ಷಿಣಾಯಣ ಮತ್ತು 500 ಉತ್ತರಾಯಣ ಸಂಬಂಧಗಳು ಉತ್ತರಾಯಣ ಸಂಬಂಧವು ಮಹಲೋಕವನ್ನು ಹೊಂದಿಸುವುದು. ದಕ್ಷಿಣಾಯಣ ಸಂಬಂಧವು ಜನಲೋಕಾದಿಗಳು ಈ ಕಾಲಗತಿಯಿಂದ ಫಲ ನಿಯತವು ಯಾವ ವ್ಯತ್ಯಾಸವನ್ನು ಉಳ್ಳವಲ್ಲ. ಆದರೆ ಉತ್ತರಾಯಣಪಕ್ಷದಲ್ಲಿ ಕಾಲಗುಣದಿಂದ ಅಲ್ಪೋತ್ತಮತ್ವವು ಹೇಳಿದೆ. ಅತ್ಯುತ್ತಮ ಜೀವರಿಗೂ ಅಲ್ಪೋತ್ತಮತ್ವವು ಇಲ್ಲ ಜ್ಞಾನಿಗಳಿಗೆ ಸರ್ವಕಾಲದಲ್ಲಿಯೂ ಯಾವ ವ್ಯತ್ಯಾಸ ಫಲವೂ ಇಲ್ಲ

ಇತಿ ತದೋಕೋಽಧಿಕರಣಂ

## – ಯೋಗ್ಯಧಿಕರಣಂ –

ಈ ಅಧಿಕರಣದಲ್ಲಿ ಗತ್ಯನು ಸ್ಮರಣಾದಿಗಳು ಆವಶ್ಯಕವೆಂದು ಹೇಳುವುದು.

## ಸೂ॥ ಓಂ॥ ಯೋಗಿನಃ ಪ್ರತಿಸ್ಮರ್ಯೇತೇ ಸ್ಮಾರ್ತೇಚೈತೇ ಓಂ॥ 22

ನ ಕೇವಲಂ ಕಾಲಾದಿಕೃತೇ ಬ್ರಹ್ಮ ಚಂದ್ರಗತೀ ಸ್ಮರ್ಯತೇ ।
ಕಿಂ ತು ಜ್ಞಾನ ಯೋಗಿನಃ ಕರ್ಮಯೋಗಿನಶ್ಚ ॥

ಬ್ರಹ್ಮ ಚಂದ್ರಗತಿಗಳು ಜ್ಞಾನಕರ್ಮಯೋಗಿಗಳ ವಿಷಯವೆಂದು ಸ್ಮೃತಿ ವಾಕ್ಯವು ಕಾಲಾದಿಗಳಿಂದಲೇ ಅಲ್ಲ. ಜ್ಞಾನಯೋಗಿ ಮತ್ತು ಕರ್ಮಯೋಗಿಗಳಿಗೂ ಎಂದು ಸ್ಮೃತಿಯಲ್ಲಿ ಹೇಳಿದೆ.

ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ।
ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯಣಂ ।
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥
(ಗೀತಾ 8-24-25)

ಇಲ್ಲಿ ಹೇಳುವ ಅಗ್ನಿ ಮತ್ತು ಧೂಮ ಮಾರ್ಗಗಳು ಕಾಲ ವಾಚಕಗಳಲ್ಲಿ ಅಭಿಮಾನಿ ದೇವತಾ ವಾಚಕಗಳು ಅಂದರೆ ಅಗ್ನ್ಯಾದಿ ದೇವತಾಮಾರ್ಗಗಳಿಂದ ಬ್ರಹ್ಮದರ್ಶಿಗಳು ಆ ದೇವತಾಮಾರ್ಗಗಳಿಂದ ಹೊರಡುವರು ಧೂಮಾದಿಜ್ಞಾನಿಯು ದಕ್ಷಿಣಾಯನ ದೇವತಾಮಾರ್ಗವನ್ನು ಕರ್ಮಯೋಗಿಯು ಹೊಂದುವನು. ಹೀಗೆ ಗತಿ ಸೂಚಕವು ದೇವತಾವಾಚಕವೇ ಹೊರ್ತು ಕಾಲಸೂಚಕನಲ್ಲ.

ಇತ್ಯತ್ರಯೋಗೀತಿ ವಿಶೇಷಣಾತ್ ಸ್ಮರಣನಿಮಿತ್ತೈ ಕೈತೇ ಗತೀ ।

ಯೋಗಿ ಶಬ್ದದಿಂದ ವಿಶೇಷಣವು ಸ್ಮರಣನಿಮಿತ್ತವೇ.

3 ಗತ್ಯಸುಸ್ಮರಣಾದ್ಬ್ರಹ್ಮ ಚಂದ್ರಂ ವಾ ಗಚ್ಛತಿ ಧ್ರುವಂ ॥
ಅನನುಸ್ಮರತಃ ಕಾಲೇ ಸ್ಮರಣಂ ಪ್ರಾಪ್ಯ ನೈ ಗತಿಃ ॥ ಇತ್ಯಧ್ಯಾತ್ಮೇ

ಬ್ರಹ್ಮವಿದರು ಜ್ಞಾನಕ್ಕೆ ಮುಂಚೆ ಗತಿಪ್ರಕಾರದ ಭಾವವಿಲ್ಲದಿದ್ದರೂ ಬ್ರಹ್ಮ ಜ್ಞಾನಾನಂತರ ಜ್ಞಾತಬ್ರಹ್ಮನ ಪ್ರಸಾದದಿಂದ ಉತ್ಕ್ರಾಂತಿಕಾಲದಲ್ಲಿ ಯೋಗ್ಯಸ್ಮರಣ ಹೊಂದಿ ಗತಿಯನ್ನು ಹೊಂದುವರು. ಜ್ಞಾನಿಗಳಿಗೆ ಉತ್ಕ್ರಾಂತಿಕಾಲದಲ್ಲಿ ಅಜ್ಞಾನದಿಂದ ಸ್ಮರಣವಿಲ್ಲದಿರುವ ಕರ್ಮಯೋಗಿಗಳೂ ಕೂಡ ಜನ್ಮಾಂತರದಲ್ಲಿ ಸ್ಮರಣಹೊಂದಿಯೇ ಸೂಕ್ತಗತಿಯನ್ನು ಹೊಂದುವರು. ಪ್ರಾರಬ್ಧಕರ್ಮಫಲಾನ ಭವಾನಂತರದಲ್ಲಿ ಗತಿಸ್ಮರಣವು ಸಿದ್ಧವು.

ಇತಿ ಯೋಗ್ಯಧಿಕರಣಂ

ದ್ವಿತೀಯಃ ಪಾದಃ ಸಂಪೂರ್ಣಂ
ಶ್ರೀ ಕೃಷ್ಣಾರ್ಪಣಮಸ್ತು

- ಅರ್ಚಿರಾಧ್ಯಧಿಕರಣಂ -

ಈ ಅಧಿಕರಣದಲ್ಲಿ ಬ್ರಹ್ಮನಾಡಿಯಿಂದ ಅಥವಾ ಬೇರೆ ನಾಡ್ಯಂತರದಿಂದ ಉತ್ಕ್ರಾಂತರಾದ ಜೀವರ ಮಾರ್ಗವು ಹೇಳಲ್ಪಡುವುದು

1 ಮಾರ್ಗೋ ಗಮ್ಯಂ ಚಾಸ್ಮಿನ್ಪಾದ ಉಚ್ಯತೇ ॥

## ಸೂ॥ ಓಂ॥ ಅರ್ಚಿರಾದಿನಾ ತತ್ಪ್ರಥಿತೇಃ ಓಂ॥ 1

ಉತ್ಕ್ರಾಂತನಾದ ಜ್ಞಾನಿಯು ಅರ್ಚಿರಾದಿ ಮಾರ್ಗದಿಂದ ಹೋಗುತ್ತಾನೆ ತೇ ಅರ್ಚಿಷಮಭಿಸಂವಿಶಂತಿ ಎಂಬ ಶೃತಿಯು ಹಾಗೆ ಪ್ರಸಿದ್ಧಿಪಡಿಸುವುದು

ತೇಽರ್ಚಿಷಮಭಿ ಸಂಭವಂತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷ
(ಛಾ 5-10-1) ಇತ್ಯರ್ಚಿಷಃ ಪ್ರಾಥಮ್ಯಂ ಶ್ರೂಯತೇ
ಯದಾ ಹ ವೈ ಪುರುಷೋಽಸ್ಮಾಲ್ಲೋಕಾತ್ಪ್ರೈತಿ ಸ ವಾಯುಮಾಗಚ್ಛತಿ
(ಬೃ 7-10-1) ಇತಿ ವಾಯೋಃ ॥

ಯಾವ ಮುಮುಕ್ಷುವು ಶ್ರದ್ಧೆಯಿಂದ ಜ್ಞಾನಸ್ವರೂಪನಾದ ಪರಬ್ರಹ್ಮನನ ಉಪಾಸನೆ ಮಾಡುವನೋ ಅವನು ದೇಹದಿಂದ ಹೊರಹೊರಟು ಅರ್ಚಿಷನಾಮಕ ಅಗ್ನಿಪುತ್ರನನ್ನು ಪ್ರಾಪಿಸುತ್ತಾನೆ. ಅಹಃ ತದಭಿಮಾನಿ ದೇವತೆಯನ್ನು ಶುಕ್ಲಪಕ್ಷಾಭಿಮಾನಿ ದೇವತೆಯನ್ನು ಎಂದು ಛಾಂದೋಗ್ಯ ಶೃತ್ಯರ್ಥವು ಬೃಹದಾರಣ್ಯಕವಾಕ್ಯವು ಯಾವಾಗ ಜ್ಞಾನಿಯು ಶರೀರದಿಂದ ಹೊರಹೊರಡುವನೋ ಅವನು ಪ್ರವಹಾಖ್ಯ ವಾಯುವನ್ನು ಹೊಂದುವನು ಎಂದು ವಾಯುವಿನ ಪ್ರಥಮಪ್ರಾಪ್ತಿಯು ಹೇಳಿದೆ. ಹೀಗೆ ಪೂರ್ವಪಕ್ಷವು.

2 ತತ್ರಾರ್ಚಿಷಃ ಪ್ರಾಪ್ತಿರೇವ ಪ್ರಥಮಾ ।

ಹೀಗೆ ಸಂಶಯವು ಪ್ರಥಮವಾಗಿ ಅರ್ಚಿರಾದಿಪ್ರಾಪ್ತಿಯೇ ಈ ಸೂಕ್ತದ ನಿರ್ಧಾರವು.

3 ದ್ವಾವೇವ ಮಾರ್ಗೌ ಪ್ರತಿತಾವರ್ಚಿರಾದಿರ್ವಿಪಶ್ಚಿತಾಂ ।
ಧೂಮಾದಿಃ ಕರ್ಮಿಣಾಂ ಚೈವ ಸರ್ವವೇದವಿನಿರ್ಣಯಾತ್ ।
ಅಗ್ನಿರ್ಜ್ಯೋತಿರಿತಿ ದ್ವೇಧೈವಾರ್ಚಿಷಃ ಸಂಪ್ರತಿಷ್ಠಿತಿಃ ।
ಅಗ್ನಿಂ ಗತ್ವಾ ಜ್ಯೋತಿರೇತಿ ಪ್ರಥಮಂ ಬ್ರಹ್ಮಸಂಪ್ರಜನ್ನಿತಿ ।
ಏಕಸ್ಮಿಂಸ್ತು ಪುರೇ ಸಂಸ್ಥೋ ದ್ವಿರೂಪೋಗ್ನೇಃ ಸುತೋ
ಮಹಾನ್ ॥ ಇತಿ ಬ್ರಹ್ಮತರ್ಕೇ ॥

ಸರ್ವವೇದದಿಂದಲೂ ನಿರ್ಣಯಕವಾದುದು. ಎರಡು ಗಮ್ಯಮಾರ್ಗಗಳು ಮೊದಲನೆಯದು ಜ್ಞಾನಿಗಳಿಂದ ಹೊಂದಲ್ಪಡುವ ಅರ್ಚಿರಾದಿಮಾರ್ಗವು ಎರಡನೆಯದು ಧೂಮಾದಿಮಾರ್ಗವು ಕರ್ಮಗಳಿಂದ ಹೊಂದಲ್ಪಡುವುದು ಅಗ್ನಿರ್ಜ್ಯೋತಿಃ ಎಂದು ಎರಡುವಿಧವಾಗಿ ಅರ್ಚಿಷಮಾರ್ಗದಲ್ಲಿ ಅಧಿಷ್ಠಾನವಾದ ಎರಡು ರೂಪಗಳು ಅಗ್ನಿಜ್ಯೋತಿ ಎಂಬ ಭೇದದಿಂದ ಒಂದೆ ಸ್ಥಳದಲ್ಲಿರುವುವು ಜ್ಞಾನಿಯು ಮೊದಲು ಅಗ್ನಿಯನ್ನು ಹೊಂದಿ ಅನಂತರ ಜ್ಯೋತಿಯನ್ನು ಹೊಂದುವನು ಆದ್ದರಿಂದ ವ್ಯತ್ಯಾಸವಿಲ್ಲ. ಫಲಿತಾರ್ಥವು ಉತ್ಕ್ರಾಂತಜ್ಞಾನಿಯು ಪರಬ್ರಹ್ಮನನ್ನು ಹೊಂದಲು ಒಂದೇಮಾರ್ಗವಾದ ಅರ್ಚಿರಾದ ಮಾರ್ಗದಿಂದ ಹೋಗುವನು. ಸರ್ವೇವಾ ಎಂಬ ಶೃತಿಯು "ಅಗ್ನಿ" ಎಂಬ ಶೃತಿಯೂ ಪ್ರಮಾಣಗಳು

ಇತಿ ಅರ್ಚಿರಾದ್ಯಧಿಕರಣಂ

## – ವಾಯು ಶಬ್ದಾಧಿಕರಣಂ –

ಈ ಅಧಿಕರಣದಲ್ಲಿ ದ್ವಿತೀಯವಾಗಿ ವಾಯುಪ್ರಾಪ್ತಿಯು ಎಂದು ಸಮರ್ಥನೆಯು

**ಸೂ|| ಓಂ|| ವಾಯುಶಬ್ದಾದವಿಶೇಷವಿಶೇಷಾಭ್ಯಾಂ ಓಂ|| 2**

ಅರ್ಚಿಷೋ ವಾಯುಂ ಗಚ್ಛತಿ ಸ ವಾಯುಮಾಗಚ್ಛತಿ (ಬೃ-7-10-1)
ಇತಿ ಸಾಮಾನ್ಯವಚನಾತ್ ||

ಅವಿಶೇಷವಿಶೇಷಗಳುಳ್ಳ ಶೃತಿಗಳ ಪರ್ಯಾಲೋಚನೆಯಿಂದ ವಾಯುವು ದ್ವಿತೀಯ ಪ್ರಾಪ್ತಿಯು ಎಂದು ಸಮರ್ಥನೆಯ ಸವಾಯುಮಾಗಚ್ಛತಿ ಮತ್ತು ಅರ್ಚಿಷೋ ಅಹಃ ಹೀಗೆ ವಾಯು ಅಗ್ನಿಗಳಿಗೆ ಅಧಿಕಾರ ಭೇದದಿಂದ ದ್ವಿತೀಯತ್ವ ಪ್ರಾಪ್ತಿಯಲ್ಲಿ ಭೇದವೆಂದು ಪೂರ್ವಪಕ್ಷವು. ಸೂಕ್ತಾರ್ಥವು ಒಂದೇ ಆದ ಮಾರ್ಗದಿಂದ ಬ್ರಹ್ಮನನ್ನು ಹೊಂದುವ ಜ್ಞಾನಿಯು ಅರ್ಚಿಷನನ್ನು ಅನಂತರ ವಾಯುವನ್ನು ಹೊಂದುವನು. ಅವಿಶೇಷ ವಿಶೇಷಗಳಿಂದ ವಾಯುಶೃತಿಯು. ಸಾಧಾರಣವಾಕ್ಯದಿಂದ ವಾಯುವೇ ಸಿದ್ಧಾಂತವು. ಉತ್ಕ್ರಾಂತ ಅಪರೋಕ್ಷ ಜ್ಞಾನಿಯು ಅರ್ಚಿದ್ವಾರ ಪ್ರವಹಾಖ್ಯ ವಾಯುವನ್ನು ಹೊಂದುವನು.

2 **ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ ವಾಯೋರಹರಹ್ನ ಆಪೂರ್ಯಮಾಣಪಕ್ಷಂ || ಇತಿ ವಿಶೇಷ ವಚನಾಚ್ಚ**

ಜ್ಞಾನಿಯು ಶರೀರದಿಂದ ಹೊರಹೊರಟು ಅರ್ಚಿಷ ಲೋಕವನ್ನು ಹೊಂದಿ ಹೊರಹೊರಟು ಎರಡನೇಗತಿಯನ್ನು ಹೊಂದಿದ ನಂತರ ಅಹಃ ಎಂಬ ದೇವತೆಯನ್ನು ಹೊಂದುವನು ಎಂದು ಶೃತಿಯು.

**ಇತಿ ವಾಯುಶಬ್ದಾಧಿಕರಣಂ**

**– ತಟಿದಧಿಕರಣಂ –**

**ಈ ಅಧಿಕರಣದಲ್ಲಿ** ಸಂವತ್ಸರಾಭಿಮಾನಿ ಲೋಕಾನಂತರ ತಟಿದಭಿಮಾನಿ **ಲೋಕಪ್ರಾಪ್ತಿಯು ಹೇಳಿದೆ.**

## ಸೂ|| ಓಂ|| ತಟಿತೋಽಧಿವರುಣಃ ಸಂಬಂಧಾತ್ ಓಂ|| 3

ಸಂವತ್ಸರಾನಂತರ ತಟಿಲ್ಲೋಕಾನಂತರ ಆದರಮೇಲೆ ವರುಣದೇವರ ಪ್ರಾಪ್ತಿಯು ತಟಿತಲೋಕದಮೇಲೆ ವರುಣ ದೇವರು ಇರುವುದರಿಂದ ಪ್ರಾಪ್ಯನು

ಮಾಸೇಭ್ಯಃ ಸಂವತ್ಸರಂ ಸಂವತ್ಸರಾದ್ವರುಣಲೋಕಂ ವರುಣಲೋಕಾತ್ಪ್ರಜಾಪತಿ ಲೋಕಂ । ಇತಿಕೌಂಡಿನ್ಯಶೃತಿಃ
ಸಂವತ್ಸರಾತ್ತಟಿತ ಮಾಗಚ್ಛತಿ ತಟಿತಃ ಪ್ರಜಾಪತಿ ಲೋಕಂ || ಇತಿ ಚ ಗೌಪವನಶೃತಿಃ

ಕೌಂಡಿನ್ಯಶೃತಿಯು ಮತ್ತು ಗೌಪವನ ಶೃತಿಗಳಲ್ಲಿ ವ್ಯತ್ಯಾಸವು—ಎಂದರೆ ಸಿದ್ಧಾಂತಸೂತ್ರನು ಜ್ಞಾನಿಯು ತನ್ನ ಗಮ್ಯಮಾರ್ಗದಲ್ಲಿ ಸಂವತ್ಸರಾನಂತರದಲ್ಲಿ ತಟಿತವನ್ನು ಹೊಂದುವನು ಅನಂತರ ತಟಿತಲೋಕದ ಮೇಲೆ ವರುಣದೇವರನ್ನು ಹೊಂದುವನು ಎಂಬುದರಿಂದ ತಟಿತನಿಂದ ಮೇಲೆ ವರುಣನ ಪ್ರಾಪ್ತಿಯು ಅದಕ್ಕಿಂತ ಮುಂಚೆಯಲ್ಲ ವರುಣಲೋಕವು ತಟಿತಲೋಕದಿಂದ ಧಾರುಣಮಾಡಲ್ಪಟ್ಟು ತಟಿತ್ತನ ಮೇಲೆ ಇರುವ ತನ್ನಸ್ಥಾನದಲ್ಲಿ ವರುಣ ದೇವರು ಪ್ರಕಾಸಿಸುತ್ತಾ ಸತ್ಯ ಅನೃತಗಳನ್ನು ವಿಚಾರಮಾಡುವನು ಹೀಗೆ ಸಮಾಧಾನವು.

2 **ತತ್ರ ತಟಿತೋ ವರುಣಂ ಗಚ್ಛತಿ ತಟಿತಾ ಹ್ಯುಹ್ಯತೇ ವರುಣ ಲೋಕಸ್ತಟಿದುಪರಿಮುಕ್ತಾಮುಯೋ ರಾಜತೇ ತತ್ರಾಸೌ ವರುಣೋ ರಾಜಾಸತ್ಯಾನೃತೇ ವಿವಿಂಚತಿ || ಇತ್ಯುಪರಿ ಸಂಬದ್ಧತ ಶ್ರುತೇಃ**

ಶೃತಿಯಿಂದ ಸಮಾಧಾನವು.

ಇತಿ ತಟಿದಧಿಕರಣಂ

## ಸೂ॥ ಓಂ॥ ಆತಿವಾಹಿಕಸ್ತಲ್ಲಿಂಗಾತ್ ಓಂ॥ 4

ಈ ಅಧಿಕರಣದಲ್ಲಿ ಅರ್ಚಿರಾದಿನಂತರ ವಾಯುಪ್ರಾಪ್ತಿಯು ಅತಿವಾಹಕ ವಾಯುಪುತ್ರನೆಂದು ಸಮರ್ಥನವು ದ್ವಿತೀಯಪ್ರಾಪ್ಯಕ್ಷದಿಂದ ಹೇಳಲ್ಪಟ್ಟಿರುವ ವಾಯುವು ಅತಿವಾಹಕನು. ಮುಖ್ಯವಾಯುವಲ್ಲ. ವಾಹಕ ಧರ್ಮದಿಂದಲೂ ಅರ್ಚಿಷಪದದ ಹೇಳಿಕೆಯಿಂದಲೂ ಈ ಅತಿವಾಹಕನು ಮುಖ್ಯಪ್ರಾಣನ ಪುತ್ರನು ಮಾತ್ರ ಮುಖ್ಯಪ್ರಾಣನಲ್ಲ

2 ಕುತಃ -ಏಕೆಂದರೆ

## ಸೂ॥ ಓಂ॥ ಉಭಯವ್ಯಾಮೋಹಾತ್ತತ್ಸಿದ್ಧೇಃ ಓಂ॥ 5

ಸವಾಯುಮಾಗಚ್ಛತಿ (ಬ 7-10-1) ಇತಿ ಪ್ರಥಮಮುಚ್ಯತೇ ।
ಉತ್ಕ್ರಾಂತೋ ವಿದ್ವಾನ್ಪರಮಭಿಗಚ್ಛನ್ವಿದ್ಯುತಮೇವಾಂತತ ಉಪಗಚ್ಛತಿ
ದ್ಯೌರ್ವಾವ ವಿದ್ಯುತ್ತತ್ಪತ್ತಿಂ ವಾಯುಮುಪಗಮ್ಯ ತೇನೈವ ಬ್ರಹ್ಮ ಗಚ್ಛಂತಿ ॥
ಇತ್ಯಂತೇಪಿ ವಾಯುಗಮನ ಶ್ರುತೇಃ

ಪೂರ್ವೋಕ್ತ ವಾಯುವು ಅತಿವಾಹಕನೋ ಅಥವಾ ಮುಖ್ಯವಾಯುವೋ ಎಂದು ಸಂದೇಹ. ಉತ್ತರೋತ್ತರವಾಯುವಿಗೆ ದಿವಸ್ಪತಿತ್ವ ವಿಶೇಷದರ್ಮವು ಹೇಳಿರುವುದರಿಂದ ಆತನು ಮುಖ್ಯವಾಯುವೇ. ಪ್ರಥಮಪ್ರಾಪ್ತನು ಅತಿವಾಹಕನೇ ಎಂದು ಸಿದ್ಧಾಂತವು ಮೊದಲಿನಲ್ಲಿ ಸವಾಯುಮಾಗಚ್ಛತಿ ಎಂದು ಹೇಳಿದೆ ಎರಡನೇ ಶೃತಿಯಲ್ಲಿ ಉತ್ಕ್ರಾಂತೋ ವಿದ್ವಾನ್ ಎಂದು ದೇಹದಿಂದ ಹೊರಹೊರಟ ಜ್ಞಾನಿಯು ಪರದೇವತೆಯನ್ನು ಹೊಂದಲು ವಿದ್ಯುತ್ ಶಬ್ದವಾಚ್ಯ ಭಾರತಿ ದೇವಿಯ (ದಿವಸ್ಪತಿ) ಮುಖ್ಯವಾಯುವನ್ನು ಸಮೀಪಿಸಿ ಅವನಿಂದಲೇ ಪರಬ್ರಹ್ಮನನ್ನು ಹೊಂದುವನು ಎಂದು ಹೇಳುವುದರಿಂದ ಅನಂತರ ಪ್ರಾಪ್ಯವಾಯುವು ಮುಖ್ಯನೇ ಪ್ರಥಮಪ್ರಾಪ್ತನು ಅತಿವಾಹಕವಾಯುವೇ ಪೂರ್ವೋಕ್ತ ಅತಿವಾಹಿಕ ಪರೋವೇಶಿ

ವ್ಯಾವೋಹ ಉತ್ತರ ದಿನಸ್ಪತಿರಿತಿ ವಿಶೇಷಣಾ ಪೂರ್ವಕ್ತಾತಿ ವಾಹಿಕಸ್ಯೈ ವ ಸಿದ್ದೇಃ ಎಂದು ಭಾಷ್ಯೋಕ್ತಿಯು.

3 ಬ್ರಹ್ಮತರ್ಕೇ ಚ –

ಉತ್ಕ್ರಾಂತಸ್ತು ಶರೀರಾತ್ಸ್ವಗಚ್ಛತ್ಯರ್ಚಿಷಮೇವ ತು ।
ತತೋ ಹಿ ವಾಯೋಃ ಪುತ್ರಂ ಚ ಯೋಽಸೌ ನಾಮ್ನಾತಿ ವಾಹಿಕಃ।
ತತೋಽಹಃ ಪೂರ್ವಪಕ್ಷಂ ಚಾಪ್ಯುದಕ್ಸಂ ವತ್ಸರಂ ತಥಾ ।
ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ ।
ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ ದೇವೀಂ ದಿವಂ ತಥಾ ।
ತತೋ ವಾಯುಂ ಪರಂ ಪ್ರಾಪ್ಯತೇನ್ಯೈತಿ ಪುರುಷೋತ್ತಮಂ ॥ ಇತಿ

ಶರೀರದಿಂದ ಉತ್ಕ್ರಾಂತನಾದ ಜ್ಞಾನಿಯು ಅರ್ಚಿಷನನ್ನು ಹೊಂದಿ ಅನಂತರ ವಾಯುಪುತ್ರನಾದ ಅತಿವಾಹಕನನ್ನು ಹೊಂದುವನು. ಅನಂತರದಲ್ಲಿ ಶುಕ್ಲಪಕ್ಷ ಉತ್ತರಾಯಣಪಕ್ಷ, ಪ್ರಜಾಪತಿ, ಚಂದ್ರ, ವೈಶ್ವಾನರವ ಗಾಲಾಗ್ನಿಯನ್ನು (ಶೈಂಶುಮಾರ ಚಕ್ರಪ್ರಾಪ್ತಿಯು) ಧ್ರುವರಾಜನನ್ನು ಭಾರತೀದೇವಿಯನ್ನು, ಅನಂತರ ಮುಖ್ಯ ಪ್ರಾಣನನ್ನು ಕ್ರಮಶಃ ಹೊಂದಿ ವಾಯುದ್ವಾರಾ ಪುರುಷೋತ್ತಮನಾದ ಹರಿಯನ್ನು ಹೊಂದುವನು. ಹೀಗೆ ಸ್ಪಷ್ಟವಾಗಿ ಮಾರ್ಗವು ಹೇಳಿದೆ ಆದ್ದರಿಂದ ಪೂರ್ವಪ್ರಾಪ್ತ ವಾಯುವು ಅತಿವಾಹಕನೇ ಉತ್ತರನು ಮುಖ್ಯವಾಯುವು.

ಇತ್ಯಾತಿವಾಹಕಾಧಿಕರಣಂ

## – ವೈದ್ಯುತಾಧಿಕರಣಂ –

ಈ ಅಧಿಕರಣದಲ್ಲಿ ಮುಖ್ಯಪ್ರಾಣನು ಅಂತ್ಯಪ್ರಾಪ್ಯನೆಂದು ಸಮರ್ಥನೆಯು

**ಸೂ॥ ಓಂ॥ ವೈದ್ಯುತೇನೈವ ತತಸ್ತಚ್ಛ್ರುತೇಃ ಓಂ॥ 6**

ಪ್ರಕಾರಾಂತರೇಣ ತತ್ರ ತತ್ರೋಚ್ಯಮಾನತ್ವಾದ್ವಾಯೋರಪಿ ಪರತೋ
ಬ್ರಹ್ಮಣೋರ್ವಾಗ್ಗಂತವ್ಯೋಸ್ತೀತಿ ನಾಶಂ ಕನೀಯಂ ।
ವಿದ್ಯುತ್ಪತ್ತಿನಾ ವಾಯುನೈವ ।
ಸ ಏನಾನ್ಬ್ರಹ್ಮ ಗಮಯತಿ ॥ ಇತಿ ಬ್ರಹ್ಮಗಮನಶ್ರುತೇಃ

ಬ್ರಹ್ಮಜ್ಞಾನಿಯು ವಿದ್ಯುಕ್ಪತ್ತಿಯಿಂದ ಮುಖ್ಯಪ್ರಾಣನಿಂದಲೇ ಸಾಕ್ಷಾದ್ಬ್ರಹ್ಮ ಗಮನದ ಮಧ್ಯದಲ್ಲಿ ಇನ್ಯಾವದೇವತೆಯೂ ಪ್ರಾಪ್ಯವಲ್ಲ ಸಏವಾದ್ಬ್ರಹ್ಮ ಗಮಯತಿ ಎಂಬ ಶೃತಿಯಲ್ಲಿ ಹೇಳಿದೆ ವಿದ್ಯುತ್ಪತ್ತಿಯಾದ ಮುಖ್ಯಪ್ರಾಣನೇ ಅಂತ್ಯ ಪ್ರಾಪ್ಯ ದೇವತೆಯು ಅನಂತರ ಪರಬ್ರಹ್ಮನೇ ಪ್ರಾಪ್ಯನು. ಅಪ್ರತೀಕಾಲಂಬನರನ್ನು ಪರಬ್ರಹ್ಮರನ್ನೂ ಪ್ರತೀಕಾಲಂಬರನ್ನು ಕಾರ್ಯಬ್ರಹ್ಮನನ್ನು ಹೊಂದಿರುವನು.

2 **ವಿದ್ಯುತ್ಪತಿರ್ವಾಯುರೇವ ನಯೇದ್ಬ್ರಹ್ಮ ನ ಚಾಪರಃ ।**
**ಕುತೋನ್ಯಸ್ಯ ಭವೇಚ್ಛಕ್ತಿಸ್ತನ್ಮೃತೇ ಪ್ರಾಣನಾಯಕಂ ॥**
**ಇತಿ ಬೃಹತ್ತಂತ್ರೇ**

ಭಾರತೀದೇವಿಯು ಯಜಮಾನನಾದ ಮುಖ್ಯ ಪ್ರಾಣನೇ ಬ್ರಹ್ಮನನ್ನು ಹೊಂದಿರುವರು ಅನ್ಯರಲ್ಲ ಪ್ರಾಣನಾಯಕರಾದ ಅವರಲ್ಲದೆ ಇನ್ಯಾವ ದೇವತೆಗೆ ಅಸಕ್ತಿಯಿದ್ದೀತು?

ಇತಿ ವೈದ್ಯುತಾಧಿಕರಣಂ

**– ಕಾರ್ಯಾಧಿಕರಣಂ –**

ಈ ಅಧಿಕರಣದಲ್ಲಿ ಅರ್ಚಿರಾದಿಮಾರ್ಗದಿಂದ ಹೊರಟ ಅಲ್ಪಾದಿಕಾರಿಗಳು ಮತ್ತು ದೇವತೆಗಮನವು.

**ಸೂ॥ ಓಂ॥ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ॥ 7**

ಸ ಏವಾನ್ ಬ್ರಹ್ಮ ಗಮಯತಿ (ಛಾ-5-10-2) ಇತಿ ಕಾರ್ಯಬ್ರಹ್ಮ ಗಮಯತೀ ॥ ಇತಿ ಬಾದರಿರ್ಮನ್ಯತೇ

ಈ ಶೃತಿಯಲ್ಲಿ ಹೇಳಿರುವ ಬ್ರಹ್ಮನು ಜಗದುತ್ಪಾದಕನಾದ ಚತುರ್ಮುಖ ಬ್ರಹ್ಮನಾದ್ದರಿಂದ ಮುಖ್ಯಪ್ರಾಣನು ಚತುರ್ಮುಖಬ್ರಹ್ಮನನ್ನು ಹೊಂದಿಸುವನು ಎಂದು ಬಾದರಿಯ ಮತವು.

2 ಋತೇ ದೇವಾತ್ಪರಂ ಬ್ರಹ್ಮ ಕಃ ಪುಮಾನ್ಪ್ರಾಪ್ನುಯಾತ್ಕ್ವಚಿತ್ । ಯದ್ಯಪಿ ಬ್ರಹ್ಮದೃಷ್ಟಿಃ ಸ್ಯಾದ್ಬ್ರಹ್ಮಲೋಕಮವಾಪ್ನುಯಾದಿತ್ಯ ಥ್ಯಾರ್ತ್ತವಚನಾತ್ತಸ್ಯೈವ ಗತ್ಯುಪಪತ್ತೇಃ ॥

ದೇವತೆಗಳಿಂದ ಇತರರಿಗೂ ಬ್ರಹ್ಮದೃಷ್ಟಿಯು ಆದರೂ ದೇವತೆಗಳನ್ನು ಬಿಟ್ಟು ಮಿಕ್ಕ ಯಾವ ಪುರುಷನು ಚತುರ್ಮುಖಮುಕ್ತಿಪರ್ಯಂತವಾಗಿ ಪರಬ್ರಹ್ಮನನ್ನು ಹೊಂದಲು ಶಕ್ತನು ಯಾರೂ ಅಲ್ಲ. ದೇವತೆಗಳಿಗೆ ಸಾಕ್ಷಾದ್ಬ್ರಹ್ಮ ಪ್ರಾಪ್ತಿಯು ದೇಹಾನಂತರ ಮುಕ್ತಿದೆಶೆಯಲ್ಲಿ ಅದರ ಪೂರ್ವದಲ್ಲಿಯೂ ಮನುಷದೇಹಪ್ರಾಪ್ತಿಯು ಉತ್ಕ್ರಮಾಂತರದಲ್ಲಿಯೂ ಬಂಧನದಲ್ಲಿಯೇ ಇರುವರು. ಆದರೆ ಸೃಷ್ಟಿಯು ವ್ಯರ್ಥ ವಲ್ಲ.) ಚತುರ್ಮುಖ ಬ್ರಹ್ಮದೇವರನ್ನು ಹೊಂದುವರು

## ಸೂ॥ ಓಂ॥ ವಿಶೇಷಿತತ್ವಾಚ್ಚ ಓಂ॥ 8

ಯ ದಿ ಹವಾವ ಪರಮಭಿಪಶ್ಯತಿ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಂ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಂ ॥ ಇತಿ ಕೌಷಾರವಶ್ರುತೌ

ಕೌಷಾರವ ಶೃತಿಯಲ್ಲಿ ಪ್ರಾಪ್ಯಬ್ರಹ್ಮನು ಚತುರ್ಮುಖನೆಂದು ವಿಶೇಷವಾಗಿ ಹೇಳಿರುವುದರಿಂದ ಚತುರ್ಮುಖ ಬ್ರಹ್ಮಪ್ರಾಪ್ತಿಯೇ ಯುಕ್ತವು ಯದ್ಯಪಿ ಶ್ರೀ ಪರಮಾತ್ಮನನ್ನು ನೋಡಿದರೂ ದೇವತೆಗಳಲ್ಲ. ಬ್ರಹ್ಮಜ್ಞಾನಿಗಳು ಚಂದ್ರ ಕಾಲದಲ್ಲಿ ಚತುರ್ಮುಖನನ್ನು ಹೊಂದುವರು.

## ಸೂ॥ ಓಂ॥ ಸಾಮೀಪ್ಯಾತ್ತುತದ್ವ್ಯಪದೇಶಃ ಓಂ॥ 9

ಬ್ರಹ್ಮವಿತ್ ಎಂಬ ಪರಬ್ರಹ್ಮಪ್ರಾಪ್ತಿಶೃತಿಯು ಚತುರ್ಮುಖ ಬ್ರಹ್ಮನನ್ನು ಹೊಂದಿ ಶ್ರೇಷ್ಟವಾಗಿಯೇ ಪರಬ್ರಹ್ಮನನ್ನು ಹೊಂದುವುದಾಗಿ ಮೋಕ್ಷಕ್ಕೆ ಕಾಲ ಸಾಮೀಪ್ಯವು ಹೇಳುವುದು ವಿರೋಧವಿಲ್ಲ.

ಬ್ರಹ್ಮವಿದಾಪ್ನೋತಿಪರ (ತೈ 2-1) ಇತಿ ವ್ಯಪದೇಶಸ್ತು ಸಮೀಪಿತ ಏವ ಪರಮಪಿ ಪ್ರಾಪ್ನೋತೀತ್ಯೇತದರ್ಥ ಏವ ॥

ಕಾರ್ಯಬ್ರಹ್ಮ ಪರಬ್ರಹ್ಮಪ್ರಾಪ್ತಿಗಳಿಗೆ ಸ್ವಲ್ಪಕಾಲ ವ್ಯತ್ಯಾಸನಿಮಿತ್ತವಾದ್ದರಿಂದ ಜ್ಞಾನಿಯು ಕಾರ್ಯಬ್ರಹ್ಮನನ್ನು ಹೊಂದಿದನಂತರ ಸಮೀಪಕಾಲದಲ್ಲಿಯೇ ಪರಬ್ರಹ್ಮನನ್ನು ಹೊಂದುವನು. ಶೃತಿಯು ಕಾರ್ಯಪ್ರಾಪ್ತಿಯನ್ನು ನಿಷೇದಿಸುವುದಿಲ್ಲ. ಮತ್ತು ಪರಪ್ರಾಪ್ತಿಯನ್ನು ಮೊದಲಾಗಿ ಹೇಳುವುದೂ ಇಲ್ಲ.

5 ಕದಾ —

## ಸೂ॥ ಓಂ॥ ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್ ಓಂ॥ 10

ಮಹಾ ಪ್ರಳಯಕಾಲದಲ್ಲಿ ಅಧ್ಯಕ್ಷನಾದ ಚತುರ್ಮುಖಬ್ರಹ್ಮನೊಡಗೂಡಿ ಪರಬ್ರಹ್ಮನು ಜ್ಞಾನಿಯನ್ನು ಹೊಂದುವನು ಎಂದು ಶೃತ್ಯರ್ಥವು.

ತೆ ಹ ಬ್ರಹ್ಮಾಣಮಭಿಸಂಪದ್ಯಯದ್ವೈತದ್ವಿಲೀಯತೇಽಥ ಸಹ ಬ್ರಹ್ಮಣಾ ಪರಮಭಿಗಚ್ಛಂತಿ ಇತಿ ಸೌಪರ್ಣಶೃತೇರ್ಮಹಾಪ್ರಲಯೇ ತದಧ್ಯಕ್ಷೇಣ ಬ್ರಹ್ಮಣಾ ಸಹ ಗಚ್ಛಂತಿ ॥

ಜ್ಞಾನಿಯು ಸಕಲ ಕಾರ್ಯಗಳ ವಿನಾಶರೂಪ ಪ್ರಳಯದಲ್ಲಿ ಆ ಕಾರ್ಯಾಧ್ಯಕ್ಷನಾದ ಚತುರ್ಮುಖಬ್ರಹ್ಮನ ಜತೆಗೆ ಪರಬ್ರಹ್ಮನನ್ನು ಹೊಂದುವರು. ಆತನನ್ನು ಅತಿಕ್ರಮಿಸುವುದಿಲ್ಲ.

## ಸೂ॥ ಓಂ॥ ಸ್ಮೃತೇಶ್ಚ ಓಂ॥ 11

ಬ್ರಹ್ಮಣಾ ಸಹತೇ ಸರ್ವೇ ಸಂಪ್ರಾಪ್ತೇ ಪ್ರತಿಸಂಚರೇ ।
ಪರಸ್ಯಾಂತೇ ಪರಾತ್ಮಾನಃ ಪ್ರವಿಶಂತಿ ಪರಂಪದಂ ॥ ಇತಿ

ಮೇಲಿನ ಶೃತಿಯಿಂದಲೂ ಜ್ಞಾನಿಗೆ ಪರಬ್ರಹ್ಮನ ಜೊತೆಯಲ್ಲಿಯೇ ಪ ಬ್ರಹ್ಮಪ್ರಾಪ್ತಿಯು.

## ಸೂ|| ಓಂ|| ಪರಂಜೈಮಿನಿರ್ಮುಖ್ಯತ್ವಾತ್ ಓಂ|| 12

ಬ್ರಹ್ಮಶಬ್ದಸ್ಯ ತತ್ರೈವ ಮುಖ್ಯತ್ವಾತ್ಪರಮೇವ ಬ್ರಹ್ಮಗಮಯತೀತಿ ಜೈಮಿನಿ ರ್ಮನ್ಯತೇ ।

ಜ್ಞಾನಿಯು ಶ್ರವಣ ಮನನ ಉಪಾಸನಾದಿಗಳನ್ನು ಪರಬ್ರಹ್ಮನ ದರ್ಶನಕ್ಕೋಸ್ಕರ ಮಾಡುವುದರಿಂದ ಜ್ಞಾನಿಯು ಪರಬ್ರಹ್ಮನನ್ನೇ ಹೊಂದುವನೆಂದು ಜೈಮಿನಿಯು ಕಾರ್ಯಬ್ರಹ್ಮನನ್ನಲ್ಲವೆಂದು ಹೇಳುವರು

## ಸೂ|| ಓಂ|| ದರ್ಶನಾಚ್ಚ ಓಂ|| 13

ದೃಷ್ಟತ್ವಾಚ್ಚ ಪರಬ್ರಹ್ಮಣಃ ॥

ಜ್ಞಾನಿಯು ಉಪಾಸನೆಯಿಂದ ಪರಬ್ರಹ್ಮನನ್ನು ನೋಡುವುದರಿಂದ ಪರ ಬ್ರಹ್ಮನನ್ನೇ ಹೊಂದುವನೆಂದು ಯುಕ್ತಿಯು.

## ಸೂ|| ಓಂ|| ನ ಚ ಕಾರ್ಯೇ ಪ್ರತಿಪತ್ತ್ಯಭಿಸಂಧಿಃ ಓಂ|| 14

ಜ್ಞಾನಿಗೆ ಕಾರ್ಯಬ್ರಹ್ಮೋಪಾಸನೆಯು ಹೇಳಲ್ಪಡದಿರುವುದರಿಂದಲೂ ಕಾರ್ಯಬ್ರಹ್ಮ ಉಪಾಸನೆಯ ಇಚ್ಛೆಯು ಯಿಲ್ಲದ್ದರಿಂದ ಕಾರ್ಯಬ್ರಹ್ಮಪ್ರಾಪ್ತಿಯು ಸಾಧ್ಯವಿಲ್ಲ

ನ ಹಿ ಕಾರ್ಯೇ ಪ್ರತಿಪತ್ತಿಃ ಪ್ರಾಪ್ನವಾನೀತ್ಯಭಿಸಂಧಿಶ್ಚ ।

ಕಾರ್ಯಬ್ರಹ್ಮಪ್ರಾಪ್ತಿಗೆ ಇಚ್ಛಿಸಿಯೂ ಇಲ್ಲ. ಉಪಾಸನೆಯನ್ನೂ ಮಾಡಿರುವು ದಿಲ್ಲ.

10 ಯದುಪಾಸ್ತೇ ಪುಮಾಞ್ಜೀವ ಸ್ಯತ್ಪ್ರಾಪ್ನುಮಭಿವಾಂಛತಿ ।
ಯಚ್ಚ ಪಶ್ಯತಿ ತೃಪ್ತಃ ಸಂಸ್ತತ್ಪ್ರಾಪ್ನೋತಿ ಮೃತೇರನ್ವಿತಿ ಪಾದ್ಮೇ ॥

ಯಾವ ವಸ್ತುವನ್ನು ಜೀವನು ಹೊಂದಲು ಇಚ್ಛೆಯಿಂದ ಉಪಾಸನೆ ಮಾಡುವನೋ, ಯಾವುದನ್ನು ನೋಡಿ ತೃಪ್ತನಾಗುವನೋ ಆ ವಸ್ತುವನ್ನೇ ಮೃತ್ಯು ನಂತರದಲ್ಲಿ ಹೊಂದುವನು.

ಸೂ ಓಂ॥ ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ
ಉಭಯಥಾ ಚ ದೋಷಾತ್ತತ್ಕ್ರತುಶ್ಚ ಓಂ॥ 15

ವಾಯುದೇವರು ಅಪ್ರತೀಕಾಲಂಬನರನ್ನು ಅಂದರೆ ವ್ಯಾಪ್ತ್ಯೋಪಾಸಕಾಧಿಕಾರಿಗಳನ್ನು ಪರಬ್ರಹ್ಮನನ್ನು ಹೊಂದಿಸುವನು ಎಂದು ಶ್ರುತ್ಯರ್ಥವು ಅನ್ಯಪ್ರತೀಕಾಲಂಬನವನ್ನು ಅಂದರೆ ದೇಹ ಹೃದಯದ ಒಳಗೆ ಪರಮಾತ್ಮಾ ಉಪಾಸನೆ ಮಾಡುವವರನ್ನು ಕಾರ್ಯಬ್ರಹ್ಮನನ್ನು ಹೊಂದಿಸುವನು ಎಂದು ಶ್ರುತ್ಯರ್ಥವು ಬಾದರಾಯಣಾಚಾರ್ಯರದು. ಹೀಗಲ್ಲದಲ್ಲಿ ಪಕ್ಷಗಳೆರಡೂ ದೋಶಯುಕ್ತವಾದುದು ಪಾದ್ಮದಲ್ಲಿ ಹೇಳಿದಂತೆ ಇಚ್ಛಾಮಾತ್ರದಿಂದಲೇ ಪ್ರಾಪ್ತಿಯು ಸಂಭವವಲ್ಲ ಪ್ರಾಪ್ತಿ ಯಥಾ ಯೋಗ್ಯತೆಯೇ ಪ್ರಾಪ್ತಿಯು ಜ್ಞಾನಸಾಧನಾ ಪರೋಕ್ಷದಿಂದ ಯಾವುದು ಲಭ್ಯವೋ ಅದೇ ಪ್ರಾಪ್ತವು.

12 ಪ್ರತೀಕಂ ದೇಹ ಉದ್ದಿಷ್ಟೋ ಯೇಷಾಂ ತತ್ರೈವ ದರ್ಶನಂ ।
ನ ತು ವ್ಯಾಪ್ತತಯಾಕ್ವಾಪಿ ಪ್ರತೀಕಾಲಂಬನಾಸ್ತು ತೇ ।
ಅಪ್ರತೀಕಾ ದೇವತಾಸ್ತು ಋಷೀಣಾಂ ಶತಮೇವ ಚ ।
ರಾಜ್ಞಾಂ ಚ ಶತಮುದ್ದಿಷ್ಟಂ ಗಂಧರ್ವಾಣಾಂ ಶತಂ ತಥಾ ।
ಏತೇಽಧಿಕಾರಿಣೋ ವ್ಯಾಪ್ತದರ್ಶನೇಽನ್ಯೇ ನ ತು ಕ್ವಚಿತ್ ।
ಅಯೋಗ್ಯದರ್ಶನೇ ಯತ್ನಾದ್ಭ್ರಂಶಃ ಪೂರ್ವಸ್ಯ ಚಾಪಿ ತು।
ಅಪ್ರತೀಕಾಶ್ರಯಾ ಯೇ ಹಿ ತೇ ಯಾಂತಿ ಪರಮೇವ ತು ।
ಸ್ವದೇಹೇ ಬ್ರಹ್ಮದೃಷ್ಟೈವ ಗಚ್ಛೇದ್ಬ್ರಹ್ಮಸಲೋಕತಾಂ ।

ಬ್ರಹ್ಮಣಾ ಸಹ ಸಂಪ್ರಾಪ್ತೇ ಸಂಹಾರೇ ಪರಮಂ ಪದಂ ।
ಇತಿ ಗಾರುಡವಚನಾತ್
ಉಭಯತ್ರೋಕ್ತದೋಷಾಚ್ಚಾ ಪ್ರತೀಕಾಲಂಬನಾನ್ಪರಂ ನಯತಿ ॥

ದೇಹಾದಿಗಳಲ್ಲಿಯೇ ಯಾವ ಜೀವರಿಗೆ ಬ್ರಹ್ಮದರ್ಶನ ಯುಕ್ತವೋ ಅವರಿಗೆ ಅಲ್ಲಿಯೂ ದರ್ಶನವು. ಅವರು ಯಾವಾಗಲೂ ವ್ಯಾಪ್ತೋಪಾಸಕಾರ್ಹತೆ ಪಡೆದಿರುವುದಿಲ್ಲ. ಆದಿರೆ 100 ದೇವತೆಗಳು 1 0 ಋಷಿಗಳು 100 ಚಕ್ರವರ್ತಿಗಳು ಮತ್ತು 100 ಗಂದರ್ವಾದಿಗಳು ಮಾತ್ರ ವ್ಯಾಪ್ತದರ್ಶಿಗಳು ಅಯೋಗ್ಯದರ್ಶನ ಪ್ರಯತ್ನದಿಂದ ಯೋಗ್ಯದರ್ಶನವೂ ಭ್ರಷ್ಟವಾಗುವುದು ಅಪ್ರತೀಕಾಲಂಬನ ವಾಸಿಗಳು ಪರಮ ಪುರುಷನನ್ನು ಹೊಂದುವರು ತನ್ನ ದೇಹದಲ್ಲಿ ಪರಮಾತ್ಮದರ್ಶನ ವುಳ್ಳವರು ಕಾರ್ಯಬ್ರಹ್ಮನ ಸಾಲೋಕ್ಯಹೊಂದಿ ಆತನ ಸಹಿತ ಮಹಾಪ್ರಳಯದಲ್ಲಿ ಪರಬ್ರಹ್ಮನನ್ನು ಹೊಂದುವರು. ಹೀಗೆ ಗರುಡಪುರಾಣವಚನವು.

ಸ ಯಥಾ ಕಾಮೋಭವತಿ ತತ್ಕ್ರತುರ್ಭವತಿ ಯತ್ಕ್ರತುರ್ಭವತಿ ತತ್ಕರ್ಮ ಕುರುತೇ ಯತ್ಕರ್ಮ ಕುರುತೇ (ಬೃ 6-45) ತದಭಿಸಂಪದ್ಯತೆ ಇತಿ ಶ್ರುತೇಶ್ಚ।
ಅತ್ರ ಕರ್ಮೋಪಾಸನಮೇವ । ಅಸ್ಯಾನ್ಕಾರ್ಯಂ ನಯತೀತಿ ಭಗವನ್ಮತಂ॥

ಈಶ್ವರೇಚ್ಛೆಯೇ ಜಿವೇಚ್ಛೆಯು ಅದೇ ಜೀವರಿಂದ ಮಾಡಿಸುವ ಉಪಾಸನಾ ದಿಂದ ಜ್ಞಾನಹೊಂದಿ ಜೀವನು ಫಲಹೊಂದುವನು. ಸರ್ವಕ್ಕೂ ಪರಮಾತ್ಮನ ಇಚ್ಛೆಯೇ ಪ್ರೇರಕವು

## ಸೂ॥ ಓಂ॥ ವಿಶೇಷಂ ಚ ದರ್ಶಯತಿ ಓಂ॥ 16

ಅಂತಃ ಪ್ರಕಾಶಾ ಬಹಿಃ ಪ್ರಕಾಶಾಃ ಸರ್ವ ಪ್ರಕಾಶಾಃ ।
ದೇವಾ ವಾವ ಸರ್ವಪ್ರಕಾಶಾ ಋಷಯೋಂತಃಪ್ರಕಾಶಾ ಮನುಷ್ಯಾ ಏವಬಹಿಃ ಪ್ರಕಾಶಾ ॥ ಇತಿ ಚತುರ್ವೇದಶಿಖಾಯಾಂ

ಅಂತಃಪ್ರಕಾಶರು ಬಹಿಃಪ್ರಕಾಶರು ಸರ್ವಶಃ ಪ್ರಕಾಶರು ಎಂದು ಪರಮಾತ್ಮ

ದರ್ಶನದಲ್ಲಿ ಯೋಗ್ಯರು ಮೂರುವಿಧರು ಸರ್ವಪ್ರಕಾಶರು ದೇವತೆಗಳು ಋಷಿಗಳು ಅಂತಃಪ್ರಕಾಶರು, ಮನುಷ್ಯರು ಬಹಿಪ್ರಕಾಶರು ಹೀಗೆ ಜ್ಞಾನಿಗಳ ವಿಭಾಗವನ್ನು ಹೇಳಿದೆ.

ಇತಿ ಕಾರ್ಯಾಧಿಕರಣಂ

ತೃತೀಯಃ ಪಾದಃ ಸಂಪೂರ್ಣಂ
ಶ್ರೀ ಕೃಷ್ಣಾರ್ಪಣಮಸ್ತು

ಚತುರ್ಥಃ ಪಾದಃ

**- ಸಂಪದ್ಯಾಧಿಕರಣಂ -**

ಈ ನಾಲ್ಕನೇಪಾದದಲ್ಲಿ ಮೋಕ್ಷದಲ್ಲಿ ಭೋಗವನ್ನು ಸಮರ್ಥಿಸುತ್ತಾರೆ.

ಭೋಗಾಮಾಹಾತ್ಮ್ಯನ್ನಾಪ್ರದೇ ।

## ಸೂ॥ ಓಂ॥ ಸಂಪದ್ಯಾವಿಹಾಯ ಸ್ವೇನ ಶಬ್ದಾತ್ ಓಂ॥ 1

ಈ ಅಧಿಕರಣದಲ್ಲಿ ಮುಕ್ತರು ಪರಬ್ರಹ್ಮನನ್ನತಿಕ್ರಮಿಸದೆ ಭೋಗಗಳನ್ನು ಹೊಂದುವರೆಂದು ಹೇಳಿದೆ.

ಜ್ಞಾನಿಯು ಪರಬ್ರಹ್ಮನನ್ನು ಹೊಂದಿ ಆತನನ್ನು ಅತಿಕ್ರಮಿಸದೆಯೇ ಪ್ರಕಟವಾದ ಸ್ವರೂಪದಿಂದಲೇ ಇದ್ದು ಭೋಗವನ್ನನುಭವಿಸುವರು. ಸೌಪರ್ಣಶೃತಿಯು ಹಾಗೆ ಹೇಳುವುದು ಸರ್ವರಿಂದ ಶೃತಿಯು.

ಸ ಯು ಏವಂ ವಿದೇವಂ ಮನ್ವಾನ ಏವಂ ಪಶ್ಯನ್ನಾತ್ಮಾನಮಭಿಸಂಪದ್ಯೈ ತೇ
ನಾತ್ಮನಾ ಯಥಾಕಾಮಂ ಸರ್ವಾನ್ಕಾಮಾನನುಭವತೀತಿ ಸೌಪರ್ಣಶ್ರುತೇ ।
ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೆ (ಛಾ-8-3-4)
ಇತಿ ಚ । ಏತಂ ಸೇತುಂ ತೀರ್ತ್ವಾಂಧಸ್ಸನ್ನನಂಧೋ ಭವತಿ (ಛಾ-8-4-)
ಇತಿ ಚ । ತತ್ರ ತರಣಂ ನಾಮ ತತ್ಪ್ರಾಪ್ತಯೋಽನ್ಯತರಣಮೇವ ।
ಇಮಾಂ ಘೋರಾಮಶಿವಾಂ ನದೀಂ ತೀರ್ತ್ವೈತಂ ಸೇತುಮಾಪ್ಯೈತೇನೈವ
ಸೇತುನಾ ಮೋದತೇ ಪ್ರಮೋದತ ಆನಂದೀಭವತೀತಿ ಮೌದ್ಗಲ್ಯಶ್ರುತೇಃ ॥

ಅಧಿಕಾರಿಯು ಯುಕ್ತಪ್ರಕಾರದಿಂದ ಪರಬ್ರಹ್ಮನನ್ನು ತಿಳಿದು ವಿಚಾರಮಾಡಿ ವಿಶೇಷೋಪಾಸನೆಯಿಂದ ಆತನನ್ನು ಕಂಡು ಪರಮಾತ್ಮನೊಡಗೂಡಿಯೇ ಸರ್ವೇಚ್ಛೆಗಳನ್ನನುಭವಿಸುವನು. ಪರಮಾತ್ಮನನ್ನು ಕ್ರಮಿಸದೆ ಹೇಗೆ ಸಾಧ್ಯವು ಎಂಬ ಪ್ರಶ್ನೆಗೆ ಛಾಂದೋಗ್ಯಶೃತಿಯಂತೆ ಜೀವರ ಸ್ವರೂಪಾವಿರ್ಭಾವ ಹೊಂದಿ ಪರಮಾತ್ಮನೊಡನೆ ಸುಖವನ್ನನುಭವಿಸುವನು ಎಂದು ಆದರೆ ಏತಂ .. ಎಂಬ ಶೃತಿಯಿಂದ ವಿರೋಧವೆಂದರೆ ಅಲ್ಲ ತರಣಶಬ್ದವು ಸಂಸಾರ ತರಣವನ್ನು ಮಾತ್ರ ಹೇಳುವುದು. ಶ್ರೀಪರಮಾತ್ಮನ ತರಣವಲ್ಲ. ಶೃತ್ಯರ್ಥವು ಪರಮಾತ್ಮ ಪ್ರಸಾದದಿಂದ ಸಂಸಾರಿಬದ್ಧನಾಗಿ ಅವಿದ್ಯಾವೃತನಾಗಿದ್ದ ಜೀವನು ಜಗದಾಶ್ರಯನಾದ ಹರಿಯನ್ನು ಹೊಂದಲು ಅವಿದ್ಯಾವನ್ನು ದಾಟಿ ವಿಶ್ವಾಶ್ರಯನಾದ ಪರಮಾತ್ಮನನ್ನು ಹೊಂದಿ ಪರಮಾತ್ಮನೊಂದಿಗೆ ಸುಖವನ್ನು ಹೊಂದುವನು. ಸ್ವರೂಪ ಸುಖಾಭಿವ್ಯಕ್ತಿಯನ್ನು ಹೊಂದಿ ಆನಂದದಿಂದಿರುವನು ಎಂದುಮೌದ್ಗಲ್ಯಶೃತಿಯು

ಇತಿ ಸಂಪದ್ಯಾಧಿಕರಣಂ

## - ಮುಕ್ತಾಧಿಕರಣಂ -

**ಈ ಅಧಿಕರಣದಲ್ಲಿ ಜೀವನು ಪರಬ್ರಹ್ಮನನ್ನು ಹೊಂದಿ ಆತನನ್ನು ಅತಿಕ್ರಮಿಸದೆ ಭೋಗಾನುಭವ ಹೊಂದುವದೇ ಮುಕ್ತತ್ವವು ಎಂದು ಸಮರ್ಥನವು.**

## ಸೂ॥ ಓಂ॥ ಮುಕ್ತಃ ಪ್ರತಿಜ್ಞಾನಾತ್ ಓಂ॥ 2

ಸ ತತ್ರ ಪರ್ಯೇತಿ ಎಂಬಶೃತಿಯಲ್ಲಿ ಅಮುಕ್ತರೆಂದು ಪೂರ್ವಪಕ್ಷವು. ಹಾಗಲ್ಲ ಅಲ್ಲಿ ಹೇಳುವುದು ಮುಕ್ತರ ವಿಷಯವೇ. ಮುಕ್ತಿಯಿಂದ ಅನ್ಯಜೀವರಿಗೆ ಅನ್ಯಭೋಗ ಗಳನ್ನು ನಿಷೇಧಮಾಡಿ ಅಹರಹಃ ಎಂಬಶೃತಿಯು ಮುಕ್ತರಿಗೆ ಬ್ರಹ್ಮಪ್ರಾಪ್ತಿಯಿಂದ ದಿವ್ಯಭೋಗಗಳನ್ನು ಹೇಳಿದೆ.

ಮುಕ್ತಏವಾತ್ರೋಚ್ಯತೇ । ಅಹರಹರೇನಮನುಪ್ರವಿಶತ್ಯುಪಸಂಕ್ರಮತೇ ಚ ನ ತತ್ರ ಮೋದತೇ ನ ಪ್ರಮೋದತೇ ನ ಕಾಮಾನನುಭವತಿ ಬದ್ಧೋಹ್ಯೇಷ ತದಾಭವತ್ಯಥ ಯದ್ಯೈನಂ ಮುಕ್ತೋನುಪ್ರವಿಶತಿ ಮೋದತೇ ಚ ಪ್ರಮೋದತೇ ಚ ಕಾಮಾಂಶ್ಚೈವಾನುಭವತಿ ॥ ಇತಿ ಬೃಹಚ್ಛ್ರುತೌ ಪ್ರತಿಜ್ಞಾನಾತ್

ಶೃತ್ಯರ್ಥವು ಪ್ರತಿದಿನವೂ ಸುಪ್ತಜೀವರು ಪರಮಾತ್ಮನನ್ನು ಪ್ರವೇಶಿಸಿ ಅಮುಕ್ತ ರಾದ್ದರಿಂದ ದಿವ್ಯಭೋಗಗಳನ್ನನುಸರಿಸುವುದಿಲ್ಲ ಅವನು ಬದ್ಧನೇ ಆದರೆ ಉಪಾ ಸನಾದ್ಯುಪಾಯಗಳಿಂದ ಪರಮಾತ್ಮನನ್ನು ಪ್ರವೇಶಿಸಿದಲ್ಲಿ ಆಗ ವಿರಾಮವಿಲ್ಲದೆಯೇ ಸೂಕ್ತಭೋಗಗಳನ್ನನುಭವಿಸುವನು

ಇತಿ ಮುಕ್ತಾಧಿಕರಣಂ

### – ಆತ್ಮಾಧಿಕರಣಂ –

ಈ ಅಧಿಕರಣದಲ್ಲಿ ಮುಕ್ತಿಯನ್ನು ಹೊಂದಿದ ಜೀವರಿಗೆ ಜ್ಯೋತಿಃ ಶಬ್ಧವಾಚ್ಯ ಪರಬ್ರಹ್ಮನ ಹೊಂದುವದರ ಸಮರ್ಥನವು.

## ಸೂ॥ ಓಂ॥ ಆತ್ಮಾ ಪ್ರಕರಣಾತ್ ಓಂ॥ 3

ಪರಂಜ್ಯೋತಿಃಶಬ್ದೇನ ಪರಮಾತ್ಮೈವೋಚ್ಯತೇ । ತತ್ಪ್ರಕರಣತ್ವಾತ್ ॥

ಪರಂಜ್ಯೋತಿಶಬ್ದದಿಂದ ಶ್ರೀ ಪರಮಾತ್ಮನೇ ಹೇಳಲ್ಪಟ್ಟಿರುವನು. ಜೀವನಾದ ಸೂರ್ಯನಲ್ಲ ಶೃತಿಯು ಪರಮಾತ್ಮಪ್ರಕರಣವಾದ್ದರಿಂದಲೇ ಸಿದ್ಧವು ಪರಂಜ್ಯೋತಿ ರುಪಸಂಪದ್ಯ ಎಂಬಲ್ಲಿ ಪರಂಜ್ಯೋತಿ ಶಬ್ದಕ್ಕೆ ಸ ತೇಜಸಿ ಸೂರ್ಯಸಂಪನ್ನಃ ಎಂಬಲ್ಲಿ ಸೂರ್ಯನೇ ವಾಚ್ಯ ಹೀಗೆ ಪೂರ್ವಪಕ್ಷವು. ಬ್ರಹ್ಮಾಂತರ ವಾಕ್ಯದ ರೀತ್ಯ ಪರಂ ಜ್ಯೋತಿಃ ಎಂಬುದು ಒಂದೇಪದವಾಗಿ ಶ್ರೇಷ್ಠಜ್ಯೋತಿಯೆಂದು ಅರ್ಥದಿಂದಲೂ ಪರಮಾತ್ಮಪ್ರಕರಣಬಲದಿಂದಲೂ ಶ್ರೀ ಪರಮಾತ್ಮನೇ ಯುಕ್ತವು

2 **ಪರಂ ಜ್ಯೋತಿಃ ಪರಂ ಬ್ರಹ್ಮ ಪರಮಾತ್ಮಾದಿಕಾ ಗಿರಃ ।**
**ಸರ್ವತ್ರ ಹರಿಮೇವೈಕಂ ಬ್ರೂಯುರ್ನಾನ್ಯಂ ಕಥಂಚನ** ಇತಿ
ಬ್ರಹ್ಮಾಂಡೇ ॥

ಪರಂಜ್ಯೋತಿ ಪರಂಬ್ರಹ್ಮ ಪರಮಾತ್ಮಾ ಇತ್ಯಾದಿ ಪದಗಳು ಎಲ್ಲಾ ಕಡೆಗಳಲ್ಲಿ ಯೂ ಶ್ರೀ ಹರಿಯೊಬ್ಬನನ್ನೇ ನಿಸ್ಸಂಶಯವಾಗಿ ಹೇಳುವುದು ಇನ್ನ್ಯಾರಿಗೂ ಈ ಪದಗಳ ಅನ್ವಯವಿಲ್ಲ

ಇತ್ಯಾತ್ಮಾಧಿಕರಣಂ

**- ಅವಿಭಾಗಾಧಿಕರಣಂ -**

ಈ ಅಧಿಕರಣದಲ್ಲಿ ಸಾಯುಜ್ಯ, ಮುಕ್ತ ಜೀವರು ಶ್ರೀ ಭಗವಂತನಿಂದಾನು ಭವಿಸುವ ಭೋಗವು ಅಲ್ಪಭೋಗಾನುಭವವು ಮಾತ್ರ ಅದೂ ಯೋಗ್ಯತಾನುಸಾರ ವಾಗಿಎಂದು ಹೇಳುವುದು

**ಸೂ॥ ಓಂ॥ ಅವಿಭಾಗೇನ ದೃಷ್ಟತ್ವಾತ್ ಓಂ॥ 4**

ಶ್ರೀ ಪರಮಾತ್ಮನಿಂದ ಭುಕ್ತಿಭೋಗಗಳನ್ನೇ ಕ್ರಮಪರಿಮಾಣವಾಗಿ ಮುಕ್ತ ಜೀವರ ಭೋಗಾನುಭವವು ಮಾತ್ರ. ಯೋಗ್ಯತಾನುಸಾರಿಯಾಗಿ ಎಂದು ಹೇಳುವುದ

ಯೇ ಭೋಗಾಃ ಪರಮಾತ್ಮನಾ ಭುಂಜ್ಯತೇ ತ ಏವ ಮುಕ್ತೈರ್ಭುಜ್ಯಂತೇ ।
ಯಾನೇವಾಹಂ ಶೃಣೋಮಿ ಯಾನ್ಪಶ್ಯಾಮಿ ಯಾಞ್ಜಿಘ್ರಾಮಿ ತಾನೇವೈತ
ಇದಂ ಶರೀರಂ ವಿಮುಚ್ಯಾನುಭವಂತಿ ॥ ಇತಿ ದ್ವಷ್ಟತ್ವಾಚ್ಚತುರ್ವೇದ
ಶಿಖಾಯಾಂ

ಶ್ರೀ ಪರಮಾತ್ಮ ಅನುಭವಭೋಗಗಳಲ್ಲಿ ಕೆಲವು ಮಾತ್ರ ಯೋಗ್ಯತಾಕ್ರಮದಿಂದ ಅಲ್ಪಪ್ರಮಾಣದಲ್ಲಿ ಮಾತ್ರ ಮುಕ್ತಜೀವರುಗಳಾನುಭವವು ಎಂದು ಚತುರ್ವೇದಶಿಖಾ ವಾಕ್ಯವು. "ನಾನು ಏನನ್ನು ಕೇಳುವೆನೋ, ನೋಡುವೆನೋ, ಸಂಅನ್ನು ಭವಿಸುವೆನೋ, ಜಡಶರೀರಾನಂತರ ಯಾವ ಯಾವ ಸುಖಾನುಭವವೋ ಅವೆಲ್ಲವೂ ಪರಮಾತ್ಮನ ಮೂಲಕವೇ ಎಂದು ಹೇಳಿದೆ

2 ಭವಿಷ್ಯತ್ಪುರಾಣೇ ಚ ।
**ಮುಕ್ತಾಃ ಪ್ರಾಪ್ಯ ಪರಂ ವಿಷ್ಣುಂ ತದ್ಭೋಗಾಂಲ್ಲೇಶತಃ ಕ್ವಚಿತ್ ।**
**ಬಹಿಷ್ಠಾನ್ಭುಂಜತೇ ನಿತ್ಯಂ ನಾನಂದಾದೀನ್ಕಥಂಚನ ॥ ಇತಿ**

ಮುಕ್ತಜೀವರು ಶ್ರೀ ಪರಮಾತ್ಮನಲ್ಲಿ ಸಾಯುಜ್ಯವನ್ನು ಹೊಂದಿ ಆ ಶ್ರೀ ಪರಮಾತ್ಮನ ಸ್ವರೂಪಭೂತಸುಖಾನುಭವದ ಸ್ವಯೋಗ್ಯತಾಸಾಧ್ಯ ಅತ್ಯಲ್ಪಪರಿಮಾಣ ಸುಖವನ್ನೇ ಮಾತ್ರ ಹೊಂದುವನು ಶ್ರೀಪರಮಾತ್ಮನ ಸುಖಾನುಭವವು ಅತಿಶ್ರೇಷ್ಠವು ಯಾರಿಂದಲೂ ಹೊಂದಲಸಾಧ್ಯವು.

ಇತ್ಯವಿಭಾಗಾಧಿಕರಣಂ

## - ಬ್ರಹ್ಮಾಧಿಕರಣಂ -

**ಈ ಅಧಿಕರಣದಲ್ಲಿ ಮುಕ್ತ ಜೀವರಿಗೆ ಸಾಯುಜ್ಯ ಮೋಕ್ಷವುಂಟೆಂದು ಸಮರ್ಥನವು**

## ಸೂ॥ ಓಂ॥ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ॥ 5

ಜೀವರಿಗೆ ದೇಹಸಂಬಂಧವಿದ್ದರೆ ಭೋಗಪ್ರಾಪ್ತಿ ಇಲ್ಲ ಎಂದು ಪೂರ್ವಪಕ್ಷವು. ಮುಕ್ತಜೀವರಿಗೆ ಜಡದೇಹವೂ ಸೂಕ್ಷ್ಮಲಿಂಗದೇಹವೂ ಇರುವುದಿಲ್ಲವಾಗಿ ಸುಖಾನುಭವ ದೇಹವಿಲ್ಲ ಎಂದು

ಪರಬ್ರಹ್ಮದೇಹಸಂಬಂಧದಿಂದಲೇ ಮುಕ್ತನು ಭೋಗಗಳನ್ನನುಭವಿಸುವನು ಎಂದು ಮಾಧ್ಯಂದಿನಾಯನ ಶೃತಿಯು ಹೇಳುವುದು

ಸರ್ವದೇಹಪರಿತ್ಯಾಗೇನ ಮುಕ್ತಾಃ ಸಂತೋ ಬ್ರಾಹ್ಮೇಣೈವ ದೇಹೇನ
ಭೋಗಾನ್ ಭುಂಜತ ಇತಿ ಜೈಮಿನಿಶೃತೇಃ ॥

ಮುಕ್ತಿಯಲ್ಲಿ ಜೀವನು ಸರ್ವದೇಹಗಳನ್ನು ತೊರೆದು ಪರಬ್ರಹ್ಮನ ಶರೀರದಿಂದಲೇ ಭೋಗಗಳನ್ನನುಭವಿಸುವನು ಎಂದು ಜೈಮಿನ್ಯಾಚಾರ್ಯರು ತಿಳಿಯುವರು.

2 **ಸ ವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮತಿಸೃಜ್ಯ ಬ್ರಹ್ಮಾಭಿಸಂಪದ್ಯ ಬ್ರಹ್ಮಣಾ ಪಶ್ಯತಿ ಬ್ರಹ್ಮಣಾ ಶೃಣೋತಿ ಬ್ರಹ್ಮಣೈವೇದಂ ಸರ್ವಮನುಭವತಿ ॥ ಇತಿ ಮಾಧ್ಯಂದಿನಾಯನ ಶ್ರುತಾವುಪನ್ಯಾಸಾತ್**

ಮಾಧ್ಯಂದಿನಾಯನ ಶೃತಿಯು—ಬ್ರಹ್ಮಜ್ಞಾನಿಯು ಪ್ರತ್ಯಕ್ಷಸಿದ್ಧ ಸ್ಥೂಲದೇಹವನ್ನೂ ಸೂಕ್ಷ್ಮದೇಹವನ್ನೂ ಬಿಟ್ಟು ಪರಬ್ರಹ್ಮನನ್ನು ಹೊಂದಿ ಆತನ ದೇಹದಿಂದಲೇ ಯಥಾಶಕ್ತಿ ಭೋಗವನ್ನುಣ್ಣುವನು

3 **ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ ।
ಗಚ್ಛೇಚ್ಚ ಹರಿಪಾದಾಭ್ಯಾಂ ಮುಕ್ತಸ್ಯೈಷಾ ಸ್ಥಿತಿರ್ಭವೇತ್ ॥
ಇತಿ ಸ್ಮೃತೇಃ**

ಮುಕ್ತರಿಗೆ ಹರಿ ಕೈಯಿಂದಲೇ ಪ್ರವರ್ತನೆಯು. ಹರಿದೃಷ್ಟಿಯೇ ದೃಷ್ಟಿಯು ಹರಿಪಾದಗಳಿಂದಲೇ ಗಮನವು ಹೀಗೆ ಸರ್ವಚೇಷ್ಟೆಗಳೂ ಮುಕ್ತರಿಗೆ ಪರಮಾತ್ಮನಾಂಗದಿಂದಲೇ ಲಭ್ಯವು

4 ಗಚ್ಛಾಮಿ ವಿಷ್ಣು ಪಾದಾಭ್ಯಾಂ ವಿಷ್ಣು ದೃಷ್ಟ್ಯಾ ಚ ದರ್ಶನಂ ।
ಇತ್ಯಾದಿ ಪೂರ್ವಸ್ಮರಣಾನ್ಮುಕ್ತಸ್ಯ ತದ್ಭವಿಷ್ಯತಿ ॥ ಇತಿ
ಬೃಹತ್ತಂತ್ರೋಕ್ತೇ ಯೋಕ್ತೇಶ್ಚ

ಶ್ರೀವಿಷ್ಣು ಪಾದದಿಂದಲೇ ನನಗೆ ಗಮನವು ಅವನದೃಷ್ಟಿಯೇ ನನಗೆ ದೃಷ್ಟಿಯು ಹೀಗೆ ಮುಕ್ತನು ಪೂರ್ವಸ್ಮರ ದಿಂದ ತಿಳಿಯುವನು

## ಸೂ॥ ಓಂ॥ ಚಿತಿನ ಾತ್ರೇಣ ತದಾತ್ಮಕತ್ವಾದಿತ್ಯೌಡು ಲೋಮಿಃ ಓಂ॥ 6

ಚಿತಿಮಾತ್ರೋ ದೇಹೋ ಮುಕ್ತಾನಾಂ ಪೃಥಿಗ್ವಿದ್ಯತೇ ತೇನ ಭುಂಜತೇ ।
ಸರ್ವಂ ವಾ ಏತದಚಿತ್ಪರಿತ್ಯಜ್ಯ ಚಿನ್ಮಾತ್ರಏವೈಷ ಭವತಿ ಚಿನ್ಮಾತ್ರಏವಾವ
ಶಿಷ್ಯತೇ ತಾಮೇತಾಂ ಮುಕ್ತಿರಿತ್ಯಾಚಕ್ಷತ ಇತ್ಯುದ್ದಾಲಕಶ್ರುತೇಶ್ಚಿದಾತ್ಮ
ಕತ್ವಾದಿತ್ಯೌಡುಲೋಮಿರ್ಮನ್ಯತೇ ॥

ಮುಕ್ತರ ಸ್ವರೂಪವು ಚಿನ್ಮಾತ್ರದೇಹವು ಅದರಿಂದಲೇ (ಜ್ಞಾನಸ್ವರೂಪದೇಹ) ಭೋಗಳನ್ನು ಅನುಭವಿಸುವನು ಈ ಚಿನ್ಮಾರ್ಥದೇಹವೇ ಸಂಸಾರವನ್ನು ಹೊಂದಿಸಿ ಕೊಡುವುದು ಅದೇಮುಕ್ತಿಯಲ್ಲಿ ಸುಖಾನುಭವ ಸಾಧನವು ಎಂದು ಔಡುಲೊಮ್ಯಾಚಾರ್ಯರು ಔದ್ದಾಲಕಶೃತಿಯು ಮುಕ್ತಜೀವನ ಜಡಶರೀರವನ್ನು ಬಿಟ್ಟು ಚಿನ್ಮಾತ್ರ ಶರೀರವನ್ನು ಹೊಂದಿರುವುದೇ ಮುಕ್ತಿಯು ಎಂದು ಸ್ವರೂಪಭೂತ ಚಿನ್ಮಾತ್ರದೇಹ ದಿಂದಲೇ ಸುಖಾನುಭವವು

## ಸೂ॥ ಓಂ॥ ಏವಮಪ್ಯುಪನ್ಯಾಸಾತ್ಪೂರ್ವಭಾವಾದ ವಿರೋಧಂ ಬಾದರಾಯಣಃ ಓಂ॥ 7

ಸ ವಾ ಏಷ ಏತಸ್ಮಾನ್ಮರ್ತ್ಯಾದ್ವಿಮುಕ್ತಶ್ಚಿನ್ಮಾತ್ರೀ ಭವತ್ಯಥ ತೇನೈವ
ರೂಪೇಣಾಭಿಪಶ್ಯತ್ಯಭಿಶೃಣೋತ್ಯಭಿಮನುತೇಽಭಿವಿಜಾನಾತಿ ತಾಮಾಹು
ರ್ಮುಕ್ತಿ ಇತಿ ಸೌಪರ್ಣಶ್ರುತಾಚಿನ್ಮಾತ್ರೇಣಾಪ್ಯುಪನ್ಯಾಸಾಜ್ಞ್ಯಮಿನ್ಮುಕ್ತಸ್ಯ
ಚ ಭಾವಾ ದುಭಯತ್ರಾಪ್ಯವಿರೋಧಂ ಬಾದರಾಯಣೋ ಮನ್ಯತೇ ॥

ಜೈಮಿನ್ಯಾಚಾರ್ಯರ ಮತವಾದ ಬ್ರಹ್ಮರೂಪದಿಂದಲೇ ಸುಖಾನುಭವವು ಸ ವಾ ಏಷ ಎಂಬಶೃತಿಯೂ ಮತ್ತು ಏತದಚಿತ್ ಪರತ್ಯಜ್ಯ ಅಚಕ್ಷತೆ ಎಂಬ ಶೃತಿಯಲ್ಲಿ ಹೇಳುವ ಔಡಲೋಮಿಆಚಾರ್ಯರ ಮತವೂ ಒಂದೇ ವಿರೋಧವಿಲ್ಲವೆಂದು ಬಾದರಾಯಣ ಮತವು

7 ನಾರಾಯಣಾಧ್ಯಾತ್ಮೇ ಚ ।
ಮರ್ತ್ಯಂ ದೇಹಂ ಪರಿತ್ಯಜ್ಯ ಚಿತಿಮಾತ್ರಾತ್ಮ ದೇಹಿನಃ ।
ಚಿತಿಮಾತ್ರೇಂದ್ರಿಯಾಶ್ಚೈವ ಪ್ರವಿಷ್ಟಾ ವಿಷ್ಣುಮವ್ಯಯಂ ।
ತದಂಗಾನುಗೃಹೀತೈಶ್ಚ ಸ್ವಾಂಗೈರೇವ ಪ್ರವರ್ತನಂ ।
ಕುರ್ವಂತಿ ಭುಂಜತೇ ಭೋಗಾಂಸ್ತ ದಂತರ್ಬಹಿರೇವ ವಾ ।
ಯಥೇಷ್ಟಂ ಪರಿವರ್ತಂತೇ ತಸ್ಯೈವಾನು ಗ್ರಹೇರಿತಾಃ ॥ ಇತಿ

ಮುಕ್ತರು ನಾಶವಾದ ಸ್ಥೂಲಸೂಕ್ಷ್ಮದೇಹದಿಂದ ಚಿನ್ಮಾತ್ರಶರೀರವಾಗಿ ಚಿನ್ಮಾತ್ರೇಂದ್ರೀಯಗಳಿಂದ ಶ್ರೀ ವಿಷ್ಣುವಿ. ವಿನಾಶರಹಿತ ಶರೀರವನ್ನು ಪ್ರವೇಶಿಸಿ ಆ ಶ್ರೀ ಪರಮಾತ್ಮನಾನುಗ್ರಹದಿಂದಲೇ ತನ್ನ ಚಿನ್ಮಾತ್ರಾಂಗಗಳಿಂದಲೇ ಪ್ರವರ್ತಿಸು ವನು. ಒಳಗೂ ಹೊರಗೂ ಭೋಗಾನುಭವವುಳ್ಳವನು ಆಗುವನು

ಇತಿ ಬ್ರಹ್ಮಾಧಿಕರಣಂ

## - ಸಂಕಲ್ಪಾಧಿಕರಣಂ -

ಈ ಅಧಿಕರಣದಲ್ಲಿ ಮುಕ್ತರಿಗೆ ಸಂಕಲ್ಪಮಾತ್ರದಿಂದಲೇ ಭೋಗಾನುಭವವು ಪ್ರಯತ್ನಾವಕಾಶವಿಲ್ಲ ಎಂದು ಸಮರ್ಥನವು

**ಸೂ॥ ಓಂ॥ ಸಂಕಲ್ಪಾ ದೇವ ಚ ತಚ್ಛ್ರುತೇಃ ಓಂ॥ 8**

ಸ್ವೇಚ್ಛಾನುಸಾರ ಸಂಕಲ್ಪಮಾತ್ರದಿಂದಲೇ ಮುಕ್ತರು ಭೋಗಗಳನು, ಅನುಭವಿಸುವರು.

ನ ತೇಷಾಂ ಭೋಗಾದಿಷು ಪ್ರಯತ್ನಾಪೇಕ್ಷಾ ।
ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮು
ತ್ತಿಷ್ಠಂತಿ ॥ (ಛಾ 8-1-( ) ಇತ್ಯಾದಿಶ್ರುತೇಃ

ಮುಕ್ತಜೀವನು ಪಿತೃಲೋಕವನ್ನು ಹೊಂದಲು ಇಚ್ಛಿಸಿದರೆ ಸಂಕಲ್ಪಮಾತ್ರ ದಿಂದಲೇ ಆತನ ಪಿತೃಗಳು ಸ್ವಯೋಗ್ಯಸಾಧನೆಗಳನ್ನು ಹೊಂದಿ ಸಂಸಾರಮುಕ್ತರಾಗಿ ಇವನ ಮುಂದೆ ಬರುವರು (ಸ್ವರೂಪ ಪಿತ್ರಾದಿಗಳನ್ನು ಹೇಳಿವೆ) ಮುಕ್ತರಿಗೆ ಭೋಗಕ್ಕೋಸ್ಕರ ಪ್ರಯತ್ನಾವಕಾಶವಿಲ್ಲ ಸಂಕಲ್ಪಮಾತ್ರದಿಂದಲೇ ಸಿದ್ಧವು ವಿಲಂಬ ವಿಲ್ಲವಿದೆಯೋ ಇದು ಶ್ರುತ್ಯರ್ಥವು.

ಇತಿ ಸಂಕಲ್ಪಾಧಿಕರಣಂ

## – ಅನನ್ಯಾಧಿ ಪತ್ಯಧಿಕರಣಂ –

ಈ ಅಧಿಕರಣದಲ್ಲಿ ಪರಬ್ರಹ್ಮಪ್ರಾಪ್ತರೂಪ ಮುಕ್ತಜೀವರಿಗೆ ತಮ್ಮ ಕೆಳಗಿನ ಮೋಕ್ಷಜೀವಿಗಳ ನಿಯಮ್ಯತ್ವವಿಲ್ಲದೆಯೋ ಭೋಗವು ಮಾತ್ರ ಎಂದು ಸಮರ್ಥನವು.

## ಸೂ॥ ಓಂ॥ ಅತ ಏವ ಚಾನನ್ಯಾಧಿಪತಿಃ ಓಂ॥ 9

ಮುಕ್ತ ಜೀವರಿಗೆ ತನಗಿಂತ ಸ್ವಕೀಯರಲ್ಲದ ಬೇರೆ ಅಧಿಪತಿಗಳಿಲ್ಲ. ಅವರಿಗೆ ಇತರ ಹೀನ ಯಮ್ಯತ್ವವಿಲ್ಲ ಏಕೆಂದರೆ ಸರ್ವಮುಕ್ತರೂ ಸತ್ಯಸಂಕಲ್ಪರಾದ್ದರಿಂದಲೇ ಮುಕ್ತರಿಗೆ ಅವರಿಗಿಂತ ಯೋಗ್ಯತೆಯಿಲ್ಲ. ತಮಗಿಂತ ಕಡಿಮೆಯಾದ ಅಧಿಪತಿ ಗಳಿರುವುದಿಲ್ಲ.

ಸತ್ಯಸಂಕಲ್ಪಾದೇವ ।

ಅವರು ಸತ್ಯಸಂಕಲ್ಪರಾದ್ದರಿಂದಲೇ ಅನ್ಯಾಧಿಪತಿಗಳಿರುವುದಿಲ್ಲ.

2 ಪರಮೋಽಧಿಪತಿಸ್ತೇಷಾಂ ವಿಷ್ಣುರೇವ ನ ಸಂಶಯಃ ।
ಬ್ರಹ್ಮಾದಿಮಾನುಷಾಂತಾನಾಂ ಸರ್ವೇಷಾಮವಿಶೇಷತಃ ।
ತತಃ ಪ್ರಾಣಾದಿನಾಮಾಂತಾಃ ಸರ್ವೇಽಪಿ ಪತಯಃ ಕ್ರಮಾತ್ ।
ಆಚಾರ್ಯಾಶ್ಚೈವ ಸರ್ವೇಽಪಿ ಯೈರ್ಜ್ಞಾನಂ ಸುಪ್ರತಿಷ್ಠಿತಂ ।
ಏತೇಭ್ಯೋನ್ಯಃ ಪತಿರ್ನೈವ ಮುಕ್ತಾನಾಂ ನಾತ್ರ ಸಂಶಯಃ ॥
ಇತಿ ವರಾಹೇ

ಮುಕ್ತಜೀವರಿಗೆ ಶ್ರೀ ಪರಮಾತ್ಮನೇ ಅಧಿಪತಿಯು ಸಂಶಯವಿಲ್ಲ ಬ್ರಹ್ಮನಿಂದ ಮನುಷ್ಯೋತ್ತಮರವರೆಗೂ ಸರ್ವರಿಗೂ ಆತನು ವಿಶೇಷವಿಲ್ಲದೆಯೇ ಅಧಿಪತಿಯು. ಅನಂತರ ಪ್ರಾಣಾದಿಯಾಗಿ ಕ್ರಮವಾಗಿ ಆಚಾರ್ಯರವರೆಗೂ ಅಧಿಪತ್ಯವು. ಯಾವ ಯಾವ ಗುರುಗಳಿಂದ ಜ್ಞಾನವು ಪ್ರತಿಷ್ಠಿತವೋ ಅವರೆಲ್ಲರೂ ಅಧಿಪತಿಗಳೇ. ಅವರುಗಳನ್ನು ಬಿಟ್ಟು ಮತ್ಯಾರೂ ಅಧಿಪತಿಗಳಾಗರು. ಇತಿ ವಾರಾಹೇ

ಇತ್ಯನನ್ಯಾಧಿಪತ್ಯಧಿಕರಣಂ

## - ಅಭಾವಾಧಿಕರಣಂ -

ಈ ಅಧಿಕರಣದಲ್ಲಿ ಮುಕ್ತರಿಗೆ ಭೋಗಗಳ ಅಭಾವಾಶಂಕೆಯ ಪರಿಹಾರವು.

## ಸೂ॥ ಓಂ॥ ಅಭಾವಂ ಬಾದರಿರಾಹ ಹ್ಯೇವಂ ಓಂ॥ 10

ಚಿನ್ಮಾತ್ರಂ ವಿನಾನ್ಯೋ ದೇಹಸ್ತೇಷಾಂ ನ ವಿದ್ಯತ ಇತಿ ಬಾದರಿಃ ।
ಅಶರೀರೋವಾವ ಸದಾ ಭವಿತ್ಯಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ
ಸ್ಪೃಶತೋಯಾಭ್ಯಾಂ ಹ್ಯೇಷ ಉನ್ಮಥ್ಯತ ಇತ್ಯೇವಂ ಕೌಂಠರವ್ಯ
ಶ್ರುತಾವಾಹ ಹಿ ॥

ಪ್ರಾಕೃತದೇಹಾಭಾವವನ್ನು ಅಂಗೀಕರಿಸಿ ಚಿನ್ಮಾತ್ರದೇಹದಿಂದ ಮುಕ್ತರಿಗೆ ಭೋಗವೆಂದು ಬಾದರಿ ಆಚಾರ್ಯರು ತಿಳಿಯುವರು

ಮುಕ್ತರಿಗೆ ಚಿನ್ಮಾತ್ರದ ವಿನಃ ಬೇರೆಯಾದ ಪ್ರಾಕೃತದೇಹಾಭಾವದಿಂದ ಸುಖಾನುಭವವೇ ಇಲ್ಲವೆಂದಲ್ಲ ಮುಕ್ತಜೀವನು ಮುಕ್ತನಾದನಂತರ ಪ್ರಾಕೃತ ದೇಹರಹಿತನಾದ್ದರಿಂದ ಪ್ರಾಕೃತಸುಖದುಃಖಗಳ ಸ್ಪರ್ಶವುಳ್ಳವನಲ್ಲವೇ ಹೊರತು ಚಿನ್ಮಾತ್ರದೇಹದಿಂದಲೇ ಮುಕ್ತರಿಗೆ ಭೋಗವು.

## ಸೂ|| ಓಂ|| ಭಾವಂ ಜೈಮಿನಿರ್ವಿಕಲ್ಪಾಮ್ನಾನಾತ್ ಓಂ|| 11

ಜೈಮಿನ್ಯಾಚಾರ್ಯರಾದರೋ ಮುಕ್ತಜೀವರು ಚಿನ್ಮಾತ್ರದೇಹವಲ್ಲದೆ ಬೇರೆ ದೇಹವನ್ನು ಹೊಂದುವರೆಂದು ಹೇಳುವರು ಉದ್ದಾಲಕಶೃತಿ ಚಿಶೋವಾಚಿ ಕೊವಾ ಎಂದು ಉಭಯವಿಧದೇಹವು ಹೇಳುವುದರಿಂದ ಅನ್ಯಪ್ರಾಕೃತದೇಹವನ್ನು ಹೊಂದುವ ರೆಂದು ಹೇಳಿಕೆಯು.

ಸ ವಾ ಏಷ ಏವಂ ವಿತ್ಪರಮುಭಿಪಶ್ಯತ್ಯಭಿಶೃಣೋತಿ ಜ್ಯೋತಿಷೈವ ರೂಪೇಣ ಚಿತಾ ವಾಚಿತಾ ವಾ ನಿತ್ಯೇನ ವಾನಿತ್ಯೇನ ವಾಧಾನಂದೀಹ್ಯೇವೈಷ ಭವತಿ ನಾನಾನಂದಂ ಕಂಚಿದುಪಸ್ಪೃಶತೀತ್ಯಾದ್ದಾಲಕಶ್ರುತೌ ವಿಕಲ್ಪಾಮ್ನಾನಾದ ನ್ಯದೇಹಸ್ಯಾಪಿ ಭಾವಂ ಜೈಮಿನಿರ್ಮನ್ಯತೇ ||

ಮುಕ್ತರಿಗೆ ಚಿನ್ಮಾತ್ರದೇಹವಲ್ಲದೆ ಅನ್ಯಪ್ರಾಕೃತದೇಹ ಹೊಂದುವರೆಂದು ಉದ್ದಾಲಕಶೃತಿಯು ಶೃತ್ಯರ್ಥವು ಉಕ್ತಪ್ರಕಾರರೀತ್ಯಾ ಪರೋಕ್ಷಹೊಂದಿದ ಜ್ಞಾನಿಯು ಮುಕ್ತನಾಗಿ ಅಪ್ರಾಕೃತ ಚೈತನ್ಯದಿಂದ ಮತ್ತು ಶುದ್ಧಸತ್ವಾತ್ಮಕ ಪ್ರಾಕೃತಕರ್ಮಾನಾರಬ್ಧ ಜಡಾತ್ಮಕವಾದ ಪ್ರಕಾಶಮಾನವಾದ ಶರೀರದಿಂದ ದರ್ಶನ ಶ್ರವಣಾದಿ ಸರ್ವವಿಶೇಷಗಳನ್ನು ಅನುಭವಿಸುವನು. ಅವನನ್ನು ಅಲ್ಪದುಃಖವೂ ಸ್ಪರ್ಶಿಸುವುದಿಲ್ಲ. ಎಂದು ಜೈಮಿನ್ಯಾಚಾರ್ಯರು.

## ಸೂ|| ಓಂ|| ದ್ವಾದಶಾಹವದುಭಯವಿದಂ ಬಾದರಾಯಣೋತಃ ಓಂ|| 12

ಯಥಾ ದ್ವಾದಶಾಹ ಕ್ರತ್ವಾತ್ಮಕಃ ಸತ್ರಾ ಹೀನಶ್ಚ ಭವತಿ ।
ಏವಂ ಮುಕ ಭೋಗೋ ಬಾಹ್ಯಶರೀರ ಚಿನ್ಮಾತ್ರಕೃತಶ್ಚ ಭವತಿ
ಇತಿ ಬಾದರಾಯಣೋ ಮನ್ಯತೇ

ಬಾದರಾಯಣರು ಮುಕ್ತರಿಗೆ ಪ್ರಾಕೃತದೇಹ ಭಾವ ಅಭಾವ ಎರಡೂ ಉಂಟು ದ್ವಾದಶಾತ್ಮಕ ಯಜ್ಞವೂ ಕ್ರತುವೂ ಅಹೀನ ಯಜ್ಞವೂ ಎರಡುವಿಧವೋ ಹಾಗೆಯೇ ಮುಕ್ತರಿಗೂ ಪ್ರಾಕೃತದೇಹ ಚಿನ್ಮಾತ್ರದೇಹಗಳೆರಡರಲ್ಲೂ ಭೋಗವುಂಟು. ಫಲಿತಾರ್ಥವು ಸರ್ವಮುಕ್ತರಿಗೂ ಚಿದಾತ್ಮಕದೇಹದಿಂದಲೇ ಭೋಗವು ಕೆಲವರಿಗೆ ಮಾತ್ರ ಅವರಿಚ್ಛೆಯಂತೆ ಬಾಹ್ಯದೇಹದಿಂದಲೂ ಭೋಗವುಂಟು ವಿಶೇಷವೇನೆಂದರೆ ಚಿನ್ಮಾತ್ರ ದೇಹದಲ್ಲಿ ಬಾಹ್ಯದೇಹಭೋಗಪೇಕ್ಷೆಯಿಲ್ಲ ಬಾಹ್ಯದಿಂದ ಭೋಗದಲ್ಲಿ ಚಿತಾತ್ಮಕ ದೇಹದ ಅಧಿಷ್ಠಾನವು ಅಪೇಕ್ಷಿತವು ಚಿದ್ದೇಹದಿಂದ ಸಮಸ್ತ ಸಂಕಲ್ಪ ಭೋಗವು ಸಾಧ್ಯ ಆದರೆ ಪ್ರಕೃತಿವಶ್ಯದಿಂದ ಕುತೂಹಲವುಳ್ಳವರಿಗೆ ಬೇರೆದೇಹವು ಸಾಧ್ಯವು

ಉಪಪತ್ತೇಶ್ಚ

## ಸೂ|| ಓಂ|| ತನ್ವಭಾವೇ ಸಂಧ್ಯವದುಪಪತ್ತೇಃ ಓಂ|| 13

ಸಂಧ್ಯಂ ಸ್ವಪ್ನಃ । ಸಂಧ್ಯಂ ತೃತೀಯಂ ಸ್ವಪ್ನಸ್ಥಾನಂ (ಬೃ 6-3-9) ಇತಿ ಶೃತೇಃ ।

ಜೀವರಿಗೆ ಸ್ವಪ್ನಾವಸ್ಥೆಯಲ್ಲಿ ಬಾಹ್ಯದೇಹವಿಲ್ಲದೆ ಭೋಗಸಂಬಂಧವೋ ಹಾಗೆಯೇ ಮುಕ್ತಿಯಲ್ಲಿಯೂ ಪ್ರಾಕೃತದೇಹವಿದ್ದರೂ ಭೋಗಪ್ರಾಪ್ತಿಯು ಯುಕ್ತವೇ

ದೇಹಾಭಾವವು ಅಭಾವವು ಅಂಗೀಕರಿಸಿ ದೇಹವಿದ್ದಲ್ಲಿ ದುಃಖವೂ ಇಲ್ಲದಲ್ಲಿ ಸುಖಾಭಾವವು ಎಂಬ ಶಂಕೆಗೆ ಉತ್ತರವು ಜೀವರು ಜಾಗ್ರತ ಸುಷುಪ್ತ್ಯವಸ್ಥೆಗಳ ಸಂದಿಸ್ವಪ್ನಾವಸ್ಥೆಯಲ್ಲಿ ಜಡದೇಹಾಭಿಮಾನವಿಲ್ಲದಿದ್ದರೂ ಭೋಗವು ಹೇಗೆವುಂಟೋ ಹಾಗೆಯೇ ಮುಕ್ತಿಯಲ್ಲಿಯೂ ದೇಹವಿಲ್ಲದಿದ್ದರೂ ಸುಖಭೋಗವು ಸಾಧ್ಯವು.

## ಸೂ|| ಓಂ|| ಭಾವೇ ಜಾಗ್ರದ್ವತ್ ಓಂ|| 14

ಜಾಗ್ರದವಸ್ಥೆಯಲ್ಲಿ ಜೀವನಿಗೆ ದೇಹಾಭಿಮಾನದಿಂದ ಭೋಗ ಸಂಭವಸ್ರೋ ಹಾಗೆಯೇ ಪ್ರಾಕೃತದೇಹದಿಂದ ಮುಕ್ತಜೀವನು ಭೋಗವನ್ನು ಹೊಂದುವನು ತೇಜೋರೂಪದ ಜೀವದೇಹವು ಸುಖಮಾತ್ರಾನುಭವವುಳ್ಳವು ದುಃಖವಲ್ಲ ಏಕೆಂದರೆ ಅಲ್ಪತೇಜದ ಜೀವತೇಜಸ್ಸನ್ನು ಪರಮಾತ್ಮನು ಮುಕ್ತಿಯಲ್ಲಿ ಮಹತ್ತೇಜವನ್ನಾಗಿ ಮಾಡಿ ದುಃಖಾನುಭವಾಭಾವವು ಉಂಟಾಗುವಂತೆ ಮಾಡುವನು

5 ಬ್ರಹ್ಮವೈವರ್ತೇ ಚ ।
ಸ್ವಪ್ನಸ್ಥಾನಾಂ ಯಥಾಭೋಗೋ ವಿನಾ ದೇಹೆ ನ ಯುಜ್ಯತೇ
ಏವಂ ಮುಕ್ತಾವಪಿ ಭವೇದ್ವಿನಾ ದೇಹೇನ ಭೋಜನಂ ।
ಸ್ವೇಚ್ಛಯಾ ವಾ ಶರೀರಾಣಿ ತೇಜೋ ರೂಪಾಣಿ ಕಾನಿಚಿತ್ ।
ಸ್ವೀಕೃತ್ಯ ಜಾಗರಿತವದ್ಭುಕ್ತ್ವಾ ತ್ಯಾಗಃ ಕದಾಚನ । ಇತಿ

ಜೀವನು ದೇಹಾಭಿಮಾನವಿಲ್ಲದ ಸ್ವಪ್ನಾವಸ್ಥೆಯಲ್ಲಿ ಭೋಗಹೊಂದುವನೋ ಮುಕ್ತಾವಸ್ಥೆಯಲ್ಲಿಯೂ ದೇಹದ ಉಪಯೋಗವಿಲ್ಲದೆಯೇ ಭೋಗಾನುಭವವು ತನ್ನ ಇಷ್ಟದಂತೆ ಯಾವಾಗಲಾದರೂ ತೇಜೋಭಿನ್ನ ಶರೀರ ಸ್ವೀಕರಿಸಿ ಜಾಗ ದವಸ್ಥೆಯಂತೆ ಭೋಗವನ್ನನುಭವಿಸಿ ಅನಂತರ ಆಶರೀರತ್ಯಾಗವು ಈಶ್ವರನ ಶಕ್ತಿಯಿಂದ ಈ ವೈಲಕ್ಷಣ್ಯವು ವಿಶೇಷವು.

## ಸೂ|| ಓಂ|| ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ ಓಂ|| 15

ಶರೀರಮನುವಿಶ್ಯಾಪಿ ತತ್ಪ್ರಕಾಶಾಯಂತಃ ಪುಣ್ಯಾನೇವ ಭೋಗಾನನು ಭವಂತಿ । ನ ತು ದುಃಖಾದೀನ್ ।
ಯಥಾ ಪ್ರದೀಪೋ ದೀಪಿಕಾದಿಷು ಪ್ರವಿಷ್ಟ ಸ್ತತ್ಸಂ ಕೈಲಾದ್ಯೇವ ಭುಕ್ತಂ ನ ತು ಕಾರ್ಷ್ಣ್ಯಾದಿ ।
ತೀರ್ಣೋಹಿ ತದಾ ಸರ್ವಾಣಿ ಶೋಕಾನ್ ಹೃದಯಸ್ಯ ಭವತಿ
(ಬೃ 6-3-22) ಇತಿ ಹಿ ದರ್ಶಯತಿ ।

ದಿವ್ಯಜ್ಯೋತಿಯು ಯಃ (ಪ್ರದೀಪವು) ಸಾಧಾರಣದೀಪಾದಿಗಳನ್ನು ಪ್ರವೇಶಿಸಿ ದೀಪಸಾಧ್ಯತೈಲಮಾತ್ರವನ್ನೇ ಗ್ರಹಿಸಿ ಅದರಲ್ಲಿನ ಕಶ್ಮಲವನ್ನು ತ್ಯಜಿಸುವಂತೆ ಮುಕ್ತ

ಜೀವನು ಸರ್ವಸಂಸಾರದುಃಖವನ್ನು ದಾಟಿರುವುದರಿಂದ ಅನ್ಯಜೀವದೇಹವನ್ನು ಪ್ರವೇಶಿಸಿ ತನ್ನ ಮಹತ್ತ್ತೇಜೋಃಪ್ರಭಾವದಿಂದ ಪುಣ್ಯಫಲಭೋಗಮಾತ್ರ ಅನುಭವಿಸಿ ಪಾಪಫಲರೂಪದುಃಖವನ್ನು ಬಿಡುವನು. ಈ ವಿಶೇಷವು ಈಶ್ವರಪ್ರಸಾದಜನಿತ ಶಕ್ತಿಯು.

ನ ಚ ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ (ಕರ 1-12) ಇತ್ಯಾದಿನಾ ಸ್ವರ್ಗಾದಿಸ್ಥಸ್ಯೈವ ತದಿತಿ ವಾಚ್ಯಂ । ಯತಃ

ತೀರ್ಣೋಹಿ ಎಂಬ ಶೃತಿಯಿಂದ ಸ್ವರ್ಗಾದಿ ಪ್ರಾಪ್ತಿರೂಪ ಫಲವು ಸ್ವರ್ಗದಲ್ಲಿ ಮಾತ್ರ ದುಃಖಾಭಾವವು ಯುಕ್ತವು ಎಂಬ ಸಂಶಯ ಮೇಲಿನ ಶೃತಿಯಂತೆ ಅಂದರೆ ಸಿದ್ಧಾಂತವು.

## ಸೂ॥ ಓಂ॥ ಸ್ವಾಪ್ಯಯಸಂಪತ್ತ್ಯೋರನ್ಯತರಾ ಪೇಕ್ಷಮಾವಿಷ್ಕೃತಂ ಹಿ ಓಂ॥ 16

ಸುಪ್ತೌ ಮೋಕ್ಷೇ ವಾ ತದುಚ್ಯತೇ । ಅತ್ರ ಪಿತಾಽಪಿತಾಭವತ್ಯನನ್ವಾಗತಂ ಪುಣ್ಯೇನಾನನ್ವಾಗತಂ ಪಾಪೇನ (6-3-22) ಇತ್ಯಾದ್ಯಾವಿಷ್ಕೃತತ್ವಾತ್ ।

ಸ್ವರ್ಗಲೋಕೆ ಎಂಬ ವಾಕ್ಯವು ಸುಪ್ತಿಯಲ್ಲಿ ಪರಮಾತ್ಮ ಪ್ರವೇಶವು. ಮುಕ್ತಿಯಲ್ಲಿಯೂ ಪರಮಾತ್ಮ ಪ್ರವೇಶ ಈ ಎರಡು ಸಂಬಂಧಗಳಿಂದ ಬೇರೆ ವಿಷಯವು ಸ್ವರ್ಗಪ್ರಾಪ್ತಿಯು. ಕೀರ್ಣೋಹಿ ಎಂಬ ಶೃತಿಯು ಸುಪ್ತಮುಕ್ತಿಯಲ್ಲಿ ಜೀವನು ಪರಮಾತ್ಮನನ್ನು ಹೊಂದುವನು ಎಂದು ತಿಳಿಸುವುದು ಅದರಲ್ಲಿ ನಿತ್ಯವಾದ ಮುಕ್ತಿಯು ಮುಖ್ಯಫಲವಾದ್ದರಿಂದ ಮತ್ತು ಸುಪ್ತಿಯು ಅಮುಖ್ಯ ಅನಿತ್ಯಫಲವಾದ್ದರಿಂದ ಈ ಶೃತಿಯು ಮುಕ್ತಿಲಕ್ಷಣವನ್ನೇ ಮುಖ್ಯವಾಗಿ ಹೇಳುವುದು. ಅಲ್ಲದೆ ಈ ಸ್ಥಿತಿಯಲ್ಲಿ ಪುಣ್ಯಪಾಪಗಳ ಅನುಸರಣವಿಲ್ಲದೆ ನಿತ್ಯಮಾತ್ರದಾಯಾದ ವರ್ಜನವು ಹೇಳಿರುವುದರಿಂದ ಅದು ಮುಕ್ತಸ್ಥಿತಿಯಲ್ಲಿಯೇ ಸಾಧ್ಯವು.

9 **ಬ್ರಹ್ಮವೈವರ್ತೇ ಚ ।**
**ಜ್ಯೋತಿರ್ಮಯೇಷು ದೇಹೇಷು ಸ್ವೇಚ್ಛಯಾ ವಿಶ್ವಮೋಕ್ಷಣಃ ।**
**ಭುಂಜತೇ ಸುಖಾನ್ಯೇವ ನ ದುಃಖಾದೀನ್ಕದಾಚನ ।**

ಶೀರ್ಣಾ ಹಿ ಸರ್ವಶೋಕಾಂಸ್ತೇ ಪುಣ್ಯಪಾಪಾದಿ ವರ್ಜಿತಾಃ ।
ಸರ್ವದೋಷನಿವೃತ್ತಾಸ್ತೇ ಗುಣಮಾತ್ರ ಸ್ವರೂಪಿಣ ॥ ಇತಿ

ಸಂಸಾರದಿಂದ ಬಿಡಲ್ಪಟ್ಟ ಜೀವರು ಸ್ವೇಚ್ಛೆಯಿಂದಲೇ ಜ್ಯೋತಿರ್ಮಯ ದೇಹ ಹೊಂದಿ ಮಂಗಳಕರ ಸುಖಾನುಭವವನ್ನೇ ಅನುಭವಿಸುವರು. ಯಾವ ಕಾರಣದಿಂದಲೂ ದುಃಖಾನುಭವವಿಲ್ಲದವರು ಅವರು ಸರ್ವದೋಷಗಳಿಂದಲೂ ನಿವೃತ್ತರಾಗಿ ಸ್ವರೂಪಾನಂದವನ್ನು ಮಾತ್ರ ಅನುಭವಿಸುವರು ಈ ಸ್ಥಿತಿಯೇ ಮುಕ್ತಿಯು

ಇತ್ಯಭಾವಾಧಿಕರಣಂ

## – ಜಗದ್ವ್ಯಾಪಾರಾಧಿಕರಣಂ –

ಈ ಅಧಿಕರಣದಲ್ಲಿ ಮುಕ್ತಜೀವರಿಗೆ ಭೋಗವು ಕ್ಲಿಪ್ತವೆಂದು ಸಮರ್ಥನವು.

### ಸೂ॥ ಓಂ॥ ಜಗದ್ವ್ಯಾಪಾರವರ್ಜಂ ಓಂ॥ 17

ಸರ್ವಾನ್ಕಾಮಾನಾಪ್ತ್ವಾಽಮೃತಃ ಸಮಭವತ್ (ಐ ಆ 2-5-4) ಇತ್ಯುಚ್ಯತೇ
ತತ್ರಸೃಷ್ಟ್ಯಾದಿಭ್ಯೋಽನ್ಯಾನ್ವ್ಯಾಪಾರಾನ್ ಆಪ್ನೋತಿ ॥

ಮುಕ್ತಜೀವನು ಜಗತ್ಸೃಷ್ಟ್ಯಾದಿ ಜಗದ್ವ್ಯಾಪಾರವಿಲ್ಲದಂತೆ ಮಿಕ್ಕ ಕಾಮ್ಯಗಳನ್ನು ಯಥಾಶಕ್ತಿ ಅನುಭವಿಸುವನು ಎಂದು ಐತರೇಯ ಶೃತಿಯು ಸೃಷ್ಟ್ಯಾದೃಷ್ಟ ಕರ್ತವ್ಯವನ್ನು ಬಿಟ್ಟು ಮಿಕ್ಕವ್ಯಾಪಾರಗಳನ್ನೆಲ್ಲಾ ಹೊಂದುವನು.

2 ಕುತಃ ಯಾಕೆ?

### ಸೂ॥ ಓಂ॥ ಪ್ರಕರಣಾದಸನ್ನಿಹಿತತ್ವಾಚ್ಚ ಓಂ॥ 18

ಜೀವಪ್ರಕರಣತ್ವಾಜ್ಜೀವಾನಾಂತಾದೃಕ್ಸಾಮರ್ಥ್ಯವಿದೂರತ್ವಾಚ್ಚ ||

ಸರ್ವಾನ್ ಕಾಮಾನ್ ಎಂಬ ಶ್ರುತಿಯು ಜೀವಪ್ರಕರಣವಾದುದರಿಂದ ಅಲ್ಲಿ ಸಂಕೋಚವಿಲ್ಲದೆ ಸರ್ವಕಾಮೋಪಭೋಗವೂ ಯುಕ್ತವಲ್ಲ. ಸಂಕೋಚದಿಂದಲೇ ಯಾಕೆಂದರೆ ಜೀವರಿಗೆ ಜಗದ್ವ್ಯಾಪಾರ ಸಾಮರ್ಥ್ಯವು ಅತಿದೂರವೂ ಮತ್ತು ಅಯುಕ್ತವು. ಸ್ವ ಸ್ವರೂಪಾನು ಭೋಗವು ಸಾರಯುಕ್ತವೇ.

3 **ವಾರಾಹೇ ಚ ।**
**ಸ್ವಾಧಿಕಾನಂದ ಸಂಪ್ರಾಪ್ತಿ ಸೃಷ್ಟ್ಯಾದಿವ್ಯಾಪೃತಿಷ್ವಪಿ ।**
**ಮುಕ್ತಾನಾಂ ನೈವ ಕಾಮಃ ಸ್ಯಾದನ್ಯಾನ್ಕಾಮಾಂಸ್ತು ಭುಂಜತೇ ।**
**ತದ್ಯೋಗ್ಯತಾ ನೈವ ತೇಷಾಂ ಕದಾಚಿತ್ಕ್ವಾಪಿ ವಿದ್ಯತೇ ।**
**ನ ಚಾಯೋಗ್ಯಂ ವಿಮುಕ್ತೋಽಪಿ ಪ್ರಾಪ್ನುಯಾನ್ನ ಚ**
**ಕಾಮಯೇತ್ || ಇತಿ**

ತನ್ನ ಸ್ವರೂಪಸುಖಕ್ಕಿಂತ ಅಧಿಕ ಭೋಗಪ್ರಾಪ್ತಿಯೂ ಜಗತ್ಸೃಷ್ಟ್ಯಾದಿ ಪರಮಾತ್ಮನ ಮಹಾತ್ಮ್ಯ ಸ್ವರೂಪವೂ ಯಾವಾಗಲೂ ಮುಕ್ತರಿಂದ ಅನುಭವಿಸಲು ಅಯುಕ್ತವು ಆತನು ತನ್ನ ಯೋಗ್ಯತಾನುಸಾರ ಸರ್ವಕಾಮಗಳನ್ನು ಭೋಗಿಸುವನು ಅಯೋಗ್ಯವಾದ್ದನ್ನು ಆತನು ಇಚ್ಛಿಸುವುದೂ ಇಲ್ಲ. ಹೊಂದುವುದೂ ಇಲ್ಲ.

## ಸೂ|| ಓಂ|| ಪ್ರತ್ಯಕ್ಷೋಪದೇಶಾದಿತಿ ಚೇನ್ನಾಧಿಕಾರಿಕಮಂಡಲಸ್ಥೋಕ್ತೇಃ ಓಂ|| 19

ಪ್ರತ್ಯಕ್ಷೋಪದೇಶವಾದ ಕಾಯೋವೇದ ಎಂಬ ಶ್ರುತಿಯಲ್ಲಿ ಸ್ಪಷ್ಟವಾಗಿ ಮುಕ್ತರಿಗೆ ಅಖಿಲದೇವತೆಗಳಿಂದಲೂ ಪೂಜ್ಯತ್ವವನ್ನು ಹೇಳಿರುವುದರಿಂದಲೂ ಸರ್ವಶಕ್ತಿಪ್ರಾಪ್ಯವೆಂದು ಹೇಳಿರುವುದರಿಂದಲೂ ಸೃಷ್ಟ್ಯಾದಿಕರ್ತೃತ್ವವು ಉಂಟು ಎಂದರೆ

**ತಾ ಯೋ ವೇದ ಸ ವೇದ ಬ್ರಹ್ಮ ಸರ್ವೇಽಸ್ಮೈ ದೇವಾ ಬಲಿಮಾವಹಂತಿ**
**(ತೈ ಉ 1-5) ಇತಿ ಪ್ರತ್ಯಕ್ಷೋಪದೇಶಾಜ್ಜಗದೈಶ್ವರ್ಯಮಪ್ಯಸ್ತೀತಿ ಚೇನ್ನ ।**
**ಅಧಿಕಾರಿಕ ಮಂಡಲಾಧಿಪತಿ ಬ್ರಹ್ಮಾ ಹಿ ತತ್ರೋಚ್ಯತೆ ||**

ಈ ಶ್ರುತಿಯಲ್ಲಿ ಮುಕ್ತ ಚತುರ್ಮುಖ ಬ್ರಹ್ಮನಿಗೆ ಮುಕ್ತಿ ಸ್ವಾಧಿಕಾರ ನಿಯುಕ್ತ ದೇವತಾಸಮೂಹ ಪೂಜ್ಯತ್ವವನ್ನು ಹೇಳಿದೆ ಸಾಧಾರಣ ಮುಖ್ಯಜೀವರನ್ನು ಶೃತಿಯು ಭೂಃ ಭುವಃ ಸುವಃ ವ್ಯಾಹೃತ್ಯರ್ಥ ಲೋಕಜ್ಯೋತಿಗಳು ಪ್ರಾಣವೇದಗಳಲ್ಲಿ ರುವ ಅನಿರುದ್ಧಾದಿ ಭಗವದ್ರೂಪ ವಿಶೇಷಗಳು. ಈ ಮೂರ್ತಿಗಳನ್ನು ತಿಳಿದವನು ಪರಬ್ರಹ್ಮನನ್ನು ತಿಳಿಯುವನು ಎಂದು ಇಲ್ಲಿ ಹೇಳಿರುವ ಮುಕ್ತಜೀವನು ಸಾಧಾರಣ ನಲ್ಲ. ಅಧಿಕಾರಿಮಂಡಲಾಧಿಪತ್ಯವುಳ್ಳ ಚತುರ್ಮುಖ ಬ್ರಹ್ಮನೇ. ಆತನಿಗೆ ಸರ್ವ ಶಕ್ತಿಯೂ ಉಂಟು. ಅನ್ಯರಿಗೆ ಇಲ್ಲ

5 ಗಾರುಡೇ ಚ ।
ಆತ್ಮೇತ್ಯೇವ ಪರಂ ದೇವಮುಪಾಸ್ಯ ಹರಿಮವ್ಯಯಂ ।
ಕೇಚಿದತ್ರೈವ ಮುಚ್ಯಂತೇ ನೋತ್ಕ್ರಾಮಂತಿ ಕದಾಚನ ।
ಅತ್ರೈವ ಚ ಸ್ಥಿತಿಸ್ತೇಷಾಮಂತರಿಕ್ಷೇ ತು ಕೇಚನ ।
ಕೇಚಿತ್ಸ್ವರ್ಗೇ ಮಹಾಲೋಕೇ ಜನೇ ತಪಸಿ ಚಾಪರೇ ।
ಕೇಚಿತ್ಸತ್ಯೇ ಮಹಾಜ್ಞಾನಾ ಗಚ್ಛಂತಿ ಕ್ಷೀರ ಸಾಗರಂ ॥

6 ತತ್ರಾಪಿ ಕ್ರಮಯೋಗೇನ ಜ್ಞಾನಾಧಿಕ್ಯಾತ್ಸಮೀಪಗಾಃ ।
ಸಾಲೋಕ್ಯಂ ಚ ಸ್ವರೂಪತ್ವಂ ಸಾಮೀಪ್ಯಂ ಯೋಗ ಏವ ಚ ।
ಇಮಾಮಾರಭ್ಯ ಸರ್ವತ್ರ ಯಾವತ್ಸ್ವಕ್ಷೀರಸಾಗರೇ ।
ಪುರುಷೋನಂತಶಯನಃ ಶ್ರೀಮನ್ನಾರಾಯಣಾಭಿಧಃ ॥

7 ಮಾನುಷಾವರ್ಣಭೇದೇನ ತಥೈವಾತ್ರಮಭೇದತಃ ।
ಕ್ಷಿತಿಪಾ ಮನುಷ್ಯಗಂಧರ್ವಾ ದೇವಾಶ್ಚ ಪಿತರಶ್ಚಿರಾಃ ।
ಆಜಾನಜಾಃ ಕರ್ಮಜಾಶ್ಚ ತಾತ್ವಿಕಾಶ್ಚ ಶಚೀಪತಿಃ ।
ರುದ್ರೋ ಬ್ರಹ್ಮೇತಿ ಕ್ರಮಶಸ್ತೇಷು ಚೈವೋತ್ತರೋತ್ತರಾಃ ।
ನಿತ್ಯಾನಂದೇ ಚ ಭೋಗೇ ಚ ಜ್ಞಾನೈಶ್ವರ್ಯಗುಣೇಷು ಚ ।
ಸರ್ವೇ ಶತಗುಣೋದ್ರಿಕ್ತಾಃ ಪೂರ್ವಸ್ಮಾದುತ್ತರೋತ್ತರಂ ।
ಪೂಜ್ಯಂತೇ ಚಾವರೈಸ್ತೇ ತು ಸರ್ವ ಪೂಜ್ಯಶ್ಚತುರ್ಮುಖಃ ।
ಸ್ವಜನವ್ಯಾಪೃತಿಸ್ತೇಷಾಂ ಪೂರ್ವವತ್ಸಮುದೀರಿತಾ ॥

ಶ್ರೇಷ್ಟ ಶ್ರೀ ಪರಮೇಶ್ವರನನ್ನು ಆತ್ಮಾ ಎಂಬೋಪಾಸನೆಯಿಂದ ಕೆಲವು ಜೀವರು ಈ ಭೂಲೋಕದಲ್ಲಿಯೇ ಮುಕ್ತರಾಗಿರುವರು ಯಾವಾಗಲೂ ಮೇಲಿನ ಲೋಕಗಳ ಗಮನವಿಲ್ಲ ಭೂಲೋಕದಲ್ಲಿಯೇ ಸ್ಥಿತಿಯು ಮತ್ತೆ ಕೆಲವರು ಅಂತರಿಕ್ಷದಲ್ಲಿರುವರು. ಇನ್ನು ಕೆಲವರು ಸ್ವರ್ಗಲೋಕ ಜನಲೋಕ ತಪೋಲೋಕಗಳಲ್ಲಿರುವರು. ಮಹಾ ಜ್ಞಾನಿಗಳಾದ ಕೆಲವರು ಮಾತ್ರ ಸತ್ಯಲೋಕದಲ್ಲಿದ್ದು ಕ್ಷೀರಸಾಗರವನ್ನು ಸೇರುವರು. ಅಲ್ಲಿಯೂ ಜ್ಞಾನಾದಿತ್ಯತಾರತಮ್ಯದಿಂದಲೇ ಕೆಲವು ಮಹಾಜ್ಞಾನಿಗಳು ಸಾಲೋಕ್ಯ ಸಾರೂಪ್ಯ ಸಾಮೀಪ್ಯ ಮೋಕ್ಷಗಳನ್ನು ಹೊಂದುವರು. ಹೀಗೆ ತಾರತಮ್ಯಾನುಸಾರ ಜ್ಞಾನಾಧಿಕ್ಯ ಭೇದದಿಂದ ಜೀವರಿಗೆ ಮುಕ್ತಿಯು ನಾನಾವಿಧವು. ಕ್ಷೀರಸಾಗರದಲ್ಲಿ ಅನಂತಶಯನನಾಗಿ ಪುರುಷೋತ್ತಮನಾದ ಶ್ರೀಮನಾ ರಾಯಣನನ್ನನುಸರಿಸಿ ಸರ್ವರೂ ಯಥಾಯೋಗ್ಯಮುಕ್ತಿ ಭೋಗಗಳನ್ನನುಭವಿಸುವರು. ಅಲ್ಲಿಯೂ ವರ್ಣ ಭೇದದಿಂದಲೂ ಆಶ್ರಮಭೇದದಿಂದಲೂ ಚಕ್ರವರ್ತಿ ಮನುಷ್ಯ ಗಂದರ್ವ ದೇವತೆಗಳು ಪಿತೃಗಳು ಅನಾಖ್ಯಾತ ದೇವತೆಗಳು ಕರ್ಮದೇವತೆಗಳು ತಾತ್ವಿಕ ದೇವತೆಗಳು ನಂತರ ಇಂದ್ರದೇವರೂ ರುದ್ರರೂ ಬ್ರಹ್ಮರೂ ಕ್ರಮಶಃ ಉತ್ತರೋತ್ತರ ಸ್ಥಾನಗಳಲ್ಲಿ ನಿತ್ಯಾನಂದ ಭೋಗ ಜ್ಞಾನೈಶ್ವರ್ಯವನ್ನು ಹೊಂದಿದ ಜೀವರುಗಳು ಹಿಂದಿನವರಿಗಿಂತ ಉತ್ತರೋತ್ತರ ನೂರು ಪ್ರಮಾಣದಷ್ಟು ಶ್ರೇಷ್ಠತ್ವವನ್ನು ಹೊಂದಿ ಆನಂದದಿಂದ ಸದಾ ಪರಮಾತ್ಮಾಧೀನರಾಗಿರುವರು

8 **ಸಯುಜಃ ಪರಮಾತ್ಮಾನಂ ಪ್ರವಿಶ್ಯ ಚ ಬಹಿರ್ಗತಾಃ ।**
**ಚಿದ್ರೂಪಾನ್ಪ್ರಾಕೃತಾಂಶ್ಚಾಪಿ ವಿನಾ ಭೋಗಾಂಸ್ತು ಕಾಂಶ್ಚನ ।**
**ಭುಂಜತೇ ಮುಕ್ತಿರೇವಂ ತೇ ವಿಸ್ಪಷ್ಟಂ ಸಮುದಾಹೃತಾ ॥ ಇತಿ**

ಸಾಯುಜ್ಯ ಮುಕ್ತಿಯೋಗವುಳ್ಳ ಕೆಲವು ದೇವತೆಗಳು ಮಾತ್ರ ಪರಮಾತ್ಮನನ್ನು ಪ್ರವೇಶಿಸಿ ಹೊರಬಂದು ಪ್ರಕೃತಿರೂಪ ಚಿದ್ರೂಪಗಳಲ್ಲಿರುವವರಾಗಿ ಮಹಾ ಭೋಗವನ್ನು ಹೊಂದುವರು. ಹೀಗೆ ಮುಕ್ತಿಯು ನಾನಾರೂಪವು.

## ಸೂ॥ ಓಂ॥ ವಿಕಾರವರ್ತಿ ಚ ತಥಾ ಹಿ ದರ್ಶಯತಿ ಓಂ॥ 20

**ವಿಕಾರವರ್ತಿವ್ಯಾಪಾರೋ ಮುಕ್ತಾನಾಂ ನ ವಿದ್ಯತೇ ।**
**ಇಮಂ ಮಾನವಮಾವರ್ತಂ ನಾವರ್ತಂತ (ಛಾ 4-15-6) ಇತಿ ಶ್ರುತಿಃ**

ಹೀಗೆ ಮುಕ್ತರಿಗೆ ಸಂಸಾರವಿಷಯಕ ವ್ಯಾಪಾರವಿರುವುದಿಲ್ಲ ಇದಂ ಎಂಬ ಶ್ರುತಿಯು ಹಾಗೆ ಹೇಳುವುದು ಇವರು. ಪ್ರಕೃತಿವಿಕಾರ ಶರೀರಾದ್ಯಭಿಮಾನಿಗಳಾದ ಜೀವದಲ್ಲಿ ಜನ್ಮಮೃತ್ಯಾದಿ ವಿಕಾರವುಳ್ಳವರಲ್ಲಿ ಮುಕ್ತರ ವ್ಯಾಪಾರವಿಲ್ಲ.

10 ನಾರಾಹೇ ಚ ।

**ಸ್ವಾಧಿಕಾರೇಣ ವರ್ತಂತೇ ದೇವಾ ಮುಕ್ತಾವಪಿ ಸ್ಫುಟಂ ।**
**ಬಲಿಂ ಹರಂತಿ ಮುಕ್ತಾಯ ವಿರಿಂಚಾಯ ಚ ಪೂರ್ವವತ್ ।**
**ಸ ಬ್ರಹ್ಮಕಾಸ್ತು ತೇ ದೇವಾ ವಿಷ್ಣವೇ ಚ ವಿಶೇಷತಃ ।**
**ನ ವಿಕಾರಾಧಿಕಾರಸ್ತು ಮುಕ್ತಾನಾಮನ್ಯ ಏವ ತು ।**
**ವಿಕಾರಾಧಿಕೃತಾ ಜ್ಞೇಯಾ ಯೇ ನಿಯುಕ್ತಾಸ್ತು ವಿಷ್ಣುನಾ ॥**

ದೇವತೆಗಳು ಮುಕ್ತ್ಯನಂತರವೂ ತಮ್ಮಾಧಿಕಾರದಲ್ಲಿಯೇ ಇದ್ದು (ಕ್ರಮಶಃ ಮುಕ್ತಸಂಘಗಳು ಮಾತ್ರ) ಹಿಂದಿನಂತೆ ಕ್ರಮವಾಗಿ ಮುಕ್ತ ಚತುರ್ಮುಖ ಬ್ರಹ್ಮನಿಗೆ ಪೂಜೆಯನ್ನು ಮಾಡಿಕೊಂಡಿರುವರು ಮುಕ್ತ ಚತುರ್ಮುಖ ಬ್ರಹ್ಮರಾದರೋ ತಮ್ಮ ಕಾಲದ ಇತರ ಸರ್ವಮುಕ್ತ ದೇವತೆಗಳಿಂದೊಡಗೂಡಿ ಸರ್ವಮುಕ್ತ ಜೀವರಿಂದಲೂ ಕೂಡಿಕೊಂಡು ಶ್ರೀ ವಿಷ್ಣುವನ್ನು ವಿಶೇಷತಃ ಪೂಜಿಸುತ್ತಿರುವರು ಮಿಕ್ಕ ಅಮುಕ್ತ ಪ್ರಪಂಚಕ್ಕೆ ಯಥಾಕ್ರಮವಾಗಿ ಶ್ರೀ ಪರಮಾತ್ಮನೇ ನಿಯಾಮಕನು ಯಾವ ಮುಕ್ತ ಜೀವರಿಗೂ ಈ ಅಧಿಕಾರವಿಲ್ಲ.

**ಇತಿ ಜಗದ್ವ್ಯಾಪಾರಾಧಿಕರಣಂ**

## – ಸ್ಥಿತ್ಯಧಿಕರಣಂ –

ಈ ಅಧಿಕರಣದಲ್ಲಿ ಮೋಕ್ಷಹೊಂದಿದ ಜೀವರಿಗೆ ಭೋಗಗಳಲ್ಲಿ ಯಾವ ವ್ಯತ್ಯಾಸವು ಇಲ್ಲದೆ ಹೆಚ್ಚುಕಮ್ಮಿಗಳಿಲ್ಲದೆ ಒಂದೇ ಸಮಸ್ಥಿತಿಯೆಂದು ಸಮರ್ಥನವು.

## ಸೂ॥ ಓಂ॥ ಸ್ಥಿತಿವಾಹ ದರ್ಶಯಂತಶ್ಚೈವಂ ಪ್ರತ್ಯಕ್ಷಾನು ಮಾನೇ ಓಂ॥ 21

ಮುಕ್ತ ಜೀವರಿಗೆ ಏಕಪ್ರಕಾರ ಸ್ಥಿತಿಯು. ವೃದ್ಧಿಹ್ರಾಸಗಳಿರುವುದಿಲ್ಲ ಸ ಏಷ ಎಂಬ ಜಾಬಾಲ ಶೃತಿಯು ಅವರುಗಳ ಸ್ಥಿತಿಯು ಒಂದೇ ಪ್ರಕಾರವೆಂದು ಹೇಳುವುದು ಮಹಾತ್ಮರ ಪ್ರತ್ಯಕ್ಷದಿಂದಲೂ ಹಾಗೆಯೇ ತಿಳಿಯುವುದು.

ಏತತ್ಸಾಮಗಾಯನ್ನಾಸ್ತ ಇತ್ಯುಚ್ಯತೇ ।
ತತ್ರಾನಂದಾದೀನಾಂ ವೃದ್ಧಿಹ್ರಾಸಶ್ಚ ನ ವಿದ್ಯತೇ ।
ಏಕಪ್ರಕಾರೇಣೈವ ಸರ್ವದಾ ಸ್ಥಿತಿಃ ।
ಸ ಏಷ ಏತಸ್ಮಿನ್ಬ್ರಹ್ಮಣಿ ಸಂಪನ್ನೋ ನ ಜಾಯತೇ ನ ಮ್ರಿಯತೇ ನ ಹೀಯತೇ ನ ವರ್ಧತೇ ಸ್ಥಿತ ಏವ ಸರ್ವದಾ ಭವತಿ ದರ್ಶನ್ನೇವ ಬ್ರಹ್ಮದರ್ಶನ್ನೇವಾತ್ಮಾನಂ ತಶ್ಚೈವಂ ದರ್ಶಯತೋ ನಾಪತ್ತಿರ್ನವಿಪತ್ತಿರಿತ್ಯಾಹ ಜಾಬಾಲಶ್ರುತೌ ॥
ಯತ್ರ ಗತ್ವಾ ನ ಮ್ರಿಯತೇ ಯತ್ರ ಗತ್ವಾ ನ ಜಾಯತೇ
ನ ಹೀಯತೇ ಯತ್ರ ಗತ್ವಾ ಯತ್ರ ಗತ್ವಾ ನ ವರ್ಧತೇ॥ ಇತಿ ಮೋಕ್ಷಧರ್ಮೆ
ವಿದ್ವತ್ಪ್ರತ್ಯಕ್ಷಾತ್ಕಾರಣಾಭಾವಲಿಂಗಾಚ್ಚ

ಮೇಲಿನ ಶೃತಿವಾಕ್ಯವು ಮುಕ್ತರಿಗೆ ಭಗವದುಪಾಸನವು ಸಾಮಗಾಯನಾಖ್ಯವು ಆದರೂ ಅವರಿಗೆ ಜ್ಞಾನಾನಂದಾದಿಗಳಲ್ಲಿ ವೃದ್ಧಿಹ್ರಾಸಗಳನ್ನು ಹೇಳಿರುವುದಿಲ್ಲ. ಅಲ್ಲಿ ನಾತತ್ತಿಃ ನವಿಪತ್ತಿಃ ಎಂದು ವೇದ ಪುರುಷನ ವಾಕ್ಯವು ಮೋಕ್ಷಧರ್ಮದಲ್ಲಿ ಯತ್ರ ಗತ್ವಾ ನ ಹೀಯತೇ ನ ವರ್ಧತೆ ಎಂದು ಹೇಳಿದೆ ಈ ಶೃತ್ಯರ್ಥವು. ಮೋಕ್ಷದಲ್ಲಿ ಶ್ರೀ ವಿಷ್ಣುವನ್ನು ಹೊಂದಿದ ಮುಕ್ತನಿಗೆ ದೇಹದಿಂದ ಹುಟ್ಟುಸಾವುಗಳಿಲ್ಲ ಸಂಸಾರ ಬಂಧವೂ ಇಲ್ಲ. ಸ್ವರೂಪತಃ ಸ್ಥಿತಿಯು. ಆನಂದಾದಿ ಗುಣಗಳ ವೃದ್ಧಿಹ್ರಾಸಗಳೂ ಇಲ್ಲ. ಒಂದೇ ಪರಿಸ್ಥಿತಿಯು ಬ್ರಹ್ಮದರ್ಶನವನ್ನು ಹೊಂದಿ ಪರಮಾತ್ಮನನ್ನು ಸರ್ವ ಸ್ವಾಮಿಯೆಂದು ಉಪಾಸನಾ ಮಾಡುತ್ತಾ ಫಲದಲ್ಲಿ ಉದಾಸೀನನು. ಹೊಂದ ಬೇಕಾದ್ದೆಲ್ಲವನ್ನು ಹೊಂದಿರುವುದರಿಂದ ಸಮಸ್ಥಿತಿಯು

2 **ಬಹ್ಮವೈವರ್ತೇಚ ।**

**ನ ಹ್ರಾಸೋ ನ ಚ ವೃದ್ಧಿರ್ವಾ ಮುಕ್ತಾನಾಂ ವಿದ್ಯತೇ ಕ್ವಚಿತ್ ।**

ವಿದ್ವತ್ಪ್ರತ್ಯಕ್ಷ ಸಿದ್ಧತ್ವಾತ್ಕಾರಣಾಭಾವತೋನುವಾ ।
ಹರೇರುಪಾಸನಾ ಚಾತ್ರ ಸದೈವ ಸುಖರೂಪಿಣೀ ।
ನ ತು ಸಾಧನಭೂತಾ ಸಾ ಸಿದ್ಧಿರೇವಾತ್ರಸಾ ಯತಃ ॥ ಇತಿ

ಮುಕ್ತಜೀವರು ಯಾವ ಕಾರಣದಿಂದಲೂ ಆನಂದಾದಿಗಳ ವೃದ್ಧಿಹ್ರಾಸವನ್ನು ಹೊಂದುವುದಿಲ್ಲ ವಿದ್ವತ್ತಿನ (ಜ್ಞಾನದ) ಫಲವು ಪ್ರತ್ಯಕ್ಷಸಿದ್ಧವಾದ್ದರಿಂದ ಯೋಗ್ಯತೆಗೆ ತಕ್ಕಂತೆ ಸಮಾನಾಗಿದ್ದು ವೃದ್ಧಿಹ್ರಾಸಗಳಿಗೆ ಕಾರಣವೇ ಇಲ್ಲ ಅವರುಗಳಿಗೆ ಸದಾ ಹರಿಯುಪಾಸನೆಯೇ ಪರಮ ಸುಖರೂಪವು ಉಪಾಸನೆಗಳಿಂದ ಯೋಗ್ಯತಾನುಸಾರ ಫಲವು ಸಿದ್ಧವಾಗಿರುವುದರಿಂದ ಸಾಧನ ಭೂತವಾಗುವುದಿಲ್ಲ ಮುಕ್ತಿಯಲ್ಲಿ ಮಾಡುವ ಉಪಾಸನೆಯು ಭಯರಹಿತ ಮೋಕ್ಷಫಲರೂಪ ಸಿದ್ಧಿಯಾದ್ದರಿಂದ ಬದಲಾಗುವುದಿಲ್ಲ

## ಸೂ॥ ಓಂ॥ ಭೋಗಮಾತ್ರಸಾಮ್ಯಲಿಂಗಾಚ್ಚ ಓಂ॥ 22

ನ ಚ ಭೋಗವಿಶೇಷಾದಿವಿರೋಧಃ । ಏತಮಾನಂದಮಯಮಾತ್ಮಾನಮನುವಿಶ್ಯ ನ ಜಾಯತೇ ನ ಮ್ರಿಯತೇ ನ ಹ್ರಸತೇ ನ ವರ್ಧತೇ ಯಥಾಕಾಮಂ ಚರತಿ ಯಥಾಕಾಮಂ ಪಿಬತಿ ಯಥಾಕಾಮಂ ರಮತೇ ಯಥಾಕಾಮಮುಪರಮತ (ತೈ ಉ-2-8) ॥ ಇತಿ ಭೋಗಮಾತ್ರಸಾಮ್ಯಲಿಂಗಾತ್

ಬೇರೆ ಯಾವ ವಿಷಯವೂ ಇಲ್ಲದೆ ಭೋಗದಲ್ಲಿ ಮಾತ್ರ ವಿಶೇಷವಿದ್ದರೂ ಸಾಮ್ಯಪ್ರಕಾಶವೇ ಭೋಗವೆಂದು ಶ್ರುತಿಯು ಹೇಳುವುದು. ಭೋಗಾದಿಗಳ ವೃದ್ಧಹ್ರಾಸ ನಿಷೇಧವು ಯೋಗ್ಯತಾನುಸಾರ ಭೋಗವನ್ನು ಹೊಂದಿರುವುದರಿಂದ ಅನುಭವಪೂರ್ಣ ಸಿದ್ಧವು ಅಮುಕ್ತರಿಗೆ ಆಗಿರುವುದು ಶೃತ್ಯರ್ಥವು ಆನಂದಪೂರ್ಣ ಪರಮಾತ್ಮನನ್ನು ಪ್ರವೇಶಿಸಿ ಪುನಃ ಹುಟ್ಟುಸಾವುಗಳೂ ವೃದ್ಧಿಹ್ರಾಸಗಳೂ ಇಲ್ಲದೆ ಸ್ವೇಚ್ಛೆಯಿಂದ ಭಕ್ಷಣಾದ್ಯಾನಂದಗಳನ್ನು ಹೊಂದುವನು. ಸರ್ವವೂ ಅವನ ಸ್ವೇಚ್ಛಾಮಾತ್ರ ಸಿದ್ಧವಾಗಿ ಸದಾ ಕಾಲವೂಭೋಗವೇ.

4 ಅವೃದ್ಧಿಹ್ರಾಸ ರೂಪತ್ವಂ ಮುಕ್ತಾನಾಂ ಪ್ರಾಯಿಕಂ ಭವೇತ್ ।
ಕಾದಾಚಿಕ್ಕ ವಿಶೇಷಸ್ತು ನೈವ ತೇಷಾಂ ನಿಷಿಧ್ಯತ ॥ ಇತಿ ಕೌರ್ಮೇ ।

ಮುಕ್ತಜೀವರಿಗೆ ಪ್ರಾಯಿಕವಾಗಿ ಆನಂದಾದಿಭೋಗಗಳಲ್ಲಿ ವ್ಯತ್ಯಾಸವಿಲ್ಲ. ಆದರೆ ವಿಶೇಷಕಾರಣದಿಂದ ಯಾವಾಗಲಾದರೂ ಒಮ್ಮೆ ವಿಶೇಷವು ನಿಷೇಧವಿಲ್ಲ. ಆದರೆ ಚತುರ್ಮುಖಬ್ರಹ್ಮನು ಪೂರ್ಣಜ್ಞಾನನಾದ್ದರಿಂದ ಅವನಿಗೆ ಯಾವಾಗಲೂ ಭೋಗ ವೃದ್ಧಿಯಿಲ್ಲ.

5 ಪ್ರವಾಹತಸ್ತು ವೃದ್ಧಿರ್ವಾ ಹ್ರಾಸೋ ನೈವಾಸ್ತಿ ಕುತ್ರಚಿತ್ ।
ನಾಪ್ರಿಯಂ ಕಿಂಚಿದಪಿ ತು ಮುಕ್ತಾನಾಂ ವಿದ್ಯತೇ ಕ್ವಚಿತ್ ।
ಕುತ ಏವ ತು ದುಃಖಂ ಸ್ಯಾತ್ಸುಖಮೇವ ಸದೋದಿತಂ ।
ಭೋಗಾನಾಂ ತು ವಿಶೇಷೇ ತು ವೈಚಿತ್ರ್ಯಂ ಲಭ್ಯತೇ ಕ್ವಚಿತ್ ॥
ಇತಿ ನಾರಾಯಣತಂತ್ರೇ

ಪ್ರವಾಹರೀತಿಯಲ್ಲಿ ಯಾವಾಗಲಾದರೂ ಅಲ್ಪವೃದ್ಧಿಯುಂಟು. ಆದರೆ ಹ್ರಾಸ ವಿರುವುದಿಲ್ಲ. ಸರ್ವಕಾಲವೂ ಸುಖಾನುಭವವೇ ಆದ್ದರಿಂದ ದುಃಖಾನುಭವವಿಲ್ಲವೇ ಇಲ್ಲ ಭೋಗದಲ್ಲಿ ವಿಶೇಷವೈಚಿತ್ರ್ಯವು ಸಾಧ್ಯವು.

ಇತಿ ಸ್ಥಿತ್ಯಧಿಕರಣಂ

## – ಅನಾವೃತ್ತ್ಯಧಿಕರಣಂ –

ಈ ಅಧಿಕರಣದಲ್ಲಿ ಮುಕ್ತಿಯಲ್ಲಿ ಪೂರ್ಣಾನಂದಾನುಭವವುಳ್ಳ ಮುಕ್ತಜೀವನು ಪುನಃ ಸಂಸಾರಮಗ್ನನಾಗುವುದಿಲ್ಲ ಸದಾಕಾಲವೂ ಮುಕ್ತನೆ ಇದು ಖಂಡಿತವು

## ಸೂ॥ ಓಂ॥ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ॥ 23

ನ ಚ ಪುನರಾವರ್ತತೇ ನ ಚ ಪುನರಾವರ್ತತೆ (ಛಾ 8-15-1) ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್ಸಮಭವೇತ್ (ಐ 2-5-1-15) ಇತ್ಯಾದಿ ಶ್ರುತಿಭ್ಯಃ ॥

ಮುಕ್ತ ಜೀವರಿಗೆ ಪುನಃ ಸಂಸಾರಪ್ರವೇಶವಿಲ್ಲ ಆದಕ್ಕಾಗಿ ಛಾಂದೋಗ್ಯ ಶೃತಿಯು ಸೂತ್ರದ್ವಿರುಕ್ತಿಯು ಅಧ್ಯಾಯದಲ್ಲಿ ಹೇಳಿರುವ ವಿಶೇಷಗಳು ಸತ್ಯಕ್ಕೆ ಸಿದ್ಧವು ಎಂದು ಮೇಲಿನ ಎರಡು ಶೃತಿಗಳಿಂದ ಸಿದ್ಧವು ಮುಕ್ತ ಜೀವನು ಆನಂದಮಗ್ನ ನಾಗಿಯೇ ಬ್ರಹ್ಮಲೋಕವನ್ನು ಹೊಂದಿ ಪುನಃ ಸಂಸಾರಕ್ಕೆ ಹಿಂದಿರುಗುವುದಿಲ್ಲ ಶರೀರ ದಿಂದ ಹೊರಹೊರಟ ಆನಂದಸಾಂದ್ರ ಶ್ರೀ ವಿಷ್ಣುಲೋಕವನ್ನು ಹೊಂದಿ ಅಲ್ಲಿ ಸರ್ವದಾ ಸರ್ವ ಕಾಮಗಳನ್ನು ಅನುಭವಿಸುವನು

2 ಜ್ಞಾನಾನಂದಾದಿಭಿಃ ಸರ್ವಗುಣೈಃ ಪೂರ್ಣಾಯ ವಿಷ್ಣವೇ ।
ನಮೋಽಸ್ತು ಗುರವೇ ನಿತ್ಯಂ ಸರ್ವಧಾತಿಪ್ರಿಯಾಯ ಮೇ ॥

ಶ್ರೀಮದಾಚಾರ್ಯರ ಅಧ್ಯಾಯಾರ್ಥ ಸಂಗ್ರಹವು

ಅಪ್ರತೀಕಾಲಂಬನರಾದ ದೇವತೆಗಳು ಭಗವಂತನ ಜ್ಞಾನದಿಂದ ಸಮಸ್ತಾನಿಷ್ಟ ಕರ್ಮಫಲಗಳನ್ನು ಕಳೆದುಕೊಂಡು ಚೈತನ್ಯೋತ್ಕ್ರಮಣಕ್ಕೆ ಮುಂಚೆ ದೇಹ ನಾಶ ವಾಗಲು ಉತ್ಕ್ರಮಣ ಕಾಲದಲ್ಲಿ ಅರ್ಚಿರಾದಿ ಮಾರ್ಗಗಳಿಂದಲೂ ತತ್ವ ದೇವತೆ ಗಳಿಲ್ಲ. ಇತರ ದೇವತೆಗಳು ಅಂಡಲಯ ಕಾಲದಲ್ಲಿಯೂ ತಾತ್ವಿಕ ದೇವತೆಗಳು ಅಂಡ ಲಯಾನಂತರದಲ್ಲಿಯೂ ಯಥಾಕ್ರಮದಿಂದ ಸ್ವೋತ್ತಮ ಪ್ರವೇಶದಿಂದ ತಮಗೆ ಯೋಗ್ಯವಾದ ಗರುಡ ಮಾರ್ಗ ಅಥವಾ ಶೇಷಮಾರ್ಗಗಳಿಂದ ಪುನ್ನಾಮಕ ಹಿರಣ್ಯ ಗರ್ಭದಿಂದೊಡಗೂಡಿ ವೈಕುಂಠವಾಸಿ ಪರಮಾತ್ಮನನ್ನು ಹೊಂದಿ ವಿರಜಾನಾದಿ ಸ್ನಾನ ದಿಂದ ಲಿಂಗ ಶರೀರವು ಭಂಗವಾಗಲು ಪ್ರಕೃತಿಯಿಂದ ಬಿಡಲ್ಪಟ್ಟವನಾಗಿ ಸರ್ವಾನಿಷ್ಟ ಗಳನ್ನು ಕಳೆದುಕೊಂಡಿರುವರು.

ಋಷಿಗಳು ದೇವಾನುಗರು ಪಿತೃದೇವತೆಗಳೇ ಮುಂತಾದ ಪ್ರತೀಕಾಲಂಬನರು ಭಗವದಪರೋಕ್ಷ ಜ್ಞಾನಾನಂತರ ಜ್ಞಾನಾನುಭವದಿಂದ ಸಮಸ್ತಾನಿಷ್ಟ ಕರ್ಮಫಲ ವುಳ್ಳವರಾಗಿ ದೇಹದಿಂದ ಉತ್ಕ್ರಾಂತರಾಗಿ ಅರ್ಚಿರಾದಿಪಥದಿಂದ ಯಥಾಯೋಗ್ಯ ಸ್ಥಾನದಲ್ಲಿದ್ದು ಅಂಡಾದಿಲಯ ಕಾಲದಲ್ಲಿ ಸ್ವೋತ್ತಮರನ್ನು ಕ್ರಮವಾಗಿ ಪ್ರವೇಶಿಸಿ ಶ್ರೀ ವೈಕುಂಠವಾಸಿ ಹರಿಯನ್ನು ಹೊಂದಿ ಹಿರಣ್ಯಗರ್ಭನಿಂದ ಸಹಿತ ವಿರಜಾನದೀ ಸ್ನಾನದಿಂದ ಭಿನ್ನದೇಹಪ್ರಕೃತಿಯಿಂದ ಬಿಡಲ್ಪಟ್ಟು ಅಂತ್ಯಕಾನಿಷ್ಟಗಳಿಂದ ಪಾರಾ ನಾಗುವನು.

ಮನುಷ್ಯೋತ್ತಮರು ನಿಷ್ಕಾಮಕೃತ್ಯಕ್ತ ಕಾರ್ಯಾನುಷ್ಠಾನದಿಂದ ಶುದ್ಧಾಂತಃಕರಣರಾಗಿ ರಾಗಾದಿದೋಷಗಳಿಲ್ಲದೆ ಭಗವದ್ಭಕ್ತಿಯಿಂದ ಶ್ರವಣ ಮನನ ನಿಧಿಧ್ಯಾಸನಾಭ್ಯಾಸದಿಂದ ತಮಗೆ ಯೋಗ್ಯಾಪರೋಕ್ಷವನ್ನು ಹೊಂದಿ ಬಿಡಲ್ಪಟ್ಟ ಸಂಚಿತಕರ್ಮದಿಂದ ಆಗಾಮಿದುಷ್ಕರ್ಮಲೇಪವಿಲ್ಲದೆ ಭಗವದ್ಧರ್ಮನಿಷ್ಠೆಯಿಂದ ಪ್ರಾರಬ್ಧ ಕರ್ಮಾನುಭವದ ನಂತರ ದೇಹವನ್ನು ಬಿಟ್ಟು ಅರ್ಚಿರಾದಿಗಮನಮಾರ್ಗದಿಂದ ಮಹದಾದಿ ಲೋಕಗಳಲ್ಲಿದ್ದು ಲಯಕಾಲದಲ್ಲಿ ಸೋತ್ತಮಪ್ರವೇಶದಿಂದ ಮೇಲೆ ಹೋಗಿ ಬ್ರಹ್ಮಾಂಡಲಯಾನಂತರವಲ್ಲಿ ಅಂಗಶರೀರಭಂಗಕಾಲದಲ್ಲಿ ಸುಷುಮ್ನಾ ಮಾರ್ಗದಿಂದ ಹಿರಣ್ಯಗರ್ಭನೊಡನೆ ವಿರಜಾನದೀ ಸ್ನಾನದಿಂದ ಲಿಂಗ ಶರೀರವು ನಾಶವಾಗಲು ಸ್ವಗುಣಾಚ್ಛಾದಿತ ಪ್ರಕೃತಿಯನ್ನು ಕಳೆದುಕೊಂಡು ಅತ್ಯಂತಾನಿಷ್ಟ ನಿವೃತ್ತರಾಗುವರು.

ಅಲ್ಪಯೋಗ್ಯತಾ ಮನುಷ್ಯರು ಸ್ಥಾವರರೂ ಏಕಗುಣೋಪಾಸನೆಯಿಂದ ಕಾಲ ಬ್ರಹ್ಮನ ಕೊನೆಯ ಭಾಗದಲ್ಲಿ ಸ್ವ ಸ್ವಯೋಗ್ಯಾವತಾರ ಅಪರೋಕ್ಷದಿಂದ ಅರ್ಚಿರಾದಿ ಮಾರ್ಗಗಳನ್ನು ಹೊಂದದೆ ಪ್ರಾರಬ್ಧ ಕರ್ಮಾನುಭವಾನಂತರ ಅಂಡಲಯಕಾಲದಲ್ಲಿ ಸ್ವೋತ್ತಮಪ್ರವೇಶದಿಂದ ಮೇಲೆಹೋಗಿ ಬ್ರಹ್ಮನ ಜತೆಯಲ್ಲಿ ಲಿಂಗಶರೀರವನ್ನು ಬಿಟ್ಟು ಪ್ರಕೃತಿಯಿಂದ ಬಿಡಲ್ಪಟ್ಟವರಾಗಿ ಸರ್ವಾನಿಷ್ಟನಿವೃತ್ತರಾಗುವರು.

ಈ ಎಲ್ಲರೂ ಮಹಾಪ್ರಳಯದಲ್ಲಿ ಶ್ರೀ ಭಗವಂತನ ಹೊಟ್ಟೆಯಲ್ಲಿದ್ದು ಪುನಃ ಸೃಷ್ಟಿಕಾಲದಲ್ಲಿ ಭಗವಲ್ಲೋಕಶ್ವೇತದ್ವೀಪದಲ್ಲಿ ಭಗವಂತನ ದರ್ಶನ ಹೊಂದಿ ಭಗವದಿಚ್ಛಾವರಕದಿಂದ ಬಿಡಲ್ಪಟ್ಟವರಾಗಿ ಪ್ರಕಟ ಜ್ಞಾನಾನಂದಾದಿ ಗುಣಗಳಿಂದ ಕ್ಲಿಪ್ತವಾದ ಸ್ವಯೋಗ್ಯಸ್ಥಾನದಲ್ಲಿದ್ದು ಭಗವದುಪಾಸನೆಯಿಂದ ಆತನ ದೇಹದಲ್ಲಿಯೂ ಹೊರಗೂ ತಮ್ಮ ಸ್ವರೂಪದೇಹ ಹಾಗೂ ಇಚ್ಛಾಗೃಹೀತ ಪ್ರಾಕೃತ ದೇಹದಿಂದಲೂ ಸಂಕಲ್ಪಮಾತ್ರದಿಂದಲೇ ಸಾಧ್ಯವಾದ ಭೋಗಗಳನ್ನು ತಾರತಮ್ಯಕ್ಕೆ ಅನುಗುಣವಾಗಿ ಅನುಭವಿಸುತ್ತಾ ಯಾವಾಗಲೂ ಸಂಸಾರಬಂಧವನ್ನು ಹೊಂದುವುದಿಲ್ಲ.

ಗ್ರಂಥಾರಂಭದಲ್ಲಿ ಭಾಷ್ಯಕಾರರು ಪ್ರತಿಜ್ಞಾತಗುಣಗಳನ್ನು ಕೊನೆಯಲ್ಲಿಯೂ ಮಂಗಳರೂಪವಾಗಿ ಉಪಸಂಹರಿಸಿರುವರು ಜ್ಞಾನಾನಂದಾದಿ ಪೂರ್ಣಗುಣಗಳಿಂದಲೂ ಪೂರ್ಣನಾದ ಶ್ರೀವಿಷ್ಣುವಿಗೆ ನಮಸ್ಕಾರವು. ಆತನು ನಮಗೆ ಗುರುವು ಮತ್ತು ನಿತ್ಯವು ಸರ್ವರೀತಿಯಿಂದಲೂ ಪರಮ ಪ್ರಿಯನು. ಹೀಗೆ ಸಾಷ್ಟಾಂಗ ನಮಸ್ಕಾರಪೂರ್ವಕ ಗ್ರಂಥ ಸಮಾಪ್ತಿ ಮಂಗಳವು.

3 ಯಸ್ಯ ತ್ರೀಣ್ಯುದಿತಾನಿ ವೇದ ವಚನೇ ರೂಪಾಣಿ ದಿವ್ಯಾನ್ಯಲಂ
ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್
ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ
ವಪುರ್ಮಧ್ವೋ ಯತ್ತು ತೃತೀಯಕಂ ಕೃತಮಿದಂ ಭಾಷ್ಯಂ ಹರೌ
ತೇನ ಹಿ ।
ನಿತ್ಯಾನಂದೋ ಹರಿಃ ಪೂರ್ಣೋ ನಿತ್ಯದಾ ಪ್ರೀಯತಾಂ ಮಮ
ನಮಸ್ತಸ್ಮೈ ನಮಸ್ತಸ್ಮೈ ನಮಸ್ತಸ್ಮೈ ಚ ವಿಷ್ಣವೇ ॥

ವೇದದಲ್ಲಿ ಶ್ರೀಮುಖ್ಯಪ್ರಾಣದೇವರಿಗೆ ಭೂಲೋಕದಲ್ಲಿ ಮೂರು ಅವತಾರಗಳು ಮಾತ್ರ ಅವುಗಳು ಪೂರ್ಣಾಖಿಲಜ್ಞಾನಾದಿ ಶ್ರೀಪರಮಾತ್ಮನ ವಿಶೇಷ ಸನ್ನಿಧಾನವುಳ್ಳವು. ಮೊದಲನೆಯ ಅವತಾರದಲ್ಲಿ ಶ್ರೀರಾಮದೇವರ ಸೇವೆಯು ಪರಮಾತ್ಮನ ಶ್ರೇಷ್ಠಪ್ರಿಯಸಂದೇಶವನ್ನು ಪರಮಪ್ರೀತ್ಯಾಸ್ಪದಳಾದ ಶ್ರೀ ಸೀತಾದೇವಿಗೆ ಲಂಕಾ ದ್ವೀಪದಲ್ಲಿ ಕೊಂಡೊಯ್ದು ಪರಮಸಂತೋಷವನ್ನು ಪಡಿಸಿದನು ಎರಡನೆಯ ಅವತಾರವು ಪಾಂಡವರಲ್ಲಿ ಶ್ರೀ ಭೀಮಸೇನನೆಂದು ಶ್ರೀಕೃಷ್ಣನಿಗೆ ಪರಮ ಭಕ್ತರಾಗಿ ಸರ್ವದುಷ್ಟರಾಕ್ಷಸರ ಸಂಹಾರಕಾರ್ಯದಲ್ಲಿ ನೆರವಾಗಿ ಪರಮ ಸೇವೆಯನ್ನು ಸಲ್ಲಿಸಿದರು. ಮೂರನೇ ಅವತಾರವೇ ಶ್ರೀಮಧ್ವಾಚಾರ್ಯರು ಲೋಕದಲ್ಲಿ ಪರತತ್ವವಿಷಯದಲ್ಲಿ ಪ್ರಾಚುರ್ಯದಲ್ಲಿದ್ದ ಸಮಸ್ತಾಪ ಸಿದ್ಧಾಂತಗಳನ್ನು ಧ್ವಂಸಮಾಡಿ ಬ್ರಹ್ಮಸೂತ್ರಗಳ ನಿಶ್ಚಯಾರ್ಥಗಳ ಉಪದೇಶಾತ್ಮಕ ಪರತತ್ವ ಸಿದ್ಧಾಂತವನ್ನು ಉಪದೇಶಿಸಿ ಭಗವದ್ಭಕ್ತರಿಗೆ ನಿಶ್ಚಯ ಜ್ಞಾನೋತ್ಪತ್ತಿಪೂರ್ವಕ ಮುಕ್ತಿ ಪ್ರಾಪ್ತಿಗೆ ಮುಖ್ಯ ಕಾರಣರಾಗಿ ಆ ಸೇವೆಯನ್ನು ಭಕ್ತಿಪೂರ್ವಕವಾಗಿ ಶ್ರೀ ಪರಮಾತ್ಮನಲ್ಲಿ ಸಮರ್ಪಿಸಿರುವರು.

ಶ್ರೀ ಹರಿಯು ಸರ್ವದಾನಿತ್ಯಾನಂದ ಪೂರ್ಣನು ಆತನ ಅನುಗ್ರಹಕ್ಕಾಗಿ ಭಕ್ತಿಪೂರ್ವಕ ಅನೇಕ ಸಾಷ್ಟಾಂಗ ನಮಸ್ಕಾರಗಳು.

ಶ್ರೀಮದ್ಬ್ರಹ್ಮಸೂತ್ರಭಾಷ್ಯಂ ಸಂಪೂರ್ಣಂ

ಶ್ರೀ ಕೃಷ್ಣಾರ್ಪಣಮಸ್ತು

